# ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು
ನಾಗೇಶ ಎಂ

ಮಾರ್ಗದರ್ಶಕರು
ಪ್ರೊ ಚಲುವರಾಜು
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
ಡಾ. ಪೂರ್ವಾಚಾರ್ ಎಂ
ಸಹ ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ
ಮಹಾಪ್ರಬಂಧ

ಸಂಶೋಧಕರು
ನಾಗೇಶ ಎಂ

ಮಾರ್ಗದರ್ಶಕರು
ಪ್ರೊ ಚಲುವರಾಜು
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
ಡಾ. ಪೂರ್ವಾಚಾರ್ ಎಂ
ಸಹ ಪ್ರಾಧ್ಯಾಪಕರು




ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೯

# ಸಂಶೋಧಕರ ಪ್ರಮಾಣ ಪತ್ರ

**"ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಪ್ರೊ ಚಲುವರಾಜು** ಅವರ ಮಾರ್ಗದರ್ಶನದಲ್ಲಿ ಹಾಗೂ **ಡಾ ಪೂರ್ವಾಚಾರ್ ಎಂ** ಅವರ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ದಿನಾಂಕ:

ಸ್ಥಳ : ವಿದ್ಯಾರಣ್ಯ

**ನಾಗೇಶ ಎಂ**
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಸಹ ಮಾರ್ಗದರ್ಶಕರ ದೃಢೀಕರಣ ಪತ್ರ

ನಾಗೇಶ ಎಂ ಇವರು **"ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ"** ಎಂಬ ಶೀರ್ಷಿಕೆ ಮಹಾಪ್ರಬಂಧವನ್ನು ನನ್ನ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:

ಸ್ಥಳ : ವಿದ್ಯಾರಣ್ಯ

**ಡಾ. ಪೂರ್ವಾಚಾರ್ ಎಂ**
ಸಹ ಪ್ರಾಧ್ಯಾಪಕರು,
ಸಮಾಜಶಾಸ್ತ್ರ ಅಧ್ಯಯನ ವಿಭಾಗ
ಸಹ್ಯಾದ್ರಿ ಕಲಾ ಕಾಲೇಜು,
ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ

**Dr. M. PURVACHAR**
M.A., Ph.D., PGDE, PGDPSW, PGDHRM, M.A.(Eng), MSW, MBA (HR)
Head and Research Guide
Dept. of Sociology
Sahyadri Arts College, Kuvempu University,
Shimoga, Karnataka State - 577 203.

## ಮಾರ್ಗದರ್ಶಕರ ದೃಢೀಕರಣ ಪತ್ರ

ನಾಗೇಶ ಎಂ ಇವರು "ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ" ಎಂಬ ಶೀರ್ಷಿಕೆ ಪಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೮.೨.೨೦೧೮
ಸ್ಥಳ : ವಿದ್ಯಾರಣ್ಯ

ಪ್ರೊ ಚಲುವರಾಜು
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

# ಅಧ್ಯಾಯ: ಒಂದು
# ಪ್ರವೇಶ

೧.೧ ಅಧ್ಯಯನದ ಅರ್ಥ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನ ವ್ಯಾಪ್ತಿ

೧.೪ ಅಧ್ಯಯನದ ವಿಧಾನ

೧.೫ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

೧.೬ ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

## ಪ್ರವೇಶ

### ೧.೧ ಪ್ರಸ್ತಾವನೆ

ಭಾರತವು ಬಹುಸಂಖ್ಯಾತ ಬುಡಕಟ್ಟುಗಳ ತವರು ಹಾಗೂ ಚಿಕ್ಕ-ಚಿಕ್ಕ ಹಳ್ಳಿ, ಹಟ್ಟಿ, ಗ್ರಾಮಗಳಿಂದ ಕೂಡಿದ ರಾಷ್ಟ್ರ. ಇಲ್ಲಿನ ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೂ ಅದರದೇ ಆದ ಪೌರಾಣಿಕ, ಐತಿಹಾಸಿಕ ಹಿನ್ನೆಲೆಯುಂಟು. ಭಾರತದಲ್ಲಿರುವಂತೆ ಕರ್ನಾಟಕದಲ್ಲಿಯೂ ಸಹ ಅನೇಕ ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ. ಕರ್ನಾಟಕದಲ್ಲಿನ ಬುಡಕಟ್ಟುಗಳೂ ಸಹ ತಮ್ಮದೇ ಆದ ಪ್ರತ್ಯೇಕ ಸಂಸ್ಕೃತಿ, ಆಚಾರ ವಿಚಾರ, ನೀತಿ ನಿರ್ಬಂಧಗಳನ್ನು ಹೊಂದಿವೆ. ಇಂತಹ ಪ್ರತ್ಯೇಕ ಸಂಸ್ಕೃತಿಯನ್ನು ಹೊಂದಿರುವ ಬುಡಕಟ್ಟುಗಳಲ್ಲಿ ಬಹುಸಂಖ್ಯಾತರಾದ ಮ್ಯಾಸಬೇಡ ಸಮುದಾಯವೂ ಒಂದು. ಇಂದಿಗೂ ಹಟ್ಟಿಗಳಲ್ಲಿ ವಾಸಿಸುತ್ತಿರುವ ಮ್ಯಾಸಬೇಡ ಬುಡಕಟ್ಟಿನ ಮೂಲವನ್ನು ತಿಳಿಯುವುದಾದರೆ ಇವರು ಆಂಧ್ರಪ್ರದೇಶದಿಂದ ಕರ್ನಾಟಕಕ್ಕೆ ವಲಸೆ ಬಂದವರೆಂದು ತಿಳಿದುಬರುತ್ತದೆ. ಅರಣ್ಯವಾಸಿಗಳಾದ ಇವರು ಆಂಧ್ರಪ್ರದೇಶದ ಶ್ರೀಶೈಲ ಪರ್ವತಗಳಿಂದ ಕಾಡುಮೇಡುಗಳ ಮೂಲಕ ಬೇಟೆ ಮತ್ತು ಪಶುಪಾಲನೆಯನ್ನು ಮಾಡುತ್ತಾ ಕರ್ನಾಟಕದ ಕಡೆಗೆ ವಲಸೆ ಬಂದವರೆಂದು ಹೇಳಲಾಗುತ್ತದೆ. ಹೀಗೆ ಆಂಧ್ರದಿಂದ ವಲಸೆ ಬಂದವರು ಎಂದು ಹೇಳಲಾಗುವ ಬೇಡರು ಗ್ರಾಮಗಳಿಂದ ಪ್ರತ್ಯೇಕವಾಗಿ ಹಟ್ಟಿ ಕಟ್ಟಿಕೊಂಡು ನೆಲಸಿದರು ಎಂಬುದು ಸಹ ಇತಿಹಾಸದಿಂದ ತಿಳಿದುಬರುತ್ತದೆ. ಇಂದಿಗೂ ಸಹ ಬಹುತೇಕ ಬೇಡರು ಹಟ್ಟಿಗಳಲ್ಲೇ ವಾಸಿಸುತ್ತಿರುವುದು ಕಂಡುಬರುತ್ತದೆ.

ಹಟ್ಟಿ ಎಂಬ ಪರಿಕಲ್ಪನೆಯನ್ನು ನೋಡುವುದಾದರೆ ಮೊದಲು ಮಾನವ ಸಮಾಜದ ವಿಕಾಸದ ಹಂತಗಳನ್ನು ನೋಡಬೇಕಾಗುತ್ತದೆ. ಆರಂಬದಲ್ಲಿ ಆಹಾರಕ್ಕಾಗಿ ಕಾಡುಗಳಲ್ಲಿ ಬೆತ್ತಲೆಯಾಗಿ ಅಲೆಯುತ್ತಿದ್ದ ಮಾನವನು ಆ ಸಂದರ್ಭದಲ್ಲಿ ಮಳೆ, ಬಿಸಿಲು, ಕಾಡುಮೃಗಗಳಿಂದ ರಕ್ಷಣೆ ಪಡೆಯಲು ಮರದ ಪೊಟರೆ, ಬಂಡೆಯ ಆಸರೆ, ಗುಹೆಗಳಲ್ಲಿ ವಾಸಿಸತೊಡಗಿದನು. ಕಾಲಾನಂತರದಲ್ಲಿ ಆಹಾರಕ್ಕಾಗಿ ಕಾಡಿನಲ್ಲಿನ ಸೌಮ್ಯವಾದ ಪ್ರಾಣಿಗಳನ್ನು ಹಿಡಿದು ಸಾಕಲಾರಂಭಿಸಿದ. ಹೀಗೆ ಪಶುಪಾಲನೆ ಆರಂಭಿಸಿದ ಮಾನವ ಪಶುಪಾಲನೆಯ ಮಹತ್ವವನ್ನು ಅರಿತು ಅವುಗಳನ್ನು ಸಂರಕ್ಷಿಸುವ ಹಾಗೂ ತನ್ನ ಜೀವನ

ಭದ್ರತೆಗೆ ಗುಡಿಸಲುಗಳನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಗುಡಿಸಲುಗಳನ್ನು ಪ್ರಕೃತಿ ಸಹಜವಾಗಿ ದೊರೆಯುವ ಗಿಡ-ಮರ, ಬಳ್ಳಿಗಳಿಂದ ರಚಿಸಿಕೊಂಡು ನೆಲೆಸಲು ಆರಂಭಿಸಿದ. ಬಹುಶಃ ಮಾನವನು ಮೊದಲು ನೆಲೆನಿಂತ ಈ ಸ್ಥಿತಿಯ ಅಥವಾ ಅವನು ಮೊದಲು ರಚಿಸಿಕೊಂಡ ಈ ವಾಸದ ನೆಲೆಗಳಿಂದಾಗಿ ಹಟ್ಟಿ ಹಾಗೂ ರೊಪ್ಪ ಎಂಬ ಪರಿಕಲ್ಪನೆ ಹುಟ್ಟಿಕೊಂಡಿರಬಹುದು. ಒಬ್ಬಂಟಿಯಾಗಿ ಜೀವಿಸುತ್ತಿದ್ದ ಮಾನವ ಸಂಘ ಜೀವನಕ್ಕೆ ಕಾಲಿಟ್ಟ ನಂತರ ಒಂದೇ ರಕ್ತ ಸಂಬಂಧಿಗಳೊಂದಿಗೆ ನದಿ ದಡದಲ್ಲಿ ಹಟ್ಟಿ ಕಟ್ಟಿಕೊಂಡು ನೆಲೆಸಿದ್ದನೆಂಬುದು ಸತ್ಯ ಸಂಗತಿ. ಹೀಗೆ ಹಟ್ಟಿ ಕಟ್ಟಿಕೊಂಡು ತಮ್ಮ ಸಾಕು ದನಕರುಗಳೊಂದಿಗೆ ಹಟ್ಟಿ ಸಂಸ್ಕೃತಿ ಜೀವನಕ್ಕೆ ಕಾಲಿಟ್ಟ ಮಾನವನು ತನ್ನ ಅಲೆಮಾರಿತನಕ್ಕೆ ಸಂಪೂರ್ಣ ಅಂತ್ಯ ಹೇಳದೆ ದನಕರುಗಳಿಗೆ ಮೇವು ನೀರು ಅರಸುತ್ತಾ ಒಂದೆಡೆಯಿಂದ ಮತ್ತೊಂದೆಡೆಗೆ ಪ್ರಯಾಣಿಸತೊಡಗಿದ. ಈ ಅಲೆಮಾರಿ ಮತ್ತು ಹಟ್ಟಿ ಸಂಸ್ಕೃತಿಯನ್ನು ಹೊಂದಿರುವ ಅನೇಕ ಸಮುದಾಯಗಳು ತಮ್ಮ ದನಕರುಗಳು ಮತ್ತು ತಮ್ಮ ಜೀವನಕ್ಕೆ ಅನುಕೂಲವಿರುವ ಹಲವು ಕಡೆ ಹಟ್ಟಿ ಕಟ್ಟಿಕೊಂಡು ನಾಡಿನಾದ್ಯಂತ ಗ್ರಾಮಗಳ ಪಕ್ಕದಲ್ಲಿ ಅಥವಾ ಅರಣ್ಯದ ಅಂಚಿನಲ್ಲಿ ನೆಲೆಸಿರುವುದನ್ನು ನಾವು ದೇಶದಾದ್ಯಂತ ಕಾಣುತ್ತೇವೆ. ಹೀಗೆ ಹಟ್ಟಿ ಕಟ್ಟಿಕೊಂಡು ನೆಲೆಸಿರುವ ಬುಡಕಟ್ಟುಗಳಲ್ಲಿ ಮ್ಯಾಸಬೇಡ ಬುಡಕಟ್ಟು ಸಹ ಒಂದು. ಮ್ಯಾಸಬೇಡ ಬುಡಕಟ್ಟಿನ ಬಗ್ಗೆ ಹೇಳುವುದಾದರೆ ಇವರು ಕರ್ನಾಟಕದಲ್ಲಿ ಚಿತ್ರದುರ್ಗ, ಬಳ್ಳಾರಿ, ತುಮಕೂರು ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮ್ಯಾಸಬೇಡರ ಹಲವಾರು ಚಾರಿತ್ರಿಕ ಹಿನ್ನೆಲೆಯ ಹಟ್ಟಿಗಳಿವೆ. ಅಂತಹ ಹಟ್ಟಿಗಳಲ್ಲಿ ಮ್ಯಾಸಬೇಡರ ಗುರುಸ್ಥಾನವಾದ 'ಕಂಪಳದೇವರ ಹಟ್ಟಿ'ಯೂ ಒಂದು.

ಹಟ್ಟಿ ಎಂದರೆ ವಾಸದ ನೆಲೆ, ದನಕರು, ಕುರಿ, ಮೇಕೆ ಮೊದಲಾದವುಗಳನ್ನು ಕೂಡಿ ಹಾಕುವ ಸ್ಥಳ ಎನ್ನುವರು. ಹಟ್ಟಿಗೆ ಸಮಾನವಾದ ಹಲವು ಪದಗಳು ಬಳಕೆಯಲ್ಲಿವೆ ಅವುಗಳೆಂದರೆ ರೊಪ್ಪ, ಬಾಡ, ಗುಡಿಸಲು, ಮನೆ, ಖರ್ವಡ, ವಠಾರ, ಪೊಡು, ದೊಡ್ಡಿ, ಹಳ್ಳಿ, ಪಲ್ಲಿ, ಕುಂಭ, ಸಮೂಹ, ಗ್ರಾಮ, ಉಕ್ಕು, ಖೇಡ, ಪಗಾ, ಗಾಂವ, ಗುಡಾ, ವಾಡಿ, ವಾಡ, ಹಾಡಿ, ಪಿರ್ರೆ, ಕುಳ್ಳು, ಕೊಪ್ಪಲು, ಕುಪ್ಪ, ಕೇರಿ, ಜೋಪಡಿ, ಪಾಳ್ಯ, ಪಟ್ಟಿ ಮುಂತಾದ ಪರ್ಯಾಯ ಪದಗಳಿಂದ ಕರೆಯಲಾಗುತ್ತದೆ. ತೆಲುಗಿನಲ್ಲಿ ಹಟ್ಟಿಗೆ ಪಟ್ಟಿ, ದೊಡ್ಡಿ(ದಡ್ಡಿ) ಎಂದು ಕರೆಯುತ್ತಾರೆ.

ಪ್ರಸ್ತುತ 'ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ' ಎಂಬ ಅಧ್ಯಯನವು ಪ್ರಧಾನವಾಗಿ ಚಿತ್ರದುರ್ಗ ಜಿಲ್ಲೆಯ, ಮೊಳಕಾಲ್ಮೂರು ತಾಲೂಕಿನಲ್ಲಿರುವ ಮ್ಯಾಸಬೇಡರ ಗುರುಸ್ಥಾನವಾದ 'ಕಂಪಳದೇವರ ಹಟ್ಟಿ' ಯ ಸಾಂಸ್ಕೃತಿಕ, ಸಾಮಾಜಿಕ ಅಧ್ಯಯನವಾಗಿದೆ. ಈ ಹಟ್ಟಿಯ ಬೇಡರ ಸಾಮಾಜಿಕ ಜೀವನ, ನಂಬಿಕೆ, ಆಚರಣೆ, ಆಲೋಚನೆ, ಕೃಷಿ ಜ್ಞಾನ, ಪಶುಪಾಲನೆ, ನ್ಯಾಯಪದ್ಧತಿ, ಜನಪದ ವೈದ್ಯ, ಮುಂತಾದವುಗಳನ್ನು ಗ್ರಹಿಸುವುದರ ಮೂಲಕ ಹಟ್ಟಿಯ ಜನರ ಜ್ಞಾನಪರಂಪರೆಯನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

### ೧.೨ ಅಧ್ಯಯನದ ಉದ್ದೇಶಗಳು

ಮ್ಯಾಸಬೇಡ ಸಮುದಾಯವು ಹಿಂದಿನಿಂದಲೂ ಗುಡ್ಡದ ತಪ್ಪಲು, ಕಾಡು, ಕಾಡಿನ ಅಂಚು, ಬಂಜರು ಭೂಮಿ, ಗ್ರಾಮಗಳಿಂದ ಪ್ರತ್ಯೇಕವಾಗಿ ಹಟ್ಟಿಗಳಲ್ಲಿ ಇತರ ಜನರ ಸಂಪರ್ಕಕ್ಕೆ ಸಿಲುಕದ

ಪ್ರದೇಶಗಳಲ್ಲಿ ನೆಲೆನಿಂತಿರುತ್ತಾರೆ. ಇವರ ಕುಟುಂಬಗಳು ನೂರಕ್ಕೆ ತೊಂಬತ್ತರಷ್ಟು ಹುಲ್ಲಿನ ಜೋಪಡಿಗಳಲ್ಲಿ ವಾಸ ಮಾಡುತ್ತಿರುತ್ತಾರೆ. ಈ ಎಲ್ಲಾ ಲಕ್ಷಣಗಳನ್ನು ಹೊಂದಿರುವ ಚಿತ್ರದುರ್ಗ, ಬಳ್ಳಾರಿ ಜಿಲ್ಲೆಯ ಮ್ಯಾಸಬೇಡರ ಪ್ರಮುಖ ಪ್ರದೇಶವೆಂದು ಗುರುತಿಸಲ್ಪಡುವ ಹಾಗೂ ಅವರ ಸಾಮಾಜಿಕ, ಸಾಂಸ್ಕೃತಿಕ ಕೇಂದ್ರವಾಗಿ ಕಂಡುಬರುವ ಸ್ಥಳ ಕಂಪಳದೇವರ ಹಟ್ಟಿ. ಈ ಹಟ್ಟಿಯು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿದೆ. ಮ್ಯಾಸಬೇಡ ಸಮುದಾಯದವರ ಗುರುಸ್ಥಾನವಾದ ಕಂಪಳದೇವರ ಹಟ್ಟಿಯು ಈ ಸಮುದಾಯದವರ ಹನ್ನೆರಡು ಪೆಟ್ಟಿಗೆ ದೇವರುಗಳು ಒಂದೆಡೆ ಸೇರುವ ಏಕೈಕ ಸ್ಥಳವಾಗಿದೆ. ಇಂತಹ ಸಾಂಸ್ಕೃತಿಕ ಅನನ್ಯತೆ ಹೊಂದಿರುವ ಕಂಪಳದೇವರ ಹಟ್ಟಿಯನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಈ ಹಟ್ಟಿಯಲ್ಲಿ ಮಾದಿಗ ಸಮುದಾಯ, ಲಿಗಾಯತ ಸಮುದಾಯ ಮತ್ತು ಮ್ಯಾಸ ಬೇಡ ಸಮುದಾಯದವರಿದ್ದು ಅದರಲ್ಲಿ ವಿಶೇಷವಾಗಿ ಮ್ಯಾಸಬೇಡರ ಜ್ಞಾನಪರಂಪರೆಯ ಬಗ್ಗೆ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಕ್ಕೆ ಮುಖ್ಯವಾಗಿ ಈ ಕೆಳಗಿನ ಉದ್ದೇಶಗಳನ್ನು ಇಟ್ಟುಕೊಳ್ಳಲಾಗಿದೆ.

೧. ಕಂಪಳದೇವರ ಹಟ್ಟಿಯ ಮ್ಯಾಸಬೇಡರಲ್ಲಿನ ಬೇಟೆ, ಪಶುಪಾಲನೆ, ಕೃಷಿ ಬಗೆಗಿನ ಪಾರಂಪರಿಕ ಜ್ಞಾನವನ್ನು ಕಟ್ಟಿಕೊಡಲಾಗಿದೆ.

೨. ಮ್ಯಾಸಬೇಡರು ಆಚರಿಸುವ ಜೀವನಾವರ್ತಕ ಆಚರಣೆ ಹಾಗೂ ವಾರ್ಷಿಕಾವರ್ತನ ಆಚರಣೆಗಳನ್ನು ಸಮುದಾಯದ ಸಾಮಾಜಿಕ ಹಿನ್ನೆಲೆಯಲ್ಲಿ ತಿಳಿಸಲಾಗಿದೆ.

೩. ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಮೌಖಿಕ ಸಾಹಿತ್ಯವನ್ನು ವಿಶ್ಲೇಷಿಸಲಾಗಿದೆ.

೪. ಸಮಕಾಲೀನ ಸಂದರ್ಭದಲ್ಲಿ ಹಟ್ಟಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಲನಶೀಲತೆಯನ್ನು ವಿಶ್ಲೇಷಿಸಲಾಗಿದೆ.

**೧.೨ ಅಧ್ಯಯನದ ವ್ಯಾಪ್ತಿ**

ಸಂಶೋಧಕನು ಒಂದು ಅಧ್ಯಯನವನ್ನು ಪರಿಪೂರ್ಣವಾಗಿ ಅಥವಾ ಸ್ಪಷ್ಟ ಮತ್ತು ವಸ್ತುನಿಷ್ಠವಾಗಿ ಎಲ್ಲಾ ಆಕರಗಳನ್ನೊಳಗೊಂಡಂತೆ ಸಂಶೋಧನಾ ಕಾರ್ಯ ನಿರ್ವಹಿಸಬೇಕಾದರೆ ಅಧ್ಯಯನಕ್ಕೊಂದು ನಿರ್ದಿಷ್ಟವಾದ ವ್ಯಾಪ್ತಿ, ಸರಹದ್ದು ಅವಶ್ಯಕ. ಆಗ ಮಾತ್ರ ಆ ಕ್ಷೇತ್ರದಲ್ಲಿ ಯಶಸ್ಸನ್ನು ಸಾಧಿಸಬಹುದು. ಈ ದೃಷ್ಟಿಯಿಂದ 'ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ' ಎಂಬ ಶೀರ್ಷಿಕೆಯ ಅಡಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿರುವ ಬೇಡರ ಪ್ರಮುಖ ಸ್ಥಳವಾದ ಕಂಪಳದೇವರ ಹಟ್ಟಿ ಎಂಬ ಒಂದು ಹಟ್ಟಿಯನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಪ್ರಮುಖವಾಗಿ ಈ ಹಟ್ಟಿಯಲ್ಲಿನ ಮ್ಯಾಸಬೇಡ ಬುಡಕಟ್ಟನ್ನು ಮಾತ್ರ ಅಧ್ಯಯನಕ್ಕೆ ಆಯ್ದುಕೊಂಡು ಕ್ಷೇತ್ರಕಾರ್ಯದಲ್ಲಿ ಅವರಿಂದ ಪಡೆದ ಮಾಹಿತಿಯ ಆಧಾರದ ಮೇಲೆ ಪ್ರಬಂಧ ಕಟ್ಟಿಕೊಡಲಾಗಿದೆ. ಜನಸಂಖ್ಯೆಯ ದೃಷ್ಟಿಯಿಂದ ಈ ಹಟ್ಟಿಯ ಸಂಶೋಧನಾ ವ್ಯಾಪ್ತಿ ಸೀಮಿತವೆನಿಸಬಹುದಾದರೂ ಸಂಶೋಧನೆಯ ಒಳಹುಗಳಲ್ಲಿ ಸಮಗ್ರ ಅಂಶಗಳು ಒಳಗೊಳ್ಳುತ್ತವೆ.

## ೧.೫ ಅಧ್ಯಯನದ ಮಹತ್ವ

ಈ ಸಂಶೋಧನಾ ಮಹಾ ಪ್ರಬಂಧವು ಮ್ಯಾಸಬೇಡರ ಹಟ್ಟಿಸಂಸ್ಕೃತಿ ಮತ್ತು ಜ್ಞಾನಪರಂಪರೆಯ ಸಾಮಾಜಿಕ ಅಧ್ಯಯನವಾಗಿದೆ. ಪ್ರಸ್ತುತ ದಿನಮಾನದಲ್ಲಿ ಹಟ್ಟಿಗಳ ಅಧ್ಯಯನ ತುಂಬಾ ಪ್ರಮುಖವಾದುದು ಕಾರಣ ಆಧುನೀಕರಣದ ಭರಾಟೆಯ ಈ ಸಂದರ್ಭದಲ್ಲಿಯೂ ಹಟ್ಟಿಗಳು ತನ್ನ ತನವನ್ನು ಬಿಟ್ಟುಕೊಡದೆ ದೇವರು, ಧರ್ಮ, ನಂಬಿಕೆಗಳು, ಸಂಪ್ರದಾಯಗಳು, ಪಾರಂಪರಿಕ ವೈದ್ಯ, ಪಾರಂಪರಿಕ ಪಶುಪಾಲನೆ, ಹಬ್ಬ, ಜಾತ್ರೆ, ಕಲೆ, ನೃತ್ಯ, ಜನಪದ ಹಾಡು, ಕಥೆ, ಕಾವ್ಯ ಇವೆಲ್ಲವುಗಳನ್ನು ಇಂದಿಗೂ ಉಳಿಸಿಕೊಂಡು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಮೆರೆಯುತ್ತಿವೆ. ಇಂತಹ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿರುವ ಕಂಪಳದೇವರ ಹಟ್ಟಿಯು ಆಧುನಿಕತೆಯ ಗೋಜಿಗೆ ಹೋಗದೆ ಇಂದಿಗೂ ತನ್ನ ಅಸ್ಮಿತೆಯನ್ನು ಉಳಿಸಿಕೊಂಡುಬರುತ್ತಿರುವುದು ವಿಶೇಷ. ಸಾಮಾಜಿಕ ಜೀವನದ ನೀತಿ ನಿಯಮಗಳಿಗೆ ಬೇಕಾದ ಮಾರ್ಗದರ್ಶನ, ಮೌಲ್ಯಗಳು, ಆ ಮೌಲ್ಯಗಳ ಅಳವಡಿಕೆಗೆ ಬೇಕಾದ ಸಂಸ್ಕಾರ, ಆಚರಣೆಗಳು, ಒಳಾಡಳಿತ, ಸಾಮಾಜಿಕ ರೀತಿ-ನೀತಿ ಹೀಗೆ ಹಲವು ಸಂಕೀರ್ಣ ಅಂಶಗಳ ಸಮೃದ್ಧ ಸಂಸ್ಕೃತಿಯ ಜೀವನ ಶೈಲಿಯನ್ನು ಹೊಂದಿರುವ ಹಟ್ಟಿ ಸಂಸ್ಕೃತಿ ತುಂಬಾ ಮಹತ್ವವಾದುದು.

ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳೆಲ್ಲಾ ಹಟ್ಟಿಯಲ್ಲಿ ಅಷ್ಟೊಂದು ಪರಿಣಾಮ ಬೀರಿರುವುದಿಲ್ಲ. ಶೈಕ್ಷಣಿಕವಾಗಿ ಹಟ್ಟಿಯ ಜನ ಹಿಂದುಳಿದಿದ್ದು ಸರ್ಕಾರದ ಸೌಲಭ್ಯಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಇಂತಹ ಸ್ಥಿತಿಯಲ್ಲಿರುವ ಕಂಪಳದೇವರ ಹಟ್ಟಿಯ ಜನರ ಜ್ಞಾನಪರಂಪರೆ, ಸಾಮಾಜಿಕ ಜೀವನ, ಜನಪದ ಸಾಹಿತ್ಯ ಮುಂತಾದವುಗಳ ಬಗ್ಗೆ ಅಧ್ಯಯನ ಮಾಡುವುದು ಮಹತ್ವವೆನಿಸಿಕೊಳ್ಳತ್ತದೆ. ಹಟ್ಟಿಗಳು ಮೂಲ ಹಟ್ಟಿಗಳಾಗಿವೆಯೇ? ಅಥವಾ ಬದಲಾಗುತ್ತಿವೆಯೇ? ಆಧುನಿಕತೆಗೆ ಹೇಗೆ ಮುಖಾಮುಖಿಯಾಗುತ್ತಿವೆ ಎಂಬುದನ್ನು ತಿಳಿಯುವುದು ಅವಶ್ಯಕ ಅಲ್ಲದೆ ಹಟ್ಟಿಗಳಲ್ಲಿನ ಜನರು ಎದುರಿಸುತ್ತಿರುವ ಸಮಸ್ಯೆಗಳನ್ನು ಅಭ್ಯಾಸಿಸುವುದು, ಅವರಲ್ಲಿನ ಮೌಢ್ಯತೆಯನ್ನು ದೂರಮಾಡಲು ಸಲಹೆಗಳನ್ನು ನೀಡುವ ಹಿನ್ನೆಲೆಯಲ್ಲಿ ಹಟ್ಟಿಯ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಧ್ಯಯನ ತುಂಬಾ ಮಹತ್ವದ್ದೆನಿಸುತ್ತದೆ. ಹಟ್ಟಿಗಳ ಬಗ್ಗೆ ಇದುವರೆಗೆ ನಡೆದಿರುವ ಅಧ್ಯಯನಗಳು ಸಾಹಿತ್ಯಿಕ ಮತ್ತು ಜಾನಪದೀಯ ದೃಷ್ಟಿಕೋನದ ಅಧ್ಯಯನಗಳಾಗಿವೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಹಟ್ಟಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನಕ್ಕೆ ಹೆಚ್ಚು ಮಹತ್ವ ಕೊಟ್ಟು ಮಾಹಿತಿ ಸಂಗ್ರಹಿಸಲಾಗಿದೆ. ಒಂದೇ ಒಂದು ಹಟ್ಟಿಯನ್ನು ಸೂಕ್ಷ್ಮವಾಗಿ, ಸಮಗ್ರವಾಗಿ ಅಧ್ಯಯನ ಮಾಡುವುದರಿಂದ ಅಲ್ಲಿನ ಸಮಗ್ರ ಚಿತ್ರಣ ಅರಿಯಲು ಸಾಧ್ಯವಾಗುತ್ತದೆ. ಆ ನಿಟ್ಟಿನಲ್ಲಿ ಹಟ್ಟಿಯ ಅಧ್ಯಯನ ಮಹತ್ವವಾಗುತ್ತದೆ. ಹೀಗೆ ಪ್ರಸ್ತುತ ಅಧ್ಯಯನ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ ದೃಷ್ಟಿಯಿಂದ ಮಹತ್ತರವಾದುದಾಗಿದೆ.

## ೧.೬ ಅಧ್ಯಯನದ ವಿಧಾನ

ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಸಮಾಜಶಾಸ್ತ್ರೀಯ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನವು ಕ್ಷೇತ್ರಕಾರ್ಯಾಧಾರಿತವಾದುದಾಗಿದ್ದು,

ಅಧ್ಯಯನ ವಿಷಯಕ್ಕೆ ಪೂರಕವಾದ ದ್ವಿತೀಯ ಆಕರಗಳಾದ ಗ್ರಂಥಗಳನ್ನು, ಪತ್ರಿಕೆಗಳನ್ನು, ಪ್ರಬಂಧಗಳನ್ನು, ಗ್ಯಾಝಿಟಿಯರ್‌ಗಳನ್ನು ಸಹ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ಕೆಳಗಿನ ಸಂಶೋಧನಾ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

**ಅವಲೋಕನ ವಿಧಾನ:** ಕ್ಷೇತ್ರಕಾರ್ಯದಲ್ಲಿ ಜನಪದರಿಂದ ಮಾಹಿತಿ ಕಲೆಹಾಕಲು ಅವಲೋಕನ ವಿಧಾನ ಅತಿಮುಖ್ಯವಾದುದಾಗಿರುವುದು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಹಟ್ಟಿಯ ಹಬ್ಬಗಳು, ಮದುವೆ, ಋತುಮತಿ, ಶವಸಂಸ್ಕಾರದಂತಹ ಆಚರಣೆಗಳಲ್ಲಿ ಭಾಗವಹಿಸಿ ರೂಢಿಯಲ್ಲಿರುವ ಅವಲೋಕನ ವಿಧಾನಗಳನ್ನು ಅನುಸರಿಸಿ ಮಾಹಿತಿ ಸಂಗ್ರಹಿಸಲಾಗಿದೆ.

**ಪ್ರಶ್ನಾವಳಿ ವಿಧಾನ:** ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಹಟ್ಟಿಯವರಿಂದ ಮಾಹಿತಿ ಸಂಗ್ರಹಿಸುವ ನಿಟ್ಟಿನಲ್ಲಿ ಅಗತ್ಯ ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಹಟ್ಟಿಯ ಬೇಡ ಬುಡಕಟ್ಟಿನ ಹಿರಿಯ ಮಹಿಳೆಯರು, ಪುರುಷರಿಂದ ಪಶುಪಾಲನೆ, ಕೃಷಿ, ಜನಪದ ವೈದ್ಯ, ಸಾಮಾಜಿಕ ಜೀವನ, ಜನಪದ ಸಾಹಿತ್ಯ ಮುಂತಾದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಅಲ್ಲದೆ ಹಟ್ಟಿಯ ಪ್ರತಿ ಮನೆಯನ್ನು ಸಮೀಕ್ಷೆಗೊಳಪಡಿಸಿರುತ್ತೇನೆ.

**ಸಂದರ್ಶನ ವಿಧಾನ:** ಹಟ್ಟಿಯ ಜನರ ವೃತ್ತಿ, ಸಾಮಾಜಿಕ ಅಂಶಗಳು, ಆರ್ಥಿಕತೆ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿ ಮುಂತಾದುವುಗಳನ್ನು ತಿಳಿದುಕೊಳ್ಳಲು ಸಮುದಾಯದ ಸದಸ್ಯರನ್ನು ಮತ್ತು ಈ ಸಂಬಂಧವಾಗಿ ಈಗಾಗಲೇ ಕೆಲಸ ಮಾಡಿರುವ ವಿದ್ವಾಂಸರುಗಳನ್ನು ಸಂದರ್ಶಿಸಿ ಅವರೊಡನೆ ಚರ್ಚಿಸುವ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.

**ಐತಿಹಾಸಿಕ ವಿಧಾನ:** ಮ್ಯಾಸಬೇಡರಿಗೆ ಸಂಬಂಧಿಸಿದಂತೆ ಕರ್ನಾಟಕದ ತಿರುಪತಿಯೆಂದೇ ಕರೆಯಿಸಿಕೊಳ್ಳುವ ಕಂಪಳದೇವರ ಹಟ್ಟಿ ಹಾಗೂ ಮ್ಯಾಸಬೇಡರ ಸಂಬಂಧ ತಿಳಿಯಲು ಇತಿಹಾಸ, ಪುರಾಣಗಳು, ಸಾಹಿತ್ಯಿಕ ಕೃತಿಗಳು ಇತರೆ ಮೂಲಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ.

**ಸಹಭಾಗಿ ಅಧ್ಯಯನ ವಿದಾನ:** ಹಟ್ಟಿಯಲ್ಲಿ ಆಚರಿಸುವ ಹಬ್ಬ ಆಚರಣೆಗಳಲ್ಲಿ, ಜಿವನಾವರ್ತನ ಆಚರಣೆಗಳಾದ ಋತುಮತಿ, ಮದುವೆ, ಶವಸಂಸ್ಕಾರ ಮುಂತಾದ ಕ್ರಿಯಾವಿಧಿಗಳಲ್ಲಿ ಭಾಗವಹಿಸಿ ಅವರ ಆಚಾರ ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಿ ಮಾಹಿತಿ ಸಂಗ್ರಹಿಸಲಾಗಿದೆ.

**ತೌಲನಿಕ ಅಧ್ಯಯನ ವಿದಾನ:** ಹಟ್ಟಿ ಸಂಸ್ಕೃತಿ ಯನ್ನು ಹೊಂದಿರುವ ಮತ್ತು ಮ್ಯಾಸಬೇಡರ ಸೊದರ ಸಂಬಂಧಿ ಎಂದು ಗುರುತಿಸಿಕೊಂಡಿರುವ ಕಾಡುಗೊಲ್ಲರ ಆಚರಣೆಗಳು ಮತ್ತು ಇವೆರಡು ಬುಡಕಟ್ಟುಗಳು ಒಟ್ಟಿಗೇ ಸೇರಿ ಆಚರಿಸುವ ಆಚರಣೆಗಳಲ್ಲಿನ ಸಾಮ್ಯತೆಗಳನ್ನು ತೌಲನಿಕವಾಗಿ ನೋಡಲಾಗಿದೆ.

### ೧.೭ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಭಾರತದಲ್ಲಿ ಸಮುದಾಯಗಳ ಅಧ್ಯಯನ ಬ್ರೀಟೀಷರ ಆಡಳಿತಾವಧಿಯ ಕಾಲದಿಂದ ಆರಂಭವಾಯಿತು ಎಂದು ಹೇಳಬಹುದು. ಹಾಗೆ ನೋಡಿದರೆ ಅರಣ್ಯವಾಸಿ ಬುಡಕಟ್ಟು ಸಮುದಾಯಗಳ

ಅಧ್ಯಯನ ತುಂಬಾ ಪ್ರಾಯಾಸದ ಕೆಲಸ. ಅವರು ಗ್ರಾಮ, ಪಟ್ಟಣ, ನಗರ ಜೀವನದಿಂದಲೇ ದೂರವಾಗಿರುವಾಗ ವಿದ್ವಾಂಸರು, ಮಾನವ ಶಾಸ್ತ್ರಜ್ಞರು ಆ ಸಮುದಾಯವನ್ನು ಹೊಕ್ಕು ಅವರ ಆಚಾರ ವಿಚಾರಗಳ ಕುರಿತು ವಿಷಯ ಸಂಗ್ರಹಿಸುವುದು ಕಠಿಣವಾದುದೇ ಸರಿ. ಇಂಥಹ ವಾತಾವರಣದಲ್ಲಿಯೂ ಭಾರತದ ಬುಡಕಟ್ಟುಗಳ ಬಗ್ಗೆ ಭಾರತೀಯ ವಿದ್ವಾಂಸರು ಅಧ್ಯಯನ ಮಾಡಿದುದಕ್ಕಿಂತ ಪಾಶ್ಚಾತ್ಯರು ಅಧ್ಯಯನ ಮಾಡಿದ್ದು ಹೆಚ್ಚು. ವೆರಿಯರ್ ಎಲ್ವಿನ್‌ರ ಆದಿಯಾಗಿ ಜಿ ಹೆಚ್ ಹಟ್ಟನ್, ಜಿ ಪಿ ಮಿಲ್ಸ್, ಸ್ಮಿತ್, ಮುಂತಾದ ಪಾಶ್ಚಾತ್ಯ ವಿದ್ವಾಂಸರು ಭಾರತದ ಬುಡಕಟ್ಟುಗಳನ್ನು ಅಧ್ಯಯನ ಮಾಡಿದರು. ಪಾಶ್ಚಿಮಾತ್ಯರು ಅಧ್ಯಯನ ಮಾಡಿದಂತಹ ಬುಡಕಟ್ಟುಗಳಲ್ಲಿ ಬೇಡ ಬುಡಕಟ್ಟು ಸಹ ಒಂದು. ಥರ್‌ಸ್ಟನ್ ಅವರ ಕೃತಿಯ ಏಳು ಸಂಪುಟಗಳಲ್ಲಿ ಮೊದಲನೆಯ ಸಂಪುಟದಲ್ಲಿ ಕರ್ನಾಟಕ ಮತ್ತು ಆಂಧ್ರದಲ್ಲಿನ ಬೇಡ ಅಥವಾ ಬೋಯಗಳ ವಿವರಣೆ ದೊರೆಯುತ್ತದೆ. ಥರ್‌ಸ್ಟನ್ ಅವರ ಕೃತಿಗಿಂತ ಬೇಡ ಸಮುದಾಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಅನಂತಕೃಷ್ಣ ಅಯ್ಯರ್ ಎಲ್ ಕೆ ಅವರ ಮೈಸೂರು 'ಕಾಸ್ಟ್ ಅಂಡ್ ಟ್ರೈಬ್ಸ್' ಪುಸ್ತಕವು ಒದಗಿಸುತ್ತದೆ. ಸ್ವಾತಂತ್ರ್ಯದ ನಂತರದಲ್ಲಿ ೧೯೪೮ ಹೆಚ್ ಎ ವೀರನಾಯಕ ಅವರ ಕೃತಿ 'ಕ್ಷಾತ್ರಾಂಶ ಪ್ರಬೋಧ'ವು ಬೇಡ ಬುಡಕಟ್ಟಿನ ಪೌರಾಣಿಕ, ಐತಿಹಾಸಿಕ ಮೂಲದ ಬಗ್ಗೆ ಮಾಹಿತಿ ಒದಗಿಸುತ್ತದೆ. ಆರ್ ರಾಜಣ್ಣ ಅವರ 'ನಾಯಕ ಜನಾಂಗದ ಇತಿಹಾಸ'(೧೯೮೨) ಎಂಬ ಕೃತಿಯಲ್ಲಿ ಬೇಡರ ಮೂಲವನ್ನು ಹಾಗೂ ಅವರ ಮೂಲ ಪುರುಷ, ಸಾಂಸ್ಕೃತಿಕ ನಾಯಕರ ಕಥೆಗಳನ್ನು ಹೇಳಿದ್ದಾರೆ. ಈ ಕೃತಿಯಲ್ಲಿ ನಾಯಕರನ್ನು ಯಾವ ರೀತಿ ಗುರುತಿಸಬೇಕು ಎಂದು ವಿವರಿಸುವಾಗ ಅವರ ದೈಹಿಕ ಲಕ್ಷಣ, ಉಡುಗೆ–ತೊಡುಗೆ, ಆಚಾರ–ವಿಚಾರ, ಧಾರ್ಮಿಕತೆ ಇತ್ಯಾದಿಗಳ ಬಗ್ಗೆ ತಿಳಿಸಿದ್ದಾರೆ. ಚಿತ್ರಲಿಂಗಯ್ಯ ಎಂ ವಿ ಅವರು ತಮ್ಮ 'ನಾಯಕ ಜನಾಂಗದ ನಿಜ ನಿಷ್ಪತ್ತಿ' ಎಂಬ ಕೃತಿಯಲ್ಲಿ ಬೇಡರ ಕುಲಮೂಲದ ಕುರಿತು ಚರ್ಚೆ ಮಾಡಿದ್ದಾರೆ. ಇವುಗಳಲ್ಲದೆ ಬೇಡರ ಪ್ರಮುಖ ಉಪಪಂಗಡವಾದ ಮ್ಯಾಸಬೇಡರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧ್ಯಯನಗಳು ಸಹ ನಡೆದಿವೆ.

ಪುಟ್ಟಣ್ಣ ಎಂ ಎಸ್, ೧೯೨೪, ಅವರ ಪಾಳೇಗಾರರ ಚರಿತ್ರೆ ಎಂಬ ಕೃತಿಯಲ್ಲಿ ಬೇಡರ ಆಳ್ವಿಕೆಯ ವಿವರಣೆಯಿದೆ. ಇವರ 'ಗುಮ್ಮನಾಯಕನಹಳ್ಳಿ ಪಾಳೇಗಾರರು' ಎಂಬ ಕೃತಿಯಲ್ಲಿ ವಿಜಯನಗರ ಸೈನ್ಯಕ್ಕೆ ಬೇಡ ಸೈನಿಕರು ಬಂದ ಉಲ್ಲೇಖ ದೊರೆಯುತ್ತದೆ. 'ಚಿತ್ರದುರ್ಗದ ಪಾಳೇಗಾರರು' ಎಂಬ ಗ್ರಂಥದಲ್ಲಿ ಬೇಡರು ಹಂಪಿಯ ಮೂಲಕ ಚಿತ್ರದುರ್ಗಕ್ಕೆ ಬಂದ ಕಥೆ ದೊರೆಯುತ್ತದೆ. ಪ್ರಸ್ತುತ ಅಧ್ಯಯನ ಮಾಡುತ್ತಿರುವ ಕಂಪಳದೇವರ ಹಟ್ಟಿಯ ಮ್ಯಾಸಬೇಡರು ಆಂಧ್ರಮೂಲದವರಾಗಿದ್ದರೂ ಹಂಪಿಯೊಂದಿಗೆ ಇಂದಿಗೂ ಸಾಂಸ್ಕೃತಿಕವಾಗಿ ಸಂಬಂಧವನ್ನು ಹೊಂದಿರುವುದರಿಂದ ಈ ಕೃತಿಯ ಪರಾಮರ್ಶನದಿಂದ ಅಗತ್ಯ ಮಾಹಿತಿ ಪಡೆಯಬಹುದಾಗಿದೆ.

ನಾಗೇಗೌಡ ಎಚ್ ಎಲ್, ಚನ್ನಬಸಪ್ಪ ಗೊ ರು, ಗೋವಿಂದರಾಜು ಟಿ(ಸಂ), ೧೯೮೧–ಜನವರಿ ೧೯೮೨, ಅವರು ಸಂಪಾದಿಸಿರುವ ಜಾನಪದ ಜಗತ್ತು (ಸಂಯುಕ್ತ ವಿಶೇಷ ಸಂಚಿಕೆ) ಈ ಪುಸ್ತಕದಲ್ಲಿ ಕೆ ಆರ್ ಸಂಧ್ಯಾರೆಡ್ಡಿ ಅವರ ಜನಪದ ಪರಿಭಾಷೆಯಲ್ಲಿ ವಿಧಿಯಮ್ಮನ ಕಥೆ ಎಂಬ

ಲೇಖನದಲ್ಲಿ ಬುಡಕಟ್ಟುಗಳಲ್ಲಿ ಹುಟ್ಟು ಸಾವುಗಳ ಬಗ್ಗೆ ಇರುವ ನಂಬಿಕೆ, ಮಗು ಹುಟ್ಟಿ ಮೂರನೇ ದಿನದಲ್ಲಿ ವಿಧಿಯು ಮಗುವಿನ ಹಣೆಯಲ್ಲಿ ಬರೆಯುವ ಹಣೆ(ವಿಧಿ)ಬರಹವನ್ನು ಯಾರೂ ತಪ್ಪಿಸಲು ಸಾಧ್ಯವಿಲ್ಲ ಎಂಬುದನ್ನು ಜನಪದ ಕಥೆಯ ಮೂಲಕ ಜನರ ನಂಬಿಕೆಯನ್ನು ತಿಳಿಸಿದ್ದಾರೆ. ಕಂಪಳದೇವರ ಹಟ್ಟಿಯ ಜನಪದರಲ್ಲೂ ಸಹ ಇಂತಹ ಅನೇಕ ನಂಬಿಕೆಗಳಿವೆ, ಅವುಗಳನ್ನು ಸಂಗ್ರಹಿಸಿ ವಿಶ್ಲೇಷಿಸುವ ಹಿನ್ನೆಲೆಯಲ್ಲಿ ಈ ಕೃತಿ ಪೂರಕ ಆಕರವಾಗಿದೆ.

ಈಶ್ವರಪ್ಪ ಎಂ ಜಿ, ೧೯೮೨, ಅವರ ಮ್ಯಾಸಬೇಡರು ಎಂಬ ಪುಸ್ತಕದಲ್ಲಿ ಮ್ಯಾಸಬೇಡರ ಪದನಿಷ್ಪತ್ತಿ ಅವರ ಸಾಮಾಜಿಕ ಜೀವನ, ಅವರ ಹಟ್ಟಿಗಳು, ದೇವಸ್ಥಾನಗಳು, ವೇಷಭೂಷಣಗಳು, ಕೌಟುಂಬಿಕ ವ್ಯವಸ್ಥೆ, ಸಂಪ್ರದಾಯಗಳ ಕುರಿತು ವಿವರಿಸಿದ್ದಾರೆ. ಈ ಕೃತಿಯಲ್ಲಿ ವಿವರಿಸಿರುವಂತೆ ಮ್ಯಾಸಬೇಡರ ಪಾರಂಪರಿಕ ಉಡುಗೆ ತೊಡುಗೆಗಳನ್ನು ಹಟ್ಟಿಯಲ್ಲಿ ಇಂದಿಗೂ ಕೆಲವು ಹಿರಿಯರು ಧರಿಸುವುದನ್ನು ಕಾಣಬಹುದಾಗಿದೆ. ಹಟ್ಟಿಯ ಮ್ಯಾಸಬೇಡರ ಪಾರಂಪರಿಕ ಉಡುಗೆ ತೊಡುಗೆಯ ಕುರಿತು ಚರ್ಚಿಸುವ ಸಂದರ್ಭದಲ್ಲಿ ಈ ಕೃತಿಯು ಪೂರಕ ಆಕರವಾಗುತ್ತದೆ.

ಕೃಷ್ಣಮೂರ್ತಿ ಹನೂರ, ೧೯೯೩, ಅವರು ಬೇಡನಾಯಕರು ಎಂಬ ತಮ್ಮ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಬೇಡರ ಕುರಿತು ಮಾಹಿತಿ ನೀಡಿದ್ದಾರೆ. ಮ್ಯಾಸಬೇಡರ ಮೂಲ, ಐತಿಹಾಸಿಕ ಹಿನ್ನೆಲೆಯನ್ನು ತಿಳಿಸುತ್ತಾ ನಾಯಕನಹಟ್ಟಿಯಲ್ಲಿ ದೊರೆತ ಬಖೈರಿನಲ್ಲಿನ ಮಾಹಿತಿಯ ಪ್ರಕಾರ ಮ್ಯಾಸಬೇಡರು ಆಂಧ್ರಪ್ರದೇಶದ ಶ್ರೀಶೈಲದ ಕಡೆಯಿಂದ ವಲಸೆ ಬಂದು ಚಿತ್ರದುರ್ಗ ಜಿಲ್ಲೆಯ ಜಗಳೂರು ಪ್ರದೇಶದ ಜನಿಗೇನ ಹಳ್ಳಿಯಲ್ಲಿ ನೆಲೆಸಿದರು ಎಂದು ಹೇಳುತ್ತಾರೆ. ಇಲ್ಲಿಗೆ ಬರಲು ಕಾರಣ ತೊರೆ, ಹಳ್ಳ, ಸುತ್ತಮುತ್ತಲೂ ಕೆರೆಗಳು ಇರುವುದರಿಂದ ಇದು ಪಶುಪಾಲನೆಗೆ ಯೋಗ್ಯವಾದ ಸ್ಥಳ ಎಂದು ಇಲ್ಲಿ ನೆಲೆಯೂರಿದ್ದರೆಂಬುದಾಗಿ ತಿಳಿಸುತ್ತಾರೆ. ಹಟ್ಟಿಯ ಮ್ಯಾಸಬೇಡರ ಜ್ಞಾನಪರಂಪರೆಯ ಕುರಿತು ತಿಳಿಯುವ ಮೊದಲು ಅವರ ಹಿನ್ನೆಲೆ ತಿಳಿಯುವುದು ಅವಶ್ಯಕ. ಹಿನ್ನೆಲೆ ತಿಳಿಯುವ ಸಂದರ್ಭದಲ್ಲಿ ಈ ಕೃತಿಯು ಉಪಯುಕ್ತ ಆಕರವಾಗುತ್ತದೆ.

ಶಿವರಾಮು ವಿ ಎನ್, ೧೯೯೩, ದಕ್ಷಿಣ ಕರ್ನಾಟಕದ ಒಡಪುಗಳು. ಲೇಖಕರು ಈ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಯೂ ಸೇರಿದಂತೆ ಅನೇಕ ಜಿಲ್ಲೆಗಳ ಜನಪದರಿಂದ ಸಂಗ್ರಹಿಸಿದ ಅನೇಕ ಒಡಪುಗಳನ್ನು ಪ್ರಕಟಿಸಿದ್ದಾರೆ ಅಲ್ಲದೆ ಒಡಪು ಎಂದರೆ ಜನಪದರು ತಮ್ಮ ಋತುಮತಿ, ಮದುವೆಯಂತಹ ಶುಭಕಾರ್ಯಗಳಲ್ಲಿ ಗಂಡ ಅಥವಾ ಹೆಂಡತಿ ತಮ್ಮ ಸಂಗಾತಿಯ ಹೆಸರು ಹೇಳಬೇಕಾದಾಗ ಸುತ್ತಮುತ್ತಲಿನ ಪರಿಸರ, ಸಂಗಾತಿಯ ಗುಣಸ್ವಭಾವ ಇತ್ಯಾದಿಗಳೊಡನೆ ಸಂಬಂಧಿಸಿದ ವ್ಯಕ್ತಿಯ ಬಗ್ಗೆ ವಿಶೇಷಣಗಳನ್ನು ಸೇರಿಸಿ ವರ್ಣನಾತ್ಮಕವಾಗಿ ತಮ್ಮ ಅನುಭವಗಳನ್ನು ಹೇಳಿ ಕೊನೆಯಲ್ಲಿ ಹೆಸರು ಹೇಳುವುದನ್ನು ಒಡಪು ಎನ್ನುತ್ತಾರೆ ಎಂದು ಒಡಪುಗಳ ಗುಣಸ್ವಭಾವದ ಬಗ್ಗೆ ಹೇಳಿದ್ದಾರೆ. ಹಟ್ಟಿಯ ಬೇಡರಲ್ಲಿ ಲಭ್ಯವಿರುವ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸುವ ಸಂದರ್ಭದಲ್ಲಿ ಅವರಲ್ಲಿನ ಒಡಪುಗಳನ್ನು ಸಹ ಸಂಗ್ರಹಿಸಿ ಅವುಗಳ ಬಗ್ಗೆ ವಿವರಿಸಬೇಕಾಗಿರುವುದರಿಂದ ಇದು ಪೂರಕ ಆಕರವಾಗಿದೆ.

ಕರಿಶೆಟ್ಟಿ ರುದ್ರಪ್ಪ, ೧೯೯೫, ಮ್ಯಾಸಬೇಡರು: ಒಂದು ಜನಾಂಗಿಕ ಅಧ್ಯಯನ. ಈ ಕೃತಿಯಲ್ಲಿ ಲೇಖಕರು ಮ್ಯಾಸಬೇಡರ ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ಚರ್ಚಿಸಿದ್ದಾರೆ, ಅವರ ಕೌಟುಂಬಿಕ ಜೀವನ, ನ್ಯಾಯಪದ್ಧತಿ, ಧಾರ್ಮಿಕ ಜೀವನ, ಸಂಸ್ಕಾರಗಳು, ಸೋಬಾನೆ ಪದಗಳು, ಜನಪದ ಕಲೆ, ಕ್ರೀಡೆ, ಮತ್ತು ಅವರಲ್ಲಿನ ಉಪಪಂಗಡಗಳ ಬಗೆಗೆ ಸಮಗ್ರವಾದ ಮಾಹಿತಿ ನೀಡಿದ್ದಾರೆ. ಅಲ್ಲದೆ ಊರು ಬೇಡರು ಮತ್ತು ಮ್ಯಾಸಬೇಡರುಗಳಲ್ಲಿಯ ಆಚರಣೆಗಳಲ್ಲಿನ ಭಿನ್ನತೆಯನ್ನು ಗುರುತಿಸಿದ್ದಾರೆ. ಮ್ಯಾಸಬೇಡರಲ್ಲಿರುವ ಋತುಮತಿ, ಹೆರಿಗೆ ಸಂದರ್ಭದ ಆಚರಣೆಗಳನ್ನು ಊರುಬೇಡರಿಗಿಂತ ಭಿನ್ನವಾಗಿ ಆಚರಿಸುವುದು ಕಂಡುಬರುತ್ತದೆ ಎಂಬುದನ್ನು ಚರ್ಚಿಸಿದ್ದಾರೆ, ಅಲ್ಲದೆ ಮ್ಯಾಸಬೇಡರಲ್ಲಿ ಸೋಬಾನೆ ಪದಗಳು ಹೆಚ್ಚಾಗಿದ್ದರೆ ಕಾಡುಗೊಲ್ಲರಲ್ಲಿ ದೇವರ ಮೇಲಿನ ಹಾಡುಗಳು ಹೇಚ್ಚಾಗಿ ದೊರೆಯುವುದು ತಿಳಿಸಿದ್ದಾರೆ.

ಈಶ್ವರಪ್ಪ ಎಂ ಜಿ, ೧೯೯೫, ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಈ ಮಸ್ತಕದಲ್ಲಿ ವ್ಯವಸಾಯದ ಉಗಮ ಹೇಗಾಯಿತು ಎಂಬುದನ್ನು ತಿಳಿಸಿದ್ದಾರೆ. ಅಲ್ಲದೆ ಚಿತ್ರದುರ್ಗ ಜಿಲ್ಲೆಯ ಜನಪದರ ವ್ಯವಸಾಯ ಪದ್ಧತಿ ಅವರ ಕೃಷಿ ಆಚರಣೆಗಳು, ಮಳೆಜಾನಪದ ಮುಂತಾದವುಗಳ ಬಗ್ಗೆ ಚರ್ಚಿಸಿದ್ದಾರೆ. ವ್ಯವಸಾಯಕ್ಕೆ ಸಂವಾದಿಯಾದ ಇಂಗ್ಲೀಷ್ ಪದ Agriculture; Agriculture ಪದವು ಲ್ಯಾಟಿನ್ ಮೂಲವಾಗಿದ್ದು ಫ್ರೆಂಚ್ ಭಾಷೆಯಲ್ಲಿ Agricultura ಎಂದು ಬಳಕೆಯಾಗುತ್ತದೆ. ಇದರಲ್ಲಿ ಎರಡು ಭಾಗಗಳಿವೆ ager=field(ಭೂಮಿ-ಕ್ಷೇತ್ರ) cultura=cultivation, ಭೂಮಿಯ ಉಳುಮೆ, ಭೂಮಿ ಗೇಯ್ಮೆ, ಭೂ ವ್ಯವಸಾಯ, ಮುಂತಾಗಿ ಕರೆಯಲಾಗುವುದು. ಂಡುಭಿಣಟಣಡಿಜ ಪದದಲ್ಲಿ ಅಡಗಿರುವ culture ಪದವೂ ಸಹ ಲ್ಯಾಟಿನ್ ಮೂಲದ ಕಲ್ಟಸ್ ನಿಂದ ಬಂದಿದ್ದು ಉಳುಮೆ, ಗೇಯ್ಮೆ, ಕೃಷಿ, ಸಾಗುವಳಿ ವ್ಯವಸಾಯ ಮುಂತಾದ ಅರ್ಥಗಳನ್ನು ಪಡೆದುಕೊಂಡಿದೆ. ಬೇಟೆ ಆಹಾರ ಸಂಗ್ರಹಣೆಗಾಗಿ ಅಲೆದು ಅಲೆದು ಸುಸ್ತಾದ ಪ್ರಾಚೀನ ಮಾನವ ಆಯ್ದ ಜಾಗಗಳಲ್ಲಿ ನೆಲೆನಿಂತು ಸಮಾಜ ನಿರ್ಮಾಣ ಮಾಡಿಕೊಂಡ. ನೀರಿರುವ ಕಡೆ ಒಂದಿಷ್ಟು ಬೆಳೆ ಬೆಳೆದುಕೊಂಡ ತನ್ನ ಈ ಉಳುಮೆಗಾಗಿ ದೈಹಿಕ ಬಲದ ಜೊತೆಗೆ ಕಾಡುಪ್ರಾಣಿಗಳಲ್ಲಿ ಕೆಲವನ್ನು ಪಳಗಿಸಿಕೊಂಡು ಉಳುಮೆ ಮಾಡತೊಡಗಿದ. ಈ ಆಹಾರೋತ್ಪಾದನೆ ಮನುಷ್ಯನ ಆಲೋಚನೆಗೆ ಸ್ವಲ್ಪ ಬಿಡುವು ದೊರಕಿಸಿಕೊಟ್ಟು ನಾವಿಂದು ಸಂಸ್ಕೃತಿ, ನಾಗರೀಕತೆ ಎಂದು ಏನೇನು ಹೇಳುತ್ತೇವೆಯೋ ಅದಕ್ಕೆ ಅವಕಾಶ ಮಾಡಿಕೊಟ್ಟಿತು. "ವ್ಯವಸಾಯವು ಭೂಮಿಯನ್ನು ಉಳುವ 'ವಿಜ್ಞಾನ ಅಥವಾ ಕಲೆ' ಎಂದು ಹೇಳುತ್ತದೆ ವೆಬ್‌ಸ್ಟರ್ ನಿಘಂಟು" (websters, seventh new collegiate dictionary-1971). ಹೀಗೆ ಈ ಕೃತಿಯಲ್ಲಿ ಲೇಖಕರು ವ್ಯವಸಾಯದ ಹುಟ್ಟು ಬೆಳವಣಿಗೆ ಬಗ್ಗೆ ತಿಳಿಸುತ್ತಾ ಚಿತ್ರದುರ್ಗದಲ್ಲಿನ ವ್ಯವಸಾಯ ಅಲ್ಲಿನ ಜಾನಪದದ ವಿಶ್ಲೇಷಣೆ ಮಾಡಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಪಾರಂಪರಿಕ ಕೃಷಿಯ ಬಗ್ಗೆ ತಿಳಿಸುವಾಗ ಮೊದಲು ಕೃಷಿಯ ಹುಟ್ಟು ಬೆಳವಣಿಗೆ ತಿಳಿಯಲು ಈ ಕೃತಿಯಲ್ಲಿ ಮಾಹಿತಿಯ ಅಗತ್ಯತೆ ಯಿದೆ.

ಶಂಕರನಾರಾಯಣ ತೀ ನಂ, ೧೯೯೮, ಕರ್ನಾಟಕ ಜನಪದ ಮಹಾಕಾವ್ಯಗಳು. ಈ ಮಸ್ತಕದಲ್ಲಿ ಜನಪದ ಮಹಾಕಾವ್ಯಗಳ ಲಕ್ಷಣ ಮತ್ತು ಸ್ವರೂಪದ ಬಗ್ಗೆ ತಿಳಿಸಿದ್ದಾರೆ. ಜಾನಪದ ಎನ್ನುವುದು

ಒಂದು ಪರಂಪರೆ. ಅದರ ಒಂದು ಅಂಗ ಜನಪದ ಸಾಹಿತ್ಯ, ಅದರ ಪದ್ಯ ಪ್ರಕಾರಗಳು ಜನಪದ ಗೀತೆಗಳು, ಜನಪದ ಕಥನ ಗೀತೆ ಅಥವಾ ಲಾವಣಿ ಹಾಗೂ ಜನಪದ ಮಹಾಕಾವ್ಯ ಈ ಎಲ್ಲಾ ಪ್ರಕಾರಗಳೂ ಕೆಲವು ಸಮಾನಾಂಶಗಳನ್ನೊಳಗೊಂಡಿರುವುದರಿಂದ ಅವುಗಳ ಲಕ್ಷಣಗಳಲ್ಲೂ ಅಷ್ಟರಮಟ್ಟಿಗೆ ಸಮಾನತೆ ಕಂಡುಬರುವುದು ಸಹಜ. ಆದರೆ ಜನಪದ ಮಹಾಕಾವ್ಯ ಕೆಲವು ವಿಶೇಷ ಲಕ್ಷಣಗಳನ್ನು ಪ್ರಕಟಿಸುತ್ತದೆ ಎಂದು ವಿಶೇಷವಾಗಿ ಜನಪದ ಮಹಾಕಾವ್ಯಗಳ ಬಗ್ಗೆ ತಿಳಿಸಿದ್ದಾರೆ. ಅಲ್ಲದೆ ಇದರಲ್ಲಿ ಜುಂಜಪ್ಪನ ಕಾವ್ಯ, ಮಂಟೇಸ್ವಾಮಿ ಕಾವ್ಯ, ಮೈಲಾರಲಿಂಗನ ಕಾವ್ಯ ಮುಂತಾದ ಕ್ಯಾವ್ಯಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಮ್ಯಾಸಬೇಡರಲ್ಲಿನ ಮೌಖಿಕ ಕಾವ್ಯಗಳ ಸಂಗ್ರಹ ಮತ್ತು ವಿಶ್ಲೇಷಣೆ ಮಾಡಲು ಈ ಕೃತಿಯ ಅವಲೋಕನ ಅವಶ್ಯಕ.

ಪ್ರಭಾಕರ ಎ ಎಸ್, ೧೯೯೯, ಮ್ಯಾಸಬೇಡರ ಕಥನಕಾವ್ಯಗಳು. ಈ ಕೃತಿಯಲ್ಲಿ ಮ್ಯಾಸಬೇಡರ ಹಿರಿಯರ ಸ್ಮೃತಿಪಟಲದಲ್ಲಿ ಅಡಗಿರುವ ಸಾಕಷ್ಟು ಮೌಖಿಕ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ ಅದರಲ್ಲಿ ಮ್ಯಾಸಬೇಡರ ಸಾಂಸ್ಕೃತಿಕ ನಾಯಕನಾದ ಗಾದರಿ ಪಾಲನಾಯಕನ ಹುಟ್ಟು ಅವನ ಪಶುಪಾಲನಾ ವೃತ್ತಿ, ಪವಾಡಗಳು, ಹುಲಿಯೊಡನೆ ಹೋರಾಡುವ ಸಾಹಸ ಮತ್ತು ಹುಲಿಯೊಡನೆ ಸ್ನೇಹಮಾಡುವ ಮನೋಭಾವ ಕೊನೆಗೆ ಹುಲಿಯೊಡನೆ ಹೋರಾಡಿ ಸಾವನ್ನಪ್ಪುವ ಕಥೆಯನ್ನು, ಜಗಳೂರು ಪಾಪನಾಯಕನ ಪವಾಡ ಪುಣ್ಯಕಥೆಗಳು, ಮತ್ತು ಕಂಪಳರಂಗಸ್ವಾಮಿಯ ಬಗ್ಗೆ ಮ್ಯಾಸಬೇಡರ ಮಹಿಳೆಯರು ಹಾಡಿರುವ ಕಥನಕಾವ್ಯಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ. ಹಟ್ಟಿಯಲ್ಲಿ ವಿಶೇಷವಾಗಿ ನಡೆಯುವ ಪಾಪನಾಯಕನ ಆಚರಣೆಯಲ್ಲಿ ಜಗಳೂರು ಪಾಪನಾಯಕನ ಕಥೆಯು ಅನಾವರಣಗೊಳ್ಳುವುದನ್ನು ಅವಲೋಕಿಸಲು ಈ ಕೃತಿಯಿಂದ ಸಾಧ್ಯವಾಯಿತು.

ಮೊಗಳ್ಳಿ ಗಣೇಶ್, ೨೦೦೦, ಅವ್ಯಕ್ತ ಚರಿತ್ರೆ. ಈ ಕೃತಿಯಲ್ಲಿ ಹಂಪಿ ಪರಿಸರದಲ್ಲಿನ ಅನೇಕ ಪಶುಪಾಲಕ ಸಮುದಾಯಗಳ ಬಗ್ಗೆ ಮತ್ತು ಅಲ್ಲಿನ ಪರಿಸರ ಪಶುಪಾಲನೆಗೆ ಹೇಗೆ ಯೋಗ್ಯವಾಗಿತ್ತು ಎಂಬುದರ ಬಗ್ಗೆ ವಿವರಿಸಿದ್ದಾರೆ. ಈ ಪ್ರದೇಶದ ಪ್ರಮುಖ ಪಶುಪಾಲಕ ಸಮುದಾಯಗಳಾದ ಕುರುಬರು, ಮ್ಯಾಸಬೇಡರು, ಕಾಡುಗೊಲ್ಲರು ಮುಂತಾದ ಸಮುದಾಯಗಳ ಪರಿಚಯ ಮತ್ತು ಅವುಗಳ ನಡುವಿನ ಸಂಘರ್ಷಗಳು ಹೇಗೆ ಅವರ ನಡುವೆ ಅಂತರವನ್ನುಂಟು ಮಾಡಿತು ಎಂಬುದನ್ನು ಚರ್ಚಿಸಿದ್ದಾರೆ. ಪ್ರಕೃತಿಯೊಂದಿಗಿನ ಈ ಸಮುದಾಯಗಳ ಸಂಬಂಧ ತಿಳಿಸಿದ್ದಾರೆ. ಪಶುಪಾಲನೆಯನ್ನೇ ವೃತ್ತಿಯನ್ನಾಗಿಸಿಕೊಂಡಿದ್ದ ಮ್ಯಾಸಬೇಡರ ಕೆಲವು ಗುಂಪುಗಳು ಹಂಪಿ ಪರಿಸರದಲ್ಲಾದ ಬದಲಾವಣೆ, ಯುದ್ದ ಮುಂತಾದ ಕಾರಣಗಳಿಂದ ತಮ್ಮ ಸಾಕು ದನಕರುಗಳಿಗೆ ಮೇವು ನಿರು ಅರಸಿ ಕಾಡು ಮತ್ತು ಕುರುಚಲು ಪ್ರದೇಶಗಳಿಂದ ಕೂಡಿದ್ದ ಚಿತ್ರದುರ್ಗ ಜಿಲ್ಲೆಯ ಪ್ರದೇಶಗಳಿಗೆ ವಲಸೆಹೋಗಿ ನೆಲೆಸಿದರು ಎನ್ನುವುದನ್ನು ತಿಳಿಸಿದ್ದಾರೆ, ಅಲ್ಲದೆ ಈ ಸಮುದಾಯಗಳು ಇಂದಿಗೂ ಹಂಪಿಯೊಂದಿಗೆ ಸಾಂಸ್ಕೃತಿಕವಾಗಿ ಸಂಬಂಧ ಹೊಂದಿವೆ ಎಂಬುದನ್ನು ಸಹ ತಿಳಿಸಿದ್ದಾರೆ. ಪ್ರಸ್ತುತ ಅಧ್ಯಯನ ಮಾಡುತ್ತಿರುವ ಕಂಪಳದೇವರ ಹಟ್ಟಿಯ ಮ್ಯಾಸಬೇಡರೂ ಸಹ ಹಂಪಿ ಪರಿಸರದಿಂದ ವಲಸೆಹೋದವರು ಎಂದು ತಿಳಿದುಬರುತ್ತದೆ ಆ ಕಾರಣದಿಂದಾಗಿ ಈ ಕೃತಿಯು ಪ್ರಸ್ತುತ ಅಧ್ಯಯನಕ್ಕೆ ಪೂರಕ ಆಕರವಾಗಿದೆ.

ಸಣ್ಣೋಬಯ್ಯ ಎಸ್ ಕೆ, ೨೦೦೨, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಸಮಾಜಶಾಸ್ತ್ರೀಯ ಅಧ್ಯಯನ. ೨೦೦೨ರಲ್ಲಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಈ ಪಿಎಚ್ ಡಿ ಮಹಾಪ್ರಬಂಧದಲ್ಲಿ ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟುಗಳ ಸಾಮ್ಯತೆಯನ್ನು ತಿಳಿಸಿದ್ದಾರೆ. ಈ ಎರಡು ಬುಡಕಟ್ಟುಗಳ ಸಂಪ್ರದಾಯಗಳು, ಆಚಾರ ವಿಚಾರಗಳು, ನಂಬಿಕೆಗಳು, ಅವರ ದೇವರುಗಳನ್ನು ಆರಾಧನೆ ಮಾಡುವ ರೀತಿ, ಪಶುಪಾಲನಾ ಸಂಸ್ಕೃತಿಯ ಈ ಸಮುದಾಯಗಳ ಹಿನ್ನೆಲೆ, ಜೀವನಾವರ್ತಕ ಆಚರಣೆಗಳು ಮತ್ತು ಇವರಲ್ಲಿನ ದೈವತ್ವದ ಬಗೆಗಿನ ಅತೀವವಾದ ನಂಬಿಕೆಗಳನ್ನು ವಿವರಿಸಿದ್ದಾರೆ. ಈ ಎರಡು ಬುಡಕಟ್ಟುಗಳು ಆಚರಿಸುವ ಹಬ್ಬ, ಜಾತ್ರೆಗಳ ಬಗ್ಗೆ ವಿವರಣೆ ನೀಡಿದ್ದಾರೆ. ಇವರ ಜೀವನ ವಿಧಾನ, ಸಾಮಾಜಿಕ ರಚನೆ, ವಸತಿ ವ್ಯವಸ್ಥೆ, ಆಹಾರ ಪದ್ಧತಿ, ಕುಲ ಬಳಿಗಳನ್ನು ತಿಳಿಸಿದ್ದಾರೆ ಅಲ್ಲದೆ ಈ ಎರಡೂ ಸಮುದಾಯಗಳ ಸಂಸ್ಕೃತಿಯನ್ನು ವಿವರವಾಗಿ ತಿಳಿಸಿದ್ದಾರೆ. ಹಟ್ಟಿಯ ಮ್ಯಾಸಬೇಡರಲ್ಲಿನ ಆಚರಣೆಗಳು, ಜೀವನಾವರ್ತಕ ಆಚರಣೆಗಳ ಬಗ್ಗೆ ಈ ಕೃತಿಯಲ್ಲಿ ಚರ್ಚಿಸಿದ್ದರೂ ಅವರ ಜ್ಞಾನಪರಂಪರೆಯ ಬಗ್ಗೆ ತಿಳಿಸಿಲ್ಲ ಹಾಗಾಗಿ ಈ ಕೃತಿಯಲ್ಲಿನ ಮಾಹಿತಿಯನ್ನು ಆಧರಿಸಿ ಮತ್ತು ಮುಂದುವರಿದು ಅವರ ಜ್ಞಾನಪರಂಪರೆಯನ್ನು ಈ ಪ್ರಬಂಧದಲ್ಲಿ ತಿಳಿಸಲಾಗುವುದು.

ರಾಮಚಂದ್ರೇಗೌಡ ಹಿ ಶಿ, ಶಂಕರನಾರಾಯಣ ತೀ ನಂ, ೨೦೦೪, ಜನಪದ ಸಾಹಿತ್ಯ ಪ್ರಕಾರಗಳು. ಈ ಕೃತಿಯಲ್ಲಿ ಜನಪದ ಗೀತೆ, ಶಿಶುಪ್ರಾಸಗಳು, ಜನಪದ ಕಥೆ, ಗಾದೆ, ಒಗಟು, ಒಡಪು, ಕುಟ್ಟುವ ಹಾಡುಗಳು, ಬೀಸುವ ಹಾಡುಗಳು, ಜನಪದ ಮಹಾಕಾವ್ಯಗಳ ಬಗ್ಗೆ ಸಾಕಷ್ಟು ಮಾಹಿತಿ ಇದೆ. ಈ ಪುಸ್ತಕದಲ್ಲಿ ಲೇಖಕರು ಗಾದೆಯ ಕುರಿತು 'ಗಾದೆಗಳೆಂದರೆ ಜನಸಾಮಾನ್ಯರಲ್ಲಿ ಚಲಾವಣೆಯಲ್ಲಿರುವ, ಸಾರ್ವಜನಿಕ ಮುದ್ರೆ ಬಿದ್ದಿರುವ, ಪ್ರಚಲಿತವೂ ಸ್ವೀಕೃತ ಮೌಲ್ಯಭರಿತವೂ ಆಗಿರುವ ನಾಣ್ಯ' ಇನ್ನೂ ಸಂಕ್ಷಿಪ್ತವಾಗಿ ಹೇಳುವುದಾದರೆ, ಜನತೆಯ ಕೌಟುಂಬಿಕ ಪದವೇ ಗಾದೆಯೆನಿಸಿಕೊಳ್ಳುತ್ತವೆ ಎಂದು ಹೇಳಿದ್ದಾರೆ. ಹೀಗೆ ಈ ಕೃತಿಯಲ್ಲಿ ಗಾದೆ, ಒಗಟು, ಒಡಪುಗಳ ಸಂಗ್ರಹ ಮತ್ತು ವಿವರಣೆ ಮಾಡಲಾಗಿದೆ. ಪ್ರಸ್ತುತ ಅಧ್ಯಯದಲ್ಲಿ ಹಟ್ಟಿಯ ಬೇಡರ ಮೌಖಿಕ ಸ್ಮೃತಿಪಟಲದಲ್ಲಿರುವ ಗಾದೆ, ಒಗಟು ಇತ್ಯಾದಿಗಳನ್ನು ಸಂಗ್ರಹಿಸಿ ವಿಭಾಗಿಸಿಕೊಂಡು ವಿವರಿಸಿ ವಿಶ್ಲೇಷಿಸಲು ಈ ಕೃತಿಯನ್ನು ಪರಾಮರ್ಶಿಸುವುದು ಅವಶ್ಯಕ.

ಕೃಷ್ಣಮೂರ್ತಿ ಹನೂರು, ೨೦೦೫, ಸಾವಿರದ ಸಿರಿಬೆಳಗು ಎಂಬ ಕೃತಿಯಲ್ಲಿ ಅನೇಕ ಬುಡಕಟ್ಟುಗಳ ಜನಪದ ಕಾವ್ಯಗಳ ಸಂಗ್ರಹವನ್ನು ಮಾಡಿದ್ದು ಅದರಲ್ಲಿ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಮತ್ತು ಮ್ಯಾಸಬೇಡರ ಅನೇಕ ಜನಪದ ಸಾಹಿತ್ಯಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ. ಚಿತ್ರದುರ್ಗದಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳು ಇಂದಿಗೂ ಬುಡಕಟ್ಟು ಸಂಸ್ಕೃತಿಯನ್ನು ಆಚರಿಸುತ್ತಿದ್ದು ಸೋದರ ಸಂಬಂಧಿಗಳಾಗಿ ನಡೆದುಕೊಳ್ಳುತ್ತಿರುವುದರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಈ ಕೃತಿಯಲ್ಲಿ ಮ್ಯಾಸಬೇಡರ ಅನೇಕ ಸೋಬಾನೆ ಪದಗಳು, ಮದುವೆ ಹಾಡುಗಳು, ಮೈನೆರೆತಾಗ ಹಾಡುವ ಹಾಡುಗಳು, ಗಾದೆಗಳು, ಒಗಟುಗಳು, ಒಡಪುಗಳು, ಮುಂತಾದವುಗಳ ಸಂಗ್ರಹವಿದೆ.

ಮುತ್ತಯ್ಯ ಎಸ್ ಎಂ, ೨೦೦೭, ಜಾನಪದ ಸಂಕಥನ. ಈ ಪುಸ್ತಕದಲ್ಲಿ ಮೌಖಿಕ ಕಾವ್ಯಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ನೋಡುವ ಹೊಸ ಆಯಾಮವನ್ನು ಸೂಚಿಸಿದ್ದಾರೆ. ಮ್ಯಾಸಬೇಡರಲ್ಲಿ ದೇವರ ಹೆಸರಿನಲ್ಲಿ ಎತ್ತುಗಳನ್ನು, ಹಸುಗಳನ್ನು, ಕುರಿಗಳನ್ನು ಬಿಡುತ್ತಾರೆ ಹೀಗೆ ಬಿಟ್ಟ ದೇವರ ಎತ್ತುಗಳನ್ನು ಇವರು ಮುತ್ತೈಗಳು ಎಂದು ಕರೆಯುತ್ತಾರೆ. ಮುತ್ತೈಗಳು ಎಂದರೆ ತಮ್ಮ ಪೂರ್ವಿಕರು ಎಂದು ಭಾವಿಸುತ್ತಾರೆ. ಹೀಗೆ ದೇವರ ಹೆಸರಲ್ಲಿ ಬಿಟ್ಟ ಕುರಿಗಳು ಮತ್ತು ಹಸುಗಳಲ್ಲಿ ಒಂದೊಂದನ್ನು ಜನ್ನಿಗೆ ಹಸು, ಜನ್ನಿಗೆ ಕುರಿ ಎಂದು ಬಿಟ್ಟಿರುತ್ತಾರೆ. "ಜನ್ನಿಗೆ ಆಕಳು ಅಂದರೆ ಕರು ಹಾಕದೆ ಹಾಲು ಕರೆಯುವ ಆಕಳು"(ಪುಟ–೪೧). ಎಂದು ತಿಳಿಸಿದ್ದಾರೆ ಅಲ್ಲದೆ ಮ್ಯಾಸಬೇಡರ ಪ್ರಮುಖ ಆಚರಣೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

ನಾರಾಯಣ ರೆಡ್ಡಿ ಎಂ ಎ, ದೇವೇಂದ್ರಪ್ಪ ಕೆ ಜಿ, ಜಗದೀಶ್ವರ ಕೆ, ಶಿವರಾಮ ಹೆಚ್ ಎನ್(ಸಂ), ೨೦೦೭, ಜನಪ್ರಿಯ ಕೃಷಿ ಗಾದೆಗಳು. ಈ ಕೃತಿಯಲ್ಲಿ ಜನಪದರ ಕೃಷಿ ಬದುಕಿಗೆ ಸಂಬಂದಿಸಿದಂತಹ ಅನೇಕ ಗಾದೆಗಳ ಸಂಗ್ರಹವಿದೆ. ಒಕ್ಕಲಗಿತ್ತಿಗೆ ಮಡಿ ಇಲ್ಲ ಹುಳ್ಳಿ ಹೊಲಕ್ಕೆ ಗೊಬ್ಬರಿಲ್ಲ, ಎಡೆ ಹೊಡೆದ ಹೊಲ ನೋಡು ಎರ್ಕೋಂಡೋಳ ತಲೆ ನೋಡು, ಮುಂತಾದ ಗಾದೆಗಳು ಮತ್ತು ಅವುಗಳ ವಿಶ್ಲೇಷಣೆಮಾಡಿದ್ದಾರೆ. ಹಟ್ಟಿಯಲ್ಲಿ ಸಂಗ್ರಹಿಸಿದ ಗಾದೆಗಳನ್ನು ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲು ಇದು ಉಪಯುಕ್ತ ಆಕರವಾಗಿದೆ.

ತ್ರಿವೇಣಿ, ೨೦೦೮, ಸ್ತ್ರೀ ಸಂಬಂಧಿ ಗಾದೆಗಳು. ಈ ಕೃತಿಯಲ್ಲಿ ಹೆಣ್ಣಿನ ಕುರಿತಾದ ಹತ್ತು ಹಲವು ಗಾದೆಗಳ ಸಂಗ್ರಹವಿದ್ದು ಅವುಗಳು ಹೆಣ್ಣಿನ ಒಳ್ಳೆಯ ಮತ್ತು ಕೆಟ್ಟ ಗುಣಗಳನ್ನು ತಿಳಿಸುವ ಜೊತೆಗೆ ಸಮಾಜದಲ್ಲಿ ಹೆಣ್ಣು ಹೇಗೆ ಬಾಳಬೇಕು, ಹೇಗೆ ಬಾಳಬಾರದು ಎಂಬುದರ ಕುರಿತು ಸಲಹೆಗಳು ಈ ಗಾದೆಗಳ ಮೂಲಕ ನಮ್ಮ ಜನಪದರು ಸಮಾಜಕ್ಕೆ ಕೊಡುಗೆಯಾಗಿ ನೀಡಿರುವುದನ್ನು ನೋಡಬಹುದು. ಉದಾಹರಣೆಗೆ ಹಣ್ಣು ಕೆಟ್ರೆ ಪುಟ್ಟಿ ಹಾಳು ಹೆಣ್ಣು ಕೆಟ್ರೆ ಹಟ್ಟಿ ಹಾಳು, ನೆರೆದಾಗಿನ ಸುಖ ಹಡೆದಾಗ ಬಂದೀತೆ, ಪೋಲಿ ದನಕ್ಕೆ ಹಾಲು ಹೆಚ್ಚು ಕೂಲಿ ಮುಂಡೆಗೆ ಮಾತು ಹೆಚ್ಚು, ಮಾತ್ಗಿತ್ತಿ ಮಗಳಲ್ಲ ತಾಟ್ಗಿತ್ತಿ ಸೊಸೆಯಲ್ಲ ಮುಂತಾದ ಗಾದೆಗಳ ಸಂಗ್ರಹವಿದೆ.

ಅಂಕನಹಳ್ಳಿ ಪಾರ್ಥ, ೨೦೦೮, ರಾಮನಗರ ಒಂದು ಸಾಂಸ್ಕೃತಿಕ ಅಧ್ಯಯನ. ಕರ್ನಾಟಕ ರಾಜ್ಯದ ರಾಮನಗರ ಜಿಲ್ಲೆ ರಾಮನಗರ ತಾಲೂಕಿನ ರಾಮನಗರದ ಸಂಪೂರ್ಣ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡಲಾದ ಈ ಕೃತಿಯಲ್ಲಿ ರಾಮನಗರದ ಭೌಗೋಳಿಕ ಹಿನ್ನೆಲೆ, ಮೇರೆಗಳು, ವಾಯುಗುಣ, ನೀರಾವರಿ, ವ್ಯವಸಾಯ, ಪಶು ಸಂಗೋಪನೆ, ನಂಬಿಕೆ, ಸಂಪ್ರದಾಯಗಳು, ಜನಪದ ಕಥೆಗಳು, ಒಗಟುಗಳು, ಗಾದೆಗಳು, ಬೈಗುಳಗಳು, ಕೃಷಿ ಜಾನಪದ, ಜನಪದ ಕ್ರೀಡೆ, ಜನಪದ ವೈದ್ಯ, ಕಲೆಗಳು, ಸಂಗೀತ, ಗುಡಿಗಳು, ಮುಂತಾದುವುಗಳ ಬಗ್ಗೆ ಮಾಹಿತಿಯಿದ್ದು ಅವುಗಳಲ್ಲಿ ಈ ಮೇಲೆ ತಿಳಿಸಿದ ವಿಷಯಗಳು ಪ್ರಸ್ತುತ ಅಧ್ಯಯನ ವಿಷಯಕ್ಕೆ ಪೂರಕವಾದವುಗಳಾಗಿವೆ. ಇಡೀ ರಾಮನಗರದಲ್ಲಿ ಆಚರಿಸುವ ಹಬ್ಬಗಳು ಪೂಜಿಸುವ ದೇವರುಗಳು ಕೃಷಿಯಲ್ಲಿ ಅನುಸರಿಸುವ ಪಾರಂಪರಿಕಜ್ಞಾನದ ಬಗ್ಗೆ ಸಾಕಷ್ಟು ಮಾಹಿತಿ ಈ ಕೃತಿಯಿಂದ ಲಭ್ಯವಿದೆ.

ದೇವರ ಕುರಿ ಓಬಯ್ಯ, ೨೦೦೮, ಮ್ಯಾಸಬೇಡರ ಸಾಂಸ್ಕೃತಿಕ ಆತ್ಮ ಕಥನ. ಜಾನಪದ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿದ ಈ ಪಿಎಚ್ ಡಿ ಮಹಾಪ್ರಬಂಧದಲ್ಲಿ ಮ್ಯಾಸಬೇಡರ ಸಾಂಸ್ಕೃತಿಕ ಸ್ಥಿತ್ಯಂತರಗಳ ಬಗ್ಗೆ ಮತ್ತು ಪ್ರಕೃತಿ ಬಗೆಗಿನ ನಂಬಿಕೆಗಳು ಎಂಬ ಅಧ್ಯಯನದಲ್ಲಿ ನಮ್ಮ ಜನಪದರು ಮಳೆ, ಸಿಡಿಲು, ಸೂರ್ಯ, ಚಂದ್ರ ನಕ್ಷತ್ರಗಳ ಬಗ್ಗೆ ಅವರದೇ ಆದ ತಿಳುವಳಿಕೆಯಲ್ಲಿ ಗ್ರಹಿಸಿರುವುದು ಮತ್ತು ಅವುಗಳನ್ನು ತಮ್ಮಂತೆಯೇ ಮಾನವರು ತಮ್ಮ ಜೊತೆಯಲ್ಲೇ ಇದ್ದವರು ಎಂದು ಅವುಗಳ ಕುರಿತಾದ ಕಥೆಗಳನ್ನು ಸಹ ಹೇಳುತ್ತಾರೆ. ಇದೇ ರೀತಿಯಾದ ಪ್ರಕೃತಿ ಸಂಬಂಧಿ ಜನಪದ ನಂಬಿಕೆಗಳು ಹಟ್ಟಿಯ ಜನಪದರಲ್ಲೂ ಇವೆ.

ಮುತ್ತಯ್ಯ ಎಸ್ ಎಂ, ೨೦೦೯, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳು: ಪರಂಪರೆ–ಆಧುನಿಕತೆ(ಸಂಪುಟ–೬). ಎಂಬ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ನೆಲೆಸಿರುವ ಮ್ಯಾಸಬೇಡ, ಕಾಡುಗೊಲ್ಲ, ಲಂಬಾಣಿಗಳ ಬಗ್ಗೆ ಚರ್ಚಿಸಿದ್ದಾರೆ. ಈ ಕೃತಿಯಲ್ಲಿ ಮ್ಯಾಸಬೇಡ ಬುಡಕಟ್ಟಿನ ಪಾರಂಪರಿಕ ಆಚರಣೆಗಳು ಪ್ರಸ್ತುತ ದಿನಮಾನಗಳಲ್ಲಿಯೂ ಹೇಗೆ ಮುಂದುವರಿದುಕೊಂಡು ಬರುತ್ತಿವೆ ಎಂಬುದನ್ನು ಚರ್ಚಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಈ ಮೂರು ಬುಡಕಟ್ಟುಗಳಲ್ಲಿ ಪಾರಂಪರಿಕ ಮೌಲ್ಯಗಳು, ಆಚರಣೆಗಳು, ನಂಬಿಕೆಗಳು, ಹಬ್ಬಗಳು ಇಂದಿಗೂ ರೂಢಿಯಲ್ಲಿದ್ದು ಈ ಮೂರು ಸಮುದಾಯಗಳು ಜಾಗತೀಕರಣ ಮತ್ತು ಆಧುನೀಕರಣದಿಂದಾಗಿ ಆಧುನಿಕತಾವಾದಿಗಳ ಅಭಿಪ್ರಾಯದಂತೆ ಸಂಪೂರ್ಣ ಬದಲಾವಣೆಯಾಗಿಲ್ಲ ಕೆಲವು ಅಂಶಗಳು ಮಾತ್ರ ರೂಪಾಂತರಗೊಂಡಿವೆ ಎಂಬುದಾಗಿ ತಿಳಿಸಿದ್ದಾರೆ. ಪ್ರಸ್ತುತ ದಿನಮಾನದಲ್ಲಿ ಕಂಪಳದೇವರ ಹಟ್ಟಿಯ ಸ್ಥಿತ್ಯಂತರದ ಕುರಿತು ಮಾತನಾಡುವ ಸಂದರ್ಭದಲ್ಲಿ ಹಟ್ಟಿಯ ಜನರು ಆಧುನಿಕತೆಗೆ ಹೇಗೆ ಹೊಂದಿಕೊಳ್ಳುತ್ತಿದ್ದಾರೆ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಬದಲಾವಣೆ ಹೊಂದಿದ್ದಾರೆಯೇ? ಅಥವಾ ಇಲ್ಲವೇ ಎಂದು ತಿಳಿಯುವ ಸಂದರ್ಭದಲ್ಲಿ ಕ್ಷೇತ್ರಕಾರ್ಯದ ಮಾಹಿತಿ ಮತ್ತು ಈ ಕೃತಿಯ ಮಾಹಿತಿ ಅಗತ್ಯವಾಗಿದೆ.

ರೇಣುಕಾ ಕೊಡಗುಂಟಿ, ೨೦೦೯, ಕರ್ನಾಟಕದಲ್ಲಿ ಶವಸಂಸ್ಕಾರ. ಈ ಕೃತಿಯಲ್ಲಿ ಕರ್ನಾಟಕದ ಅನೇಕ ಬುಡಕಟ್ಟುಗಳ ಶವಸಂಸ್ಕಾರ ಪದ್ಧತಿಯನ್ನು ತಿಳಿಸಿದ್ದಾರೆ. ಹಿಂದೂ, ಜೈನ, ಧರ್ಮಗಳಲ್ಲಿನ ಶವಸಂಸ್ಕಾರಗಳ ಬಗೆಯನ್ನು ತಿಳಿಸಿರುವುದಲ್ಲದೆ ಅಮರೇಶ ಯತಗಲ್ ಅವರು ಬರೆದ ನಾಯಕ ಅರಸರ ಶವಸಂಸ್ಕಾರ ಪದ್ಧತಿ ಎಂಬ ಲೇಖನದಲ್ಲಿ ಈ ರೀತಿ ಹೇಳಿದ್ದಾರೆ, ಶವಸಂಸ್ಕಾರದಲ್ಲಿ ನಾಲ್ಕು ವಿಧಗಳಿವೆ ಶವವನ್ನು ದಹನ ಮಾಡುವುದು, ಹೂಳುವುದು, ಪುಣ್ಯ ನದಿಯಲ್ಲಿ ವಿಸರ್ಜಿಸುವುದು ಹಾಗು ಪಕ್ಷಿಗಳ ಭಕ್ಷಣೆಗೆ ಬಿಡುವುದು ಆದರೆ ನಾಯಕ ಅರಸು ಮನೆತನಗಳಲ್ಲಿ(ನಾಯಕ ಸಮುದಾಯದಲ್ಲಿ) ಎರಡು ರೀತಿಯ ಶವ ಸಂಸ್ಕಾರ ನಡೆಯುತ್ತವೆ. ಇಲ್ಲಿ ಚಿತ್ರದುರ್ಗ, ನಾಯಕನ ಹಟ್ಟಿ, ಸುರಪುರ, ಜರಿಮಲೆ, ಮುಂತಾದ ಭಾಗದ ನಾಯಕರಲ್ಲಿನ ಶವ ಸಂಸ್ಕಾರಗಳ ಕುರಿತು ವಿವರಣೆ ನೀಡಿದ್ದಾರೆ.

ದುರುಗಪ್ಪ ಎಂ ಕೆ, ೨೦೧೦, ವಿಜಯನಗರೋತ್ತರ ಕಾಲೀನ ಬೇಡ ಜನಾಂಗ. ಈ ಗ್ರಂಥದಲ್ಲಿ ಲೇಖಕರು ಬೇಡರ ಗುಂಪನ್ನು ಬೇಡಗಂಪಣ ಎಂದು ಕರೆದಿದ್ದಾರೆ, ಅಲ್ಲದೆ ಅವರ ಸ್ಥಿತ್ಯಂತರಗಳ

ಬಗ್ಗೆ ಚರ್ಚಿಸಿದ್ದಾರೆ. ಬೇಡರು ಮೂಲತಃ ಬೇಟೆ ವೃತ್ತಿಯನ್ನು ಹೊಂದಿದ್ದು ಅವರು ಶೂರರೂ, ಸಾಹಸಿಗಳೂ ಆಗಿದ್ದರಿಂದ ಅವರ ಬದುಕಿನ ಚರಿತ್ರೆಯುದ್ದಕ್ಕೂ ಸ್ಥಿತ್ಯಂತರಕ್ಕೊಳಪಟ್ಟ ಬಗೆಯನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ಬೇಡರು, ನಾಯಕ, ಗುರಿಕಾರ, ಸುಬೇದಾರ, ಜಹಗೀರುದಾರ, ದೇಸಾಯಿ, ತಳವಾರ, ಪಾಳೇಯಗಾರ, ದೊರೆ ಹೀಗೆ ನಾನಾ ಹಂತಗಳಿಗೆ ಏರಿದ್ದನ್ನು ಚರಿತ್ರೆಯಿಂದ ತಿಳಿಯಬಹುದು ಎಂದು ಹೇಳಿದ್ದಾರೆ. ಒಂದು ಕಾಲಕ್ಕೆ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಉನ್ನತಮಟ್ಟಕ್ಕೇರಿದ ಬೇಡರು ಇಂದು ಕೃಷಿಕರಾಗಿ, ಕೃಷಿಕೂಲಿಗಳಾಗಿ, ಪಶುಪಾಲಕರಾಗಿ ಮುಂದುವರಿಯುತ್ತಿರುವುದು ಕಂಡುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ಪಾಳೆಪಟ್ಟುಗಳನ್ನು ಕಟ್ಟಿಕೊಂಡು ಆಳ್ವಿಕೆ ನಡೆಸುತ್ತಿದ್ದ ಚಿತ್ರದುರ್ಗ, ಕೆಳದಿ, ಹರಪನಹಳ್ಳಿ, ಹಾಗಲವಾಡಿ, ಹರತಿ, ನಿಡುಗಲ್ಲು, ಕನಕಗಿರಿ, ಗುಡೇಕೋಟೆ, ನಾಯಕನಹಟ್ಟಿ ಪಾಳೇಗಾರರಾಗಿ ಆಳಿದವರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಿರುವುದು ಕಂಡುಬರುತ್ತದೆ. ಬೇಡರಲ್ಲಾದ ಸಾಮಾಜಿಕ, ರಾಜಕೀಯ, ಆರ್ಥಿಕ ಬದಲಾವಣೆಗಳ ಬಗ್ಗೆ ಈ ಕೃತಿಯಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಹಂಪಿ ಪರಿಸರದಿಂದ ವಲಸೆ ಬಂದವರು ಎಂದು ಹೇಳಲಾಗುವ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಸಾಮಾಜಿಕ, ಆರ್ಥಿಕ ಜೀವನ, ಪರಂಪರೆಯ ಬಗ್ಗೆ ಈ ಕೃತಿ ಕೆಲವು ಮಾಹಿತಿಯನ್ನು ಒದಗಿಸುತ್ತದೆ.

ಮೈಲಹಳ್ಳಿ ರೇವಣ್ಣ, ೨೦೧೨, ಜನಪದ ಗಾದೆ ಮತ್ತು ಒಗಟುಗಳು. ಈ ಕೃತಿಯಲ್ಲಿ ಕೃಷಿ ಸಂಬಂಧಿ ಗಾದೆಗಳು, ಜಾತಿ ಸಂಬಂಧಿ ಗಾದೆಗಳು, ಸ್ತ್ರೀಸಂಬಂಧಿ ಗಾದೆಗಳು, ಮುಂತಾದ ವಿಷಯಗಳ ಕುರಿತಾದ ಗಾದೆಗಳ ಸಂಗ್ರಹವಿದೆ. ಹಟ್ಟಿಯ ಜನಪದ ಸಾಹಿತ್ಯ ಅಧ್ಯಯನ ಮಾಡುವ ಸಂದರ್ಭದಲ್ಲಿ ಈ ಕೃತಿ ಅಗತ್ಯ ಆಕರವಾಗಿದೆ.

ರಮೇಶ್ ಸ ಚಿ, ೨೦೧೩, ಜಾನಪದ ವಸ್ತು ಕೋಶ ಎಂಬ ಈ ಕೃತಿಯಲ್ಲಿ ಗ್ರಾಮೀಣ ಜನಪದರ ಕೃಷಿ ಉಪಕರಣಗಳು, ಗೃಹ ಉಪಕರಣಗಳು ಮುಂತಾದ ವಸ್ತು ಉಪಕರಣಗಳ ಸ್ಥಳೀಯ ಹೆಸರುಗಳೊಂದಿಗೆ ಅವುಗಳ ಉಪಯೋಗ ಮತ್ತು ತಯಾರಿಸುವ ವಿಧಾನಗಳ ಬಗ್ಗೆ ತಿಳಿಸಿದ್ದಾರೆ. ಈ ಮಾದರಿಯಲ್ಲಿಯೇ ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಕೃಷಿ ಉಪಕರಣಗಳ ಪ್ರಾದೇಶಿಕ ಹೆಸರು ಮತ್ತು ಉಪಯೋಗಗಳನ್ನು ತಿಳಿಸಲಾಗಿದೆ.

೨೦೧೩ ರಲ್ಲಿ ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಜಿ. ಎಂ. ಲೋಕೇಶ್ ಎಂಬುವರು ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ 'ಕರ್ನಾಟಕದ ಬಯಲುಸೀಮೆಯ ಮ್ಯಾಸ ನಾಯಕರ ಹಟ್ಟಿಗಳು: ಚಾರಿತ್ರಿಕ ಅಧ್ಯಯನ' ಎಂಬ ವಿಷಯದ ಕುರಿತು ಪಿಎಚ್.ಡಿ ಮಹಾ ಪ್ರಬಂಧ ಸಿದ್ದಪಡಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ಮ್ಯಾಸಬೇಡರ ಹಟ್ಟಿ ಜೀವನದ ಕುರಿತಾಗಿ ವಿವರಣೆ ದೊರೆಯುತ್ತದೆ. ಅಲ್ಲದೆ ಕರ್ನಾಟಕದ ಬಹುತೇಕ ಮ್ಯಾಸ ನಾಯಕರ ಎಲ್ಲಾ ಹಟ್ಟಿಗಳನ್ನು ಗುರುತಿಸಿ ಆ ಹಟ್ಟಿಗಳ ಬಗ್ಗೆ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟಿದ್ದಾರೆ. ಇಲ್ಲಿ ಸಂಶೋಧಕರು ಬಯಲುಸೀಮೆಯ ಎಲ್ಲಾ ಮ್ಯಾಸನಾಯಕರ ಹಟ್ಟಿಗಳ

ಕ್ಷೇತ್ರಕಾರ್ಯಾಧಾರಿತವಾಗಿ ಅಧ್ಯಯನ ಮಾಡಿದ್ದಾರೆ. ಆದರೆ ಹಟ್ಟಿ ಸಂಸ್ಕೃತಿಯ ಬಗ್ಗೆ ಸಮಗ್ರವಾಗಿ ತಿಳಿಯಲು ಹಟ್ಟಿಗಳಲ್ಲಿ ಆಚರಿಸುವ ವಾರ್ಷಿಕಾವರ್ತನ ಆಚರಣೆಗಳು, ಜೀವನಾವರ್ತಕ ಆಚರಣೆಗಳು, ಪ್ರತಿನಿತ್ಯ ಅವರ ಬದುಕನ್ನು ಸೂಕ್ಷ್ಮವಾಗಿ ಗಮನಿಸಬೇಕು. ಆಗ ಮಾತ್ರ ಅವರ ಲೋಕದೃಷ್ಟಿ ಏನೆಂಬುದು ತಿಳಿಯಲು ಸಾಧ್ಯ. ಹಾಗಾಗಿ ಎಲ್ಲಾ ಹಟ್ಟಿಗಳನ್ನು ಅಧ್ಯಯನ ಮಾಡುವುದರಿಂದ ಆ ಬುಡಕಟ್ಟಿನ ಬದುಕು ಸಮಗ್ರವಾಗಿ ತಿಳಿಯುವುದು ಕಷ್ಟಸಾಧ್ಯ, ಕಾರಣ ವ್ಯಾಪ್ತಿ ವಿಶಾಲವಾಗುತ್ತದೆ, ಆದ್ದರಿಂದ ಒಂದೇ ಒಂದು ಹಟ್ಟಿಯನ್ನು ಅಧ್ಯಯನ ಮಾಡುವುದರಿಂದ ಹಟ್ಟಿಯ ಜನಪದರ ಜ್ಞಾನಪರಂಪರೆಯನ್ನು ಸಮಗ್ರವಾಗಿ ಅರಿಯಬಹುದು.

ಮಾದಣ್ಣವರ ಎಸ್, ೨೦೧೪, ಸೊರಟೂರು ಗ್ರಾಮದ ಜಾನಪದ ಅಧ್ಯಯನ. ಈ ಪ್ರಬಂಧದಲ್ಲಿ ಹಟ್ಟಿಗಳ ಜನರ ಜೀವನ ವಿಧಾನದ ಬಗ್ಗೆ ವಿವರವಾಗಿ ತಿಳಿಸಿದ್ದಾರೆ. ಹಿಂದಿನ ಕಾಲದಲ್ಲಿ ಹಟ್ಟಿಯಲ್ಲಿ ಪ್ರತಿ ಮನೆಯಲ್ಲಿ ಒಂದು ಎಮ್ಮೆ ಅಥವಾ ಆಕಳು ಇರುತ್ತಿದ್ದವು ಆದರೆ ಇಂದು ಅವುಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಇದರ ಪರಿಣಾಮ ಹಾಲು, ಮೊಸರು, ಬೆಣ್ಣೆ, ತುಪ್ಪದ ಆಹಾರ ಊಟ ಮಾಡುತ್ತಿದ್ದ ಹಾಗೂ ಪಚನ ಕ್ರಿಯೆಗೆ ಎಲೆ, ಅಡಿಕೆ ಜಗಿಯುವ ಅಜ್ಜ ಅಜ್ಜಿ ಅಮ್ಮನ ಕಾಲ ಇಂದು ಕಾಣಲು ಸಿಗುತ್ತಿಲ್ಲ "ಅದಕ್ಕೆ ಬದಲಾಗಿ ಹಸಿವೆಯಾಗದಂತೆ ತಡೆಯುವ ಬೆಳಗಿನ ಬೆಡ್ ಕಾಫಿ, ಹೊಟ್ಟೆ ತುಂಬಿದಂತೆ ಕಂಡರೂ ಶಕ್ತಿ ಬಾರದ ರೇಶನ್ ಅಕ್ಕಿ ಅನ್ನ, ಅದಕ್ಕೂ ಮಿಗಿಲಾಗಿ ಗುಟುಕಾ ಹಾಗೂ ಮಧ್ಯಪಾನಗಳತ್ತ ಇಂದಿನ ಜನ ಹೆಚ್ಚು ಒಲವು ತೋರುತ್ತಿರುವುದು ಕಂಡು ಬರುತ್ತಿದೆ." ಸಾಲ ಮಾಡಿಯಾದರೂ ತುಪ್ಪ ತಿನ್ನು ಎನ್ನುವಂತೆ ಆಧುನಿಕತೆಯ ಜಗತ್ತಿನ ಮೋಹಕತೆಗೆ ಹಟ್ಟಿಯ ಜನರು ಮರುಳಾಗುತ್ತಿದ್ದಾರೆ. ಆದರೂ ಇದು ಹಟ್ಟಿಯನ್ನು ಇನ್ನೂ ಸಂಪೂರ್ಣವಾಗಿ ಆವರಿಸಿಲ್ಲ ಇದಕ್ಕೆ ಹಲವಾರು ಕಾರಣಗಳಿದ್ದರೂ ಅದರ ಪರಿಹಾರ ಮಾತ್ರ ವೈಯಕ್ತಿಕವಾಗಿದೆ. ಹಟ್ಟಿಯ ಸ್ಥಿತ್ಯಂತರದ ಬಗ್ಗೆ ಚರ್ಚಿಸುವ ಸಂದರ್ಭದಲ್ಲಿ ಈ ಕೃತಿಯಲ್ಲಿ ತಿಳಿಸಿರುವಂತಹ ಅನೇಕ ಅಂಶಗಗಳು ಕಂಪಳದೇವರ ಹಟ್ಟಿಯ ಸ್ಥಿತಿಗೆ ಪ್ರಸ್ತುತವೆನಿಸುತ್ತವೆ.

ಶ್ರೀನಿವಾಸ್ ಎಂ ಎಸ್, ಅವರ The Remembered Village ಎಂಬ ಕೃತಿಯನ್ನು ಶ್ಯಾಮಭಟ್ಟ ಟಿ ಆರ್, ೨೦೧೫, ಅವರು ಕನ್ನಡಕ್ಕೆ ಅನುವಾದಿಸಿ ಐ ಬಿ ಎಚ್ ಪ್ರಕಾಶನದಲ್ಲಿ ೨೦೧೫ ರಲ್ಲಿ ಪ್ರಕಟಿಸಿದ 'ನೆನಪಿನ ಹಳ್ಳಿ' ಎಂಬ ಈ ಕೃತಿಯಲ್ಲಿ ಲೇಖಕರು ಕರ್ನಾಟಕ ರಾಜ್ಯದಲ್ಲಿರುವ ರಾಮಪುರ ಎಂಬ ಒಂದು ಹಳ್ಳಿಯ ಜನಪದರ ಜೀವನ ವಿಧಾನ, ಧಾರ್ಮಿಕ ಆಚರಣೆಗಳು, ಕೃಷಿ, ನೀರಾವರಿ ಪದ್ದತಿ, ಮುಯ್ಯಿ ಪದ್ದತಿ, ಹಳ್ಳಿಯ ಸಾಮಾಜಿಕ ಸಂಬಂಧಗಳ ಸ್ವರೂಪ ಮತ್ತು ಲಕ್ಷಣಗಳು ಮುಂತಾದ ವಿಷಯಗಳ ಕುರಿತು ತಿಳಿಸಿದ್ದಾರೆ. ಮನೆದೇವರುಗಳು ಹಾಗೂ ಪಂಥಗಳು, ಹಳ್ಳಿಗಳಲ್ಲಿನ ಗೆಳೆತನ, ಹಗೆತನ, ವರ್ಗಗಳು ಮತ್ತು ಬಣಗಳು, ಜಮೀನು ಆಧಾರಿತ ಅಂತಸ್ತು ವ್ಯವಸ್ಥೆ, ಕೃಷಿಕರಲ್ಲಿನ ಮುಯ್ಯಿ ಪದ್ದತಿ, ಸಮುದಾಯಗಳ ನಡುವಿನ ಹೊಂದಾಣಿಕೆ, ದ್ವೇಷಗಳು, ಸಾಮೂಹಿಕ ಆಚರಣೆಗಳು ಮುಂತಾದುವುಗಳ ಬಗ್ಗೆ ತಿಳಿಸಿದ್ದಾರೆ. ಒಂದು ಹಟ್ಟಿಯನ್ನು ಅಧ್ಯಯನದ ವಸ್ತುವನ್ನಾಗಿಸಿಕೊಂಡು

ಅಧ್ಯಯನ ಮಾಡುವ ಸಂದರ್ಭದಲ್ಲಿ ಎಂ ಎನ್ ಶ್ರೀನಿವಾಸ್ ಅವರ The Remembered Village ಎಂಬ ಪುಸ್ತಕ ಮುಖ್ಯ ಆಕರವಾಗುತ್ತದೆ.

ವಿರೂಪಾಕ್ಷಿ ಪೂಜಾರಹಳ್ಳಿ ಅವರು ಬೇಡ ಮತ್ತು ಬೇಡರ ಹಟ್ಟಿ ಸಂಸ್ಕೃತಿಯ ಕುರಿತು ಸಾಕಷ್ಟು ಮಾಹಿತಿ ನೀಡುವ ಪುಸ್ತಕಗಳನ್ನು ಬರೆದಿದ್ದಾರೆ. ಬೇಟೆ ಮತ್ತು ಬೇಡರು, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ವಾಲ್ಮೀಕಿ ಸಮುದಾಯದ ಪ್ರಾತ್ಯಸ್ಮರಣೀಯರು, ಚಿನ್ನ ಹಗರಿ ಸಿರಿ, 'ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ' ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಮುಂತಾದ ಕೃತಿಗಳು ಮ್ಯಾಸಬೇಡರ ಸಾಮಾಜಿಕ, ಸಾಂಸ್ಕೃತಿಕ, ಮೌಖಿಕ, ಪಾರಂಪರಿಕ ತಿಳುವಳಿಕೆಗಳ ಕುರಿತಾಗಿ ಮಾಹಿತಿ ಹೊಂದಿರುವ ಕೃತಿಗಳಾಗಿವೆ. ಅಲ್ಲದೆ ಮ್ಯಾಸಬೇಡರ ಕುಲ ಬಳಿಗಳು, ಕಟ್ಟೆಮನೆಗಳು, ಆಚರಣೆಗಳ ಕುರಿತಾಗಿಯೂ ಸಹ ಇವರ ಅನೇಕ ಕೃತಿಗಳಲ್ಲಿ ಚರ್ಚೆಮಾಡಿದ್ದಾರೆ.

ಮಲ್ಲೇಪುರಂ ಜಿ ವೆಂಕಟೇಶ ಅವರು ಸಂಪಾದಿಸಿದ ಶಂಬಾಕೃತಿ ಸಂಪುಟ-೧ ಮತ್ತು ೨ ರಲ್ಲಿ ಹಟ್ಟಿ ಎಂಬ ಪದದ ಅರ್ಥ, ಹುಟ್ಟುಗಳ ಬಗ್ಗೆ ಮಾಹಿತಿ ಇದೆ, ಅಲ್ಲದೆ ಪಶುಪಾಲಕ ಸಮುದಾಯದವರು ಹಟ್ಟಿ ಹಬ್ಬಗಳನ್ನು ಹೇಗೆ ಆಚರಿಸುತ್ತಾರೆ ಮತ್ತು ಗೋವುಗಳಿಗೆ ಹಟ್ಟಿಕಾರರು ಕೊಟ್ಟ ಪೂಜ್ಯನೀಯ ಸ್ಥಾನವನ್ನು ಸಂಪುಟ-೧ ರಲ್ಲಿ ತಿಳಿಸಿದ್ದಾರೆ. ಈ ಕೃತಿಗಳಲ್ಲಿ ಶಂಬಾಜೋಶಿಯವರು ಹಟ್ಟಿಕಾರರ ಮೂಲ, ಹಟ್ಟಿಕಾರರೆಂದರೆ ಯಾರು? ಹಟ್ಟಿಕಾರರ ಅಲೆದಾಟ, ಹಟ್ಟಿಗಳು ಹೇಗೆ ಹುಟ್ಟಿಕೊಂಡವು?, ಹಟ್ಟಿಕಾರರ ಭಾಷೆ, ಹಟ್ಟಿಕಾರರ ಹೋರಾಟ, ಶೌರ್ಯ ಸಾಹಸಗಳ ವರ್ಣನೆಯನ್ನು ಈ ಸಂಪುಟದಲ್ಲಿ ವಿವರಿಸಿದ್ದಾರೆ. ಹಟ್ಟಿಕಾರರಾದ ಮ್ಯಾಸಬೇಡರ ಪಶುಪಾಲನಾ ಜ್ಞಾನದ ಬಗ್ಗೆ ಅಧ್ಯಯನ ಮಾಡುವ ಸಂದರ್ಭದಲ್ಲಿ ಮತ್ತು ಹಟ್ಟಿಯ ಪರಿಕಲ್ಪನೆಯ ಬಗ್ಗೆ ಚರ್ಚಿಸುವ ಸಂದರ್ಭದಲ್ಲಿ ಶಂಬಾಜೋಶಿಯವರ ಸಂಪುಟಗಳು ಸಹಾಯಕವಾಗುತ್ತವೆ.

ಬೋರಲಿಂಗಯ್ಯ ಹಿ ಚಿ, ಒಂದು ಬುಡಕಟ್ಟಿನ ಲೋಕದೃಷ್ಟಿ ಎಂಬ ಪುಸ್ತಕದಲ್ಲಿ ಹಾಲಕ್ಕಿ ಒಕ್ಕಲಿಗರು ಎಂಬ ಸಮುದಾಯವನ್ನು ಸಮಗ್ರವಾಗಿ ಅಧ್ಯಯನ ಮಾಡಿ ಬುಡಕಟ್ಟು ಲೋಕದೃಷ್ಟಿ ಎಂದರೇನು? ಎಂಬುದರ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಈ ಸಮುದಾಯವು ಪ್ರಕೃತಿಯನ್ನು ತಮ್ಮ ತಿಳುವಳಿಕೆಯಲ್ಲಿ ಗ್ರಹಿಸಿಕೊಂಡ ಬಗೆ ಹಾಗೂ ಪ್ರಕೃತಿಯೊಡನೆ ಅವರ ಸಂಬಂಧಗಳು ಅವರ ಆಚಾರ ವಿಚಾರ ಮತ್ತು ಪ್ರಕೃತಿ ಬಗೆಗಿನ ಅವರ ಪಾರಂಪರಿಕ ಜ್ಞಾನವನ್ನು ವಿವರಿಸಿದ್ದಾರೆ. 'ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ' ಎಂಬ ವಿಷಯದ ಮೇಲೆ ಒಂದು ಹಟ್ಟಿಯನ್ನು ಸಮಗ್ರವಾಗಿ ಅಧ್ಯಯನ ಮಾಡುವಾಗ ಈ ಕೃತಿಯಲ್ಲಿ ಲೇಖಕರು ಹಾಲಕ್ಕಿ ಒಕ್ಕಲಿಗರ ಲೋಕದೃಷ್ಟಿಯನ್ನು ಗ್ರಹಿಸಿರುವ ಮಾದರಿಯಲ್ಲೇ ಹಟ್ಟಿಯ ಮ್ಯಾಸಬೇಡರ ಜ್ಞಾನಪರಂಪರೆಯನ್ನು ಗ್ರಹಿಸುವ ಪ್ರಯತ್ನ ಮಾಡಲಾಗುವುದು.

ಚಲುವರಾಜು ಅವರ ಜುಂಜಪ್ಪನ ಕಾವ್ಯ ಪುಸ್ತಕದಲ್ಲಿ ಹಟ್ಟಿಗಳ ಪರಿಕಲ್ಪನೆ, ಹಟ್ಟಿಗಳ ಜನರ ಜೀವನ, ಪಶುಪಾಲನೆ ಬಗ್ಗೆ ವಿವರಣೆ ನೀಡಿದ್ದಾರೆ. ಅಲ್ಲದೆ ಕಾಡುಗೊಲ್ಲರಲ್ಲಿನ ಪಶುಪಾಲನಾ ವೃತ್ತಿ, ದನಕರುಗಳೊಂದಿಗಿನ ಅವರ ಸಂಬಂಧ, ಅಲೆಮಾರಿತನ ಮುಂತಾದ ವಿವರಗಳನ್ನು ಕಾಡುಗೊಲ್ಲರ

ಸಾಂಸ್ಕೃತಿಕ ನಾಯಕ ಜುಂಜಪ್ಪನ ಕುರಿತಾಗಿ ಹೇಳುವ ಕಾವ್ಯದಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪಿಸುತ್ತಾ ಕಥೆಯನ್ನು ನಿರೂಪಣೆ ಮಾಡಿದ್ದಾರೆ. ಪಶುಪಾಲನಾ ಸಂಸ್ಕೃತಿಯನ್ನು ಹೊಂದಿರುವ ಹಟ್ಟಿಯ ಮ್ಯಾಸಬೇಡರಲ್ಲಿ ಜುಂಜಪ್ಪನ ಕಾವ್ಯದ ರೀತಿಯಲ್ಲಿಯೇ ಮ್ಯಾಸಬೇಡರ ಸಾಂಸ್ಕೃತಿಕ ನಾಯಕರಾದ ಜಗಳೂರು ಪಾಪನಾಯಕ, ಗಾದ್ರಿ ಪಾಲನಾಯಕ ಮುಂತಾದವರ ಕಾವ್ಯಗಳು ದೊರೆಯುತ್ತವೆ.

ಪ್ರಸ್ತುತ ಪಿಎಚ್. ಡಿ ಅಧ್ಯಯನ ದೃಷ್ಟಿಯಿಂದ ಮ್ಯಾಸಬೇಡರ ಗುರುಸ್ಥಾನವಾದ ಮತ್ತು ಇಂದಿಗೂ ತಮ್ಮ ಪರಂಪರೆ ಉಳಿಸಿಕೊಂಡು ಬಂದಿರುವ ಚಿತ್ರದುರ್ಗ ಜಿಲ್ಲೆಯ 'ಕಂಪಳದೇವರ ಹಟ್ಟಿ'ಯನ್ನು ಆಯ್ದುಕೊಂಡಿದ್ದೇನೆ. ಬೇಡರಿಗೆ ಸಂಬಂಧಿಸಿದಂತೆ ಈ ಹಟ್ಟಿಯನ್ನು ಕರ್ನಾಟಕದ ತಿರುಪತಿ ಎಂದು ಕರೆಯುವರು. ಇಂತಹ ಆಧುನಿಕತೆಯ ಸಂದರ್ಭದಲ್ಲೂ ಸಹ ತಮ್ಮ ಹಿಂದಿನ ಬುಡಕಟ್ಟು ಪದ್ಧತಿಯ ಆಚರಣೆಗಳನ್ನೇ ಇಂದಿಗೂ ಸಹ ಆಚರಿಸುತ್ತಾ ಬರುತ್ತಿರುವ ಈ ಹಟ್ಟಿಯಲ್ಲಿ ಸಾಕಷ್ಟು ಸಂಸ್ಕೃತಿಯ, ಜನಪದೀಯ ಅಂಶಗಳನ್ನು ಗಮನಿಸಬಹುದಾಗಿದೆ. ಆಂಧ್ರದಿಂದ ವಲಸೆ ಬಂದ ಬೇಡರು ಮೊದಲು ನೆಲೆಸಿದ್ದು ಇಲ್ಲಿಯೇ ನಂತರ ಆನೆಗುಂದಿ, ಕಂಪಿಲಿ, ಎಕ್ಕೆಗುಂದಿ, ಚಿತ್ರದುರ್ಗದ ಕಡೆ ಚದುರಿದರು ಎಂಬ ಹೇಳಿಕೆಗಳಿವೆ. ಇಂತಹ ಚರಿತ್ರೆಯಿರುವ ಈ ಹಟ್ಟಿಯನ್ನು ಮತ್ತು ಇಲ್ಲಿನ ಬೇಡರ ಸಾಮಾಜಿಕ ಜೀವನವನ್ನು ಸಮಗ್ರವಾಗಿ ಅಧ್ಯಯನ ಮಾಡಿ ಅವರ ಜ್ಞಾನಪರಂಪರೆಯನ್ನು ತಿಳಿಯುವ ಪ್ರಯತ್ನ ಮಾಡಿದ್ದೇನೆ.

### ೧.೮ ಅಧ್ಯಯನದ ಸ್ವರೂಪ

ಒಂದು ಹಟ್ಟಿಯನ್ನು ಅಧ್ಯಯನ ಮಾಡಲು ಹೊರಟಾಗ ಮುಖ್ಯವಾಗಿ ಗಮನಿಸಬೇಕಾದ್ದು ಅಲ್ಲಿನ ಸಾಂಸ್ಕೃತಿಕ ಆಯಾಮಗಳು. ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಿರುವ ಈ ಹಟ್ಟಿಯು ತನ್ನ ತೆಕ್ಕೆಯಲ್ಲಿ ವಿವಿಧ ಬಗೆಯ ಸಂಸ್ಕೃತಿಯನ್ನು ಅಳವಡಿಸಿಕೊಂಡಿದೆ. ಒಂದು ಹಟ್ಟಿಯಲ್ಲಿ ಜಾನಪದದ ಎಲ್ಲಾ ಮುಖಗಳನ್ನು ಎಲ್ಲಾ ಸಮುದಾಯಗಳಲ್ಲೂ ಕಾಣಬಹುದು. ಹಾಗೆಯೇ ಆಂತರ್ಯದಲ್ಲಿ ಒಂದೇ ಸಂಸ್ಕೃತಿಯು ಬಿಂಬಿತವಾಗಿರುವುದು ಕಂಡುಬರುತ್ತದೆ. ಈ ಸಂಸ್ಕೃತಿಯು ಒಂದು ಗ್ರಾಮ ಅಥವಾ ಹಟ್ಟಿಗೆ ಮೀಸಲಾಗಿರದೆ ಎಲ್ಲಾ ಕಡೆ ಕಂಡುಬರುತ್ತದೆ.

ಪ್ರಸ್ತುತ ಈ ಮಹಾ ಪ್ರಬಂಧವು ಏಳು ಆಧ್ಯಾಯಗಳನ್ನು ಹೊಂದಿದ್ದು ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪಗಳ ಬಗ್ಗೆ ತಿಳಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಕಂಪಳದೇವರ ಹಟ್ಟಿಯ ಭೌಗೋಳಿಕ ಚಾರಿತ್ರಿಕ ಹಿನ್ನೆಲೆ ಮತ್ತು ಹಟ್ಟಿಯ ಸಾಮಾಜಿಕ ಸಂರಚನೆ ಒಳಾಡಳಿತ, ಹಟ್ಟಿಯ ಪರಿಕಲ್ಪನೆ ಹಾಗೂ ಇತರ ಸಾಂಸ್ಕೃತಿಕ ಕೇಂದ್ರಗಳೊಂದಿಗಿನ ಅನನ್ಯತೆಯನ್ನು ತಿಳಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಪಾರಂಪರಿಕ ಜ್ಞಾನವನ್ನು ತಿಳಿಸಲಾಗಿದೆ. ಪಾರಂಪರಿಕ ಬೇಟೆ ಜ್ಞಾನ, ಪಶುಪಾಲನೆ ಮತ್ತು ಪಶು ವೈದ್ಯಕ್ಕೆ ಸಂಬಂಧಿಸಿದ ಜ್ಞಾನ ಪರಂಪರೆಯನ್ನು ವಿಶ್ಲೇಷಿಸಲಾಗಿದೆ. ನಾಲ್ಕನೇ ಅಧ್ಯಯದಲ್ಲಿ ಕಂಪಳದೇವರ ಹಟ್ಟಿಯವರ ಆಚರಣೆ ಮತ್ತು ಸಂಪ್ರದಾಯಗಳಲ್ಲಿನ ಜ್ಞಾನಪರಂಪರೆಯನ್ನು, ಅವರು ಆಚರಿಸುವ ವಾರ್ಷಿಕಾವರ್ತನದ

ಆಚರಣೆಗಳನ್ನು ಬೇಟೆ ಸಂಬಂಧಿ ಆಚರಣೆ, ಪಶು ಸಂಬಂಧಿ ಆಚರಣೆ, ಪ್ರಕೃತಿ/ಕೃಷಿ ಸಂಬಂಧಿ, ಇತರೆ ಆಚರಣೆಗಳು, ಜನಪದ ಆಹಾರ, ಜನಪದ ವೈದ್ಯ ಎಂದು ವಿಂಗಡಿಸಿಕೊಂಡು ಅವುಗಳನ್ನು ವಿಶ್ಲೇಷಿಸುವುದರ ಮೂಲಕ ಅವರ ಜ್ಞಾನಪರಂಪರೆಯನ್ನು ತಿಳಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಮೌಖಿಕ ಸಾಹಿತ್ಯ, ಪ್ರಾಕೃತಿಕ ಜ್ಞಾನ, ಭೂಮಿ, ನದಿ, ಆಕಾಶ, ಮಳೆ ಮುಂತಾದುವುಗಳ ಬಗ್ಗೆ ಅವರ ನಂಬಿಕೆ, ಗಾದೆ, ಒಗಟು, ಒಡಪು, ಹಾಡು ಹಾಗೂ ಹಟ್ಟಿಯವರ ಜನಪದ ಕ್ರೀಡೆ, ನಾಟಕಗಳನ್ನು ವಿಶ್ಲೇಸಿಸುವ ಮೂಲಕ ಅವರ ಜ್ಞಾನಪರಂಪರೆಯನ್ನು ತಿಳಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಪ್ರಸ್ತುತ ಸಂದರ್ಭದಲ್ಲಿನ ಹಟ್ಟಿಯ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತ್ಯಂತರದ ಬಗ್ಗೆ ತಿಳಿಸಲಾಗಿದೆ ಅಥವಾ ಹಟ್ಟಿಯ ಜನರು ಧುನಿಕತೆಗೆ ಒಳಗಾಗುತ್ತಾ ತಮ್ಮ ಜ್ಞಾನಪರಂಪರೆಯನ್ನು ಉಳಿಸಿಕೊಂಡು ಬರುತ್ತಿರುವ ಬಗ್ಗೆ ತಿಳಿಸಲಾಗಿದೆ. ಕೊನೆಯಲ್ಲಿ ಕ್ಷೇತ್ರಕಾರ್ಯ ಅನುಭವ, ಅಧ್ಯಯನದ ಫಲಿತ, ಸಲಹೆಗಳು ಹಾಗೂ ಪರಿಸಮಾಪ್ತಿಯನ್ನು ನೀಡಲಾಗಿದೆ.

**ಪರಿಸಮಾಪ್ತಿ**

ಯಾವುದೇ ಸಮುದಾಯದ ಜ್ಞಾನಪರಂಪರೆಯನ್ನು ನೋಡುವುದಾದರೆ ಅವರ ಇಡೀ ಜೀವನದ ಸಮಸ್ತವನ್ನೂ ಅಧ್ಯಾಯಿಸಬೇಕು. ಹಾಗೆಯೇ ಒಂದು ಸಮುದಾಯದ ಮೂಲವನ್ನು ತಿಳಿಯಬೇಕಾದರೆ ಅವರ ಆಚರಣೆ ಅವಲೋಕಿಸುವುದು ಅವಶ್ಯಕ ಎಂಬ ಅಂಶವನ್ನು ಈಗಾಗಲೇ ಚರ್ಚಿಸಿದ್ದೇವೆ. ಬೇಡ ಬುಡಕಟ್ಟಿನ ಕುರಿತು ಹಾಗೂ ಕಂಪಳದೇವರ ಹಟ್ಟಿಯ ಕುರಿತು ಈ ಮೇಲೆ ಚರ್ಚಿಸಿರುವಂತೆ ಮ್ಯಾಸಬೇಡ ಸಮುದಾಯವು ತನ್ನ ಹಟ್ಟಿ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದು ಸೋಜಿಗದ ಸಂಗತಿ. ಇದಕ್ಕೆ ಕಾರಣ ಇಲ್ಲಿನ ಸಮಾನ ಮನೋಭಾವನೆ ಹಾಗೂ ಹಟ್ಟಿ ಆಚರಣೆಯಲ್ಲಿನ ಅವರ ನಂಬಿಕೆಯಾಗಿದೆ ಮತ್ತು ಹಟ್ಟಿ ಜೀವನದಲ್ಲಿನ ನೀತಿ ನಿರ್ಬಂಧಗಳು, ವಿಧಿ ನಿಷೇಧಗಳು ಕಾರಣಗಳಾಗಿವೆ. ಪ್ರಸ್ತುತ ಜಾಗತೀಕರಣದ ಪ್ರಭಾವ ಹಟ್ಟಿಗಳ ಮೇಲೆ ಆಗುತ್ತಿದ್ದು ಜನರು ನಗರಗಳಿಗೆ ವಲಸೆ ಹೋಗುವ ಪ್ರಕ್ರಿಯೆ, ಕುಲಕಸುಬುಗಳಲ್ಲದೆ ಪರ್ಯಾಯ ವೃತ್ತಿಗಳನ್ನು ಅನುಸರಿಸುತ್ತಿರುವುದು ಕಂಡುಬರುತ್ತಿದೆ. ಆದರೆ ಗಮನಿಸಬೇಕಾದ ಸಂಗತಿಯೆಂದರೆ ಅವರು ಬದಲಾವಣೆಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಲೇ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬರುತ್ತಿದ್ದಾರೆ ಎಂಬುದು ಅವರ ಹಟ್ಟಿ ಆಚರಣೆಗಳಿಂದ ತಿಳಿದು ಬರುತ್ತದೆ. ಸಂಶೋಧಕರು ಕಣ್ಮರೆಯಾಗುತ್ತಿರುವ ಇಂತಹ ಹಟ್ಟಿ ಆಚರಣೆಗಳನ್ನು ಅಧ್ಯಯನ ಮಾಡಬೇಕಾಗಿದೆ, ಏಕೆಂದರೆ ಯಾವುದೇ ಒಂದು ಸಮುದಾಯದ ಸಮಗ್ರ ಸಂಸ್ಕೃತಿಯ ಪರಿಚಯ ನಮಗೆ ಆಗುವುದು ಅವರ ಆಚರಣೆಗಳಿಂದ ಹಾಗಾಗಿ ಪ್ರಸ್ತುತ ಸಂದರ್ಭದಲ್ಲಿ ಇಂತಹ ಅಧ್ಯಯನಗಳು ಅತ್ಯವಶ್ಯಕ. ಹಾಗೆ ಒಂದು ಹಟ್ಟಿಯು ವಿವಿಧ ಸಾಂಸ್ಕೃತಿಕ ಕೇಂದ್ರಗಳೊಂದಿಗೆ ಹೊಂದಿರುವ ಸಾಂಸ್ಕೃತಿಕ ಸಂಬಂಧವನ್ನು ಎಳೆ ಎಳೆಯಾಗಿ ತಿಳಿಯಬಹುದು ಹಾಗೂ ಅವುಗಳ ಹಿನ್ನೆಲೆ ಅರಿಯಬಹುದು ಆದ್ದರಿಂದ ಪ್ರಸ್ತುತ ಸಂದರ್ಭದಲ್ಲಿ ಒಂದೊಂದು ಹಟ್ಟಿಯ ಸೂಕ್ಷ್ಮ ಅಧ್ಯಯನಗಳು ಅವಶ್ಯಕವೆನಿಸುತ್ತವೆ.

## ಅಧ್ಯಾಯ: ಎರಡು

## ಕಂಪಳದೇವರ ಹಟ್ಟಿಯ ಪರಿಚಯ

**ಪೀಠಿಕೆ**

ಕಂಪಳದೇವರ ಹಟ್ಟಿಯು ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲೂಕಿಗೆ ಸೇರಿದ ಒಂದು ಹಟ್ಟಿ. ಈ ಹಟ್ಟಿಯಲ್ಲಿ ನೆಲೆಸಿರುವ ಮ್ಯಾಸಬೇಡರ ಹಟ್ಟಿ ಸಂಸ್ಕೃತಿ, ಹಟ್ಟಿ ಆಚರಣೆ, ಕೃಷಿ, ಪಶುಪಾಲನೆ ಇನ್ನು ಮುಂತಾದ ಅವರ ಜ್ಞಾನಪರಂಪರೆಯನ್ನು ಕುರಿತು ಅಧ್ಯಯನ ಮಾಡಲು ಹೊರಟಿರುವ ಈ ಸಂದರ್ಭದಲ್ಲಿ ಮೊದಲು ಹಟ್ಟಿ ಪದದ ಅರ್ಥ, ಸ್ವರೂಪ ತಿಳಿಯುವುದು ಸೂಕ್ತ. ಪ್ರಸ್ತುತ ಅಧ್ಯಾಯದಲ್ಲಿ ಹಟ್ಟಿ ಪದದ ಅರ್ಥ, ಹಟ್ಟಿ ಸಂಸ್ಕೃತಿ ಬಗ್ಗೆ ತಿಳಿದು ನಂತರ ಕಂಪಳದೇವರ ಹಟ್ಟಿಯಲ್ಲಿನ ಮ್ಯಾಸಬೇಡರ ಸಾಮಾಜಿಕ ಜೀವನ, ಅವರ ಹಟ್ಟಿ ಸಂಸ್ಕೃತಿ, ಒಳಾಡಳಿತ ವ್ಯವಸ್ಥೆಯ ಬಗ್ಗೆ ತಿಳಿಸಲಾಗುವುದು.

**೨.೧ ಹಟ್ಟಿ ಪದದ ಅರ್ಥ ಮತ್ತು ಸ್ವರೂಪ**

ಹಟ್ಟಿ ಎಂಬ ಪರಿಕಲ್ಪನೆಯು ಪ್ರಪಂಚದಾದ್ಯಂತ ಇದ್ದು ಭಾರತದ ಪ್ರತಿ ರಾಜ್ಯಗಳಲ್ಲೂ ಹಿಂದುಳಿದ ಅಥವಾ ದನಗಾರರ ಹಟ್ಟಿಗಳಿರುವುದನ್ನು ಮತ್ತು ಆ ಹಟ್ಟಿಗಳನ್ನು ವಿವಿಧ ಹೆಸರುಗಳಿಂದ ಕರೆಯುವುದನ್ನು ಗಮನಿಸಬಹುದು. ಸಾಮಾನ್ಯವಾಗಿ ಯಾವುದೇ ಒಂದು ಸಮುದಾಯ ಒಂದೆಡೆ ಗುಡಿಸಲು ಅಥವಾ ಮನೆಗಳನ್ನು ನಿರ್ಮಿಸಿಕೊಂಡು ನೆಲೆಸಿರುವ ಸ್ಥಳವನ್ನು ಹಟ್ಟಿ ಎಂದು ಕರೆಯುತ್ತೇವೆ. ಆದರೆ ಹಟ್ಟಿ ಎಂದರೆ ಕೇವಲ ಒಂದು ಸಮುದಾಯದ ನೆಲೆಯ ಸೂಚಕ ಮಾತ್ರವಾಗಿರದೆ ಇಡಿ ಸಮುದಾಯ ಹೊಂದಿರುವ ಸಮಸ್ತವೂ ಆಗಿರುತ್ತದೆ. ಇಂತಹ ಹಟ್ಟಿಗಳು ಭಾರತದಾದ್ಯಂತ ಸಾಕಷ್ಟು ಇವೆ. ಹಟ್ಟಿ ಎಂಬ ಪದದ ಅರ್ಥ, ಹಟ್ಟಿಗಳ ಹುಟ್ಟು, ಸ್ವರೂಪವನ್ನು ನೋಡುವುದಾದರೆ ಮಾನವನು ಆದಿಮ ಸ್ಥಿತಿಯಿಂದ ವಿಕಾಸ ಹೊಂದಿದ ಬಗೆಯನ್ನು ತಿಳಿಯಬೇಕಾದುದು ಅವಶ್ಯಕ.

ಆರಂಭದಲ್ಲಿ ಮಾನವ ಬೇಟೆಗಾರಿಕೆ, ಆಹಾರ ಸಂಗ್ರಹಣೆ ಮಾಡುತ್ತ ಕಾಡಿನಲ್ಲಿ ಅರೆಬೆತ್ತಲೆಯಾಗಿ ಅಲೆಯುತ್ತಿದ್ದನು, ಅವನಿಗೆ ತನ್ನದೇ ಆದ ನೆಲೆ ಇರಲಿಲ್ಲ. ನಂತರದ ಹಂತದಲ್ಲಿ ಕಾಡಿನಲ್ಲಿನ ಸೌಮ್ಯ

ಪ್ರಾಣಿಗಳನ್ನು ಹಿಡಿದು ತನ್ನ ಆಹಾರಕ್ಕಾಗಿ ಸಾಕಿಕೊಳ್ಳಲು ಪ್ರಾರಂಭಿಸಿದನು. ಪ್ರಾಣಿಗಳನ್ನು ಸಾಕಿಕೊಳ್ಳತೊಡಗಿದ್ದರಿಂದ ಅವುಗಳೊಡನೆಯೆ ಅವನ ಅಲೆದಾಟ ಮುಂದುವರಿಯಿತು. ಹೀಗೆ ಪಶುಪಾಲನೆಗೆ ತೊಡಗಿದ ಮಾನವನು ತನ್ನ ದನಕರುಗಳಿಗೆ ಹೆಚ್ಚು ಮೇವು ನೀರು ಇರುವ ಕಡೆ ತಂಗಬೇಕಾಯಿತು, ಅಂತಹ ಸಂದರ್ಭದಲ್ಲಿ ತನ್ನನ್ನು ಮತ್ತು ತನ್ನ ದನಕರುಗಳನ್ನು ಬಿಸಿಲು, ಮಳೆ, ಚಳಿ ಅಲ್ಲದೆ ಕ್ರೂರಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಗುಡಿಸಲುಗಳನ್ನು ಅಥವಾ ಹಟ್ಟಿಗಳನ್ನು ಕಟ್ಟಿಕೊಂಡು ನೆಲೆಸತೊಡಗಿದ. ಮಾನವ ನೆಲೆನಿಂತ ಆರಂಭದ ಕಾಲದಲ್ಲಿ ಅವನ ವಾಸದ ಗುಡಿಸಲುಗಳು ತುಂಬಾ ಸರಳವಾಗಿರುತ್ತಿದ್ದವು. ಕಾರಣ ಅವನು ಒಂದೆಡೆ ಶಾಶ್ವತವಾಗಿ ನೆಲೆನಿಲ್ಲುತ್ತಿರಲಿಲ್ಲ ತಮ್ಮ ದನಕರುಗಳಿಗೆ ಮೇವು ನೀರು ಅರಸಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಬೇಕಾದ್ದರಿಂದ ತನ್ನ ಜೊತೆ ಕೊಂಡೊಯ್ಯುವಷ್ಟು ಸರಳವಾದ ತಟ್ಟಿ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಶಂಬಾಜೋಶಿಯವರು ಹೇಳುವಂತೆ "ಹಟ್ಟಿ ಎಂದರೆ ಜನ ಮತ್ತು ದನಗಳ ವಾಸಸ್ಥಾನ, ಬಿಡಾರ, ತುರುಕಾರರ, ದನಗಾರರ ನಿವಾಸವೆಂದು ಇಲ್ಲಿ ಮನನೀಯವಾಗಿದೆ"[೧]. ಇಲ್ಲಿ ಹಟ್ಟಿ ಎಂದರೆ ಕೇವಲ ಒಂದು ಸಮುದಾಯದ ನೆಲೆಸುವಿಕೆಯ ಸ್ಥಳಮಾತ್ರವಾಗಿರದೆ ಆ ಜನರು ಸಾಕಿಕೊಂಡಿರುವ ದನಗಳೂ ಸೇರಿದಂತೆ ಒಟ್ಟಿಗೆ ಒಂದೇ ಕಡೆ ಗುಡಿಸಲುಗಳನ್ನು ಮತ್ತು ದನದ ಹಟ್ಟಿಗಳನ್ನು ಕಟ್ಟಿಕೊಂಡು ಜೀವಿಸುವ ಜನಸಮುದಾಯದ ನೆಲೆಯಾಗಿದೆ. ಪ್ರಸ್ತುತ ಕರ್ನಾಟಕದಲ್ಲಿ ನೆಲೆಸಿರುವ ಬಹುತೇಕ ಹಟ್ಟಿಕಾರರು ಆಂಧ್ರ-ತಮಿಳುನಾಡಿನಿಂದ ವಲಸೆ ಬಂದು ನೆಲೆಸಿದವರೇ ಆಗಿದ್ದಾರೆ. ಆಂಧ್ರದಲ್ಲಿಯೂ ಸಹ ಸಾಕಷ್ಟು ಹಟ್ಟಿಗಳಿದ್ದು ಅವುಗಳನ್ನು ಅಲ್ಲಿ ಪಟ್ಟಿಗಳೆಂದು ಸಂಬೋದಿಸುತ್ತಾರೆ. ಪಟ್ಟಿ ಶಬ್ದಕ್ಕೆ ಕಿಟ್ಟಲ್ ಕೋಶದಲ್ಲಿ "A Place of lying down; a peer or told; on oble; a hamlt"[೨] ಎಂದು ಅರ್ಥವಿದೆ. ಅಂದರೆ ತುರುಕಾರರ ಪಟ್ಟಿ ಅಥವಾ ದನಗಾಹಿಗಳು ನೆಲೆಸಿದ ನೆಲೆ ಎಂಬ ಅರ್ಥದಲ್ಲಿ ಕೆಟೆಲ್ಲರು ಪಟ್ಟಿ ಎಂಬ ಪದವನ್ನು ಅರ್ಥೈಸಿದ್ದಾರೆ. ಹಾಗೆಯೇ "ತಮಿಳು ಕೋಶದಲ್ಲಿ ಹೇಳಿದ ಹಟ್ಟಿಯೆಂದರೆ 1, cow stall; sheep feld 2, a measure of land as sufficient for a sheep told; 3, hamlet village ಇದರಂತೆ ಪಟ್ಟು ಎಂದರೂ ಪಟ್ಟಿ (ಮನೆ, ಹಳ್ಳಿ)"[೩]. ದನಕರುಗಳನ್ನು ಸಾಕಿಕೊಂಡು ಅವುಗಳ ಜೊತೆ ಆಡು, ಕುರಿ, ಮರಿಗಳನ್ನು ಮೇಯಿಸಿಕೊಂಡು ಒಂದೆಡೆ ಗುಡಿಸಲುಗಳನ್ನು ಕಟ್ಟಿಕೊಂಡು ನೆಲೆಸಿರುವ ಸಮುದಾಯಗಳ ವಾಸಸ್ಥಳವನ್ನು ತಮಿಳು ಕೋಶದಲ್ಲಿ ಹಟ್ಟಿ ಎನ್ನುವರು. ಈ ರೀತಿಯಾಗಿ ಅಲೆಮಾರಿ, ಆದಿ ಶಿಲಾಯುಗದಿಂದ ನಾಗರೀಕ ಜೀವನದವರೆಗೆ ಒಂದಲ್ಲಾ ಒಂದು ರೀತಿ ಬೆಳವಣಿಗೆಯನ್ನು ಹೊಂದುತ್ತಾ ಬಂದ ಮಾನವನಿಗೆ ಮೊದಲ ಹಂತದಲ್ಲಿ ಇಡಿ ಭೂಮಿಯೇ ಅವನ ವಾಸದ ನೆಲೆಯಾಗಿತ್ತು ಅಂದರೆ ಅವನು ಮರ, ಪೊದೆ, ಪೊಟರೆ, ಗುಹೆ, ಬಂಡೆಗಳನ್ನು ಆಶ್ರಯಿಸಿ ಬದುಕುತ್ತಿದ್ದನು. ಒಂದು ನಿರ್ದಿಷ್ಟ ವಾಸದ ನೆಲೆಯನ್ನು ಹೊಂದಬೇಕೆಂಬ ವಿಚಾರ ಇವರ ತಲೆಯಲ್ಲಿ ಮೂಡಿದ ನಂತರ ತನ್ನ ಮತ್ತು ತನ್ನ ಸಂಪತ್ತಿನ ಅಥವಾ ರಾಸುಗಳ ರಕ್ಷಣೆಗಾಗಿ ನಿರ್ದಿಷ್ಟವಾಗಿ ಬದುಕುವ ಮತ್ತು ಒಂದುಕಡೆ ನೆಲೆ ನಿಲ್ಲುವ ಪ್ರಯತ್ನ ಮಾಡಿದನು ಜೊತೆಗೆ ತನ್ನ ನೆಲೆಗಳಿಗೆ ಹಟ್ಟಿ, ಹಾಡಿ, ಪೋಡು, ದೊಡ್ಡಿ ಎಂದು ಕರೆದುಕೊಂಡು ಅವುಗಳಿಗೆ

ಹೆಸರನ್ನು ಕೊಡುವ ಪದ್ಧತಿಯನ್ನು ರೂಢಿಸಿಕೊಂಡನು. ಈ ರೀತಿಯಾಗಿ ನೆಲೆನಿಂತ ಪಶುಪಾಲಕ ಬುಡಕಟ್ಟುಗಳೇ ಹೆಚ್ಚಾಗಿ ಇರುವ ಹಟ್ಟಿಗಳು ಕರ್ನಾಟಕದಲ್ಲಿ ಸಾಕಷ್ಟು ಇದ್ದು ಅವುಗಳನ್ನು ಹಲವು ಹೆಸರುಗಳಿಂದ ಕರೆಯಲಾಗುತ್ತಿದೆ. ಸ್ಥಳವಾಚಕಗಳ ಹಿನ್ನೆಲೆಯಲ್ಲಿ ಈ ಹಟ್ಟಿಗಳ ಹೆಸರನ್ನು ನೋಡುವುದಾದರೆ ವ್ಯಕ್ತಿವಾಚಕ, ದೈವವಾಚಕ, ಪ್ರಾಣಿವಾಚಕ, ಸಸ್ಯವಾಚಕ, ಲೋಹವಾಚಕ, ಜಲವಾಚಕ ಮುಂತಾದ ವಾಚಕಗಳಿಂದ ಕರೆಯುವುದನ್ನು ನೋಡಬಹುದು ಉದಾಹರಣೆಗೆ ಕರ್ನಾಟಕದಲ್ಲಿನ ಕೆಲವು ಹಟ್ಟಿಗಳನ್ನು ಅವುಗಳ ಹೆಸರಿನ ಹಿನ್ನೆಲೆಯಿಂದ ಆ ಹಟ್ಟಿ ಯಾವ ವಾಚಕದಿಂದ ಕರೆಯಲ್ಪಡುತ್ತಿದೆ ಎಂದು ತಿಳಿದು ನಂತರ ಕಂಪಳದೇವರ ಹಟ್ಟಿಯ ಬಗ್ಗೆ ತಿಳಿಯುವುದು ಸೂಕ್ತ.

**ಸಸ್ಯವಾಚಕ ಹಟ್ಟಿಗಳು**

ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ, ತುಮಕೂರು ಜಿಲ್ಲೆಗಳನ್ನೊಳಗೊಂಡ ಪ್ರದೇಶವನ್ನು ಬಯಲುಸೀಮೆ, ನಡುಗಡ್ಡೆ, ಮ್ಯಾಸಮಂಡಲ ಎಂದು ಕರೆಯುವುದುಂಟು. ಈ ಬಯಲುಸೀಮೆಯಲ್ಲಿ ಆಯಾ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆವ ಸಸ್ಯ, ಮರ, ಗಿಡ, ಬಳ್ಳಿಗಳಿಂದ ಅಲ್ಲಿನ ಕೆಲವು ಹಟ್ಟಿಗಳನ್ನು ಹೆಸರಿಸಿರುವುದುಂಟು ಉದಾಹರಣೆ: ಬೆಳವನ ಮರದ ಹಟ್ಟಿ, ಪೆತ್ತಮಾನ ಹಟ್ಟಿ, ಸಾಸಲ ಹಟ್ಟಿ, ಬನ್ನಿ ಹಟ್ಟಿ, ಆಲೂರು ಹಟ್ಟಿ ಇತ್ಯಾದಿ.

**ಪ್ರಾಣಿವಾಚಕ ಹಟ್ಟಿಗಳು**

ಯಾವುದೇ ಒಂದು ಪ್ರದೇಶದಲ್ಲಿ ಒಂದು ಪಶುಪಾಲಕ ಸಮುದಾಯ ಹಟ್ಟಿ ಕಟ್ಟಿಕೊಂಡು ನೆಲೆಸಿದ್ದರೆ ಆ ಹಟ್ಟಿಗೆ ಅಲ್ಲಿನ ಜನರು ತಾವು ಸಾಕಿಕೊಂಡಿರುವ ದನಕರುಗಳ ಹೆಸರಿನಿಂದ ಕರೆದಿರುವುದಿದೆ ಉದಾಹರಣೆ: ಕುರಿಹಟ್ಟಿ(ಗೊಡ್ಲಟ್ಟಿ), ಎತ್ತಿನ ಹಟ್ಟಿ(ಎದ್ಲಟ್ಟಿ), ಎತ್ತಿನ ಬೊಮ್ಮಯ್ಯನ ಹಟ್ಟಿ(ಎದ್ಲು ಬೊಮ್ಮಯ್ಯನ ದಡ್ಡಿ), ಕರುವಿನ ಹಟ್ಟಿ(ಪೇಯಿಲಾರ ದಡ್ಡಿ), ಮುಂತಾದವು ಕಂಡು ಬರುತ್ತವೆ.

**ಬೆಡಗುವಾಚಿ ಹಟ್ಟಿಗಳು**

ಮ್ಯಾಸಬೇಡ ಬುಡಕಟ್ಟಿನಲ್ಲಿ ಹಲವು ಬೆಡಗುಗಳಿದ್ದು ಆಯಾ ಬೆಡಗಿನವರು ಒಂದೆಡೆ ಹಟ್ಟಿಕಟ್ಟಿಕೊಂಡಿರುವ ಅಥವಾ ಹಟ್ಟಿಯಲ್ಲಿ ಯಾವುದಾದರೂ ಒಂದು ಬೆಡಗಿನವರು ಹೆಚ್ಚಾಗಿ ನೆಲೆಸಿರುವಂತಹ ಹಟ್ಟಿಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಸಾಕಷ್ಟು ಕಂಡುಬರುತ್ತವೆ. ಉದಾಹರಣೆ: ಕರ್ನಾರ ಹಟ್ಟಿ(ಕರಿನಾರು ಬೆಡಗಿನವರು ಹೆಚ್ಚಾಗಿ ನೆಲೆಸಿರುವ ಹಟ್ಟಿ), ನೆಲಗೇತನ ಹಟ್ಟಿ, ಮಲಾರ ಹಟ್ಟಿ, ನಿಂಗ್ಲಾರ ಹಟ್ಟಿ, ಕಾಸವರ ಹಟ್ಟಿ, ಮ್ಯಾಸರ ಹಟ್ಟಿ, ನೇಕ್ಲೇರ ಹಟ್ಟಿ, ಜಾಗನೂರ ಹಟ್ಟಿ, ಮುಂತಾದ ಹಟ್ಟಿಗಳಿವೆ.

**ದೈವವಾಚಿ ಹಟ್ಟಿಗಳು**

ಮ್ಯಾಸಬೇಡರು ನೆಲೆಸಿರುವ ಹಟ್ಟಿಗಳಲ್ಲಿ ಆ ಭಾಗದ ಪ್ರಸಿದ್ಧ ದೇವರಗುಡಿ ಇರುವ ಹಟ್ಟಿಗಳನ್ನು ಆ ದೇವರ ಹೆಸರಿನಿಂದ ಕರೆಯುವುದು ಸಾಮಾನ್ಯ ಅಂತಹ ದೈವವಾಚಿ ಹಟ್ಟಿಗಳೆಂದರೆ ಪದಿನಾರ್

ದೇವರ ಹಟ್ಟಿ, ಬೋಸೇದೇವರ ಹಟ್ಟಿ, ಕಾತ್ರಿಕೇನ ಹಟ್ಟಿ, ಬಂಗಾರು ದೇವರ ಹಟ್ಟಿ, ಕಂಪಳದೇವರ ಹಟ್ಟಿ ಇತ್ಯಾದಿ.

**ವ್ಯಕ್ತಿವಾಚಿ ಹಟ್ಟಿಗಳು**

ಓಬಯ್ಯನ ಹಟ್ಟಿ, ಗೌಡರ ಹಟ್ಟಿ, ಉಗ್ಗಿ ನಿಂಗಯ್ಯನ ಹಟ್ಟಿ, ಪುರ್ಲ ಬೋರಯ್ಯನ ಹಟ್ಟಿ, ಕೆಂಗೋಬಯ್ಯನ ಹಟ್ಟಿ, ಜೋಗಿ ಬೋರಯ್ಯನ ಹಟ್ಟಿ, ಸಣ್ಣ ಪಾಪಯ್ಯನ ಹಟ್ಟಿ, ಕುಂಟೋಬಯ್ಯನ ಹಟ್ಟಿ, ಗಾದ್ರಿ ಪಾಲಯ್ಯನ ಹಟ್ಟಿ, ಮೂಗಜ್ಜನ ಹಟ್ಟಿ ಹೀಗೆ ಹಲವು ಹಟ್ಟಿಗಳು ಕಂಡುಬರುತ್ತವೆ. ಇಂತಹ ಹತ್ತು ಹಲವು ಹಟ್ಟಿಗಳನ್ನು ಕರ್ನಾಟಕದ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ ಜಿಲ್ಲೆಗಳಲ್ಲಿ ಕಾಣಬಹುದಾಗಿದೆ. ಅದರಲ್ಲೂ ಮ್ಯಾಸಬೇಡರು ಹೆಚ್ಚಾಗಿ ನೆಲೆಸಿರುವ ಹಟ್ಟಿಗಳನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಸಾಕಷ್ಟು ಕಾಣಬಹುದು.

**೨.೧.೧. ಹಟ್ಟಿಯ ಸ್ವರೂಪ**

ಯಾವುದೇ ಸಮುದಾಯದವರ ೧೦-೨೦ ಗುಡಿಸಲುಗಳ ಸಮೂಹಕ್ಕೆ ಹಟ್ಟಿ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಹಟ್ಟಿಗಳು ಕಾಡುಗಳ ಹತ್ತಿರವಿರುತ್ತವೆ. ಇತರ ಸಮುದಾಯದವರ ಓಡಾಟ ವಿರಳವಿರುವಂತಹ ಸ್ಥಳದಲ್ಲಿ, ದನಕರುಗಳಿಗೆ ಮೇವು-ನೀರು ಸಮೃದ್ಧವಾಗಿರುವಂತಹ ಸ್ಥಳದಲ್ಲಿ ಬುಡಕಟ್ಟುಗಳು ಹಟ್ಟಿಗಳನ್ನು ಕಟ್ಟಿಕೊಂಡು ನೆಲೆಸಿ ಅಲ್ಲಿನ ಪರಿಸರದೊಂದಿಗೆ ಭಾವನಾತ್ಮಕವಾಗಿ ಜೀವಿಸುತ್ತಿರುತ್ತಾರೆ. ಸಾಮಾನ್ಯವಾಗಿ "ಬುಡಕಟ್ಟುಗಳು ತಲತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣಮಟ್ಟದ ಬುಡಕಟ್ಟು ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆಗಳಿಂದಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಾಡಿಯ ಅಥವಾ ಹಟ್ಟಿಯ ಸುತ್ತಲೂ ಸಾಂಪ್ರದಾಯಿಕವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿರೇಖೆಯನ್ನು ಸೀಮಾ ಅಥವಾ ಜಮ್ಮಾ, ಎಲ್ಲೆ, ಗಡಿ ಎಂದು ಕರೆಯುತ್ತಿದ್ದರು"[೪]. ಈ ರೀತಿಯಾಗಿ ಹಟ್ಟಿಯ ಸುತ್ತ ಗಡಿ ನಿರ್ಮಿಸಿಕೊಳ್ಳುವ ಬುಡಕಟ್ಟು ಜನರು ತಮ್ಮನ್ನು ಮತ್ತು ತಮ್ಮ ರಾಸುಗಳನ್ನು ಕಾಡುಪ್ರಾಣಿಗಳಿಂದ ಅಥವಾ ಬೇರೆ ಸಮುದಾಯದವರಿಂದ ರಕ್ಷಿಸಿಕೊಳ್ಳುವ ಉದ್ದೇಶದಿಂದಲೋ ಅಥವಾ ಇತರ ಸಮುದಾಯದವರಿಂದ ತಮ್ಮ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದಲೋ ಏನೋ ಹಿಂದಿನಿಂದಲೂ ಸಹ ಹಟ್ಟಿಗಳ ಸುತ್ತ ಗಡಿರೇಖೆಯಾಗಿ ಮುಳ್ಳಿನ ಬೇಲಿಯನ್ನು ಹಾಕಿಕೊಳ್ಳುವುದು ರೂಢಿಸಿಕೊಂಡು ಬರುತ್ತಿದ್ದಾರೆ. ಇಂತಹ ಲಕ್ಷಣ ಹೊಂದಿರುವ ಹಲವಾರು ಸಮುದಾಯಗಳ ಹಲವು ಹಟ್ಟಿಗಳು ಕರ್ನಾಟಕದಲ್ಲಿದ್ದು ಅವುಗಳ ಸ್ವರೂಪ, ರಚನೆ ಸರಿಸುಮಾರು ಒಂದೇ ರೀತಿಯಾಗಿರುತ್ತವೆ. ಪ್ರಸ್ತುತ ಮ್ಯಾಸಬೇಡರ ಗುರುಸ್ಥಾನವಾದ ಚಿತ್ರದುರ್ಗ ಜಿಲ್ಲೆಯ 'ಕಂಪಳದೇವರ ಹಟ್ಟಿಯ(ಚಿಕ್ಕುಂತಿಯ) ರಚನೆ, ಸ್ವರೂಪ ಅಲ್ಲಿನ ಜನಪದರ ಜ್ಞಾನ ಪರಂಪರೆಯನ್ನು ಈ ಪ್ರಬಂಧದಲ್ಲಿ ತಿಳಿಸುವ ಪ್ರಯತ್ನ ಮಾಡಿದ್ದೇನೆ. ಈಗಾಗಲೇ ಹಟ್ಟಿಯ ಪರಿಕಲ್ಪನೆ, ಹಟ್ಟಿಯ ಲಕ್ಷಣದ ಬಗ್ಗೆ ತಿಳಿದ ನಮಗೆ ಕಂಪಳದೇವರ ಹಟ್ಟಿಯ ಚಿತ್ರಣ ಅರಿಯುವುದು ಸುಲಭಸಾಧ್ಯ.

## ೨.೨ ಕಂಪಳದೇವರ ಹಟ್ಟಿಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕರ್ನಾಟಕ ರಾಜ್ಯ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿಗೆ ಸೇರಿದ ಕಂಪಳದೇವರ ಹಟ್ಟಿಯು ಮ್ಯಾಸಮಂಡಲದ ಅಥವಾ ಬಯಲು ಸೀಮೆಯ ಎಲ್ಲಾ ಮ್ಯಾಸಬೇಡರ ಗುರುಸ್ಥಾನವಾಗಿದೆ. ಈ ಹಟ್ಟಿಯನ್ನು ಚಿಕ್ಕಂತಿ ಎಂತಲೂ ಕರೆಯುತ್ತಾರೆ. ಕರ್ನಾಟಕದಲ್ಲಿನ ಮ್ಯಾಸಬೇಡರ ಮೂಲನೆಲೆ ಎಂದು ಈ ಹಟ್ಟಿಯನ್ನು ಕರೆದುಕೊಳ್ಳುತ್ತಾರೆ. ಅಂದರೆ ಆಂಧ್ರಪ್ರದೇಶದಿಂದ ವಲಸೆ ಬಂದ ಬೇಡರ ಗುಂಪು ಮೊದಲು ಇಲ್ಲೇ ನೆಲೆಸಿದ್ದು ಎಂದು ಹೇಳಲಾಗುತ್ತದೆ. ಮ್ಯಾಸಬೇಡರ ಮೂಲಸಂಸ್ಕೃತಿ ಇಂದಿಗೂ ಉಳಿದುಕೊಂಡು ಬಂದಿರುವ ಈ ಹಟ್ಟಿಯಲ್ಲಿ ಎಲ್ಲಾ ಮ್ಯಾಸಬೇಡರು ಬಂದು ಸೇರುತ್ತಾರೆ ಇಂತಹ ವಿಶಿಷ್ಟತೆ ಹೊಂದಿರುವ ಕಂಪಳದೇವರ ಹಟ್ಟಿಯ ಭೌಗೋಳಿಕ, ಚಾರಿತ್ರಿಕ ಹಿನ್ನೆಲೆ ತಿಳಿಯುವ ಮೊದಲು ಚಿತ್ರದುರ್ಗ ಜಿಲ್ಲೆಯ ಮತ್ತು ಮೊಳಕಾಲ್ಮೂರು ತಾಲೂಕಿನ ಭೌಗೋಳಿಕ, ಚಾರಿತ್ರಿಕ ಹಿನ್ನೆಲೆ ಅರಿಯುವುದು ಸೂಕ್ತ.

### ೨.೨.೧ ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

#### ಭೌಗೋಳಿಕ ಹಿನ್ನೆಲೆ

ಚಿತ್ರದುರ್ಗ ಜಿಲ್ಲೆಯು ಅತಿ ಪ್ರಾಚೀನ ನಿವೇಶನ ಮತ್ತು ಚರಿತ್ರೆಯನ್ನು ಹೊಂದಿದ ಜಿಲ್ಲೆಯಾಗಿದೆ. ಈ ಜಿಲ್ಲೆಯು ಮಧ್ಯಕರ್ನಾಟಕದಲ್ಲಿದ್ದು ಉತ್ತರಕರ್ನಾಟಕ ಮತ್ತು ದಕ್ಷಿಣಕರ್ನಾಟಕಕ್ಕೆ ರಾಯಭಾರಿಯಂತಿದೆ. ಚಿತ್ರದುರ್ಗಕ್ಕೆ "ಆಂಗ್ಲರ ಕಾಲದಲ್ಲಿ ಚಿಟಲ್ ಡ್ರೂಗ್ ಎಂದು ಹೆಸರಿತ್ತು. ಅದಕ್ಕೂ ಹಿಂದೆ ಸೀಪಳ ಅಥವಾ ಚಿತ್ರಕಲ್ಲು ದುರ್ಗ, ಚಿತ್ತರ ಕಲ್ಲು, ಸಿದ್ದರ ಕಲ್ಲು, ಚಿತ್ರಮಲೆ ಗುಡ್ಡ ಎಂದು ಕರೆಯುತ್ತಿದ್ದರು"[೫]. ಚಿತ್ರದುರ್ಗ ಜಿಲ್ಲೆಯ ಮೇರೆಗಳೆಂದರೆ ಉತ್ತರಕ್ಕೆ ಬಳ್ಳಾರಿ, ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ, ಆಗ್ನೇಯ ದಿಕ್ಕಿಗೆ ತುಮಕೂರು, ಪಶ್ಚಿಮಕ್ಕೆ ದಾವಣಗೆರೆ, ವಾಯುವ್ಯಕ್ಕೆ ಹಾವೇರಿ, ಮತ್ತು ನೈಋತ್ಯಕ್ಕೆ ಚಿಕ್ಕಮಗಳೂರು ಜಿಲ್ಲೆಗಳಿಂದ ಸುತ್ತುವರಿದಿದೆ. ಈ ಜಿಲ್ಲೆಗೆ ಸೇರಿದ ತಾಲೂಕುಗಳೆಂದರೆ ಚಳ್ಳಕೆರೆ, ಹೊಳಲ್ಕೆರೆ, ಹೊಸದುರ್ಗ, ಚಿತ್ರದುರ್ಗ, ಹಿರಿಯೂರು, ಮೊಳಕಾಲ್ಮೂರು. "ಚಿತ್ರದುರ್ಗ ಜಿಲ್ಲೆ ೧೩.೩೪ ಮತ್ತು ೧೫.೨೦ ರ ಅಕ್ಷಾಂಶ ಮತ್ತು ೨೫.೩೭ ಮತ್ತು ೭೭.೦೧ ರೇಖಾಂಶದಲ್ಲಿದೆ ಜಿಲ್ಲೆಯ ವಿಸ್ತೀರ್ಣ ೧೦.೮೫೨ ಚದರ ಕಿಲೋಮೀಟರ್ ಇದ್ದು ಉತ್ತರ-ದಕ್ಷಿಣವಾಗಿ ೮೮ ಮೈಲಿ, ಪೂರ್ವ-ಪಶ್ಚಿಮವಾಗಿ ಸುಮಾರು ೧೦೦ ಮೈಲಿದೆ"[೬]. ಚಿತ್ರದುರ್ಗ ಪ್ರದೇಶವೆಂದರೆ ಬೆಟ್ಟಗುಡ್ಡ, ಕೋಟೆಗಳು ಗೋಚರಿಸುವುದು ಸಹಜ, "ಸ್ಥಳೀಯವಾಗಿ ಅವುಗಳನ್ನು ನಾನಾ ಹೆಸರುಗಳಿಂದ ಕರೆದುಕೊಂಡಿದ್ದಾರೆ ಅವುಗಳಲ್ಲಿ ಮೊಳಕಾಲ್ಮೂರು ತಾಲೂಕಿನ ಜಟಿಂಗರಾಮೇಶ್ವರ ಬೆಟ್ಟ(೩೪೬೯ ಅಡಿ), ಬ್ರಹ್ಮಗಿರಿ ಬೆಟ್ಟ(೨೩೧೭), ನುಂಕಪ್ಪನಗುಡ್ಡ(೩೦೨೨ ಅಡಿ), ಜೋಗಪ್ಪನ ಗುಡ್ಡ(೨೯೬೯ ಅಡಿ), ಹೊಳಲ್ಕೆರೆ ತಾಲೂಕಿನ ದೊಡ್ಡಹಟ್ಟಿ, ರಂಗಪ್ಪನ ಗುಡ್ಡ, ಹಾಲುರಾಮೇಶ್ವರ, ಹಿರಿಯೂರು ತಾಲೂಕಿನ ಉತ್ತರ ಸರಣಿಬೆಟ್ಟ, ಹಿಂದಸಕಟ್ಟೆ ಮತ್ತು ಚಿತ್ರದುರ್ಗ ತಾಲೂಕಿನ ಜೋಗಿಮಟ್ಟಿ(೩೮೦೩ ಅಡಿ), ಧವಳಪ್ಪನ ಗುಡ್ಡ(೩೨೮೫ ಅಡಿ) ಬೀರನಕಲ್ಲು ಗುಡ್ಡ(೩೮೬೩ ಅಡಿ), ಈಚಲಗುಡ್ಡ(೩೮೦೪

ಅಡಿ) ಓಬಳದೇವರ ಗುಡ್ಡ ಮುಂತಾದವುಗಳು ಕಂಡು ಬರುತ್ತವೆ"[೭]. ಹೀಗೆ ಹಲವಾರು ಬೆಟ್ಟ, ಗುಡ್ಡ, ಕೋಟೆಗಳನ್ನು ಹೊಂದಿರುವ ಈ ಜಿಲ್ಲೆಯು ಒಂದು ಐತಿಹಾಸಿಕ ಸ್ಥಳವಾಗಿದೆ.

**ಚಾರಿತ್ರಿಕ ಹಿನ್ನೆಲೆ**

ಚಿತ್ರದುರ್ಗ ಎಂದೊಡನೆ ನಮಗೆ ನೆನಪಾಗುವುದು ಅಲ್ಲಿನ ಐತಿಹಾಸಿಕ ಕೋಟೆ, ವೀರ ಮದಕರಿನಾಯಕ, ಒನಕೆ ಓಬವ್ವ ಮುಂತಾದವರ ಚಾರಿತ್ರಿಕ ಇತಿಹಾಸ. ಕರ್ನಾಟಕದ ಮೂಲೆ ಮೂಲೆಗೂ ಈ ಜಿಲ್ಲೆಯ ಚರಿತ್ರೆ ಮನೆಮಾತಾಗಿದೆ. ಅಸಾಧಾರಣವಾದ ಸಾಧನೆಗಳ ಪ್ರತೀಕ ಹುಟ್ಟಿಕೊಂಡ ಕಥೆಗಳು, ಕುತೊಹಲ ಕೆರಳಿಸುವ ಕೋಟೆ, ದೇವಾಲಯಗಳು, ಮುದನೀಡುವ ಸರಳ ಭಾಷೆ ಇತ್ಯಾದಿ ಲಕ್ಷಣಗಳಿಂದ ಈ ಜಿಲ್ಲೆ ನಾಡಿನ ಉದ್ದಗಲಕ್ಕೂ ಚಿರಪರಿಚಿತವಾಗಿದೆ. ಈ ಜಿಲ್ಲೆಯಲ್ಲಿ ಶಿಲಾಯುಗ, ಆದಿ ಶಿಲಾಯುಗ, ಮಧ್ಯ ಶಿಲಾಯುಗ ಮತ್ತು ನವ ಶಿಲಾಯುಗ, ಬೃಹತ್ ಶಿಲಾಯುಗ ಸಂಸ್ಕೃತಿ ಮುಂತಾದ ನೆಲೆಗಳನ್ನು ಶೋಧನೆ ಮಾಡಿದ್ದಾರೆ. "ಇಲ್ಲಿನ ನಾಗರೀಕತೆಯನ್ನು ಸಿಂಧೂ, ಕ್ರೀಟಿಕ್ ಮತ್ತು ಸುಮೇರ್‌ಗೆ ಹೋಲಿಸಿದ್ದಾರೆ ಕ್ರಿಪೂ ೩ ರಲ್ಲಿರುವಂತೆ ಸ್ಥಳೀಯರು ರೂಪ್ಪ ಸಂಸ್ಕೃತಿಯನ್ನು ಹೊಂದಿದ್ದರು ಇವರ ಕಾಲಮಾನ ಕ್ರಿಪೂ ೮೦೦೦ ದಿಂದ ೬೦೦೦ ಎನ್ನಲಾಗಿದೆ"[೮]. ಇಂದಿಗೂ ಸಹ ಚಿತ್ರದುರ್ಗ ಜಿಲ್ಲೆ ಪರಿಸರದಲ್ಲಿ ಮ್ಯಾಸಬೇಡ, ಕಾಡುಗೊಲ್ಲ ಬುಡಕಟ್ಟಿನವರು ಪಶುಪಾಲನೆಯನ್ನೇ ಮಾಡಿಕೊಂಡು ಬರುತ್ತಿದ್ದಾರೆ ಅಲ್ಲದೆ ಇಲ್ಲಿ ಗಿರಿಕಂದರಗಳಿರುವುದರಿಂದ ಬೇಟೆಗಾರಿಕೆ ಸಮುದಾಯಗಳೂ ಸಹ ಇವೆ. ಚಿತ್ರದುರ್ಗ ಜಿಲ್ಲೆಯನ್ನು ಅನೇಕ ರಾಜಮನೆತನಗಳು ಆಳಿರುವುದು ಚರಿತ್ರೆಯಿಂದ ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಲಭ್ಯವಾಗಿರುವ ಶಾಸನಗಳಲ್ಲಿ "ಅಶೋಕನ ಶಾಸನವನ್ನು ೧೮೯೨ ರಲ್ಲಿ ಬಿ ಎಲ್ ರೈಸ್ ಅವರು ಆಗಿನ ಮೈಸೂರು ಪ್ರಾಂತ್ಯದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿ ಮೂರು ಶಾಸನಗಳನ್ನು ಶೋಧಿಸಿದ್ದಾರೆ"[೯]. ಅಶೋಕನ ಈ ಶಾಸನ ಚಿನ್ನಹಗರಿ ನದಿ ದಂಡೆಯ ಮೇಲಿರುವ ಸಿದ್ದಾಪುರ ಬಳಿಯಿದೆ. ಇದರಲ್ಲಿ ಅಶೋಕನ ಕುರಿತಾಗಿ ದೇವನಾಂ ಪ್ರಿಯ ಎಂದು ಬರೆದಿದೆ. ಹೀಗೆ ಮೌರ್ಯರು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಕುರುಹುಗಳು ಶಾಸನಗಳಿಂದ ತಿಳಿದು ಬರುತ್ತದೆ.

"ಮೌರ್ಯರ ನಂತರ ಕದಂಬರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಾರೆ. ಚಂದ್ರವಳ್ಳಿ ಕೆರೆಯ ಶಾಸನ, ದೇವಾಲಯಗಳು ಇವರ ಕಾಲದ ಹೆಗ್ಗುರುತುಗಳು, ಗಂಗರು, ಚಾಲುಕ್ಯರು ಆಳಿದ ಬಗ್ಗೆ ತಿಳಿದುಬರುತ್ತದೆ. ತೈಲಪ, ವಿಕ್ರಮಾದಿತ್ಯ ಅರಸರ ಕಾಣಿಕೆಗಳು ಅಪಾರ. ಚೋಳರ ಆಳ್ವಿಕೆಯಲ್ಲಿ ಅನೇಕ ಯುದ್ದಗಳು ಇಲ್ಲಿ ಸಂಭವಿಸಿವೆ. ನೊಳಂಬವಾಡಿಯನ್ನು ಜಗದೇಕ ಪಾಂಡ್ಯ ಮತ್ತು ವಿಜಯ ಪಾಂಡ್ಯ ಪಡೆಯಲು ಹವಣಿಸುತ್ತಿದ್ದರು ಹೊಯ್ಸಳರ ಕಾಲದಲ್ಲಿ ಅನೇಕ ಸುಧಾರಣೆಗಳನ್ನು ಕಂಡಿದೆ ಈ ನಾಡು. ಪೆರುಮಾಳದೇವ ದಂಡನಾಯಕ ಇಲ್ಲಿನ ಆಡಳಿತ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರೆ ಈ ಜಿಲ್ಲೆಗೆ ಎರಡನೇ ಬಲ್ಲಾಳ ಸಾಕಷ್ಟು ಪ್ರೋತ್ಸಾಹಿಸಿದ್ದ. ತರುವಾಯ ವಿಜಯನಗರ ಕಾಲದಲ್ಲಿ ಇದು ಹೃದಯ ಭಾಗವಾಗಿತ್ತು, ದೇವರಾಯ ಚಿತ್ರದುರ್ಗದ ಕಲಾಪೋಷಣೆ, ಇತರೆ ಸುಧಾರಣೆಗಳನ್ನು

ಮಾಡಿರುವುದು ಸ್ಮರಣೀಯ. ಬೇಟೆಗೆ ಬಂದ(ಗಜ ಬೇಟೆಗಾರ) ಪ್ರೌಢದೇವರಾಯ ಇಲ್ಲಿನ(ಮೊಳಕಾಲ್ಮೂರು) ಹಳ್ಳಿಗಳನ್ನು ಇನಾಮ್ ಕೊಡುತ್ತಾನೆ"[೧೦]. ಚಿತ್ರದುರ್ಗವು ಹೆಚ್ಚು ಕಾಲ ವಿಜಯನಗರ ಆಡಳಿತಕ್ಕೆ ಒಳಪಟ್ಟಿತ್ತು ಮತ್ತು ಇಂದಿಗೂ ಸಹ ವಿಜಯನಗರದೊಂದಿಗೆ ಇಲ್ಲಿನ ಜನ ಸಾಂಸ್ಕೃತಿಕ ಸಂಬಂಧವನ್ನು ಇಟ್ಟುಕೊಂಡಿರುವುದು ಕಂಡುಬರುತ್ತದೆ.

ಚಿತ್ರದುರ್ಗ ಜಿಲ್ಲೆಯ ವಿಶೇಷವೆಂದರೆ ಇಲ್ಲಿನ ಅನೇಕ ಬುಡಕಟ್ಟು ಜನರು ಇನ್ನೂ ಗ್ರಾಮಗಳಿಗೆ ಬಾರದೆ ಹಟ್ಟಿ, ಕಪಿಲೆ, ತೋಟ, ಅಡವಿಗಳಲ್ಲಿ ಜೀವಿಸುತ್ತಿರುವುದು ಕಂಡುಬರುತ್ತದೆ. ಪ್ರತಿಯೊಂದು ಹಟ್ಟಿಯಲ್ಲಿಯೂ ಚರಿತ್ರೆ ಮತ್ತು ಸಂಸ್ಕೃತಿ ನಿರ್ಮಾಣಗೊಂಡಿರುತ್ತದೆ ಇಲ್ಲಿನ ಬಹುತೇಕ ಬುಡಕಟ್ಟು ಜನರು ಕೆರೆ, ಬಾವಿ ನೀರನ್ನು ಅಡವಿಯ ಸೌದೆಯನ್ನು ಅವಲಂಬಿಸಿದ್ದಾರೆ. ಹೆಚ್ಚಾಗಿ ಒಣಬೇಸಾಯ ಮಾಡುವ ಇವರು ನೀರಾವರಿ ಕೃಷಿಯಲ್ಲಿಯೂ ಸಹ ಸ್ವಲ್ಪಮಟ್ಟಿಗೆ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಜಿಲ್ಲೆಯಲ್ಲಿ ಜನಸಾಮಾನ್ಯರ ಚರಿತ್ರೆಯೇ ಪ್ರಧಾನವಾದುದು. ಹಿಂದೆ ಆಳಿದ ಪಾಳೇಗಾರರನ್ನು ಸ್ಮರಿಸುತ್ತಾ ಅವರ ಧೈರ್ಯ ಪರಾಕ್ರಮಗಳನ್ನು ಕೊಂಡಾಡುವುದು, ತಮ್ಮ ವಂಶಜರಿಗೆ ಈ ಹೆಸರುಗಳನ್ನು ಇಡುವುದು ಈ ಭಾಗದಲ್ಲಿ ಇಂದಿಗೂ ರೂಢಿಯಲ್ಲಿದೆ ಒಟ್ಟಾರೆ ಚಿತ್ರದುರ್ಗ ಜಿಲ್ಲೆ ಚಾರಿತ್ರಿಕವಾಗಿ ವಿವಿಧ ಹಂತಗಳಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಬಹುದು.

### ೨.೨.೨ ಮೊಳಕಾಲ್ಮೂರು ತಾಲೂಕಿನ ಭೌಗೋಳಿಕ ಹಿನ್ನೆಲೆ

#### ಭೌಗೋಳಿಕ ಪರಿಸರ

ಚಿತ್ರದುರ್ಗ ಜಿಲ್ಲೆಯಿಂದ ೮೧ ಕಿ ಮೀ ದೂರದಲ್ಲಿರುವ ಮೊಳಕಾಲ್ಮೂರು ಜಿಲ್ಲೆಯ ಅತೀ ಚಿಕ್ಕ ತಾಲೂಕು ಕೇಂದ್ರವಾಗಿದೆ. ಇದರ ಪೂರ್ವ ರೇಖಾಂಶ ೭೬.೪ ಡಿಗ್ರಿ ಯಿಂದ ೭೭.೦೭, ಉತ್ತರ ಅಕ್ಷಾಂಶ ೧೪.೦೪ ಡಿಗ್ರಿ ಯಿಂದ ೧೫.೦೨ ಡಿಗ್ರಿ ವರೆಗೆ ಚಾಚಿಕೊಂಡಿದೆ. ಈ ಪಟ್ಟಣವು ಪೂರ್ವಕ್ಕೆ ಆಂಧ್ರಪ್ರದೇಶದ ಗಡಿಭಾಗವಾದ ರಾಯದುರ್ಗ, ಪಶ್ಚಿಮಕ್ಕೆ ಸೂಲೇನಹಳ್ಳಿ ಹಾಗೂ ವಾಯವ್ಯಕ್ಕೆ ಹಾನಗಲ್ ಉತ್ತರಕ್ಕೆ ನುಂಕಮಲೆ ಬೆಟ್ಟ ಶ್ರೇಣಿಯನ್ನು, ದಕ್ಷಿಣಕ್ಕೆ ಮರ್ಲಹಳ್ಳಿ ಗ್ರಾಮವನ್ನು ಮೇರೆಗಳನ್ನಾಗಿ ಗುರುತಿಸಿಕೊಂಡಿದೆ.

#### ಹವಾಗುಣ

ಬಯಲು ಸೀಮೆಯ ಬಿಸಿಲ ನಾಡಿನ ತಾಣವಾಗಿರುವ ಮೊಳಕಾಲ್ಮೂರು ಬಳ್ಳಾರಿ ನಗರಕ್ಕೆ ಸಮೀಪದಲ್ಲಿರುವುದರಿಂದ ಬಳ್ಳಾರಿಯ ಬಿಸಿಲ ತಾಪಮಾನವನ್ನೇ ಹೋಲುತ್ತದೆ. ಬೇಸಿಗೆಯಲ್ಲಿ ಇಲ್ಲಿ ಸರಾಸರಿ ೩೮.೪೦ ಸೆಂಟಿಗ್ರೇಟ್ ಬಿಸಿಲ ತಾಪವಿರುತ್ತದೆ. ಚಳಿಗಾಲದಲ್ಲಿ ಸರಾಸರಿ ೨೮ ಸೆಲ್ಸಿಯಸ್ ಉಷ್ಣಾಂಶವಿರುತ್ತದೆ ಚಿತ್ರದುರ್ಗ ಜಿಲ್ಲೆಯಲ್ಲಿ ಮೊಳಕಾಲ್ಮೂರು ತಾಲೂಕಿನ ವಾರ್ಷಿಕ ಮಳೆಯ ಪ್ರಮಾಣ ೫೮೮.೯ ಮೀ ಮೀ ನಷ್ಟು ಮತ್ತು ಪ್ರತಿ ಮೂರು ವರ್ಷಕ್ಕೊಮ್ಮೆ ತೀವ್ರ ಮಳೆಯ ಆಭಾವ ಎದುರಿಸುತ್ತಿದೆ.

**ಮಣ್ಣು**

ಇಡಿ ಜಿಲ್ಲೆಯಲ್ಲಿ ಒಂದೇ ಬಗೆಯ ಮಣ್ಣು ಕಂಡು ಬರುತ್ತದೆ. ಈ ಪ್ರದೇಶವು ಕೆಂಪು, ಕಪ್ಪು ಹಾಗೂ ಗರುಸು ಮಣ್ಣನ್ನು ಹೊಂದಿದೆ. ಇಲ್ಲಿನ ಬೆಟ್ಟಗುಡ್ಡಗಳ ನಡುವಿನ ಫಲವತ್ತಾದ ಮೈದಾನ ಪ್ರದೇಶವು ಕೃಷಿಗೆ ಯೋಗ್ಯವಾದ ಭೂಮಿಯಾಗಿದೆ. ಈ ಪ್ರದೇಶದಲ್ಲಿ ಜೋಳ, ಸಜ್ಜೆ, ರಾಗಿ, ಶೇಂಗಾ, ಮೆಕ್ಕೇಜೋಳ, ನವಣೆ, ಹತ್ತಿ, ಸೂರ್ಯಕಾಂತಿ, ಈರುಳ್ಳಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ಭಾಗದ ಜನರು ಅಲ್ಪ ಪ್ರಮಾಣದ ನೀರಾವರಿ ವ್ಯವಸ್ಥೆಯನ್ನು(ಬೋರ್ವೆಲ್) ಹೊಂದಿದ್ದು ಬಹುತೇಕ ಜನ ಕೃಷಿಗೆ ಮಳೆಯನ್ನೇ ಅವಲಂಬಿಸಿದ್ದಾರೆ. ನೆಲೆಗಡಲೆ ಮತ್ತು ರಾಗಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಾರೆ. ಮಳೆಯ ಕೊರತೆಯಿಂದ ಉತ್ತಮ ಫಲ ಪಡೆಯುವಲ್ಲಿ ವಿಫಲರಾಗಿದ್ದಾರೆ.

**ಅರಣ್ಯ ಸಂಪತ್ತು**

ಈ ತಾಲೂಕಿನಲ್ಲಿ ಅರಣ್ಯ ಪ್ರದೇಶ ಕಡಿಮೆ ಇದೆ. ೧೫.೩೪೩ ಹೆಕ್ಟೇರ್ ಅರಣ್ಯಪ್ರದೇಶವಿದ್ದರೂ ದಟ್ಟವಾದ ಕಾಡುಗಳು ಇಲ್ಲ. ಈ ಭಾಗದಲ್ಲಿ ಒಣ ಹವೆ ಇರುವುದರಿಂದ ಅಲ್ಲಲ್ಲಿ ಉರುವಲಿಗಾಗಿ ಉಪಯೋಗಿಸುವಂತಹ ಕುರುಚಲು ಕಾಡಿವೆ. ಮೊಳಕಾಲ್ಮೂರು ನಗರದ ಉತ್ತರಕ್ಕಿರುವ ಬೆಟ್ಟಶ್ರೇಣಿ ಹಾಗೂ ಅಲ್ಲಿಂದ ವಾಯುವ್ಯಕ್ಕಿರುವ ನುಂಕಮಲೆ ಪರ್ವತ ಶ್ರೇಣಿಗಳು ಅಲ್ಪ ಪ್ರಮಾಣದ ಅರಣ್ಯ ಹೊಂದಿವೆ. ಇಲ್ಲಿ ಹುಣಸೆ, ಬೇವು, ಮಾವು, ಜಾಲಿ, ಸಿತಾಫಲ, ತಂಗಟಿಕೆ, ಬಂದರಿಕೆ ಮುಂತಾದ ಸಸ್ಯವರ್ಗ ಕಂಡುಬರುತ್ತದೆ. ಅಲ್ಲದೆ ಈ ಭಾಗದ ಕುರುಚಲು ಕಾಡಿನಲ್ಲಿ ಚಿರತೆ, ಕರಡಿ, ಕಾಡು ಹಂದಿ, ಉಡ, ಮುಂಗುಸಿ, ಮೊಲ, ಕಾಡು ಬೆಕ್ಕು, ಅಳಿಲು, ಮಂಗಗಳು ವಿವಿಧ ಜಾತಿಯ ಹಾವುಗಳು ಗುಬ್ಬಿ, ಗೊರವಂಕ, ಗಿಳಿ, ಪಾರಿವಾಳ, ನವಿಲು, ಬೆಳವ, ಹದ್ದು ಇತರ ಪ್ರಾಣಿ ಪಕ್ಷಿ ವರ್ಗಗಳು ಕಂಡುಬರುತ್ತವೆ.

**ಜಲಸಂಪತ್ತು**

ಮೊಳಕಾಲ್ಮೂರು ತಾಲೂಕು ವ್ಯಾಪ್ತಿಯಲ್ಲಿ ಹೇಳಿಕೊಳ್ಳುವಷ್ಟರಮಟ್ಟಿಗೆ ಯಾವ ರೀತಿಯ ದೊಡ್ಡದಾದ ನದಿ ಹರಿಯುವುದಿಲ್ಲ. ಪ್ರಮುಖವಾಗಿ ಚಿನ್ನಹಗರಿ ಎಂಬ ನದಿಯು ಮಾತ್ರ ಹರಿಯುತ್ತದೆ ಇದನ್ನು ಜನಿಗೆ ಹಳ್ಳ, ಚಿಕ್ಕ ಹಗರಿ, ಅಘಹರಿ, ಪಾಪನಾಶಿನಿ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಚಿನ್ನಹಗರಿ ನದಿಯು ತುಂಗಭದ್ರಾನದಿಯ ಮುಖ್ಯ ಉಪನದಿಯಾದ ಹಗರಿ ನದಿಯ ಒಂದು ಕೂಡು ನದಿಯಾಗಿದೆ. ಇದು ಚಿತ್ರದುರ್ಗದ ಬೆಟ್ಟಗಳ ಸಮೀಪದ 'ಗೊಡಬನಾಳ' ಎಂಬ ಗ್ರಾಮದ ಬಳಿಯಿಂದ ಹೊಳಲ್ಕೆರೆ ತಾಲೂಕಿನ ಓಬಳದೇವರ ಗುಡ್ಡದಲ್ಲಿ ಹುಟ್ಟಿ ಚಿತ್ರದುರ್ಗ, ಜಗಳೂರು ಮತ್ತು ಮೊಳಕಾಲ್ಮೂರು ತಾಲೂಕುಗಳಲ್ಲಿ 'ಜನಿಗೆ ಹಳ್ಳ' ಎಂಬ ಹೆಸರಿನಿಂದ ಹರಿದು ಹಲವಾರು ಕೆರೆಗಳಿಗೆ ಜಲಮೂಲವಾಗಿದೆ ಮುಂದೆ ಕೂಡ್ಲಿಗಿ ತಾಲೂಕಿನ ದಕ್ಷಿಣದಲ್ಲಿ ಕಲ್ಲಹಳ್ಳಿ ಸಮೀಪ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸಿ ಚಿತ್ರದುರ್ಗ ಬಳ್ಳಾರಿ ಜಿಲ್ಲೆಗಳ ಗಡಿಯಾಗಿ ಸ್ವಲ್ಪ ದೂರ ಹರಿದು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ವೇದಾವತಿ ನದಿಯನ್ನು ಸೇರುತ್ತದೆ. ಚಿತ್ರದುರ್ಗ ಮತ್ತು

ಜಗಳೂರು ತಾಲೂಕುಗಳ ಮುಖಾಂತರ ಹರಿದು ಬರುವ ಈ ನದಿ ಮೊಳಕಾಲ್ಮೂರು ತಾಲೂಕು ಮತ್ತು ಬಳ್ಳಾರಿ ಜಿಲ್ಲೆಯ ಎಲ್ಲೆಯಾಗಿ ಸ್ವಲ್ಪದೂರ ಹರಿದು ತಾಲೂಕಿನ ಮಧ್ಯಭಾಗದಲ್ಲಿ ಪ್ರವೇಶಿಸಿ ಮುಂದೆ ಈಶಾನ್ಯಾಭಿಮುಖವಾಗಿ ಹರಿಯುತ್ತದೆ. ಹೀಗೆ ಮೊಳಕಾಲ್ಮೂರು ತಾಲೂಕಿನಲ್ಲಿ ಸ್ವಲ್ಪದೂರ ಹರಿಯುವ ಈ ನದಿಯು ಸ್ವಲ್ಪ ಪ್ರಮಾಣದಲ್ಲಿ ಇಲ್ಲಿನ ಕೃಷಿಜಮೀನುಗಳಿಗೆ ನೀರನ್ನು ಒದಗಿಸುತ್ತದೆ. ಆದರೆ ಇದು ತುಂಬಿ ಹರಿಯುವುದು ತೀರಾ ವಿರಳವೆಂದೇ ಹೇಳಬಹುದು.

### ೨.೨.೩ ಕಂಪಳದೇವರ ಹಟ್ಟಿಯ ಹಿನ್ನೆಲೆ/ಪದನಿಷ್ಪತ್ತಿ

ಕಂಪಳದೇವರ ಹಟ್ಟಿಯು ಕರ್ನಾಟಕ ರಾಜ್ಯ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿಗೆ ಸೇರಿದ ಒಂದು ಗ್ರಾಮ. ಪಶುಪಾಲನೆ ಮತ್ತು ಕೃಷಿಯನ್ನು ಮಾಡಿಕೊಂಡಿರುವ ಈ ಹಟ್ಟಿಯ ಜನರು ಮಳೆಯನ್ನೇ ಆಶ್ರಯಿಸಿ ಬದುಕುತ್ತಿದ್ದಾರೆ. ಇವರು ಇಂದಿಗೂ ಪಾರಂಪರಿಕ ಜೀವನ ಸಾಗಿಸಿಕೊಂಡು ಬರುತ್ತಿದ್ದಾರೆ. ಕಂಪಳದೇವರ ಹಟ್ಟಿಯಲ್ಲಿನ ಬೇಡ ಬುಡಕಟ್ಟಿನವರ ಹಿನ್ನೆಲೆ ನೋಡುವುದಾದರೆ "ತಮ್ಮ ದನಕರುಗಳಿಗೆ ಮೇವು ನೀರು ಹರಸುತ್ತಾ ಆಂಧ್ರದ ಶ್ರೀಶೈಲ ಪರ್ವತದಿಂದ ವಲಸೆ ಬಂದವರು ಎಂದು ಹೇಳಲ್ಪಡುವ ಬೇಡರ ಗುಂಪು ಮೊದಲು ನೆಲೆಸಿದ್ದು ಈ ಸ್ಥಳದಲ್ಲಿಯೇ"[೧೧]. ಎನ್ನುತ್ತಾರೆ ಹೀಗೆ ಗುಂಪುಗೂಡಿ ಬಂದ ಈ ಸಮುದಾಯ ತಮ್ಮನ್ನು ಬೇಡಕಂಪಣ, ಬೇಡಗಂಪಣ ಎಂದು ಕರೆದುಕೊಂಡು ಇಲ್ಲಿ ನೆಲೆಸಿದರು ಎಂದು ಹೇಳಲಾಗುತ್ತದೆ. ಜನರ ಗುಂಪಿಗೆ ಕಂಪಳ ಎನ್ನುವುದು ಸಾಮಾನ್ಯ ಅದರಂತೆಯೇ "ಬೇಡರು ವಾಸಿಸುತ್ತಿದ್ದ ಜಾಗಕ್ಕೆ ಬೇಡಕಂಪಣ ಅಥವಾ ಬೇಡಕಂಪಳ ಎಂಬ ಹೆಸರಿದೆ"[೧೨]. ಹೀಗೆ ಬೇಡರ ಗುಂಪು ಮೊದಲು ನೆಲೆಸಿದ ಸ್ಥಳ ಮತ್ತು ಮ್ಯಾಸಬೇಡರ ಹನ್ನೆರಡು ಪೆಟ್ಟಿಗೆ ದೇವರುಗಳು ಒಂದೆಡೆ ಸಮೀಕರಿಸುವ ಏಕೈಕ ಸ್ಥಳ ಇದು, ಆದ್ದರಿಂದ ಈ ಹಟ್ಟಿಗೆ ಕಂಪಳದೇವರ ಹಟ್ಟಿ ಎಂದು ಹೆಸರು ಬಂದಿರಬಹುದು, ಅಲ್ಲದೆ ಈ ಹಟ್ಟಿಗೆ ಚಿಕ್ಕುಂತಿ(ಚಿಕ್ಕ ಕುಮತಿ) ಎಂಬ ಮತ್ತೊಂದು ಹೆಸರಿದೆ. ಕಂಪಳದೇವರ ಹಟ್ಟಿ ಪಕ್ಕದಲ್ಲಿ ಕುಮತಿ ಎಂಬ ಊರು ಇದ್ದು ಈ ಊರಿನ ಸಮೀಪದಲ್ಲಿ ಪ್ರತ್ಯೇಕವಾಗಿ ಕಂಪಳದೇವರ ಹಟ್ಟಿ ಇರುವುದರಿಂದ ಈ ಹಟ್ಟಿಗೆ ಚಿಕ್ಕ ಕುಮತಿ, ಚಿಕ್ಕುಂತಿ ಎಂದು ಕರೆದಿರಬಹುದು. ಸದ್ಯ ಈ ಹಟ್ಟಿಯನ್ನು ಕಂಪಳದೇವರ ಹಟ್ಟಿ, ದೇವರ ಹಟ್ಟಿ, ಚಿಕ್ಕುಂತಿ, ಎಂದು ಕರೆಯುತ್ತಾರೆ.

ಹಟ್ಟಿಯ ಹಿರಿಯರು ಹೇಳುವ ಪ್ರಾಕಾರ ಆಂಧ್ರದ ಶ್ರೀಶೈಲ ಬೆಟ್ಟದಿಂದ ಕರ್ನಾಟಕಕ್ಕೆ ವಲಸೆ ಬಂದ ಮ್ಯಾಸಬೇಡರು ಕರ್ನಾಟಕದ ಎಲ್ಲಾ ಕಡೆ ಪಶುಪಾಲನೆ ಮಾಡುತ್ತಾ ಅಲ್ಲಲ್ಲಿ ಹಟ್ಟಿಕಟ್ಟಿಕೊಂಡು ತಾತ್ಕಾಲಿಕವಾಗಿ ನೆಲೆಸುತ್ತಾ ಅಂತಿಮವಾಗಿ ಕಂಪಳದೇವರ ಹಟ್ಟಿಯ ಪ್ರದೇಶಕ್ಕೆ ಬಂದು ನೆಲೆಸಿದರು ಎನ್ನುತ್ತಾರೆ. ಮೊಟ್ಟಮೊದಲಿಗೆ ಈ ಸ್ಥಳಕ್ಕೆ ಹತ್ತು ಕುಟುಂಬದವರು ಬಂದರಂತೆ ಅದರಲ್ಲಿ ಎಂಟು ಕುಟುಂಬಗಳು ಬೇಡರವು ಮತ್ತು ಎರಡು ಕುಟುಂಬಗಳು ಮಾದಿಗ ಸಮುದಾಯದವರವು ಎಂದು ಹೇಳುತ್ತಾರೆ. ಈ ಹತ್ತು ಕುಟುಂಬಗಳು ಇಂದು ೩೧೩ ಕುಟುಂಬಗಳಾಗಿ ಹಟ್ಟಿಯಲ್ಲಿ ನೆಲೆಸಿವೆ ಮೊದಲು ಈ ಹಟ್ಟಿಯಲ್ಲಿ ಹತ್ತು ಕುಟುಂಬಗಳು ನೆಲೆಸಿದ್ದರಿಂದ ಅವರನ್ನು ಪದಿಮುತ್ತೈಗಳು ಎಂದು ಕರೆಯುತ್ತಾರೆ.

## ಕಂಪಳದೇವರ ಹಟ್ಟಿಯ ಭೌಗೋಳಿಕ ಹಿನ್ನೆಲೆ

ಒಂದು ಗ್ರಾಮ ಅಭಿವೃದ್ಧಿ ಪಥದಲ್ಲಿ ಸಾಗಬೇಕಾದರೆ ನೆರವಾಗುವ ಅಂಶಗಳು ಅಲ್ಲಿನ ಭೌಗೋಳಿಕ ಅಂಶಗಳಾಗಿರುತ್ತವೆ. ಗ್ರಾಮವು ನಗರಕ್ಕೆ ಎಷ್ಟು ಕಿ.ಮೀ ದೂರದಲ್ಲಿದೆ? ವ್ಯವಹಾರಿಕವಾಗಿ ಬಾಹ್ಯ ಜಗತ್ತಿನೊಂದಿಗೆ ಎಷ್ಟು ನಿಕಟ ಸಂಬಂಧವನ್ನಿಟ್ಟುಕೊಂಡಿದೆ ಎನ್ನುವ ಅಂಶಗಳು ಪ್ರಮುಖವಾಗಿರುತ್ತವೆ. ಕರ್ನಾಟಕದ ಮ್ಯಾಸಬೇಡರ ಮೂಲ ನೆಲೆಯೆಂದು ಕರೆಯಲಾಗುವ ಮತ್ತು ಬಯಲು ಸೀಮೆಯ ಬಿಸಿಲಿನ ಧಗೆಯಲ್ಲಿ ಬೇಯುತ್ತಿರುವ ಈ ಹಟ್ಟಿಯು ಮ್ಯಾಸಬೇಡರ ಪವಿತ್ರ ಸ್ಥಳವಾಗಿದೆ. ಇಲ್ಲಿ ನೀರಾವರಿ ವ್ಯವಸ್ಥೆ ಕಡಿಮೆ ಇದ್ದು ಒಣಬೇಸಾಯವನ್ನೇ ಇಲ್ಲಿನ ಜನರು ಆಶ್ರಯಿಸಿ ಬದುಕುತ್ತಿದ್ದಾರೆ. ಹಟ್ಟಿಯ ಭೌಗೋಳಿಕತೆ ತಿಳಿಯಲು ಇಡಿ ಚಿತ್ರದುರ್ಗ ಜಿಲ್ಲೆಯ ಭೌಗೋಳಿಕತೆ ತಿಳಿಯುವುದು ಸೂಕ್ತ, ಮೊಳಕಾಲ್ಮೂರು ಪ್ರದೇಶದಲ್ಲಿ ಸಂಪದ್ಭರಿತವಾದ ಅರಣ್ಯ ಸಂಪತ್ತಾಗಲಿ, ಖನಿಜ ಸಂಪತ್ತಾಗಲಿ ಕಂಡು ಬರುವುದಿಲ್ಲ. ಈ ತಾಲೂಕಿನ ಜನಸಂಖ್ಯೆಯಲ್ಲಿ ಮ್ಯಾಸನಾಯಕರೇ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಕಂಪಳದೇವರ ಹಟ್ಟಿಯಲ್ಲಿಯೂ ಸಹ ಮ್ಯಾಸಬೇಡರೇ ಹೆಚ್ಚಾಗಿದ್ದಾರೆ. ಹಟ್ಟಿಯಲ್ಲಿನ ಜನಪದರ ಮುಖ್ಯ ಕಸುಬು ವ್ಯವಸಾಯವಾದರೂ ಸಹ ಕೃಷಿಕೂಲಿಯನ್ನೇ ಹೆಚ್ಚಾಗಿ ಅವಲಂಬಿಸಿದ್ದಾರೆ. ಜೊತೆಗೆ ಪಶುಪಾಲನೆಯನ್ನೂ ಮಾಡುತ್ತಿದ್ದಾರೆ. ಈ ಹಟ್ಟಿಯಲ್ಲಿ ಕಂಪಳರಂಗಸ್ವಾಮಿ ದೇವಾಲಯ, ಜಗಳೂರು ಪಾಪನಾಯಕ ದೇವರ ದೇವಾಲಯ, ಗಾದ್ರಿಪಾಲನಾಯಕನ ದೇವಾಲಯ, ದಡ್ಡಮಾರಮ್ಮನ ದೇವಾಲಯ, ದಡ್ಡಿಕಾಮನಾಯಕನ ದೇವಾಲಯ, ದುರುಗಮ್ಮನ ದೇವಾಲಯಗಳಿವೆ ಈ ಎಲ್ಲಾ ದೇವಸ್ಥಾನಗಳಿಗೆ ಹಟ್ಟಿಯ ಎಲ್ಲಾ ಸಮುದಾಯದವರು ಪೂಜೆ ಸಲ್ಲಿಸುತ್ತಾರೆ.

### ಹವಾಗುಣ

ಕಂಪಳದೇವರ ಹಟ್ಟಿಯು ಮೊಳಕಾಲ್ಮೂರು ತಾಲೂಕು ಕೇಂದ್ರದಿಂದ ೧೨ ಕೀ ಮೀ ದೂರದಲ್ಲಿರುವುದರಿಂದ ಇಡಿ ತಾಲೂಕಿನ ಹವಾಗುಣ, ಮಣ್ಣು, ಪ್ರಾಣಿವರ್ಗ ಮುಂತಾದುವನ್ನು ಒಂದೇ ರೀತಿಯಾಗಿ ಹೊಂದಿರುವುದು ಆದ್ದರಿಂದ ಇಡೀ ತಾಲೂಕಿನ ಭೌಗೋಳಿಕ ಪರಿಸರ, ಹವಾಗುಣ, ಮಣ್ಣು ಮುಂತಾದುವನ್ನು ಕಂಪಳದೇವರ ಹಟ್ಟಿಗೆ ಹೋಲಿಸಿ ಹೇಳಲಾಗುವುದು. ಇಲ್ಲಿ ಸರಾಸರಿ ೩೮.೪೦ ಸೆಂಟೀಗ್ರೇಟ್ ಬಿಸಿಲಿನ ತಾಪಮಾನವಿರುತ್ತದೆ. ಚಳಿಗಾಲದಲ್ಲಿ ಸರಾಸರಿ ೨೮ ಸೆಂಟಿಗ್ರೇಡ್‌ನಷ್ಟು ಉಷ್ಣಾಂಶ ಇರುತ್ತದೆ. ವಾರ್ಷಿಕ ಮಳೆಯ ಪ್ರಮಾಣ ೫೮೮.೯ ಮೀ ಮೀ ನಷ್ಟು ಮಳೆ ಪಡೆಯುತ್ತದೆ.

ಮಣ್ಣು: ಹಟ್ಟಿಯ ಪ್ರದೇಶದಲ್ಲಿ ಕೆಂಪು, ಕಪ್ಪು, ಗರುಸು ಮಣ್ಣು ಕಂಡುಬರುತ್ತದೆ. ಈ ಮಣ್ಣುಗಳು ಕೃಷಿಗೆ ಯೋಗ್ಯವಾಗಿರುವುದರಿಂದ ಈ ಭೂಮಿಯಲ್ಲಿ ಜೋಳ, ರಾಗಿ, ಸಜ್ಜೆ, ಶೇಂಗಾ, ಮೆಕ್ಕೆಜೋಳ, ಸೂರ್ಯಕಾಂತಿ, ನವಣೆ, ಹತ್ತಿ, ನೀರುಳ್ಳಿ, ಗುರಾಳು, ತೊಗರಿ, ಅಲಸಂದಿ, ಹೆಸರು, ಹುರುಳಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿನ ಕೃಷಿಕರು ಅಲ್ಪ ಪ್ರಮಾಣದಲ್ಲಿ ನೀರಾವರಿ ಸೌಲಭ್ಯವನ್ನು ಹೊಂದಿದ್ದು ಹೆಚ್ಚಾಗಿ ಮಳೆಯನ್ನೇ ಅವಲಂಬಿಸಿದ್ದಾರೆ. ಶೇಂಗಾ, ಜೋಳ ರಾಗಿಯನ್ನು ಹೆಚ್ಚಾಗಿ ಬೆಳೆಯುತ್ತಾರೆ ಮತ್ತು ಇವರ ನಿತ್ಯದ ಆಹಾರ ಧಾನ್ಯಗಳೂ ಸಹ ಇವೇ ಆಗಿವೆ.

ಅರಣ್ಯ ಸಂಪತ್ತು: ಕಂಪಳದೇವರ ಹಟ್ಟಿಯಿಂದ ಹತ್ತು ಕಿ.ಮೀ ದೂರದಲ್ಲಿ ಕಮರನ ಕಾವಲು ಎಂಬ ಕುರುಚಲು ಕಾಡು ಇದೆ. ಇಲ್ಲಿ ಹಟ್ಟಿಯ ಜನಪದರು ತಮ್ಮ ದನಕರುಗಳನ್ನು ಮೇಯಿಸುತ್ತಾರೆ. ಸುಮಾರು ೧೨ ಮೈಲು ರಸ್ತೆ ಈ ಕಾಡಿನಲ್ಲಿ ಹಾದು ಹೋಗುತ್ತದೆ ಅಷ್ಟು ಪ್ರಮಾಣದಲ್ಲಿ ಈ ಕಾಡಿದೆ. ಇಲ್ಲಿ ಜಾಲಿ, ಕರಿಜಾಲಿ, ಹುಣಸೆ, ಮಾವು, ಬೇವು, ಸುಬಾಬುಲ್, ತುಗ್ಗಲಿ, ಸೀತಾಫಲ, ತಂಗಟಿಗೆ, ಬಂದರಿಕೆ ಇತ್ಯಾದಿ ಮರಗಿಡಗಳು ಬೆಳೆಯುತ್ತವೆ.

ಪ್ರಾಣಿ ಸಂಪತ್ತು: ಈ ಭಾಗದಲ್ಲಿ ಚಿರತೆ, ಕರಡಿ, ಕಾಡು ಹಂದಿ, ಉಡ, ಮುಂಗಸಿ, ಮೊಲ, ಕಾಡುಕೋಳಿ, ಅಳಿಲು, ಮಂಗಗಳು, ನಾಗರ ಹಾವು, ಕೇರೆ ಹಾವು, ಪೆಂಜರೆ, ಹಸಿರು ಹಾವು, ನೀರು ಹಾವು ಮುಂತಾದ ಹಾವುಗಳು, ಚೇಳು, ಏಡಿ, ಆಮೆ, ಪಾರಿವಾಳ, ಕಾಗೆ, ಗಿಳಿ, ನವಿಲು, ಗೊರವಂಕ, ಬೆಳವ, ಗುಬ್ಬಿ, ಹದ್ದು ಮುಂತಾದ ಪ್ರಾಣಿ ಪಕ್ಷಿ ಕೀಟಗಳು ಈ ಪರಿಸರದಲ್ಲಿ ಕಂಡುಬರುತ್ತವೆ.

ಜಲಸಂಪತ್ತು: ಹಟ್ಟಿಯ ಪ್ರದೇಶವು ಹೇಳಿಕೊಳ್ಳುವಂತಹ ನೀರಿನ ಸೌಲಭ್ಯ ಹೊಂದಿಲ್ಲ. ಚಿನ್ನಹಗರಿ ನದಿಯ ದಂಡೆಯ ಮೇಲೆ ಈ ಹಟ್ಟಿ ಇದ್ದರೂ ಈ ನದಿಯು ಮಳೆಯ ಅಭಾವದಿಂದ ಯಾವಾಗಲೋ ಒಮ್ಮೆ ತುಂಬಿ ಹರಿಯುವುದರಿಂದ ನೀರಿನ ಸೌಲಭ್ಯ ಕಡಿಮೆ. ಕೆಲವೊಂದು ಬಾರಿ ನದಿ ತುಂಬಿದರೆ ಆ ವರ್ಷ ಉತ್ತಮ ಬೆಳೆ ಇಲ್ಲದಿದ್ದರೆ ಇಲ್ಲ. ಚಿನ್ನಹಗರಿ ನದಿಯನ್ನು ಹೊರತುಪಡಿಸಿದರೆ ಬೇರೆ ಯಾವ ಹಳ್ಳ-ಕೊಳ್ಳಗಳು, ಕೆರೆಗಳು, ಬೇರೆ ರೀತಿಯ ಜಲಸಂಪತ್ತು ಹಟ್ಟಿಯ ಪಕ್ಕದಲ್ಲಿಲ್ಲ. ಅಂತರ್ಜಲವೂ ಸಹ ಕಡಿಮೆಯೆಂದೇ ಹೇಳಬಹುದು. ೨೦೦-೩೦೦ ಅಡಿಗಳಷ್ಟು ಆಳವಾಗಿ ಬೋರ್ವೆಲ್ ಹಾಕಿಸಿದರೂ ಸಹ ನೀರು ಸಿಗುತ್ತಿಲ್ಲ ಆದ್ದರಿಂದ ಹಟ್ಟಿಯ ಬಹುತೇಕ ಜನರು ಮಳೆಯನ್ನೇ ಆಶ್ರಯಿಸಿ ಕೃಷಿ ಮಾಡುತ್ತಿದ್ದಾರೆ.

**೨.೨.೪ ಜನಸಮುದಾಯಗಳು**

ಕಂಪಳದೇವರ ಹಟ್ಟಿಯು ತಾಲೂಕು ಕೇಂದ್ರವಾದ ಮೊಳಕಾಲ್ಮೂರಿನಿಂದ ಪಶ್ಚಿಮಾಭಿಮುಖವಾಗಿ ೧೫ ಕಿ. ಮೀ ದೂರದಲ್ಲಿದೆ. ಇದು ಮ್ಯಾಸ ಮಂಡಲದ ಗುರುಸ್ಥಾನವಾಗಿದ್ದು ಈ ಮಹಾಕ್ಷೇತ್ರವು ಚಿನ್ನಹಗರಿ ನದಿ ದಂಡೆಯ ಮೇಲಿದೆ. ೩೧೩ ಕುಟುಂಬಗಳನ್ನು ಹೊಂದಿರುವ ಈ ಹಟ್ಟಿಯಲ್ಲಿ ಮ್ಯಾಸಬೇಡರ ಕುಟುಂಬಗಳೇ ಹೆಚ್ಚಾಗಿದ್ದು ೨೬೩ ಕುಟುಂಬಗಳು ನಾಯಕರವು, ೪೩ ಕುಟುಂಬಗಳು ಮಾದಿಗ(ಆದಿಕರ್ನಾಟಕ) ಸಮುದಾಯದವರವು, ೭ ಕುಟುಂಬಗಳು ಲಿಂಗಾಯಿತರವು, ಒಂದು ಹಗಲುವೇಶಗಾರರ(ಬುಡ್ಗ ಜಂಗಮರ) ಮನೆಯಿದೆ. ಹಟ್ಟಿಯಲ್ಲಿ ಸರ್ಕಾರ ನಿರ್ಮಿಸಿಕೊಟ್ಟ ಮನೆಗಳೇ ಹೆಚ್ಚು. ಹಟ್ಟಿಯಲ್ಲಿನ ಮ್ಯಾಸಬೇಡ ಮತ್ತು ಮಾದಿಗ ಸಮುದಾಯದವರಲ್ಲಿ ಮುಖ್ಯವಾಗಿ ಎನುಮಲಾರು, ಮಂದಲಾರು ಎಂಬ ಎರಡು ಬೆಡಗುಗಳು ಕಂಡು ಬರುತ್ತವೆ. ಕಂಪಳದೇವರ ಹಟ್ಟಿಯಲ್ಲಿನ ಜನಸಂಖ್ಯೆಯನ್ನು ಸಮುದಾಯವಾರು ತಿಳಿಯಬೇಕೆಂದರೆ ಈ ಕೆಳಗಿನ ೨.೧ ನೇ ಕೊಷ್ಟಕವನ್ನು ಗಮನಿಸುವುದು ಸೂಕ್ತ.

**ಕೊಷ್ಟಕ-೨.೧ ಕಂಪಳದೇವರ ಹಟ್ಟಿಯ ಸಮುದಾಯವಾರು ಜನಸಂಖ್ಯೆಯ ವಿವರ**

| ಕ್ರ.ಸಂ. | ಸಮುದಾಯಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧ | ಆದಿ ಕರ್ನಾಟಕ | ೪೩ | ೧೪೦ | ೧೦೭ | ೨೪೭ |
| ೨ | ಲಿಂಗಾಯತ | ೭ | ೩೨ | ೨೯ | ೬೧ |
| ೩ | ನಾಯಕ | ೨೬೩ | ೬೫೪ | ೬೮೦ | ೧೩೩೪ |
| | ಒಟ್ಟು | ೩೧೩ | ೮೨೬ | ೮೧೫ | ೧೬೪೨ |

ಕೋಷ್ಟಕ ೨.೧ ರಲ್ಲಿ ತಿಳಿಸಿರುವಂತೆ ಪ್ರಸ್ತುತ ಕಂಪಳದೇವರ ಹಟ್ಟಿಯಲ್ಲಿ ನಾಯಕರು(ಬೇಡರು) ೧೩೩೪ ಜನಸಂಖ್ಯೆಯಲ್ಲಿದ್ದಾರೆ. ಅದರಲ್ಲಿ ಗಂಡು ೬೫೪, ಹೆಣ್ಣು ೬೮೦ ಜನರಿದ್ದಾರೆ, ಹಾಗೆಯೇ ಆದಿಕರ್ನಾಟಕ(ಮಾದಿಗ) ಸಮುದಾಯದವರಲ್ಲಿ ೨೪೭ ಜನಸಂಖ್ಯೆಯಿದ್ದು ಇದರಲ್ಲಿ ಗಂಡು ೧೪೦, ಹೆಣ್ಣು ೧೦೭ ಮತ್ತು ಲಿಂಗಾಯತರಲ್ಲಿ ೬೧ ಜನಸಂಖ್ಯೆಯಿದ್ದು ಅದರಲ್ಲಿ ಗಂಡು ೩೨, ಹೆಣ್ಣು ೨೯ ಜನರಿದ್ದಾರೆ, ಒಟ್ಟಾರೆ ಹಟ್ಟಿಯಲ್ಲಿ ೧೬೪೨ ಜನಸಂಖ್ಯೆಯಿದ್ದು ಅದರಲ್ಲಿ ಗಂಡುಮಕ್ಕಳು ೮೨೬ ಜನಸಂಖ್ಯೆಯಿದ್ದು, ಹೆಣ್ಣುಮಕ್ಕಳು ೮೧೫ ಜನರಿದ್ದಾರೆ. ಇನ್ನು ಶೇಕಡಾವಾರು ನೋಡುವುದಾದರೆ ಹಟ್ಟಿಯ ೧೬೪೨ ಜನಸಂಖ್ಯೆಯಲ್ಲಿ ಶೇಕಡ ೮೧.೨೪% ರಷ್ಟು ಬೇಡರಿದ್ದಾರೆ(ನಾಯಕರು), ಉಳಿದಂತೆ ೧೫.೦೪% ರಷ್ಟು ಆದಿಕರ್ನಾಟಕ(ಮಾದಿಗರು), ಶೇಕಡ ೩.೭೧೫% ರಷ್ಟು ಲಿಂಗಾಯತರು ನೆಲೆಸಿದ್ದಾರೆ. ಹಟ್ಟಿಯಲ್ಲಿನ ಜನಸಂಖ್ಯೆಯಲ್ಲಿ ಗಂಡು ಹೆಣ್ಣಿನ ಶೇಕಡಾವಾರು ನೋಡುವುದಾದರೆ ಶೇಕಡ ೫೦.೩% ರಷ್ಟು ಗಂಡು, ಶೇಕಡ ೪೯.೬೩% ರಷ್ಟು ಹೆಣ್ಣುಮಕ್ಕಳ ಅನುಪಾತವಿದೆ. ೩೧೩ ಕುಟುಂಬಗಳು ಮತ್ತು ೧೬೪೨ ಜನಸಂಖ್ಯೆ ಹೊಂದಿರುವ ಕಂಪಳದೇವರ ಹಟ್ಟಿಯಲ್ಲಿ ನಾಯಕ, ಆದಿಕರ್ನಾಟಕ ಮತ್ತು ಲಿಂಗಾಯಿತರ ಮನೆಗಳಿದ್ದು ಅವುಗಳಲ್ಲಿ ನಾಯಕ, ಆದಿಕರ್ನಾಟಕ ಸಮುದಾಯದವರಲ್ಲಿ ಎನುಮಲಾರು ಮತ್ತು ಮಂದಲಾರು ಎಂಬ ಬೆಡಗಿನವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. (ಹಟ್ಟಿಯ ಸಮುದಾಯವಾರು ಜನಸಂಖ್ಯೆಯ ಶೇಕಡವಾರನ್ನು ಈ ಕೆಳಗೆ ತೋರಿಸಿದ ವೃತ್ತಚಿತ್ರ ೨.೧ ಅನ್ನು ಗಮನಿಸಿ).

**ವೃತ್ತಚಿತ್ರ-೨.೧ ಹಟ್ಟಿಯ ಸಮುದಾಯವಾರು ಜನಸಂಖ್ಯೆಯ ಸರಾಸರಿ**



ವೃತ್ತ ಚಿತ್ರ ೨.೧ ರಲ್ಲಿ ಕಂಪಳದೇವರ ಹಟ್ಟಿಯಲ್ಲಿನ ಸಮುದಾಯವಾರು ಜನಸಂಖ್ಯೆಯ ಸರಾಸರಿ ಪ್ರಮಾಣವನ್ನು ತಿಳಿಸಲಾಗಿದೆ. ಈ ಚಿತ್ರದಲ್ಲಿ ತಿಳಿಸಿರುವಂತೆ ಪ್ರಸ್ತುತ ಹಟ್ಟಿಯಲ್ಲಿನ ಸರಾಸರಿ ಜನಸಂಖ್ಯೆಯನ್ನು ನೋಡುವುದಾದರೆ ಶೇಕಡ ೧೫%ರಷ್ಟು ಆದಿಕರ್ನಾಟಕ(ಮಾದಿಗ) ಸಮುದಾಯದವರಿದ್ದಾರೆ ಹಾಗೆಯೇ ಶೇಕಡ ೪% ರಷ್ಟು ಲಿಂಗಾಯತರಿದ್ದಾರೆ ಮತ್ತು ಶೇಕಡ ೮೧% ರಷ್ಟು ನಾಯಕ(ಬೇಡರು) ಸಮುದಾಯದವರಿದ್ದಾರೆ. ಒಟ್ಟಾರೆ ಹಟ್ಟಿಯ ಜನಸಂಖ್ಯೆಯಲ್ಲಿ ನಾಯಕರೇ ಹೆಚ್ಚಾಗಿರುವುದು ಅಂಕಿ ಅಂಶದಿಂದ ತಿಳಿದುಬರುತ್ತದೆ. ಮೂಲತಃ ವಲಸಿಗರಾದ ಈ ಹಟ್ಟಿಯ ಜನರು ಆಂಧ್ರಪ್ರದೇಶದ ಮೂಲದಿಂದ ಬಂದವರಾಗಿದ್ದಾರೆ. ಮೊದಲಿಗೆ ಇಲ್ಲಿ ಹತ್ತು ಕುಟುಂಬದವರು ಮಾತ್ರ ಬಂದು ನೆಲೆಸಿದರಂತೆ ಅದರಲ್ಲಿ ೮ ಕುಟುಂಬಗಳು ಬೇಡರವು(ನಾಯಕರು) ಎರಡು ಕುಟುಂಬಗಳು ಮಾದಿಗ(ಆದಿ ಕರ್ನಾಟಕ) ಸಮುದಾಯದವರವು ಎಂದು ಹೇಳುತ್ತಾರೆ.(ಮಾಹಿತಿ: ಪೂಜಾರಿ ರೇವಣ್ಣ, ಕಂಪಳದೇವರ ಹಟ್ಟಿ) ಹಟ್ಟಿಯ ಪ್ರತಿಯೊಂದು ದೈವಕಾರ್ಯದಲ್ಲಿ ಈ ಎರಡೂ ಸಮುದಾಯದವರು ಪಾಲ್ಗೊಂಡು ಆಚರಿಸುತ್ತಾರೆ ಅದರಲ್ಲಿ ಬೇಡರು ಪ್ರಮುಖ ಪಾತ್ರ ವಹಿಸುತ್ತಾರೆ.

**೨.೩ ಕಂಪಳದೇವರ ಹಟ್ಟಿಯ ಸಾಮಾಜಿಕ ಸಂರಚನೆ ಮತ್ತು ಒಳಾಡಳಿತ ವ್ಯವಸ್ಥೆ**

ಸಾಮಾಜಿಕ ಸಂಬಂಧಗಳ ಬಲೆಯೇ ಸಮಾಜ ಎಂಬ ಸಮಾಜ ಶಾಸ್ತ್ರಜ್ಞರ ಮಾತಿನಂತೆ ವ್ಯಕ್ತಿ ವ್ಯಕ್ತಿಗಳ ನಡುವೆ, ಸಮೂಹ ಸಮೂಹಗಳ ನಡುವೆ ಪರಸ್ಪರ ಸಂಬಂಧವೇರ್ಪಡುವ ಪ್ರಕ್ರಿಯೆಯನ್ನು ಸಾಮಾಜಿಕ ಸಂರಚನೆ ಅಥವಾ ಸಾಮಾಜಿಕ ವ್ಯವಸ್ಥೆ ಎಂದು ಕರೆಯಲಾಗುತ್ತದೆ. ಇದೊಂದು ಸಮಾಜದ ಘಟಕಗಳಾದ ಅಥವಾ ಭಾಗಗಳಾದ ಸಾಮಾಜಿಕ ಸಂಬಂಧಗಳ ಕ್ರಮಬದ್ಧ ವ್ಯವಸ್ಥೆಯಾಗಿದೆ. "ಸಾಮಾಜಿಕ ವ್ಯವಸ್ಥೆಯು ಒಂದು ನಿರ್ದಿಷ್ಟ ಭೌತಿಕ ಪರಿಸರದಲ್ಲಿ ಪರಸ್ಪರ ಅಂತರ ಕ್ರಿಯೆ ನಡೆಸುವ ಹಾಗೂ ಮಾಧ್ಯಮಗಳ ಮೂಲಕ ಸಂಪರ್ಕಿಸುವ ವ್ಯಕ್ತಿಗಳ ಸಮೂಹವನ್ನು ಹೊಂದಿರುತ್ತದೆ"[೧೩]. ಸಾಮಾಜಿಕ ಸಂರಚನೆಯು ಸಮುದಾಯಗಳ ಸಂಪ್ರದಾಯಗಳು, ಲೋಕರೂಢಿಗಳು, ಪರಸ್ಪರ ಸಹಕಾರ, ವಿವಿಧ ನಿಯಮಗಳು, ವರ್ಗಗಳು ಉಡುಗೆ-ತೊಡುಗೆ, ಆಹಾರ, ವಸತಿ, ವೃತ್ತಿ, ಬೆಡಗುಗಳು ವಿವಾಹ, ಕುಟುಂಬ, ನ್ಯಾಯ ಪದ್ದತಿ ಹಾಗೂ ಸಾಮಾಜಿಕ ನಿಯಂತ್ರಣಗಳನ್ನೊಳಗೊಂಡ ಕ್ರಮಬದ್ಧವಾದ ವ್ಯವಸ್ಥೆಯಾಗಿದೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಇತರ ಹಲವಾರು ಉಪ ವ್ಯವಸ್ಥೆಗಳಿದ್ದು ಇವೆಲ್ಲವೂ ತನ್ನದೇ ಆದ ವಿಶಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತವೆ. ಈ ಕಾರ್ಯ ನಿರ್ವಹಣೆಯಲ್ಲಿ ಕ್ರಮಬದ್ಧತೆ ಇರುತ್ತದೆ. ಸಾಮಾಜಿಕ ಸಂರಚನೆಯು ಪರಿಸರ, ಕಾಲ ಮತ್ತು ಸ್ಥಳಗಳನ್ನಾಧರಿಸಿರುವುದರಿಂದ ಅದು ಕಾಲದಿಂದ ಕಾಲಕ್ಕೆ ಸಮೂಹದಿಂದ ಸಮೂಹಕ್ಕೆ ಭಿನ್ನವಾಗಿರುತ್ತದೆ. ಸಮಾಜದಲ್ಲಿನ ಸದಸ್ಯರುಗಳ ಅಂತರ ಸಂಬಂಧಗಳು ಮತ್ತು ಅಂತರ್‌ಕ್ರಿಯೆಗಳ ಸ್ವರೂಪ ಹಾಗೂ ವ್ಯಾಪ್ತಿಗಳು ಪ್ರಚಲಿತ ಸಂಸ್ಕೃತಿಯಿಂದ ನಿರ್ಧರಿಸಲ್ಪಡುತ್ತವೆ. ಮಾನವನ ಸಾಮಾಜಿಕ ಜೀವನದಲ್ಲಿ ಸಾಮಾಜೀಕರಣ ಮತ್ತು ಸಾಮಾಜಿಕ ನಿಯಂತ್ರಣ ಸಾಮಾಜಿಕ ಸಂರಚನೆಗೆ ಸಹಾಯಕವಾಗಿರುವ ಪ್ರಮುಖ ಅಂಶಗಳಾಗಿವೆ.

ಕಂಪಳದೇವರ ಹಟ್ಟಿಯಲ್ಲಿ ೩೧೩ ಕುಟುಂಬಗಳು ವಾಸವಾಗಿದ್ದು ಅದರಲ್ಲಿ ೨೬೩ ಕುಟುಂಗಳು ನಾಯಕರವು(ಬೇಡರವು), ೪೩ ಕುಟುಂಬಗಳು ಆದಿಕರ್ನಾಟಕ(ಮಾದಿಗ) ಸಮುದಾಯದವರವು, ೭ ಲಿಂಗಾಯತ ಕುಟುಂಬಗಳು ನೆಲೆಸಿವೆ. ಒಟ್ಟಾರೆ ಹಟ್ಟಿಯ ಜನಸಂಖ್ಯೆ ೧೬೪೨ ಇದ್ದು ಅದರಲ್ಲಿ ನಾಯಕರು ೧೩೩೪, ಮಾದಿಗರು ೨೪೭ ಮತ್ತು ಲಿಂಗಾಯತರು ೬೧ ಜನ ವಾಸವಾಗಿದ್ದಾರೆ. ಈ ಎಲ್ಲಾ ಸಮುದಾಯದವರಿಂದ ಕೃಷಿ ಭೂಮಿಯು ೧೧೯೫.೫ ಎಕರೆ ಇದ್ದು ಅದರಲ್ಲಿ ೯೮೩ ಎಕರೆ ಮಳೆ ಆಶ್ರಿತ ಭೂಮಿ ಮತ್ತು ೨೧೨.೫ ಎಕರೆ ನೀರಾವರಿ ಭೂಮಿ ಒಳಗೊಂಡಿದೆ ಬಹುತೇಕ ಹಟ್ಟಿಯ ಜನರು ಮಳೆ ಆಶ್ರಿತ ಬೆಳೆ ಬೆಳೆಯುತ್ತಿದ್ದಾರೆ. ಹಟ್ಟಿಯ ಪಶು ಸಂಪತ್ತು ಹೇಳುವುದಾದರೆ ೩೧೩ ಕುಟುಂಬಗಳಿಗೆ ೧೭೨ ಎತ್ತುಗಳು, ೨೧೪ ಆಕಳುಗಳು, ೩೮ ಎಮ್ಮೆಗಳು, ೩೧೯೪ ಕುರಿಗಳು, ೪೫೦ ಮೇಕೆಗಳು ಒಟ್ಟು ೪೦೬೮ ಪಶುಸಂಪತ್ತನ್ನು ಹೊಂದಿರುತ್ತಾರೆ. ೩೧೩ ಮನೆಗಳಲ್ಲಿ ೩೦ ಗುಡಿಸಲು ಮನೆಗಳು, ೨ ಟಿನ್ ಮನೆಗಳು, ೬೭ ಮಾಳಿಗೆ ಮನೆಗಳು, ೬ ಆರ್ ಸಿ ಸಿ ಮನೆಗಳು, ೭೮ ಹೆಂಚಿನ ಮನೆಗಳು, ೧೧೮ ಜನತಾ ಮನೆಗಳು, ೧೨ ಬಾಡಿಗೆ ಮನೆಗಳಿವೆ. ಹಟ್ಟಿಯವರ ಮನೆಗಳು ಗುಡಿಸಲು, ಆರ್ ಸಿ ಸಿ ಮನೆಗಳು ಯಾವುವೇ ಆಗಿದ್ದರೂ ಸಹ ಪ್ರತಿ ಮನೆಯ ಮುಂದೆ ಬಂದರಿಕೆ ಬರಲಿನಿಂದ ನೆರಿಕೆ ಕಟ್ಟಿಕೊಳ್ಳುವುದು ಈ ಹಟ್ಟಿಯ ವಿಶೇಷತೆ. ಇಂತಹ ವೈಶಿಷ್ಟ್ಯತೆ ಇರುವ ಈ ಹಟ್ಟಿಯ ಸಾಮಾಜಿಕ ಸಂರಚನೆ, ವಸತಿ, ಕುಟುಂಬ, ವಿವಾಹ, ಬಂಧುತ್ವ, ಸಂಪ್ರದಾಯ, ಒಳಾಡಳಿತ ಪದ್ದತಿ ಮುಂತಾದುವನ್ನು ತಿಳಿಯುವುದು ಅವಶ್ಯಕ. ಇಲ್ಲಿ ವಿಶೇಷವಾಗಿ ಅಧ್ಯಯನದ ದೃಷ್ಟಿಯಿಂದ ನಾಯಕ(ಬೇಡ) ಸಮುದಾಯದ ಸಾಮಜಿಕ ಸಂರಚನೆಯನ್ನು ವಿವರಿಸಲಾಗಿದೆ.

### ೨.೩.೧ ವಸತಿ ವ್ಯವಸ್ಥೆ

ಕಂಪಳದೇವರ ಹಟ್ಟಿಯ ರಚನೆ ಮತ್ತು ಅಲ್ಲಿನ ವಸತಿ ವ್ಯವಸ್ಥೆಯ ಕುರಿತು ಚರ್ಚಿಸುವ ಮೊದಲು ಪ್ರಾಚೀನ ಕಾಲದಿಂದ ವಸತಿ ಎಂಬ ಕಲ್ಪನೆ ಹುಟ್ಟಿಕೊಂಡ ಬಗೆಯನ್ನು ತಿಳಿಯುವುದು ಅವಶ್ಯಕ ಅಂದರೆ ಮೂಲತಹ ಅಲೆಮಾರಿಯಾಗಿದ್ದ ಮಾನವನು ಆಹಾರ ಸಂಗ್ರಹಣೆ, ಬೇಟೆಗಾರಿಕೆ, ಪಶುಪಾಲನೆ, ಕೃಷಿ ಹೀಗೆ ವಿವಿಧ ಹಂತಗಳಲ್ಲಿ ವಿಕಾಸ ಹೊಂದುತ್ತಾ ಬಂದನು. ವಿಕಾಸದ ಹಂತದಲ್ಲಿ ಮಾನವನು ಮಳೆ, ಗುಡುಗು, ಬಿಸಿಲು, ಕ್ರೂರ ಮೃಗಗಳಿಂದ ರಕ್ಷಣೆ ಪಡೆಯಲು ಮರದ ಪೊಟರೆ, ಬಂಡೆಯ ಆಸರೆ, ಗವಿಗಳಲ್ಲಿ ವಾಸಿಸತೊಡಗಿದ. ಈ ರೀತಿಯಾದ ವಸತಿಯ ಕಲ್ಪನೆ ಅವನಿಗೆ ಪ್ರಕೃತಿಯಲ್ಲಿನ ಇತರ ಪ್ರಾಣಿ ಪಕ್ಷಿಗಳನ್ನು ನೋಡಿಯೇ ಬಂದಿರಬೇಕು. ಅಲೆಮಾರಿತನದಿಂದ ಒಂದೆಡೆ ನೆಲೆಸತೊಡಗಿದ ಮಾನವ ಪ್ರಕೃತಿಯಲ್ಲಿನ ಗಿಡ, ಮರ, ಬಳ್ಳಿಗಳಿಂದ ಸಣ್ಣ ಸಣ್ಣ ಗುಡಿಸಲುಗಳನ್ನು ನಿರ್ಮಿಸಿಕೊಂಡು ವಾಸಿಸತೊಡಗಿದ. ತನ್ನ ಮತ್ತು ತನ್ನ ಸಂಪತ್ತಾದ ಸಾಕುಪ್ರಾಣಿಗಳ ರಕ್ಷಣೆಗಾಗಿ ಗುಡಿಸಲುಗಳ ಗಾತ್ರ, ರಚನೆ ಬದಲಾಯಿಸಿ ನಿರ್ಮಿಸಿಕೊಳ್ಳತೊಡಗಿದ. ಮರದ ಪೊಟರೆ ಗುಹೆಗಳಂತಹ ಸಾಮಾನ್ಯ ಆಶ್ರಯಗಳಿಂದ ಇಂದಿನ ಭವ್ಯ ಮಹಲುಗಳವರೆಗೆ ಬೆಳೆದು ಬಂದಿರುವ ವಸತಿಯ ವಿವಿಧ ಹಂತಗಳು ಮಾನವನ ಬೇಡಿಕೆಗಳು ಹೇಗೆ ಸರಳತೆಯಿಂದ ಸಂಕೀರ್ಣತೆಯ ಕಡೆಗೆ ತಿರುಗಿವೆ ಎಂಬುದು

ತಿಳಿಸುತ್ತವೆ ಮತ್ತು ಬದುಕಿನ ಬಗೆಗಿನ ಅವನ ದೃಷ್ಟಿಕೋನ ಬದಲಾಗಿದೆ ಎಂಬುದರ ಸೂಚಕವಾಗಿದೆ. "ಕರ್ನಾಟಕದಲ್ಲಿ ಮಾನವನು ಮನೆಕಟ್ಟಿಕೊಳ್ಳಲು ಪ್ರಾರಂಭಿಸಿದ್ದು ಸರಿಸುಮಾರು ಕ್ರಿ. ಪೂ ೪೫೦೦ ವರ್ಷಗಳ ಹಿಂದೆ. ಆಗ ಮನೆಗಳು ಹೇಗಿದ್ದವು ಎಂಬುದನ್ನು ತಿಳಿಯಲು ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ ಮೊದಲಾದ ಸ್ಥಳಗಳಲ್ಲಿ ನಡೆಸಿರುವ ಉತ್ಖನನಗಳಲ್ಲಿ ಕಂಬಗಳನ್ನು ನೆಡಲು ಮಾಡಿರುವ ಗುಂಡಿಗಳು ಕಂಡುಬಂದಿದ್ದು ಅವುಗಳ ಆಧಾರದ ಮೇಲೆ ಆ ಕಾಲದಲ್ಲಿ ಮರದ ಕಂಬಗಳನ್ನು ನೆಟ್ಟು ಅವುಗಳ ಆಧಾರದ ಮೇಲೆ ಗುಡಿಸಲುಗಳನ್ನು ನಿರ್ಮಿಸುತ್ತಿದ್ದರು ಎಂದು ತಿಳಿದುಬರುತ್ತದೆ"[೧೪]. ಕರ್ನಾಟಕದಲ್ಲಿನ ಅನೇಕ ಬುಡಕಟ್ಟುಗಳು ಈ ರೀತಿಯಾಗಿ ಕಂಬಗಳನ್ನು(ಕವೆಗಳನ್ನು) ನೆಟ್ಟು ಗುಡಿಸಲುಗಳನ್ನು ನಿರ್ಮಿಸಿಕೊಳ್ಳುತ್ತಿರುವುದು ಇಂದಿಗೂ ಕಂಡುಬರುತ್ತದೆ.

ಸೋಲಿಗರು ಆರು ಕವ್ವೆಗಳ(ಕಂಬಗಳ) ಗುಡಿಸಲನ್ನು ಕಟ್ಟಿಕೊಳ್ಳುತ್ತಾರೆ, ಇರುಳಿಗರು ಎರಡು ಕವ್ವೆಗಳ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಾರೆ. ಹಾಗೆಯೆ ಬೇಡರು, ಗೊಲ್ಲರು ಕವ್ವೆ(ಕಂಬ) ಗಳಿಲ್ಲದೆ ಕೌಂಸಿ ಹುಲ್ಲಿನಿಂದ ವೃತ್ತಾಕಾರವಾಗಿ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಾರೆ. ಗುಡಿಸಲು ಕಟ್ಟಿಕೊಂಡು ನೆಲೆಸಿದ ಹಲವು ಗುಡಿಸಲುಗಳ ಸಮೂಹವನ್ನು ಹಟ್ಟಿ, ಹಾಡಿ, ಪೋಡು ಎಂದು ಕರೆಯುತ್ತಾರೆ. ಇಂತಹ ಹಟ್ಟಿಗಳಲ್ಲಿ ಮ್ಯಾಸಬೇಡರ ಕಂಪಳದೇವರ ಹಟ್ಟಿಯೂ ಒಂದು. "ಒಂದು ಮ್ಯಾಸಬೇಡರ ಹಟ್ಟಿ ಎಂದರೆ ೫೦–೬೦ ಸಣ್ಣ ಸಣ್ಣ ಗುಡಿಸಲುಗಳ ಸಮೂಹವಾಗಿರುತ್ತದೆ. ಕೊಂಚ ಹಿಂದಿನ ಕಾಲದ ಅಥವಾ ಹಟ್ಟಿ ಸಂಸ್ಕೃತಿಯ ಆರಂಭದ ಕಾಲದ ಸಂಗತಿ ಹೇಳುವುದಾದರೆ ಈ ಗುಡಿಸಲುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೊತ್ತುಕೊಂಡೇ ಹೋಗಬಹುದಾದ ರೀತಿಯಲ್ಲಿ ಬರಿ ಅಂಚಿಹುಲ್ಲು ಅಥವಾ ಕೌಂಸಿ ಹುಲ್ಲು, ಲಕ್ಕಲಿ ಬರಲಿನಿಂದಲೇ ಹೆಣೆಯಲಾಗುತ್ತಿತ್ತಂತೆ"[೧೫]. ಇಂತಹ ಕೌಂಸಿ ಹುಲ್ಲು, ಲಕ್ಕಿಲಿ ಬರಲಿನಿಂದ ಹೆಣೆದ ಹಗುರವಾದ ಸರಳವಾದ ಗುಡಿಸಲುಗಳು ಈಗಲೂ ಕಂಪಳದೇವರ ಹಟ್ಟಿಯಲ್ಲಿ ಕಂಡುಬರುತ್ತವೆ. ಇತ್ತೀಚೆಗೆ ಹಟ್ಟಿಯಲ್ಲಿ ಇಂತಹ ಗುಡಿಸಲುಗಳ ಸಂಖ್ಯೆ ಕಡಿಮೆಯಾಗುತ್ತಿದ್ದು ಆಧುನಿಕತೆಗೆ ಒಳಗೊಳ್ಳುತ್ತಿರುವ ಹಟ್ಟಿಯ ಜನಪದರು ಸರ್ಕಾರದಿಂದ ಅನುದಾನ ಪಡೆದು ಕೆಲವು ಜನತಾ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಜೊತೆಗೆ ಆರ್‌ಸಿಸಿ ಮನೆಗಳನ್ನು ಸಹ ಕಟ್ಟಿಕೊಳ್ಳುತ್ತಿದ್ದಾರೆ. ಆದರೆ ತಮ್ಮ ದೇವರಿಗೆ ಹೊಸ ಗುಡಿಗಳನ್ನು ನಿರ್ಮಿಸಿದ್ದರೂ ಅದರ ಪಕ್ಕದಲ್ಲಿ ಪಾರಂಪರಿಕ ಸಂಸ್ಕೃತಿಯ ಮುಂದುವರಿಕೆಗಾಗಿ ಎಂಬಂತೆ ಕೌಂಸಿ ಹುಲ್ಲಿನಿಂದ ಗುಡಿಸಲು/ಪೌಳಿಗಳನ್ನು ನಿರ್ಮಿಸಿರುತ್ತಾರೆ. ಕೆಲವರು ಇಂದಿಗೂ ಅಂತಹ ಗುಡಿಸಲುಗಳಲ್ಲಿಯೇ ವಾಸಿಸುತ್ತಿದ್ದಾರೆ. ಹಟ್ಟಿಯ ಬೇಡರು ಆರಾಧಿಸುವ ದೇವರ ಗುಡಿಗಳೂ ಸಹ ಅಂಚಿಹುಲ್ಲಿನ ಗುಡಿಸಲುಗಳೇ ಆಗಿರುತ್ತವೆ. ಇವರು ವಾಸಿಸುವ ಮನೆ ಅಥವಾ ಗುಡಿಸಲುಗಳೂ ಇವರು ಪೂಜಿಸುವ ದೇವರ ಗುಡಿ(ಪೌಳಿ)ಗಳೂ ಒಂದೇ ರೀತಿಯಾದ ರಚನೆಯನ್ನು ಹೊಂದಿರುತ್ತವೆ.

ಗುಡಿಸಲುಗಳ ನಿರ್ಮಾಣ ಕಲೆ: ಇವರ ಗುಡಿಸಲುಗಳು ಸಾಮಾನ್ಯವಾಗಿ ಚೌಕಾಕಾರವಾಗಿದ್ದು ಮೇಲಿನ ಹೊದಿಕೆಗಳು ತ್ರಿಕೋನಾಕಾರದಲ್ಲಿ ಇರುತ್ತವೆ. ಈ ಗುಡಿಸಲುಮನೆಗೆ ಯಾವುದೇ ರೀತಿಯ

ತಳಪಾಯ ಇರುವುದಿಲ್ಲ. ಗುಡಿಸಲು ನಿರ್ಮಿಸಿಕೊಳ್ಳಲು ಆಯ್ಕೆಮಾಡಲಾದ ನೆಲವನ್ನು ಚೆನ್ನಾಗಿ ಅಗೆದು ಮಣ್ಣಿನಿಂದ ಗುಡಿಸಿ ದನದ ಸಗಣಿಯಿಂದ ಸಾರಿಸಿ ಸ್ವಚ್ಛವಾಗಿಟ್ಟುಕೊಳ್ಳುತ್ತಾರೆ. ಮೊದಲು ಕವೆಗಳನ್ನು ನೆಟ್ಟು ಅದರ ಮೇಲೆ ಬಳ್ಳಿಗಳಿಂದ ಅವನ್ನು ಕಟ್ಟುಕಟ್ಟಿ ಬಿಗಿಯುತ್ತಾರೆ. ಕಾಡಿನಲ್ಲಿ ದೊರೆಯುವ ಹಂಚಿಹುಲ್ಲು(ಕೌಂಸಿ ಹುಲ್ಲು), ಜೋಂಡು ಹುಲ್ಲು(ಆಘು), ಈಚಲು ಬರಲು, ಬಂದರಕೆ ಸೊಪ್ಪನ್ನು ಹೊದಿಕೆಯಾಗಿ ಹಾಕುತ್ತಾರೆ. ಇವರು ಮನೆಗೆ ಹೊದಿಕೆ ಹಾಕುವುದರಲ್ಲಿ ನಿಪುಣರಾಗಿದ್ದಾರೆ. ಎಷ್ಟೇ ಗಾಳಿ, ಮಳೆ ಬಂದರೂ ಒಂದು ಹನಿ ನೀರು ಒಳಗೆ ಬರದ ಹಾಗೆ ಗುಡಿಸಿಲುಗಳನ್ನು ನಿರ್ಮಿಸುತ್ತಾರೆ.

**ಕೊಷ್ಟಕ ೨.೨–ಕಂಪಳದೇವರ ಹಟ್ಟಿಯ ಮನೆಗಳ ಮಾದರಿ ವಿವರ**

| ಸಮುದಾಯಗಳು | ಕುಟುಂಬಗಳು | ಮನೆಗಳ ಮಾದರಿ | | | | | | | |
|---|---|---|---|---|---|---|---|---|---|
| | | ಗುಡಾರ | ಗುಡಿಸಲು | ಟಿನ್ | ಮಾಳಿಗೆ | ಆರ್‌ಸಿಸಿ | ಹೆಂಚಿನ | ಜನತಾ | ಬಾಡಿಗೆ |
| ಆದಿ ಕರ್ನಾಟಕ | ೪೩ | | ೪ | | ೪ | | ೨ | ೩೨ | ೧ |
| ಲಿಂಗಾಯತರು | ೭ | | | | ೧ | ೧ | ೫ | | |
| ನಾಯಕ | ೨೬೩ | | ೨೬ | ೨ | ೬೨ | ೫ | ೭೧ | ೮೬ | ೧೧ |
| ಒಟ್ಟು | ೩೧೩ | | ೩೦ | ೨ | ೬೭ | ೬ | ೭೮ | ೧೧೮ | ೧೨ |

ಕೋಷ್ಟಕ ೨.೨ ರಲ್ಲಿ ಕಂಪಳದೇವರ ಹಟ್ಟಿಯಲ್ಲಿನ ಮನೆಗಳ ಮಾದರಿ ಅಂದರೆ ಗುಡಿಸಲು, ಗುಡಾರ, ಟಿನ್, ಹೆಂಚಿನ, ಆರ್ ಸಿ ಸಿ ಮನೆಗಳು, ಮಾಳಿಗೆ ಮನೆಗಳು ಎಂದು ವಿಂಗಡಿಸಿಕೊಳ್ಳಲಾಗಿದ್ದು ಅದರ ಅನ್ವಯ ಹಟ್ಟಿಯಲ್ಲಿನ ಸಮುದಾಯವಾರು ಮನೆಗಳ ಮಾದರಿಗಳನ್ನು ನೋಡುವುದಾದರೆ, ಪ್ರಸ್ತುತ ಹಟ್ಟಿಯಲ್ಲಿರುವ ೩೧೩ ಮನೆಗಳಲ್ಲಿ ಆದಿ ಕರ್ನಾಟಕ(ಮಾದಿಗ) ಸಮುದಾಯದವರ ೪೩ ಮನೆಗಳಿದ್ದು ಅವುಗಳಲ್ಲಿ ೪ ಗುಡಿಸಲು ಮನೆಗಳು, ೪ ಮಾಳಿಗೆ ಮನೆಗಳು, ೨ ಹೆಂಚಿನ ಮನೆಗಳು, ೩೨ ಜನತಾ ಮನೆಗಳು, ೧ ಬಾಡಿಗೆ ಮನೆಯಿದೆ. ಅದರಂತೆಯೇ ನಾಯಕ(ಬೇಡ) ಸಮುದಾಯದವರ ೨೬೩ ಮನೆಗಳಲ್ಲಿ ೨೬ ಗುಡಿಸಲು ಮನೆಗಳು, ೨ ಟಿನ್ ಮನೆಗಳು, ೬೨ ಮಾಳಿಗೆ ಮನೆಗಳು, ೫ ಆರ್‌ಸಿಸಿ ಮನೆಗಳು, ೭೧ ಹೆಂಚಿನ ಮನೆಗಳು, ೮೬ ಜನತಾ ಮನೆಗಳು, ೧೧ ಬಾಡಿಗೆ ಮನೆಗಳಿವೆ. ಲಿಂಗಾಯತರ ೭ ಮನೆಗಳಲ್ಲಿ ೧ ಮಾಳಿಗೆ ಮನೆ, ೧ ಆರ್‌ಸಿಸಿ ಮನೆ, ೫ ಹೆಂಚಿನ ಮನೆಗಳಿವೆ ಒಟ್ಟಾರೆಯಾಗಿ ಮೂರೂ ಸಮುದಾಯಗಳ ಮನೆಗಳು ಸೇರಿ ೩೧೩ ಮನೆಗಳು ಶೇಕಡಾವಾರು ಮನೆಗಳ ಮಾದರಿ ನೋಡುವುದಾದರೆ ಶೇಕಡ ೯.೫೮೫ ರಷ್ಟು ಗುಡಿಸಲುಮನೆಗಳು, ಶೇಕಡ ೦.೬ ರಷ್ಟು ಟಿನ್ ಮನೆಗಳು, ಶೇಕಡ ೨೧.೪೧ ರಷ್ಟು ಮಾಳಿಗೆ ಮನೆಗಳು, ಶೇಕಡ ೧.೯೧೭ ರಷ್ಟು ಆರ್‌ಸಿಸಿ ಮನೆಗಳು, ಶೇಕಡ ೨೪.೯ ರಷ್ಟು ಹೆಂಚಿನ ಮನೆಗಳು ಶೇಕಡ ೩೭.೩ ರಷ್ಟು ಜನತಾ ಮನೆಗಳು, ಶೇಕಡ ೩.೮೩ ರಷ್ಟು ಬಾಡಿಗೆ ಮನೆಗಳು ಇವೆ.

ಕೋಷ್ಟಕ ೨. ೩.–ಕಂಪಳದೇವರ ಹಟ್ಟಿಯಲ್ಲಿ ಮೂಲಭೂತ ಸೌಲಭ್ಯಗಳನ್ನು ಪಡೆದವರ ವಿವರ

| ಸಮುದಾಯಗಳು | ಕುಟುಂಬಗಳು | ಮನೆ | | ವಿದ್ಯುತ್ | | ಇತರೆ ಸೌಲಭ್ಯಗಳು | | | | | | |
|---|---|---|---|---|---|---|---|---|---|---|---|---|
| | | ಸ್ವಂತದ್ದು | ಸರ್ಕಾರ | ಸ್ವಂತದ್ದು | ಸರ್ಕಾರ | ಪಡಿತರ ಚೀಟಿ | ಸ್ನಾನಗೃಹ | ಸೈಕಲ್ | ರೇಡಿಯೋ | ಟೇಪ ರಿಕಾರ್ಡ್ | ಟಿ.ವಿ. | ಮೊಬೈಲ್ |
| ಆದಿ ಕರ್ನಾಟಕ | ೪೩ | ೯ | ೩೧ | | ೩೬ | ೪೦ | ೧೩ | | | | ೨೫ | ೨೯ |
| ಲಿಂಗಾಯತರು | ೭ | ೭ | | ೭ | | ೭ | ೫ | | | | ೬ | ೭ |
| ನಾಯಕ | ೨೬೩ | ೧೫೫ | ೮೩ | ೧೬ | ೧೭೮ | ೨೪೦ | ೪೮ | ೨ | | ೧ | ೬೫ | ೮೬ |
| ಒಟ್ಟು | ೩೧೩ | ೧೭೧ | ೧೧೪ | ೨೩ | ೨೧೪ | ೨೮೭ | ೬೬ | ೨ | | ೧ | ೯೬ | ೧೨೨ |

ಒಟ್ಟಾರೆ ಸರಾಸರಿ ನೋಡುವುದಾದರೆ ಹಟ್ಟಿಯಲ್ಲಿನ ಬಹುತೇಕ ಮನೆಗಳು ಸರ್ಕಾರ ನಿರ್ಮಿಸಿಕೊಟ್ಟ ಜನತಾ ಮನೆಗಳೇ ಆಗಿವೆ. ಅದರಂತೆಯೇ ಹಟ್ಟಿಯಲ್ಲಿನ ಜನರು ತಾವು ವಾಸಿಸಲು ಬೇಕಾದ ಮೂಲಭೂತ ಅಗತ್ಯತೆಗಳಾದ ಮನೆ ಮತ್ತು ಇತರ ಸೌಲಭ್ಯಗಳನ್ನು ನೋಡುವುದಾದರೆ ಈಗಾಗಲೇ ಹೇಳಿದಂತೆ ಬಹುತೇಕ ಮನೆಗಳು ಸರ್ಕಾರ ನಿರ್ಮಿಸಿಕೊಟ್ಟ ಮನೆಗಳೇ ಆದರೂ ನಿವೇಶನದ ಸ್ಥಳಗಳು ಮಾತ್ರ ತಮ್ಮ ಸ್ವಂತದ್ದೇ ಆಗಿವೆ ಇವರು ಮನೆಗಳನ್ನು ಕಟ್ಟಿಕೊಂಡಿರುವ ಈ ಪ್ರದೇಶವನ್ನು ಇಡೀ ಹಟ್ಟಿಯವರು ತಮ್ಮ ದೈವ ಕಂಪಳರಂಗಸ್ವಾಮಿಯ ಹೆಸರಿನಲ್ಲಿ ಕಂದಾಯ ಕಟ್ಟಿ ನೊಂದಣಿಮಾಡಿಸಿಕೊಂಡಿದ್ದಾರೆ. ಈ ಹಟ್ಟಿಯ ಪ್ರದೇಶವು ಯಾವೊಬ್ಬ ವ್ಯಕ್ತಿಯ ಹೆಸರಿನಲ್ಲಿಲ್ಲ ಕಂಪಳರಂಗಸ್ವಾಮಿ ದೇವರ ಹೆಸರಿನಲ್ಲಿದೆ(ಮಾಹಿತಿ: ಗೊಂಚಿಗಾರ್ ಬೋರಯ್ಯ). ಹೀಗೆ ನೊಂದಣಿ ಮಾಡಿಸಿಕೊಂಡ ಪ್ರದೇಶದಲ್ಲಿ ಮನೆಗಳನ್ನು ಕಟ್ಟಿಕೊಂಡು ನೆಲೆಸಿದ್ದಾರೆ ಹಟ್ಟಿಯಲ್ಲಿ ಜನರು ಹೊಂದಿರುವ ಮನೆ ಮತ್ತು ಇತರ ಸೌಲಭ್ಯಗಳ ಕುರಿತು ಕ್ಷೇತ್ರಕಾರ್ಯ ಕೈಗೊಂಡು ಪಡೆದ ಮಾಹಿತಿಯ ಆಧಾರದ ಮೇಲೆ ಈ ಕೆಳಗಿನ ಕೋಷ್ಟಕದಲ್ಲಿ ವಿವರವಾಗಿ ತಿಳಿಸಲಾಗಿದೆ. (ಸ್ವಂತ ಮನೆ ಮತ್ತು ಬಾಡಿಗೆಮನೆಗಳನ್ನು ಹೊಂದಿರುವ, ಇತರೆ ಸೌಲಭ್ಯಗಳನ್ನು ಹೊಂದಿರುವವರ ಪ್ರಮಾಣ ಮತ್ತು ಶೇಕಡವಾರನ್ನು ತಿಳಿಯಲು ಕೆಳಗಿನ ಕೋಷ್ಟಕ ೨.೩ ನ್ನು ಗಮನಿಸಿ)

**ಕೋಷ್ಟಕ ೨. ೩–ಕಂಪಳದೇವರ ಹಟ್ಟಿಯಲ್ಲಿ ಮೂಲಭೂತ ಸೌಲಭ್ಯಗಳನ್ನು ಪಡೆದವರ ವಿವರ**

ಈ ಮೇಲಿನ ಕೋಷ್ಟಕ ೨.೩ರಲ್ಲಿ ತಿಳಿಸಿರುವಂತೆ ಹಟ್ಟಿಯಲ್ಲಿನ ೧೬೪೨ ಜನಸಂಖ್ಯೆಯಲ್ಲಿ ಸರ್ಕಾರದ ಸೌಲಭ್ಯಗಳನ್ನು ಪಡೆದವರ ಪ್ರಮಾಣವನ್ನು ತಿಳಿಯಬಹುದಾಗಿದೆ. ಹಟ್ಟಿಯಲ್ಲಿನ ಒಟ್ಟಾರೆ ೩೧೩ ಕುಟುಂಬಗಳಲ್ಲಿ ಸ್ವಂತ ಮನೆಗಳನ್ನು ಹೊಂದಿರುವವರು ಮತ್ತು ಸರ್ಕಾರ ನಿರ್ಮಿಸಿಕೊಟ್ಟ ಮನೆಗಳನ್ನು ಹೊಂದಿರುವವರ ಪ್ರಮಾಣ ನೋಡುವುದಾದರೆ ೧೭೧ ಕುಟುಂಬಗಳು ಸ್ವಂತ ಮನೆಗಳನ್ನು ಹೊಂದಿದ್ದಾರೆ ಅದರಲ್ಲಿ ೯ ಮನೆಗಳು ಆದಿ ಕರ್ನಾಟಕ(ಮಾದಿಗ)ಸಮುದಾಯದವು, ೭ ಲಿಂಗಾಯತರವು, ೧೫೫ ಬೇಡರವು ಇನ್ನು ಸರ್ಕಾರ ನಿರ್ಮಿಸಿಕೊಟ್ಟ ಮನೆಗಳಲ್ಲಿ ೩೧ ಮನೆಗಳು ಆದಿ ಕರ್ನಾಟಕ(ಮಾದಿಗ)ದವರವು ಮತ್ತು ೮೩ ನಾಯಕ ಸಮುದಾಯದವರವು(ಬೇಡ). ೩೧೩ ಕುಟುಂಬಗಳಲ್ಲಿ ಸ್ವಂತ ವಿದ್ಯುತ್ ಹೊಂದಿರುವ ಕುಟುಂಬಗಳೆಂದರೆ ೭ ಲಿಂಗಾಯತರವು, ೧೬ ನಾಯಕ(ಬೇಡ)ವು  ಒಟ್ಟು ೨೩ ಕುಟುಂಬಗಳು ಸ್ವಂತ ವಿದ್ಯುತ್ ಹೊಂದಿರುತ್ತವೆ, ಉಳಿದಂತೆ ಸರ್ಕಾರ ಹಾಕಿಕೊಟ್ಟ ಭಾಗ್ಯಜ್ಯೋತಿ ವಿದ್ಯುತ್ ವ್ಯವಸ್ಥೆಯನ್ನು ೨೧೪ ಕುಟುಂಬಗಳು ಹೊಂದಿವೆ ಅದರಲ್ಲಿ ೩೬ ಕುಟುಂಬಗಳು ಆದಿ ಕರ್ನಾಟಕ(ಮಾದಿಗ)ರವು, ೧೭೮ ನಾಯಕ(ಬೇಡ)ರ ಕುಟುಂಬಗಳಾಗಿವೆ. ಮುಂದುವರಿದು ಹೇಳುವುದಾದರೆ ಹಟ್ಟಿಯ ೩೧೩ ಕುಟುಂಬಗಳ ಪೈಕಿ ಪಡಿತರ ಚೀಟಿಯನ್ನು ಹೊಂದಿದ/ಪಡೆದ ಕುಟುಂಬಗಳು ೨೮೭ ಅದರಲ್ಲಿ ಆದಿ ಕರ್ನಾಟಕ(ಮಾದಿಗ)ಸಮುದಾಯದವರ ೪೦ ಕುಟುಂಬಗಳು, ಲಿಂಗಾಯತರ ೭ ಕುಟುಂಬಗಳು ಮತ್ತು ನಾಯಕ(ಬೇಡ)ರ ೨೪೦ ಕುಟುಂಬಗಳು ಬಹುತೇಕ ಬಿ ಪಿ ಎಲ್ ಪಡಿತರ ಚೀಟಿಯನ್ನು

ಪಡೆದಿದ್ದಾರೆ ಉಳಿದಂತೆ ಕೆಲವು ಕುಟುಂಬಗಳಿಗೆ ಇನ್ನೂ ಪಡಿತರ ಚೀಟಿ ದೊರೆತಿಲ್ಲದಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಒಟ್ಟಾರೆ ಹಟ್ಟಿಯಲ್ಲಿ ೨ ಟೇಪ್ ರೆಕಾರ್ಡರ್, ೯೬ ಟಿ ವಿ, ೧೨೨ ಮೊಬೈಲ್ ಪೋನು, ೨ ಸೈಕಲ್, ೬೬ ಸ್ನಾನಗೃಹ ಹೊಂದಿದ್ದಾರೆ. ಬಹಳಷ್ಟು ಜನ ವೃದ್ಧರಿಗೆ ವೃದ್ಧಾಪ್ಯ ವೇತನ ಸಿಗುತ್ತಿಲ್ಲ ಅದನ್ನು ಮಾಡಿಸುವ ಸಾಮಾನ್ಯ ತಿಳುವಳಿಕೆ ಅವರಲ್ಲಿಲ್ಲದಿರುವುದು ಕಂಡುಬರುತ್ತದೆ. ಒಟ್ಟಾರೆ ಸರ್ಕಾರಿ ಸೌಲಭ್ಯಗಳನ್ನು ಪಡೆದವರ ಶೇಕಡವಾರು ನೋಡುವುದಾದರೆ ಶೇಕಡ ೯೧.೬೯೩೯ ರಷ್ಟು ಸೌಲಭ್ಯ ಪಡೆದವರು ಇದ್ದರೆ, ಶೇಕಡ ೮.೩೦೬೦೯ ರಷ್ಟು ಜನರು ಸೌಲಬ್ಯ ವಂಚಿತರಾಗಿದ್ದಾರೆ.

**೨.೩.೨ ಕೌಟುಂಬಿಕ ರಚನೆ**

ಕುಟುಂಬವು ಒಂದು ಸಾರ್ವತ್ರಿಕ ಸಂಸ್ಥೆಯಾಗಿದೆ. ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣದಲ್ಲಿ, ಸಾಮಾಜೀಕರಣದಲ್ಲಿ ಪ್ರಮುಖ ಪಾತ್ರ ವಹಿಸುವುದು ಅವನ ಕುಟುಂಬ. ಮಾನವನ ಬಹುಮುಖ್ಯ ಮೂರು ಅವಶ್ಯಕತೆಗಳಾದ ಲೈಂಗಿಕತೆ, ಸಂತಾನಾಭಿಲಾಷೆ ಮತ್ತು ಆರ್ಥಿಕ ಬಯಕೆಗಳನ್ನು ಸಮಾಜ ಒಪ್ಪಿತ ರೀತಿಯಲ್ಲಿ ಪೂರೈಸಿಕೊಳ್ಳಲು ಮತ್ತು ನಿಯಂತ್ರಿಸಿಕೊಳ್ಳಲು ಕುಟುಂಬ ಅವಶ್ಯಕವಾಗಿದೆ. ಗಂಡ ಹೆಂಡತಿ ಮತ್ತು ಮಕ್ಕಳನ್ನೊಳಗೊಂಡ ಜೈವಿಕ ಸಂಸ್ಥೆಯನ್ನು ಕುಟುಂಬ ಎಂದು ಹೇಳುತ್ತೇವೆ. ಸಮಾಜಶಾಸ್ತ್ರಜ್ಞರಾದ ಸಮ್ನರ್ ಮತ್ತು ಕೆಲ್ಲರ್ ಅವರು ರಕ್ತ ಸಂಬಂಧಿಗಳಿಂದ ಕೂಡಿದ ಮತ್ತು ಕನಿಷ್ಟ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿ ಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ ಎಂದಿದ್ದಾರೆ. ಬರ್ಗೆಸ್ ಮತ್ತು ಲಾಕ್ ಅವರು ಕುಟುಂಬದಲ್ಲಿ ಒಂದು ಸಮೂಹದ ಜನರು ವಿವಾಹ, ರಕ್ತ ಸಂಬಂಧ, ದತ್ತುಸ್ವೀಕಾರದಿಂದ ಒಂದೆಡೆ ವಾಸವಾಗಿದ್ದು, ಆಂತರಿಕ ಕ್ರಿಯೆ ಮತ್ತು ಸಂಪರ್ಕ ವಿಧಾನಗಳಲ್ಲಿ ಗಂಡ-ಹೆಂಡತಿ, ತಂದೆ-ತಾಯಿ, ಮಗ-ಮಗಳು, ಸೋದರ-ಸೋದರಿ ಸಂಬಂಧದಿಂದ ಏಕರೂಪದ ಸಂಸ್ಕೃತಿಯನ್ನು ಪಡೆದಿರುತ್ತಾರೆ ಎಂದು ಹೇಳಿದ್ದಾರೆ. ಆದ್ದರಿಂದ ಕುಟುಂಬವು ಸಮಾಜದ ಮೂಲಭೂತ ಘಟಕವಾಗಿರುತ್ತದೆ. ಮಾನವರೆಲ್ಲರೂ ಕುಟುಂಬ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಕಂಪಳದೇವರ ಹಟ್ಟಿಯಲ್ಲಿ ಪಿತೃಪ್ರಾಧಾನ ಕುಟುಂಬಗಳು ಕಂಡುಬರುತ್ತವೆ.

ಹಿಂದೆ ಅವಿಭಕ್ತ ಕುಟುಂಬಗಳಿದ್ದು ಇಂದು ವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡು ಬರುತ್ತಿವೆ. ಕುಟುಂಬದ ಪ್ರತಿಯೊಂದು ಆಗುಹೋಗುಗಳನ್ನು ಹೆಚ್ಚಾಗಿ ಪುರುಷರೇ ನೋಡಿಕೊಳ್ಳುತ್ತಾರೆ. ತಂದೆಯ ನಂತರ ಕುಟುಂಬದ ಹಿರಿಯ ಮಗ ಮನೆಯ ಯಜಮಾನನಾಗುತ್ತಾನೆ, ಕುಟುಂಬದ ಆಸ್ತಿ ಎಲ್ಲರದ್ದೂ ಆಗಿರುತ್ತದೆ ಒಂದು ವೇಳೆ ಅಣ್ಣ ತಮ್ಮಂದಿರಲ್ಲಿ ಹೊಂದಾಣಿಕೆ ಬಾರದಿದ್ದರೆ ಹಟ್ಟಿಯ ಹಿರಿಯರನ್ನು ಸೇರಿಸಿ ಅವರ ಸಲಹೆಯಂತೆ ಆಸ್ತಿಯನ್ನು ಹಂಚಿಕೊಳ್ಳುತ್ತಾರೆ. ಇಂತಹ ಘಟನೆ ನಡೆಯುವುದು ಇವರಲ್ಲಿ ತೀರಾ ಕಡಿಮೆ ಎಂದೇ ಹೇಳಬೇಕು ಕಾರಣ ಅತಿ ಕಡಿಮೆ ಆಸ್ತಿ ಹೊಂದಿರುವ ಅಥವಾ ಆಸ್ತಿಯೇ ಇಲ್ಲದ ಕುಟುಂಬಗಳೇ ಹೆಚ್ಚಾಗಿರುವುದರಿಂದ ಆಸ್ತಿಗಾಗಿ ಜಗಳಗಳು ಆಗುವುದು ಕಡಿಮೆ.

ಕಂಪಳದೇವರ ಹಟ್ಟಿಯ ಬೇಡರಲ್ಲಿ ವಿವಾಹದ ನಂತರ ಹೆಣ್ಣು ತನ್ನ ಗಂಡನ ಮನೆಯಲ್ಲಿ ನೆಲೆಸುತ್ತಾಳೆ. ಅಲ್ಲದೆ ಒಂದೇ ಬೆಡಗಿನವರಲ್ಲಿ ವಿವಾಹ ನಿಷಿದ್ಧವಿರುವುದರಿಂದ ಬೇರೆ ಬೇರೆ ಬೆಡಗಿನಿಂದ ಬಂದಿದ್ದ ಅಣ್ಣ ತಮ್ಮಂದಿರ ಹೆಂಡತಿಯರು ಅಕ್ಕ ತಂಗಿಯರಂತೆ ಬಾಳುತ್ತಾರೆ. ಹಿರಿಯ ಸೊಸೆಗೆ ಕುಟುಂಬದಲ್ಲಿ ಬಹಳ ಗೌರವವಿರುತ್ತದೆ. ಯಾವುದೇ ಶುಭ ಕಾರ್ಯಗಳಲ್ಲಿ ಹಿರಿಯ ಮಗ ಮತ್ತು ಹಿರಿಯ ಸೊಸೆಗೆ ಮೊದಲ ಆದ್ಯತೆ ಕೊಡುತ್ತಾರೆ. ಇಲ್ಲಿನ ಜನರು ತಮ್ಮ ಜೀವನ ನಿರ್ವಹಣೆಗೆ ಕೃಷಿ ಮತ್ತು ಪಶುಪಾಲನೆಯನ್ನು ಅವಲಂಬಿಸಿದ್ದಾರೆ. ಪಶುಪಾಲನೆ ಮತ್ತು ಕೃಷಿಕೆಲಸಗಳಲ್ಲಿ ಹೆಣ್ಣು ಗಂಡು ಬೇಧವಿಲ್ಲದೆ ದುಡಿಯುತ್ತಾರೆ, ಕೃಷಿ ಕೆಲಸ ಮತ್ತು ಮನೆ ಕೆಲಸಗಳಲ್ಲಿ ಗಂಡಿಗಿಂತ ಹೆಣ್ಣು ಹೆಚ್ಚು ಶ್ರಮಪಡುತ್ತಾಳೆ. ಸುಖ-ದುಃಖದಲ್ಲಿ ಕುಟುಂಬದ ಎಲ್ಲಾ ಸದಸ್ಯರು ಭಾಗಿಯಾಗುತ್ತಾರೆ, ಪರಸ್ಪರ ಸ್ಪಂದಿಸುತ್ತಾರೆ. ಕುಟುಂಬದವರು ಹಿರಿಯ ಸದಸ್ಯರು ಹೇಳಿದಂತೆ ಅವರ ಮಾರ್ಗದರ್ಶನದಂತೆ ನಡೆದುಕೊಳ್ಳುತ್ತಾರೆ. ಪ್ರತಿಯೊಂದು ಕುಟುಂಬಗಳಲ್ಲಿ ಅವರದೇ ಆದಂಥ ರೂಢಿ ಸಂಪ್ರದಾಯಗಳು, ನಂಬಿಕೆಗಳು ಆಚರಣೆಗಳು ವಿಧಿ ವಿದಾನಗಳು ಕಂಡು ಬರುತ್ತವೆ.

### ೨.೩.೩ ಕುಲಬಳಿಗಳು/ಬೆಡಗುಗಳು

ಪ್ರತಿಯೊಂದು ಜಾತಿ, ಬುಡಕಟ್ಟು ಸಮುದಾಯದಲ್ಲೂ ಹಲವು ಉಪ ಪಂಗಡಗಳಿದ್ದು ಅವುಗಳನ್ನು ಕುಲಗಳು, ಬೆಡಗುಗಳು ಅಥವಾ ಬಳಿಗಳೆಂದು ಕರೆಯುತ್ತಾರೆ. ಹಟ್ಟಿಯ ಮ್ಯಾಸಬೇಡರಲ್ಲಿಯೂ ಸಹ ಹಲವಾರು ಉಪ ಪಂಗಡಗಳಿದ್ದು ಅವುಗಳನ್ನು ಬೆಡಗುಗಳೆಂದು ಕರೆದುಕೊಳ್ಳುತ್ತಾರೆ. ಬೆಡಗುಗಳಿಗೆ ಸಂಬಂಧಿಸಿದಂತೆ ಇವರಲ್ಲಿನ ಪುರಾಣ ಕಥೆಗಳು, ಕುಲ ಮೂಲದ ಕಥೆಗಳಲ್ಲಿ ಪ್ರಸ್ತಾಪವಾಗುತ್ತದೆ. ಮೂಲತಃ ಕಾಡುವಾಸಿಗಳಾದ ಬೇಡರು ಬೇಟೆಗಾರಿಕೆ, ನಂತರ ಪಶುಪಾಲನೆ ಕೊನೆಗೆ ಕೃಷಿ ಬದುಕಿಗೆ ರೂಪಾಂತರ ಹೊಂದಿದ ಬುಡಕಟ್ಟಾಗಿದ್ದು ಈ ರೂಪಾಂತರದ ಹಂತದಲ್ಲಿ ಬೇಡರು ಹಲವು ಗುಂಪುಗಳಾಗಿ ಕಾಡಿನಲ್ಲಿ ಅಲೆಯುತ್ತಾ ಪಶುಪಾಲನೆ ಮಾಡುತ್ತಾ ಹಲವು ಕಡೆ ಚದುರಿ ನೆಲೆಸಿದರು. ಅಂತಹ ಗುಂಪುಗಳಲ್ಲಿ ಕೆಲವು ಗುಂಪುಗಳು ಕರ್ನಾಟಕದಾದ್ಯಂತ ಹಟ್ಟಿ ಕಟ್ಟಿಕೊಂಡು ಅಲ್ಲಲ್ಲಿ ನೆಲೆಸಿದ್ದಾರೆ, ಈ ರೀತಿಯಾಗಿ ನೆಲೆನಿಂತ ಬೇಡಬುಡಕಟ್ಟು ನೂರಾರು ಬೆಡಗುಗಳನ್ನು ಹೊಂದಿದೆ. “ಬೇಡ ಬುಡಕಟ್ಟು ಭಾರತದ ಪ್ರಾಚೀನ ಬುಡಕಟ್ಟುಗಳಲ್ಲಿ ಪ್ರಮುಖವಾದ ಪುರಾತನ ಸಮುದಾಯವಾಗಿದೆ. ಆದಿಯಲ್ಲಿ ೨೨ ಕುಲದ ಬೇಟೆಗಾರರು ಪರಸ್ಪರ ವೈವಾಹಿಕ ಸಂಬಂಧಗಳನ್ನು ರೂಢಿಸಿಕೊಂಡು ಒಂದು ಸಮಗ್ರ ಬೇಡ ಜನಾಂಗವಾಗಿ ಪರಿಣಮಿಸಿದ್ದಾರೆ”[೧೬]. ಹೀಗೆ ಬೇಟೆ ವೃತ್ತಿಯಿಂದ ಸಮುದಾಯದಲ್ಲಿ ವಿವಿಧ ಒಳಪಂಗಡಗಳಾಗಿದ್ದು ಒಂದೊಂದು ಬೆಡಗಿನ ಹುಟ್ಟು ಬೆಳವಣಿಗೆಗೆ ಒಂದೊಂದು ಕಥೆ ಇತಿಹಾಸ ಪುರಾಣಗಳಿವೆ, ಅಂತೆಯೇ ಇವರಲ್ಲಿ ಹಲವು ಉಪ ಪಂಗಡ/ಬೆಡಗುಗಳಿವೆ. ಇವರ ಬೆಡಗುಗಳು ಸಾಮಾನ್ಯವಾಗಿ ಪ್ರಕೃತಿಯಲ್ಲಿನ ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿ, ಹೂವು, ವ್ಯಕ್ತಿ ಮತ್ತು ಸೂರ್ಯ, ಚಂದ್ರ ಎಂಬ ಹೆಸರುಗಳಿಂದ ಗುರುತಿಸುವುದನ್ನು ಕಾಣಬಹುದು. ಅದಕ್ಕೆ ಕಾರಣ ಅವರ ಅರಣ್ಯವಾಸ ಮತ್ತು ಅಲ್ಲಿ ಅವರು ತಮ್ಮ ಜೀವನಕ್ಕೆ ಅನುಸರಿಸಿದ

ಕಸುಬು, ಆಶ್ರಯಿಸಿದ ಪ್ರಾಣಿ–ಪಕ್ಷಿ, ಮರ–ಗಿಡಗಳೇ ಇರಬೇಕು. ವಿಶೇಷವೆಂದರೆ ಮ್ಯಾಸಬೇಡರ ಹಿರಿಯರು ಬೆಡಗುಗಳನ್ನು ಕೇಳಿ ಆ ವ್ಯಕ್ತಿಯ ಮನೆತನದ ಮೂಲ ಪುರುಷ, ಮೂಲ ನೆಲೆ, ಮನೆದೇವರು, ಅವರ ಸಂಸ್ಕೃತಿ, ಆಚಾರ ವಿಚಾರ, ವಿಧಿ ನಿಷೇಧಗಳನ್ನು ತಿಳಿಸುತ್ತಾರೆ. ಇದರಿಂದ ಈ ಸಮುದಾಯದಲ್ಲಿ ಬೆಡಗುಗಳು ಎಷ್ಟು ಪ್ರಾಚೀನ ಮತ್ತು ಎಷ್ಟು ಪ್ರಮುಖವಾದುವು ಎಂದು ತಿಳಿದು ಬರುತ್ತದೆ.

ನೂರಾರು ಉಪ ಪಂಗಡಗಳನ್ನು ಹೊಂದಿರುವ "ಬೇಡ ನಾಯಕರ ಕುಲಗಳನ್ನೆಲ್ಲಾ ಗಮನಿಸಿದರೆ ಬಹುಪಾಲು ಕುಲಗಳು ಪ್ರಾಣಿಗಳ ಹೆಸರಿನಲ್ಲಿ ಬರುತ್ತವೆ. ಇದು ಎಲ್ಲಾ ಬುಡಕಟ್ಟಿನ ಕುಲ ಲಕ್ಷಣಗಳೇ ಆಗಿವೆ ಮುಖ್ಯವಾಗಿ ವೃಕ್ಷಾರಾಧನೆ, ಪ್ರಾಣಿಗಳ ಆರಾಧನೆ ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯ ಲಕ್ಷಣ ಆಗಿದೆ"[೧೭]. ಮೂಲತಃ ಕಾಡುವಾಸಿಗಳಾದ ಬೇಡರಿಗೆ ನಿಸರ್ಗದಲ್ಲಿನ ವಸ್ತುಗಳಲ್ಲಿ ಯಾವುದೋ ಒಂದು ಕಲ್ಲು, ಬಂಡೆ, ಹುತ್ತ, ಬೆತ್ತ, ದೊಡ್ಡಮನೆ ಅಥವಾ ಪ್ರಾಣಿಗಳು ರಕ್ಷಣೆಯನ್ನು ಒದಗಿಸಿರಬಹುದು ಅಥವಾ ಆ ವಸ್ತು ಅಥವಾ ಪ್ರಾಣಿಗಳ ಮೇಲಿನ ಭಯಕ್ಕಾಗಿಯೇ ಇಂಥ ಒಂದೊಂದು ವಸ್ತುವಿನ ಹೆಸರಿನಲ್ಲಿ ಆಯಾ ಗುಂಪು ತಮ್ಮ ಕುಲ ಅಥವಾ ಬೆಡಗುಗಳನ್ನು ಗುರುತಿಸಿಕೊಂಡಿರಬಹುದು. ಇವರ ಕುಲಮೂಲದ ಕಥೆಗಳಲ್ಲೂ ಸಹ ಬೇಡರ ಬೆಡಗು ಅಥವಾ ಕುಲಗಳ ಬಗ್ಗೆ ತಿಳಿಸಲಾಗಿದೆ. ಮ್ಯಾಸಬೇಡರ ಮೂಲ ಪಿತೃಗಳಾದ ಶುಕ್ಲಮಲ್ಲನಾಯಕ ಮತ್ತು ದಾನಸಾಲಮ್ಮನ ಮಕ್ಕಳಾದ ಸೂರ್ಯರಾಜ, ಗ್ಯಾರೆ ಬೈಯಪ್ಪರಾಜ, ಕನಕ ಧರ್ಮರಾಜ, ತಿಪ್ಪಂಡರಾಜ, ಭಾನುಕೋಟಿ ರಾಜ, ಗೊಡ್ಡಲು ಬೈಯಪ್ಪರಾಜ ಮತ್ತು ಪೆದ್ದಕ್ಕ ರಾಯಮ್ಮ ಎಂಬ ಏಳು ಮಂದಿ ಹಿರಿಯರಿಂದಲೇ ಮ್ಯಾಸ ಮಂಡಲದ ಕುಲ ಬೆಡಗುಗಳು ಬೆಳೆದು ಬಂದಿವೆ ಎಂದು ತಿಳಿದು ಬರುತ್ತದೆ.

**ಮ್ಯಾಸಬೇಡರ ಬೆಡಗುಗಳ ಪಟ್ಟಿ**

| ಕ್ರ ಸಂ | ಬೆಡಗುಗಳು | ಕ್ರ ಸಂ | ಬೆಡಗುಗಳು | ಕ್ರ ಸಂ | ಬೆಡಗುಗಳು |
|---|---|---|---|---|---|
| ೧ | ಅಚ್ಚಡ್ಲಾರು | ೨ | ಅಜ್ಜಡ್ಲಾರು | ೩ | ಅಜ್ಜಪಲ್ಲೋರು |
| ೪ | ಅಜ್ಜಮುತ್ತಿಯವರು | ೫ | ಅನಂದಲವರು | ೬ | ಅರಕೋರರು |
| ೭ | ಅಲಿಕೇರು | ೮ | ಈಗ್ಲಾರು | ೯ | ಈಟಿಯವರು |
| ೧೦ | ಈರಗಾರರು | ೧೧ | ಉದ್ದಲೋರು | ೧೨ | ಉರುವಲರು |
| ೧೩ | ಉರಶಿಂಗರು | ೧೪ | ಎಕ್ಕೆಲೋರು | ೧೫ | ಎತ್ತಿನವರು (ಎದ್ಲಾರು) |
| ೧೬ | ಎಮ್ಮೇಲವರು | ೧೭ | ಎನುಮಲಾರು | ೧೮ | ಏಳುಮನೇರು |
| ೧೯ | ಏಳುಬೆಟ್ಟದವರು | ೨೦ | ಓತಲವರು | ೨೧ | ಓಬನಾಯರು |
| ೨೨ | ಓಬಳೆಯವರು | ೨೩ | ಕಂಕರು | ೨೪ | ಕಗ್ಗಲ್ಲರು |
| ೨೫ | ಕತ್ತಿಯವರು | ೨೬ | ಕನ್ನೆಲ್ಲರು | ೨೭ | ಕರಿಬೇವಿನವರು |

| | | | | | |
|---|---|---|---|---|---|
| ೨೮ | ಕಲಶದವರು | ೨೯ | ಕಶ್ಯಪನವರು | ೩೦ | ಕಾಡುಚೆಂಚರು |
| ೩೧ | ಕಾಮಗೇತ್ಲಾರು | ೩೨ | ಕಾವರಿಕರು | ೩೩ | ಕಿನ್ನರವರು |
| ೩೪ | ಕಿರಾತಕರು | ೩೫ | ಕುಂಡಲರವರು | ೩೬ | ಕುಂತಲದವರು |
| ೩೭ | ಕುಂಬಳದವರು | ೩೮ | ಕುರಿಯವರು | ೩೯ | ಕುಳಿಂದರು |
| ೪೦ | ಗಂಪ್ಲಾರು | ೪೧ | ಹಜ್ಜಡ್ಲಾರು | ೪೨ | ಗಟ್ಟಿನಾಯ್ಕರು |
| ೪೩ | ಗಡ್ಡದವರು | ೪೪ | ಗಾಡಿಗಿರಿಯವರು | ೪೫ | ಗುಂಡೆತ್ಲಾರು |
| ೪೬ | ಗುಜಗಡ್ಲಾರು | ೪೭ | ಗುರುಪಾಮುಡ್ಲಾರು | ೪೮ | ಗೆಜ್ಜಲವರು |
| ೪೯ | ಗೊಡಗುದಾಸರು | ೫೦ | ಗೊಬ್ಬರಪ್ಪನವರು | ೫೧ | ಗೊಲ್ಲಾಳರು |
| ೫೨ | ಗೊಲ್ಲಾಳರು | ೫೩ | ಗೋವಿನವರು | ೫೪ | ಗೋಸಲವರು |
| ೫೫ | ಜಗ್ಗೇಲವರು | ೫೬ | ಜೆಂಕೇಲರು | ೫೭ | ಜೋಗಯ್ಯನವರು |
| ೫೮ | ತಮಲುಮತ್ತೇರು | ೫೯ | ತೋಡಲವರು | ೬೦ | ದಡ್ಡಿಮಿತ್ತಿನಾರು |
| ೬೧ | ದಡ್ಡಿಸೂರನಾಯಕನಾರು | ೬೨ | ದೇವಲರು | ೬೩ | ದೊಡ್ಡೆತ್ತಿನಾರು |
| ೬೪ | ದೊರೆಲವರು | ೬೫ | ನಗರಿಮನೇರು | ೬೬ | ನಲ್ಲಕ್ಕರಿಯವರು |
| ೬೭ | ನಲ್ಲಕೇತ್ಲಾರು | ೬೮ | ನಲ್ಲಬೋತ್ಲಾರು | ೬೯ | ನಾಗರತಕರು |
| ೭೦ | ನಾರಪೋರರು | ೭೧ | ನೀರಗಂಟಿಯವರು | ೭೨ | ಪಟ್ಟಪಲ್ಲಾರು |
| ೭೩ | ಪರಮೇಶ್ನಾರು | ೭೪ | ಪಾಪನಾರು | ೭೫ | ಪಾಮುಡ್ಲಾರು |
| ೭೬ | ಪಾಲೋರು | ೭೭ | ಪುಟಗೋಸಿಯವರು | ೭೮ | ಪುಲೋರು |
| ೭೯ | ಪೆನ್ನಯ್ಯಲೋರು | ೮೦ | ಪೆದ್ದನ್ನರು | ೮೧ | ಪೆದ್ದಾಳ್ಳನಾಯ್ಕನಾರು |
| ೮೨ | ಪೊಟ್ಟಪೊಲ್ಲಲೋರು | ೮೩ | ಪೋತರಾಜಲರು | ೮೪ | ಬಂಗೇರಟ್ಟಿಯವರು |
| ೮೫ | ಬಂಜಗೆರೆಯವರು | ೮೬ | ಬಲ್ಲಾಳವರು | ೮೭ | ಬಲ್ಲೆದವರು |
| ೮೮ | ಬಸವನವರು | ೮೯ | ಬಿಜ್ಜಡ್ಲಾರು | ೯೦ | ಬಿಲ್ಲಿನವರು |
| ೯೧ | ಬಿಲ್ಲಿನಸೂರರು | ೯೨ | ಬುಟುಕಲಾರು | ೯೩ | ಬುಡ್ಡಬೋರನರು |
| ೯೪ | ಬುಲ್ಲಡ್ಲಾರು | ೯೫ | ಬೊಗ್ಗಲೊರು | ೯೬ | ಬೊಮ್ಮದವರರು |
| ೯೭ | ಬೋಸೇನಾಯ್ಕರು | ೯೮ | ಮಲ್ಲಿನಾಯಕನಾರು | ೯೯ | ಮಳೆಲಾರು |
| ೧೦೦ | ಮಾಗೇಲಾರು | ೧೦೧ | ಮಾಚಿಕಲ್ಲು | ೧೦೨ | ಬುಟುಕಲಾರು |
| ೧೦೩ | ಮೇಕೇಲಾರು | ೧೦೪ | ಯಮಡಲವರು | ೧೦೫ | ಯಮ್ಮೇಲಾರು |

| | | | | | |
|---|---|---|---|---|---|
| ೧೦೬ | ಯರಗಾಟನಾಯ್ಕನಾರು | ೧೦೭ | ಯರಗಾಟರು | ೧೦೮ | ಯರಗೋತ್ಲಾರು |
| ೧೦೯ | ಯರಪಾಮುಡ್ಲಾರು | ೧೧೦ | ಯರಬಾಲನಾಯನಾರು | ೧೧೧ | ಯರಬೊಮ್ಮನವರು |
| ೧೧೨ | ಯರ್ರಬೋತ್ಲಾರು | ೧೧೩ | ಯರಮಂಚಲವರು | ೧೧೪ | ಯರಮಂಚನಾಯಕರು |
| ೧೧೫ | ಯಾಕಲೋರು | ೧೧೬ | ರಂಗನಾಥರು | ೧೧೭ | ರಂಗಯಿಚ್ಚಿಯವರು |
| ೧೧೮ | ರಾಜಪುತ್ರರು | ೧೧೯ | ರಾಜಧಾನಿಯವರು | ೧೨೦ | ರಾಜಬುಟಕಲವರು |
| ೧೨೧ | ರಾಜ್ಯಂಗದವರು | ೧೨೨ | ರಾಣಿಗಳವರು | ೧೨೩ | ರಾಮಂಕಣದವರು |
| ೧೨೪ | ರಾರಪೋರವರು | ೧೨೫ | ಲಸ್ಮೇಲರು | ೧೨೬ | ಲಿಂಗದವರು |
| ೧೨೭ | ಶೆಟ್ಟಿಲವರು | ೧೨೮ | ಸನ್ನಲವರು | ೧೨೯ | ಸಮುದ್ರವರು |
| ೧೩೦ | ಸಾಕೇಲವರು | ೧೩೧ | ಸಾತ್ವಿಕರು | ೧೩೨ | ಸಾಮಂತರು |
| ೧೩೩ | ಸಿನಮಂಗಲವರು | ೧೩೪ | ಸಿದ್ದಿಪಲ್ಲಿಬುಟುಕಲು | ೧೩೫ | ಸೂರ್ಯವಂಶದವರು |
| ೧೩೬ | ಸೆಟ್ಟೆಲವರು | ೧೩೭ | ಹಬ್ಬಲವರು(ಅಬ್ಲಾರು) | | |

ಮ್ಯಾಸಬೇಡರಲ್ಲಿ ಮೇಲೆ ಹೇಳಿದಂತೆ ನೂರಾರು ಬೆಡಗುಗಳು ಇದ್ದರೂ ಸಹ ಪ್ರಮುಖವಾಗಿ ಈ ಏಳು ಬೆಡಗುಗಳನ್ನು ಗುರುತಿಸುತ್ತಾರೆ.

| ಕ್ರ ಸಂ | ಬೆಡಗುಗಳು | ಪೆಟ್ಟಿಗೆ ದೇವರುಗಳು |
|---|---|---|
| ೧ | ಮಳೇಲಾರು | ಓಬಳೇಶ್ವರ/ ಓಬಳದೇವರು/ ಅಹೋಬಳೇಶ್ವರ |
| ೨ | ಎನುಮಲಾರು | ಗಾದ್ರಿಪಾಲನಾಯಕ |
| ೩ | ಮಂದ್ಲಾರು | ಓಬಳದೇವರು |
| ೪ | ಪೂಲಾರು | ಗುಂಡು ಬೋರೇದೇವರು |
| ೫ | ಬುಟುಗ್ಲಾರು | ಮಾರಮ್ಮ |
| ೬ | ಪುಟ್ಟಿ ಪುಲ್ಲಾರು | ಬೋರೇದೇವರು |
| ೭ | ಕಾಮಗೇತ್ಲಾರು | ಸೂರಪ್ಪ ದೇವರು |

ಈ ಏಳು ಬೆಡಗುಗಳಲ್ಲಿ ಕಂಪಳದೇವರ ಹಟ್ಟಿಯಲ್ಲಿ ಎನುಮ್ಲಾರು(ಎನುಮಲಾರು), ಮಂದ್ಲಾರು(ಮಂದಲಾರು), ಮಳೇಲಾರು ಎಂಬ ಮೂರು ಬೆಡಗಿನವರಿದ್ದಾರೆ ಈ ಮೂರು ಬೆಡಗುಗಳಲ್ಲಿ ಅನೇಕ ಉಪ ಪಂಗಡಗಳಿವೆ. ಕಂಪಳದೇವರ ಹಟ್ಟಿಯಲ್ಲಿನ ಬೇಡರ ಉಪ ಪಂಗಡಗಳು ಬಹುತೇಕ ಅವರ ಸಾಕು ದನ ಕರುಗಳ ಹೆಸರಿನಲ್ಲಿಯೇ ಇರುವುದನ್ನು ನೋಡಬಹುದು. ಮ್ಯಾಸಬೇಡರ ಮೂಲ ವೃತ್ತಿ ಬೇಟೆ ಎಂದು ಹೇಳಬಹುದಾದರೂ ಆ ಸಂಬಂಧದ ಆಚರಣೆಗಳು ನಿತ್ಯದ ಬದುಕಿನಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಆದರೆ ಬೇಡರ ಪ್ರಮುಖ ಕಸುಬು ಪಶುಪಾಲನೆ ಆಗಿತ್ತು ಎಂಬುದಕ್ಕೆ

ಇಂದಿಗೂ ಅವರು ಆಚರಿಸುವ ಆಚರಣೆ ಮತ್ತು ಅವರು ತಮ್ಮ ಬೆಡಗುಗಳನ್ನು ಕರೆದುಕೊಳ್ಳುವ ಹೆಸರುಗಳಿಂದ ಖಚಿತವಾಗುತ್ತದೆ. ಈ ಹಟ್ಟಿಯ ಬೇಡರು ಕೇವಲ ದನಗಾಯಿಗಳು ಮಾತ್ರವಲ್ಲದೆ ಕುರಿ, ಮೇಕೆ, ಎಮ್ಮೆಗಳನ್ನು ಸಾಕುತ್ತಿದ್ದಾರೆ.

ದನಕರುಗಳಿಗೆ ಮೇವು ನೀರು ಅರಸುತ್ತಾ ವಲಸೆ ಬಂದ ಬೇಡರ ಒಂದೊಂದು ಗುಂಪು ಒಂದೊಂದು ಸಾಕು ಪ್ರಾಣಿಗಳನ್ನು ಪಾಲನೆ ಮಾಡುವ ಹೊಣೆ ಹೊತ್ತಂತೆ ಕಾಣುತ್ತದೆ. "ಹಸುಗಳ ಪಾಲನೆ ಒಂದು ಗುಂಪಿನವರದಾದರೆ ಎತ್ತುಗಳ ಪಾಲನೆ ಒಬ್ಬರದು, ಕರುಗಳ ಪಾಲನೆ ಮತ್ತೊಬ್ಬರದು ಕುರಿ ಮೇಕೆಗಳ ಪಾಲನೆ ಒಬ್ಬರದಾದರೆ ಅವುಗಳ ಮರಿಗಳ ಪಾಲನೆ ಮತ್ತೊಬ್ಬರದು ಹೀಗೆ ಪಶುಪಾಲನೆಗೆ ಸಂಬಂಧಿಸಿದ ಕೆಲಸವನ್ನು ನಿರ್ವಹಿಸಲು ಒಬ್ಬೊಬ್ಬ ವ್ಯಕ್ತಿ ಮೀಸಲಾಗಿರುತ್ತಿದ್ದರು, ಪ್ರತಿಯೊಬ್ಬ ವ್ಯಕ್ತಿಯೂ ನಿರ್ವಹಿಸುತ್ತಿದ್ದ ವೃತ್ತಿಯೇ ಮುಂದೆ ಆ ಸಂತತಿಯ ಅಥವಾ ಅವರವರ ಕುಲಗಳ ಹೆಸರಾಗಿ ರೂಢಿಗೆ ಬಂದಿರುವುದನ್ನು ಮನಗಾಣಬಹುದು"[೧೮]. ತೆಲುಗು ಮೂಲದವರಾದ ಇವರ ಬೆಡಗುಗಳು ಹೆಚ್ಚು ತೆಲುಗಿನಲ್ಲೇ ದೊರೆಯುತ್ತವೆ. ಹಟ್ಟಿಯಲ್ಲಿನ ಬೇಡರ ಉಪಪಂಗಡಗಳು ಅದರಲ್ಲೂ ಪಶುಪಾಲನಾ ಹಿನ್ನೆಲೆಯ ಬೆಡಗುಗಳೆಂದರೆ,

೧ ಗೊಡ್ಲಾರು=ಕುರಿಯವರು---ಕುರಿಗಳನ್ನು ಪಾಲನೆ ಮಾಡುವವರು

೨ ಎದ್ಲಾರು=ಎತ್ತಿನವರು----ಎತ್ತುಗಳನ್ನು ಪಾಲನೆ ಮಾಡುವವರು

೩ ಪಡ್ಲಾರು= ಮಣಕ------ಆಕಳ ಮಣಕ ಕಾಯುವವರು

೪ ಎನುಮಲಾರು=ಎಮ್ಮೆಯವರು---ಎಮ್ಮೆಗಳನ್ನು ಪಾಲನೆ ಮಾಡುವವರು

೫ ಪೇಯಲಾರು=ಕರುವಿನವರು---ಕರುಗಳನ್ನು ನೋಡಿಕೊಳ್ಳುವವರು

೬ ಪೋತ್ಲಾರು= ಓತಿನವರು---ಓತುಗಳನ್ನು ಪಾಲನೆ ಮಾಡುವವರು

೭ ಮಂದ್ಲಾರು=ಮಂದೆಯರು---ಕುರಿ ದನಗಳ ಮಂದೆಯಲ್ಲಿ ಮಲಗುತ್ತಿದ್ದವರು

೮ ದ್ಯಾವರೆದ್ಲಾರು=ದೇವರ ಎತ್ತುಗಳನ್ನು ಕಾಯುವವರು

೯ ದಡ್ಡೇದ್ಲಾರು= ದೊಡ್ಡ ಎತ್ತಿನವರು, ನಲ್ಲ ಬೋತ್ಲಾರು=ಕರಿ ಓತಿನವರು, ಯರ್ರಬೋತ್ಲಾರು=ಕೆಂಪು ಓತಿನವರು, ಗಂಪ್ಲಾರು=ಪುಟ್ಟಿಯವರು, ಬಂತ್ಲಾರು ಮುಂತಾದ ಬೆಡಗಿನವರಿದ್ದಾರೆ.

ಕಂಪಳದೇವರ ಹಟ್ಟಿಯಲ್ಲಿ ಗುಗ್ಗರಿ ಹಬ್ಬ, ಮುಂಗಾರಿ ಹಬ್ಬ, ದೀಪಾವಳಿ ಹಬ್ಬ ಮುಂತಾದ ದೈವಕಾರ್ಯಗಳಲ್ಲಿ ಒಂದೊಂದು ಬೆಡಗಿನವರು ಒಂದೊಂದು ಕೆಲಸ ಕಾರ್ಯ ಮಾಡುವ ನಿಯಮವಿದೆ. ದೇವರ ಪೆಟ್ಟಿಗೆಯನ್ನು ಹೋರುವುದು ಪಟ್ಟದ ಪೂಜಾರಿಯ ಕೆಲಸವಾದರೆ ದೇವರ ಪೂಜೆಯನ್ನು ಮಾಡುವುದು ನಗರಿ ಮನೆಯವರ ಕೆಲಸ, ಹಾಗೆಯೇ ಪೂಜೆಯ ವೇಳೆ ಧಗಮು ಬಡಿಯುವವರನ್ನು ಧಘಮು ಪೂಜಾರಿ ಎಂದು ಕರೆಯುತ್ತಾರೆ, ಹಬ್ಬದ ದಿನ ಪಟ್ಟದ ಪೂಜಾರಿಗೆ ನೀರು ಕಾಯಿಸಿ

ಸ್ನಾನ ಮಾಡಿಸುವವರು ಮುಡೇಲಾರು ಬೆಡಗಿನವರು, ದೇವರ ಮಂಚವನ್ನು ಹೋರುವವರು ಗೋಸೇಲಾರು, ಹಬ್ಬದ ದಿನ ಮೂರು ಮಂದಿ ನಾಯಕರಿಗೆ ಅವರು ಕುಳಿತ ಸ್ಥಳದಲ್ಲಿ ಬೆಂಕಿ ಹಾಕಿ ಬೆಳಕು ಮಾಡುವವರು ಮುಡೇಲಾರು ಬೆಡಗಿನವರು, ದೇವರಿಗೆ ಬಿಟ್ಟ ಕುರಿಗಳನ್ನು ಕಾಯುವವರು ದೇವರ ಕುರಿಯವರು ಎಂಬ ಪಂಗಡದವರು, ದೇವರ ಹುಂಡಿಯನ್ನು ಹಬ್ಬದ ದಿನ ಕಾಯುವವರು ಯರ್ರಮೊತ್ಲಾರು ಪಂಗಡದವರು, ಹೀಗೆ ಹಟ್ಟಿಯಲ್ಲಿ ಯಾವುದೇ ಧಾರ್ಮಿಕ ಆಚರಣೆಗಳು ಜರುಗಿದರೆ ಒಂದೊಂದು ಬೆಡಗಿನವರು ಪರಂಪರೆಯಿಂದ ಅನುಸರಿಸಿಕೊಂಡು ಬಂದಿರುವಂತೆ ತಮ್ಮ ಪಾಲಿನ ಕೆಲಸ ಅಥವಾ ಜವಾಬ್ದಾರಿಗಳನ್ನು ನೆರವೇರಿಸುತ್ತಾರೆ. ಹೀಗೆ ಮ್ಯಾಸಬೇಡರಲ್ಲಿ ಹಲವಾರು ಉಪಪಂಗಡಗಳಿದ್ದು ಅವುಗಳನ್ನು ಬೆಡಗುಗಳೆಂದು ಕರೆಯುತ್ತಾರೆ.

### ೨.೩.೪ ಉಡುಗೆ ತೊಡುಗೆಗಳು

ಯಾವುದೇ ಒಂದು ಸಮುದಾಯದ ಉಡುಗೆ-ತೊಡುಗೆಯನ್ನು ನೋಡಿ ಆ ಸಮುದಾಯದ ಸಂಸ್ಕೃತಿ, ಸಾಮಾಜಿಕ ಹಿನ್ನೆಲೆಯನ್ನು ತಿಳಿಯಬಹುದು. "ಪ್ರಾಚೀನ ಕಾಲದಿಂದಲೂ ಗ್ರಾಮೀಣರು ಬಳಸುತ್ತಿದ್ದ ಉಡುಗೆ-ತೊಡುಗೆಗಳು ಅವರ ವೃತ್ತಿಗೆ, ವಾತಾವರಣಕ್ಕೆ ತಕ್ಕಂತೆ ರೂಪಗೊಳ್ಳುತ್ತಿದ್ದವು. ಮೊದಮೊದಲು ಕೇವಲ ಮೈ ಮುಚ್ಚುವುದಕ್ಕಾಗಿ ರೂಪಗೊಂಡ ಈ ಉಡುಪು-ತೊಡುಪುಗಳು ಕಾಲಕ್ರಮೇಣ ಸೌಂದರ್ಯದ ಆ ಮೂಲಕ ಉಂಟಾಗುವ ಸಂತೋಷದ ದೃಶ್ಯಗಳನ್ನು ಒಳಗೊಳ್ಳುತ್ತಾ ಪರಿಷ್ಕರಿಸಲ್ಪಡುತ್ತಾ ಹೋಗಿ ಇತ್ತೀಚೆಗೆ ಅಗತ್ಯಕ್ಕಿಂತ ಹೆಚ್ಚಿಗೆ ಅಂದ ಚಂದ ಮತ್ತು ಕಲಾತ್ಮಕತೆಗೆ ಹೆಚ್ಚು ಹೊತ್ತುಕೊಡುತ್ತಾ ರೂಪಗೊಂಡು ಪರಾಕರ್ಷಣೆಯ ಪ್ರಮುಖ ಮಾಧ್ಯಮಗಳಾಗಿ ಮಾರ್ಪಟ್ಟಿವೆ"[೧೯]. ಆಯಾ ಪ್ರದೇಶದ ಭೌಗೋಳಿಕ ಪರಿಸರ ಹವಾಮಾನ ಸಾಂಸ್ಕೃತಿಕ ಹಿನ್ನೆಲೆ, ನಂಬಿಕೆ ಸಂಪ್ರದಾಯಗಳು, ಚಾರಿತ್ರಿಕ ಪ್ರಭಾವಗಳು, ಧರ್ಮ ಹಾಗೂ ಉದ್ಯೋಗದ ಸ್ವರೂಪಗಳೂ ಸಹ ಉಡುಗೆ ತೊಡುಗೆಗಳನ್ನು ನಿರ್ಧರಿಸುತ್ತವೆ. ವ್ಯಕ್ತಿಯ ವಯೋಮಾನ, ಲಿಂಗ, ಇವುಗಳನ್ನು ಕೂಡಾ ಅದು ಅವಲಂಬಿಸಿರುತ್ತದೆ. ದಿನನಿತ್ಯದ ಉಡುಗೆಗಳು, ವಿಶೇಷ ಸಂದರ್ಭದ ಉಡುಗೆಗಳು, ಧಾರ್ಮಿಕ ಉಡುಪುಗಳು, ಕಲಾಪ್ರದರ್ಶನದ ಉಡುಗೆಗಳು ಹೀಗೆ ಸಂದಂರ್ಭಕ್ಕನುಸಾರವಾಗಿ ಇವು ವೈವಿಧ್ಯತೆ ಪಡೆಯುತ್ತವೆ, ಈ ಹಿನ್ನೆಲೆಯಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ವೇಷಭೂಷಣ ನೋಡಿದರೆ ಅವರ ಸಾಂಸ್ಕೃತಿಕ, ಸಾಮಾಜಿಕ ಹಿನ್ನೆಲೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಪರಂಪರೆಯಿಂದಲೂ ಇಂದಿನವರೆಗೂ ಇಲ್ಲಿನ ಹಿರಿಯರು ತೊಡುವ ಉಡುಪೆಂದರೆ ಬಿಳಿಯ ಚಡ್ಡಿ-ಚೆಲ್ಲಣ, ಬದ್ದು, ಕಡಗ, ತಲೆಯ ಮೇಲೆ ರುಮಾಲು ಅಷ್ಟೆ, ಅಂಗಿ ತೊಡುವುದಿಲ್ಲ, ಹೆಗಲಮೇಲೆ ಕರಿಕಂಬಳಿ ಹೊದ್ದಿರುತ್ತಾರೆ. ಆದರೆ ಈಗೀಗ ಅದು ಬದಲಾಗಿದೆ ಯುವಕ ಯುವತಿಯರು ಇಂದಿನ ಆಧುನಿಕತೆಯ ಉಡುಪುಗಳನ್ನು ಉಡುತ್ತಿದ್ದಾರೆ. ಇಂದು ಹಟ್ಟಿಯಲ್ಲಿ ಹಿರಿಯರು ಮಾತ್ರ ಪಾರಂಪರಿಕ ವೇಷಭೂಷಣ ಅನುಸರಿಸುತ್ತಿದ್ದಾರೆ.

**ಗಂಡಸರ ಉಡುಗೆ ತೊಡುಗೆ**

ಈ ಹಿಂದೆ ಕಾಡಿನಲ್ಲಿ ಲಂಗೋಟಿ ಹಾಕಿಕೊಂಡು ಬರಿ ಮೈಯಲ್ಲಿ ಬೇಟೆಯಾಡುತ್ತಿದ್ದ ಇವರು ತೇಗದ ಎಲೆ, ತಾಳೆಯ ಗರಿ, ಜಿಂಕೆಯ ಚರ್ಮ, ಮೊಲದ ಚರ್ಮ, ನವಿಲುಗರಿ ಹಾಗೂ ಹುಲ್ಲಿನಿಂದ ಕಲಾತ್ಮಕವಾಗಿ ತಯಾರಿಸಿದ ವಸ್ತ್ರವನ್ನು ಧರಿಸುತ್ತಿದ್ದರು. ನಂತರ ಚಡ್ಡಿ, ಚೆಲ್ಲಣ, ಕಸೆ ಅಂಗಿ, ಸೊಂಟಕ್ಕೆ ಕಾಸಿ ದಟ್ಟಿ, ಹೆಗಲಿಗೆ ಕರಿಕಂಬಳಿ, ತಲೆಗೊಂದು ರುಮಾಲು, ಕಾಲಿಗೆ ಚರ್ಮದ ಗುಂಜಿ/ಮೆಟ್ಟು ಹಾಕಿಕೊಂಡು ಕೈಯಲ್ಲೊಂದು ಕೋಲು ಹಿಡಿಯುವುದು ಇವರ ಉಡುಪಾಯಿತು. ಆಧುನಿಕತೆಯ ಪ್ರಭಾವದಿಂದ ಈ ಉಡುಗೆ ತೊಡುಗೆಯಲ್ಲಿಯೂ ಬದಲಾವಣೆಯಾಗಿ ಇಂದು ಅಂಗಿ, ಟೀ ಶರ್ಟ, ಪ್ಯಾಂಟು, ಬರ್ಮೋಡಾ, ನೈಟ್ ಪ್ಯಾಂಟ್ ಮುಂತಾದ ಬಟ್ಟೆಗಳನ್ನು ತೊಡುತ್ತಿದ್ದಾರೆ. ಆದರೆ ಹಿರಿಯರು ಮಾತ್ರ ಇಂದಿಗೂ ಬರೀ ಮೈಯಲ್ಲೇ ಹೆಗಲ ಮೇಲೆ ಕರಿಕಂಬಳಿ ಹೊದ್ದು ಚೆಲ್ಲಣದಲ್ಲೇ ಇರುತ್ತಾರೆ.

**ಹೆಂಗಸರ ಉಡುಗೆ ತೊಡುಗೆ**

ಅಲಂಕಾರಕ್ಕೆ ಹೆಚ್ಚು ಮಹತ್ವ ಕೊಡದ ಹಟ್ಟಿಯ ಜನಪದರು ಸರಳವಾದ ಉಡುಗೆಗಳನ್ನು ಧರಿಸುತ್ತಿದ್ದಾರೆ. "ಬಹು ಹಿಂದೆ ಸಂಪ್ರದಾಯಸ್ಥ ಮ್ಯಾಸಬೇಡರ ಹೆಂಗಸರು ಕುಪ್ಪಸ ತೊಡುತ್ತಿರಲಿಲ್ಲ ಹದಿನಾರು ಮೊಳ ಉದ್ದದ ದಟ್ಟಿಸೀರೆ ಉಡುತ್ತಿದ್ದರು"[೨೦]. ಸಾಮಾನ್ಯವಾಗಿ ಇವರು ಕಾಲಿಗೆ ಚಪ್ಪಲಿ ಹಾಕುವುದಿಲ್ಲ. ಗಂಡ ಸತ್ತ ಹೆಣ್ಣುಮಕ್ಕಳಿಗೆ ಯಾವುದೇ ಶುಭ ಕಾರ್ಯಗಳಲ್ಲಿ ಪ್ರವೇಶ ನಿರಾಕರಿಸುತ್ತಾರೆ. ಹಟ್ಟಿಯಲ್ಲಿ ಇಂದಿಗೂ ಕೆಲ ಹಿರಿಯ ಮಹಿಳೆಯರು ಕುಪ್ಪಸ ತೊಡುವುದಿಲ್ಲ, ಕಾಡುಗೊಲ್ಲ ಹೆಂಗಸರಂತೆ ಹಿತ್ತಾಳೆಯ ಬದ್ದು ಕೈಯಲ್ಲಿ ಧರಿಸುತ್ತಿದ್ದರಂತೆ. ಆದರೆ ಈಗ ಅದು ಕಣ್ಮರೆಯಾಗಿದೆ. ಸೌಂದರ್ಯ ಮತ್ತು ಆರೋಗ್ಯದ ದೃಷ್ಟಿಯಿಂದ ವಿವಿಧ ಚಿತ್ರವುಳ್ಳ ಹಚ್ಚೆಗಳನ್ನು ಹಾಕಿಸಿಕೊಳ್ಳುತ್ತಾರೆ.

**ಆಭರಣಗಳು**

ಯಾವುದೇ ಒಂದು ಪ್ರದೇಶ ಅಥವಾ ಸಮುದಾಯದಲ್ಲಿ ಒಂದಲ್ಲಾ ಒಂದು ಬಗೆಯ ಆಭರಣಗಳು ವಿಶೇಷವಾಗಿ ಕಂಡುಬರುತ್ತವೆ. "ಇಟ್ಟರೆ ತೊಟ್ಟರೆ ಪುಟ್ಟಕ್ಕ ಚಂದ ಎಂಬ ಮಾತಿನಂತೆ ಸೌಂದರ್ಯಪ್ರಜ್ಞೆ ಆಭರಣಗಳನ್ನು ತೊಡುವುದರ ಹಿಂದೆ ಪ್ರಧಾನವಾಗಿ ಇದೆ ಎಂಬುದರಲ್ಲಿ ಸಂಶಯವಿಲ್ಲ"[೨೧]. ಸರಳ ಸೌಂದರ್ಯಕ್ಕೆ ಮಹತ್ವಕೊಡುತ್ತಿದ್ದ ಹಿಂದಿನವರಂತೆ ಇಂದಿನವರು ಸರಳ ಸೌಂದರ್ಯಕ್ಕೆ ಮಹತ್ವ ಕೊಡದೆ ಹೆಚ್ಚು ಹೆಚ್ಚಾಗಿ ಬಂಗಾರ ಬೆಳ್ಳಿಯ ಆಭರಣಗಳನ್ನು ಧರಿಸಿ ಸಿಂಗಾರಗೊಳ್ಳುತ್ತಿರುವುದು ಇಂದು ಎಲ್ಲಾಕಡೆ ಸಾಮಾನ್ಯವಾಗಿದೆ. ಸರಳ ಮತ್ತು ಸೌಂದರ್ಯಕ್ಕೆ ಹೆಸರಾದ ಹಟ್ಟಿಯ ಜನ ಆಭರಣಗಳಿಗೆ ಹೆಚ್ಚು ಮಹತ್ವ ಕೊಟ್ಟಿಲ್ಲ. ಆದರೂ ಕೆಲವು ಸರಳ ಆಭರಣಗಳನ್ನು ಧರಿಸುತ್ತಿದ್ದಾರೆ. ಇವರು ಧರಿಸುವ ಆಭರಣಗಳಲ್ಲಿ ಮಹಿಳೆಯರು ತೊಡುವ ಆಭರಣಗಳು, ಗಂಡಸರು ತೊಡುವ ಆಭರಣಗಳು, ಮಕ್ಕಳು ತೊಡುವ ಆಭರಣಗಳು ಎಂದು ವಿಭಾಗಿಸಿಕೊಂಡು ನೋಡಬಹುದು.

**ಗಂಡಸರ ಆಭರಣಗಳು**

ಪುರುಷರು ಹೆಚ್ಚು ಆಭರಣ ಬಳಸುವುದಿಲ್ಲ ಕೆಲವು ಹಿರಿಯರು ಮಾತ್ರ ಕೈಯಲ್ಲಿ ಬೆಳ್ಳಿ ಬದ್ದು, ಕಿವಿಗೆ ಬಂಗಾರದ ಹತ್ತಕಡಗ, ಮುರ, ಬೆರಳಿಗೆ ಉಂಗುರ ಹಾಕುತ್ತಾರೆ. ನೂಲಿನ ಉಡದಾರ ಕಟ್ಟುತ್ತಾರೆ. ಸೌಂದರ್ಯ ಮತ್ತು ಆರೋಗ್ಯದ ದೃಷ್ಟಿಯಿಂದ ಹಚ್ಚೆಹಾಕಿಸಿಕೊಳ್ಳುತ್ತಾರೆ. ಹಚ್ಚೆಯಲ್ಲಿ ತಮ್ಮ ಮನೆದೇವರ ಹೆಸರು, ಅಥವಾ ತಮಗೆ ಪ್ರಿಯವಾದವರ ಹೆಸರು ಅಥವಾ ತಮ್ಮ ವೃತ್ತಿ ಆಯುಧಗಳಾದ ಕೋಲು, ಕತ್ತಿ, ಗಣೆ, ಮುಂತಾದುವುಗಳನ್ನು ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಹಣೆಯಮೇಲೆ ವಿಭೂತಿ ಕುಂಕುಮ ಇಡುತ್ತಾರೆ.

**ಮಕ್ಕಳ ಆಭರಣಗಳು**

ದೊಡ್ಡವರಂತೆ ಮಕ್ಕಳಿಗೂ ಆಭರಣಗಳನ್ನು ತೊಡಿಸಿ ಅಂದ ಚೆಂದ ನೋಡುತ್ತಾರೆ. ಜನಪದರಲ್ಲಿ ಮಕ್ಕಳಿಗೆ ಆಭರಣಗಳನ್ನು ಹಾಕುವುದು ಸೌಂದರ್ಯಕ್ಕೆ ಅಥವಾ ಗೌರವ ಪ್ರತಿಷ್ಠೆಗಳಿಗಿಂತ ಮುಖ್ಯವಾಗಿ ಮಕ್ಕಳಿಗೆ ದೃಷ್ಟಿ ತಾಗದಿರಲೆಂದು, ಕೆಲವು ರೋಗ ಬಾರದಿರಲೆಂಬ ವೈದ್ಯಕೀಯ ನಂಬಿಕೆಗಳು ವಿಶೇಷವಾಗಿ ಮಕ್ಕಳ ಆಭರಣಗಳ ಹಿಂದಿರುವ ಉದ್ದೇಶವನ್ನು ಗಮನಿಸಬಹುದು.

ಮೂಗುಬಟ್ಟು:ಹೆಣ್ಣುಮಕ್ಕಳಿಗೆ ನಾಲ್ಕೈದು ವರ್ಷವಾಗುತ್ತಲೇ ಅವರ ಮೂಗನ್ನು ಚುಚ್ಚಿ ಮೂಗುಬಟ್ಟು, ನತ್ತು ಮುಂತಾದ ಮೂಗಿನ ಸಣ್ಣ ಆಭರಣಗಳನ್ನು ಮಾಡಿಸಿ ತೊಡಿಸುತ್ತಾರೆ.

ಮುರ:ಇವರಲ್ಲಿ ಮಗುವಿನ ಸೋದರ ಮಾವ ಮಗುವಿನ ಕಿವಿಯನ್ನು ಚುಚ್ಚಿ ಮುರ ತೊಡಿಸುವ ಪದ್ಧತಿ ಇದೆ ಆದರೆ ಇಂದು ಅಕ್ಕಸಾಲಿಗರಿಂದ ಕಿವಿ ಚುಚ್ಚಿಸುತ್ತಿದ್ದಾರೆ. ಮುರವನ್ನು ಸಾಮಾನ್ಯವಾಗಿ ಬೆಳ್ಳಿ, ಬಂಗಾರ ಪಂಚಲೋಹ ಅಥವಾ ತಾಮ್ರದ ತಂತಿಯಲ್ಲಿ ಮಾಡಿಸುತ್ತಾರೆ. ಮಕ್ಕಳು ಹುಟ್ಟಿದ ಮೂರನೇ ತಿಂಗಳಲ್ಲಿ ಮುರವನ್ನು ತೊಡಿಸುತ್ತಾರೆ.

ದಿಟ್ಟಿಮಣಿ ಸರ:"ದುಷ್ಟಶಕ್ತಿಗಳಿಂದ ಮಗುವನ್ನು ರಕ್ಷಿಸುವ ಸಲುವಾಗಿ ದಿಟ್ಟಿ(ದೃಷ್ಟಿ) ಮಣಿ ಸರವನ್ನು ಮಗುವಿಗೆ ತೊಡಿಸುವರು ಇದರಲ್ಲಿ ಹವಳ, ಗಜ್ಜುಗ, ಹುಲಿಯುಗುರು, ತಾಳಿ ಕಾಯಿ, ಬಾಲಿಮಣಿ, ನಾಮದ ಮಣಿ, ತಟ್ಟು ಮಣಿ, ತಾಮ್ರದ ತೂತಿನ ಬಿಲ್ಲೆ ಇವುಗಳಲ್ಲಿ ಕನಿಷ್ಠ ಐದು ಬಗೆಯ ವಸ್ತುಗಳಾದರೂ ಇರುತ್ತವೆ"[೨೨]. ಇವುಗಳನ್ನು ಸೇರಿಸಿ ಮಾಡಿರುವ ದಿಟ್ಟಿಮಣಿ ಸರವನ್ನು ಮಕ್ಕಳಿಗೆ ತೊಡಿಸುವುದರಿಂದ ಮಕ್ಕಳಿಗೆ ದೃಷ್ಟಿ ತಾಗುವುದಿಲ್ಲ.

ಮುರ:ಚಿಕ್ಕ ಮಗುವಿರುವಾಗಲೇ ಕಿವಿ ಚುಚ್ಚಿ ತೊಡಿಸುವ ಮುರುವಿಗೆ ಹುಟ್ಟು ಮುರ ಎಂದು ಹೆಸರು. ಮುರುವಿಗೆ ನಕ್ಷತ್ರ, ಚಂದ್ರ ಮುಂತಾದ ಆಕಾರದ ಪದಕಗಳನ್ನು ಸೇರಿಸುತ್ತಾರೆ. ಈ ಮುರುವಿನೊಂದಿಗೆ ಕಿವಿಯ ಮೇಲ್ಭಾಗದಲ್ಲಿ ಮೇಲ್ ಮುರ ಎಂಬ ಆಭರಣವನ್ನೂ ತೊಡಿಸುವುದುಂಟು ಇದು ಹುಟ್ಟು ಮುರವನ್ನು ಹೋಲುತ್ತದೆ.

ಕೊರಳ ಆಭರಣ:ಕೊರಳಿಗೆ ಬಂಗಾರ, ಬೆಳ್ಳಿಯ ದೊಡ್ಡ ಗಾತ್ರದ ಸರವನ್ನು ಧರಿಸುತ್ತಾರೆ. ಹಟ್ಟಿಯ ಮಹಿಳೆಯರು, ಪುರುಷರು ಧರಿಸುವ ಕೊರಳ ಹಾರಗಳಲ್ಲಿ ವಿವಿಧ ಪ್ರಕಾರಗಳನ್ನು

ನೋಡಬಹುದು. ಕಂಠಿಸರ, ಗುಂಡಿನ ಸರ, ಪವನ ಸರ, ಚಪಲ ಹಾರ, ಕಡ್ಡಿಸರ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ವಿಶೇಷ ಸಂದರ್ಭಗಳಲ್ಲಿ ಇವುಗಳನ್ನು ಧರಿಸುತ್ತಾರೆ. ನಿತ್ಯದ ಬಳಕೆಗೆ ಕೆಲವರು ಒಂದು ಎಳೆಯ ಬಂಗಾರದ ಚೈನನ್ನು ಧರಿಸುತ್ತಾರೆ, ಅದೂ ಅನುಕೂಲವಾಗಿ ಇರುವಂಥವರು ಮಾತ್ರ ಉಳಿದಂತೆ ಯಾರೂ ಹೆಚ್ಚು ಹಾರಗಳನ್ನು ಬಳಸುವುದಿಲ್ಲ.

ಸೊಂಟದ ಆಭರಣಗಳು: ಉಡದಾರವು ಗಂಡಸರ ಸೊಂಟದ ಆಭರಣವಾಗಿದೆ. ಅನುಕೂಲವಿದ್ದವರು ಬೆಳ್ಳಿಯ ಉಡುದಾರ ಮಾಡಿಸಿಕೊಳ್ಳುತ್ತಾರೆ. ಮಗುವಿದ್ದಾಗಲೇ ಉಡುದಾರವನ್ನು ಸೊಂಟಕ್ಕೆ ಕಟ್ಟಿರುತ್ತಾರೆ. ಉಡುದಾರ ಇಲ್ಲದ ಗಂಡಸು ಕತ್ತೆ ಅರಚುವುದನ್ನು ಕೇಳಿದರೆ ನಪುಂಸಕನಾಗುತ್ತಾನೆ ಎಂಬ ನಂಬಿಕೆ ನಮ್ಮ ಜನಪದರಲ್ಲಿದೆ. ಉಡುದಾರ ದುಷ್ಟಶಕ್ತಿಗಳಿಂದ ವ್ಯಕ್ತಿಯನ್ನು ರಕ್ಷಿಸುತ್ತದೆ ಎಂಬ ನಂಬಿಕೆಯೂ ಇರುವುದರಿಂದ ಉಡುದಾರದಲ್ಲಿ ಸಾಮಾನ್ಯವಾಗಿ ಮಾಗಾಯಿ, ತನಿಮಣಿ, ಗಜ್ಜಗ, ನಾಯಿಕಾಸು ಇತ್ಯಾದಿ ವಸ್ತುಗಳನ್ನು ಪೋಣಿಸಿ ಕಟ್ಟುತ್ತಾರೆ. ವ್ಯಕ್ತಿ ಸತ್ತಾಗ ಅವನ ಉಡುದಾರವನ್ನು ಹರಿದು ಹಾಕಿ ಶವಸಂಸ್ಕಾರ ಮಾಡುತ್ತಾರೆ.

ತೋಳಿನ ಆಭರಣ: ಹಿಂದಿನ ಕಾಲದಲ್ಲಿ ಪುರುಷರು ತೋಳ್ಬಳೆ, ಬಾಹುಬಂಧ, ಕೇಯೂರ, ಬಾಪುರಿ ಮೊದಲಾದವುಗಳನ್ನು ಧರಿಸುತ್ತಿದ್ದರು ಎಂದು ತಿಳಿದು ಬರುತ್ತದೆ. ಇಂದಿಗೂ ಕೆಲವು ಹಿರಿಯ ವ್ಯಕ್ತಿಗಳ ತೋಳಲ್ಲಿ ತಾಮ್ರದ ಅಥವಾ ಬೆಳ್ಳಿಯ ಬಳೆಯನ್ನು ಧರಿಸಿರುವುದನ್ನು ಕಾಣಬಹುದು.

ಕೈ ಆಭರಣಗಳು: ಮಕ್ಕಳ ಮುಂಗೈಗೆ ಹಾಲ್ಬಳ್ಳಿ, ಮತ್ತಿತರ ಬೇರುಗಳಿಂದ ಮಾಡಿದ ಬಳ್ಳಿಗಳು, ಕುರಿ ಉಣ್ಣೆಯಿಂದ ತಯಾರಿಸಿದ ಕಡಗಗಳು, ಕಪ್ಪುದಾರ, ಕರಿಮಣಿ ಕಟ್ಟುಗಳನ್ನು ತೊಡಿಸುತ್ತಾರೆ "ಮಗುವಿಗೆ ದೃಷ್ಟಿತಾಗದಿರಲೆಂದು ಮುಂಗೈ ಕ್ರಮಬದ್ಧವಾಗಿ ಬೆಳೆಯಲೆಂಬ ಉದ್ದೇಶ ಈ ಬಗೆಯ ಆಭರಣಗಳ ತೊಡಿಸುವಿಕೆಯ ಹಿಂದೆ ಇದೆ"[೨೨]. ಬೆಳ್ಳಿ ಉಂಗುರಗಳನ್ನು ಬಳಸುತ್ತಾರೆ ಬೆಳ್ಳಿ ದೇಹಕ್ಕೆ ಹಿತವೆಂಬ ನಂಬಿಕೆ ಇರುವುದರಿಂದ ವೈಜ್ಞಾನಿಕವಾಗಿ ಅದು ನಿಜವೂ ಸಹ ಆಗಿರುವುದರಿಂದ ಇವರಲ್ಲಿ ಈಗಲೂ ಮಗುವಿಗೆ ಮೊದಲು ತೊಡಿಸುವ ಆಭರಣವೇ ಬೆಳ್ಳಿಯುಂಗುರ. ತಂದೆ ಹಾಗೂ ಬಂಧುಗಳು ಮೊದಲ ಸಲ ಮಗುವಿನ ಮುಖ ನೋಡಲು ಬರುವಾಗ ಬೆಳ್ಳಿ ಉಂಗುರವನ್ನು ತರಬೇಕೆಂಬ ಸಂಪ್ರದಾಯವಿದೆ.

ಹಾಲ್ಗಡಗ: ಮಕ್ಕಳ ಕಾಲಿಗೆ ಬೆಳ್ಳಿಯ ಕಡಗ ಹಾಕುತ್ತಾರೆ ಅದನ್ನು ಹಾಲ್ಗಡಗ ಎಂದು ಕರೆಯುತ್ತಾರೆ. ಮಕ್ಕಳಿಗೆ ಹಾಕುವ ಕಡಗ, ಚೈನುಗಳಿಗೆ ಸಾಮಾನ್ಯವಾಗಿ ಗೆಜ್ಜೆಯನ್ನು ಅಳವಡಿಸಿರುತ್ತಾರೆ.

ಹೆಣ್ಣುಮಕ್ಕಳ ಆಭರಣಗಳು

ಆರ್ಥಿಕವಾಗಿ ದುಸ್ಥಿತಿಯಲ್ಲಿರುವ ಹಟ್ಟಿಯ ಜನಪದರು ಅದರಲ್ಲೂ ಮಹಿಳೆಯರು ತಮ್ಮ ಅಲಂಕಾರಕ್ಕೆ ಆಭರಣಗಳಿಗೆ ಅಷ್ಟಾಗಿ ಮಹತ್ವ ಕೊಡದಿದ್ದರೂ ಸರಳ ಆಭರಣಗಳನ್ನು ತಮ್ಮ ಅಲಂಕಾರಕ್ಕೆ ಬಳಸುತ್ತಾರೆ. ಅವು ಹೆಚ್ಚಾಗಿ ಬೆಳ್ಳಿಯ ಆಭರಣಗಳೇ ಆಗಿರುತ್ತವೆ. ಇವರು ಬಳಸುವ ಆಭರಣಗಳೆಂದರೆ

ಬಂಗಾರದ ಓಲೆ, ಬುಗಡಿ ಕಡ್ಡಿ, ತೋಳ ಬಂದಿ, ಗೆಜ್ಜೆಪಟ್ಟಿ, ಚಿಂತಾಕ್, ಅಡ್ಡಿಕೆ, ಕಾಸಿನ ಸರ, ಪದಕ, ಮೋಟಿ, ಬೆಳ್ಳಿಕಡಗ, ಜುಮುಕಿ, ಉಂಗುರ, ಸರ, ಮಾಂಗಲ್ಯಸರ, ಬಳೆ ಮೊದಲಾದ ಆಭರಣಗಳನ್ನು ಧರಿಸುತ್ತಾರೆ.

**ಕಿವಿಯ ಆಭರಣ**

ಹಿಂದಿನ ನಮ್ಮ ಜನಪದರು ಕಿವಿಯೊಂದಕ್ಕೆ ಏಳಕ್ಕಿಂತ ಹೆಚ್ಚು ಆಭರಣಗಳನ್ನು ಧರಿಸುತ್ತಿದ್ದರೆಂದು ತಿಳಿದು ಬರುತ್ತದೆ ಅವುಗಳೆಂದರೆ,

ಓಲೆ:ಕಿವಿಯ ಆಭರಣಗಳಲ್ಲಿ ಅತ್ಯಂತ ಮುಖ್ಯವಾದ ಆಭರಣ ಓಲೆ. ಓಲೆಯನ್ನು ಹಿಂದಿನ ಕಾಲದಲ್ಲಿ ಓಲೆಗರಿಯಿಂದ ಮಾಡಿರುತ್ತಿದ್ದರು ಎನ್ನುತ್ತಾರೆ. ಈಗ ಬಂಗಾರ, ಮುತ್ತು, ವಜ್ರ, ಹವಳ, ರತ್ನ ಮುಂತಾದವುಗಳನ್ನು ಬಳಸಿ ರಚಿಸಲಾಗುತ್ತಿದೆ. ಹಟ್ಟಿಯ ಹೆಣ್ಣುಮಕ್ಕಳು ಬಂಗಾರದ ಓಲೆಗಳನ್ನು ಧರಿಸುತ್ತಿದ್ದಾರೆ.

ಜುಮುಕಿ:"ಸೂಕ್ಷ್ಮ ಕೆತ್ತನೆಯುಳ್ಳ ಗಂಟೆಯಾಕಾರದ ಈ ಆಭರಣವನ್ನು ಸರಪಣಿಯ ಮೂಲಕ ಕಿವಿಯೋಲೆಗೆ ಜೋಡಿಸಿ ಅದು ಜೋಲುವಂತೆ ಮಾಡುತ್ತಾರೆ"[೨೪]. ಹಟ್ಟಿಯ ಬಹುತೇಕ ಮಹಿಳೆಯರು ಈ ಬಗೆಯ ಜುಮುಕಿಗಳನ್ನು ಧರಿಸುತ್ತಾರೆ.

ಲೋಲಾಕು:ಲೋಲಾಕು ಚಪ್ಪಟೆಯಾಗಿರುತ್ತದೆ ಮುತ್ತು ಹವಳ ಇಲ್ಲವೆ ಬಂಗಾರದಿಂದ ಮಾಡಿದ ರಚನೆಯಾಗಿದ್ದು ಕಿವಿಯ ಓಲೆಯ ಕಡ್ಡಿಗೆ ಸರಪಳಿಯ ಮೂಲಕ ಅದನ್ನು ಜೋಡಿಸಿರುತ್ತಾರೆ. ಕಿವಿಯ ಓಲೆಗೆ ಹೊಂದಿಕೊಳ್ಳುವ ಸ್ವರೂಪದಲ್ಲಿಯೇ ಲೋಲಾಕಿನ ರಚನಾ ವಿನ್ಯಾಸವಿರುತ್ತದೆ.

**೨.೩.೭ ಶೈಕ್ಷಣಿಕ ಸ್ಥಿತಿಗತಿ**

'ವಿದ್ಯೆ ಉಳ್ಳವನ ಮುಖವು ಮುದ್ದು ಬರುವಂತಿಕ್ಕು, ವಿದ್ಯೆ ಇಲ್ಲದವನ ಬರಿ ಮುಖವು ಹಾಳೂರು ಹದ್ದಿನಂತಿಕ್ಕು' ಎಂಬ ಸರ್ವಜ್ಞನ ಮಾತಿನಂತೆ ಮಾನವ ಸಮಾಜದಲ್ಲಿ ಶಿಕ್ಷಣ ತುಂಬಾ ಅಗತ್ಯ ಸಾಧನವಾಗಿದೆ. ಇಂದಿನ ಆಧುನಿಕ ಸಮಾಜದಲ್ಲಿ ಶಿಕ್ಷಣವು ಸಮಾಜದ ಒಂದು ಅವಿಭಾಜ್ಯ ಅಂಗವಾಗಿದೆ ಶಿಕ್ಷಣವಿಲ್ಲದ ಸಮಾಜವನ್ನು ಇಂದು ಊಹಿಸುವುದಕ್ಕೂ ಆಗುವುದಿಲ್ಲ. ಆದರೆ ಇಂದಿಗೂ ಸಹ ಶಿಕ್ಷಣ ಪಡೆಯದಿರುವ ಹಳ್ಳಿಗಳು, ಹಟ್ಟಿಗಳು, ಸಮುದಾಯಗಳು ನಮಗೆ ಸಾಕಷ್ಟು ಕಾಣಸಿಗುತ್ತವೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಈ ಮೇಲೆ ಹೇಳಿದ ಮಾತು ಕಂಪಳದೇವರ ಹಟ್ಟಿಯ ಜನಪದರಿಗೆ ಹೊರತಾದುದಲ್ಲ, ಹಟ್ಟಿಯ ಜನರಲ್ಲಿ ಶೈಕ್ಷಣಿಕ ಸ್ಥಿತಿ ಇನ್ನು ಸುಧಾರಿಸುವ ಹಂತದಲ್ಲಿದೆ. ಈ ಹಟ್ಟಿಯಲ್ಲಿ ಒಂದು ಸರಕಾರಿ ಶಾಲೆಯಿದ್ದು ಅದು ಒಂದನೇ ತರಗತಿಯಿಂದ ಎಂಟನೇ ತರಗತಿಯವರೆಗೆ ಕಾರ್ಯನಿರ್ವಹಿಸುತ್ತಿದೆ. ಈ ಶಾಲೆಯಿಂದ ಇಲ್ಲಿನ ಮಕ್ಕಳು ಸ್ವಲ್ಪಮಟ್ಟಿನ ಶಿಕ್ಷಣ ಪಡೆಯುವಂತಾಗಿದೆ ಆದರೂ ಸಹ ಇನ್ನೂ ಶೈಕ್ಷಣಿಕಮಟ್ಟ ಹಟ್ಟಿಯಲ್ಲಿ ಸುಧಾರಿಸಿಲ್ಲ ಎಂದೇ ಹೇಳಬಹುದು ಅದಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ಕೋಷ್ಟಕ ನೋಡಬಹುದು

**ಕೋಷ್ಟಕ ೨.೪– ಕಂಪಳದೇವರ ಹಟ್ಟಿಯ ಜನರ ಸಮುದಾಯವಾರು ಶೈಕ್ಷಣಿಕ ಪ್ರಮಾಣ**

| ಸಮುದಾಯಗಳು | ಕುಟುಂಬಗಳು | ಸಾಕ್ಷರಸ್ಥರು | | | ಸಾಕ್ಷರರ್ಹರು | | | ನಿರಕ್ಷರಿಗಳು | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಆದಿ ಕರ್ನಾಟಕ | ೪೩ | ೧೧೨ | ೯೯ | ೨೧೧ | ೪೮ | ೩೦ | ೭೮ | ೬೪ | ೬೯ | ೧೩೩ |
| ಲಿಂಗಾಯತರು | ೭ | ೨೨ | ೨೫ | ೪೭ | ೧೬ | ೧೦ | ೨೬ | ೬ | ೧೫ | ೨೧ |
| ನಾಯಕ | ೨೬೩ | ೫೩೮ | ೫೪೩ | ೧೦೮೧ | ೨೨೭ | ೨೧೪ | ೪೪೧ | ೩೧೧ | ೩೨೯ | ೬೪೦ |
| ಒಟ್ಟು | ೩೧೩ | ೬೭೨ | ೬೬೭ | ೧೩೩೯ | ೨೯೧ | ೨೫೪ | ೫೪೫ | ೩೮೧ | ೪೧೩ | ೭೯೪ |

**ಲಂಬ ಚಿತ್ರ ೨.೧– ಕಂಪಳದೇವರ ಹಟ್ಟಿಯ ಜನರ ಸಮುದಾಯವಾರು ಶೈಕ್ಷಣಿಕ ಪ್ರಮಾಣ**




ಕೋಷ್ಟಕ ೨.೪ ರಲ್ಲಿ ಕಂಪಳದೇವರ ಹಟ್ಟಿಯಲ್ಲಿನ ಜನರಲ್ಲಿನ ಶೈಕ್ಷಣಿಕ ಮಟ್ಟ ತಿಳಿಯಲು ಹಟ್ಟಿಯ ಜನರನ್ನು ಸಾಕ್ಷರಸ್ಥರು, ಸಾಕ್ಷರಾರ್ಹರು ಮತ್ತು ನಿರಕ್ಷರಿಗಳು ಎಂದು ವಿಂಗಡಿಸಿ ಅದಕ್ಕೆ ಸಂಬಂಧಿಸಿದಂತೆ ಅಂಕಿ ಅಂಶಗಳನ್ನು ತಿಳಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸಾಕ್ಷರರ್ಹರು ಎಂದರೆ ಒಟ್ಟು ಜನಸಂಖ್ಯೆಯಲ್ಲಿ ವಯೋಮಾನದ ಆಧಾರದ ಮೇಲೆ ಶಿಕ್ಷಣ ಪಡೆಯಬೇಕಾಗಿದ್ದವರು, ಸಾಕ್ಷರಸ್ಥರು ಎಂದರೆ ಪ್ರಸ್ತುತ ಶಿಕ್ಷಣ ಪಡೆದವರು/ಪಡೆಯುತ್ತಿರುವವರು, ನಿರಕ್ಷರಿಗಳೆಂದರೆ ಶಿಕ್ಷಣ ಪಡೆಯದವರು ಎಂದರ್ಥ. ಈ ಕೋಷ್ಟಕದ ಅಂಕಿಅಂಶಗಳನ್ನು ವಿವರಿಸುವುದಾದರೆ ಹಟ್ಟಿಯಲ್ಲಿನ ೩೧೩ ಕುಟುಂಬಗಳು ೧೬೪೨ ಜನಸಂಖ್ಯೆಯಲ್ಲಿ ಸಾಕ್ಷರಸ್ಥರು, ಸಾಕ್ಷರರ್ಹರು ಮತ್ತು ನಿರಕ್ಷರಿಗಳ ಪಟ್ಟಿ ನೋಡುವುದಾದರೆ ಆದಿ ಕರ್ನಾಟಕ(ಮಾದಿಗ) ಸಮುದಾಯದ

೨೪೭ ಜನಸಂಖ್ಯೆಯಲ್ಲಿ ವಯೋಮಾನದ ಪ್ರಕಾರ ಹಟ್ಟಿಯಲ್ಲಿ ಸಾಕ್ಷರಾರ್ಹರು ಒಟ್ಟು ೭೮ ಜನರಿದ್ದು ಅದರಲ್ಲಿ ೪೮ ಗಂಡು, ೩೦ ಹೆಣ್ಣುಮಕ್ಕಳಿರಬೇಕಾಗಿತ್ತು. ಆದರೆ ಕ್ಷೇತ್ರಕಾರ್ಯದಲ್ಲಿ ಸಿಕ್ಕ ಸಾಕ್ಷರಸ್ಥರೆಂದರೆ ೨೧೧ ಜನರು ಶಿಕ್ಷಣವನ್ನು ಪಡೆದವರು ಇದ್ದಾರೆ, ಅದರಲ್ಲಿ ೧೧೨ ಗಂಡು, ೯೯ ಹೆಣ್ಣು, ನಂತರ ೧೩೩ ಜನ ನಿರಕ್ಷರಿಗಳಿದ್ದು ಅದರಲ್ಲಿ ೬೪ ಗಂಡು, ೬೯ ಹೆಣ್ಣುಮಕ್ಕಳು. ಅದಂತೆಯೇ ಲಿಂಗಾಯತ ಸಮುದಾಯದವರ ೬೧ ಜನಸಂಖ್ಯೆಯಲ್ಲಿ ವಯೋಮಾನದ ಪ್ರಕಾರ ಸಾಕ್ಷರರ್ಹರು ೨೬ ಜನ ಅದರಲ್ಲಿ ೧೬ ಗಂಡು, ೧೦ ಹೆಣ್ಣು ಇರಬೇಕಾಗಿತ್ತು, ಆದರೆ ಸಾಕ್ಷರಸ್ಥರು ೪೭ ಜನ ಅದರಲ್ಲಿ ೨೨ ಗಂಡು, ೨೫ ಹೆಣ್ಣು, ಮತ್ತು ನಿರಕ್ಷರಿಗಳು ೬ ಗಂಡು, ೧೫ ಹೆಣ್ಣು ಒಟ್ಟು ೨೧ ಜನರಿದ್ದಾರೆ. ನಾಯಕ(ಬೇಡ)ಸಮುದಾಯದಲ್ಲಿನ ೧೩೩೪ ಜನಸಂಖ್ಯೆಯಲ್ಲಿ ವಯೋಮಾನದ ಪ್ರಕಾರ ಸಾಕ್ಷರರ್ಹರು ೨೨೭ ಗಂಡು, ೨೧೪ ಹೆಣ್ಣು, ಒಟ್ಟು ೪೪೧ ಜನರಿರಬೇಕಿತ್ತು. ಆದರೆ ಬೆಡರಲ್ಲಿ ಸಾಕ್ಷರಸ್ಥರು ೧೦೮೧ ಜನರಿದ್ದಾರೆ. ಅದರಲ್ಲಿ ೫೩೮ ಗಂಡು, ೫೪೩ ಹೆಣ್ಣುಮಕ್ಕಳು, ನಿರಕ್ಷರಿಗಳು ೩೧೧ ಗಂಡುಮಕ್ಕಳು, ೩೨೪ ಹೆಣ್ಣುಮಕ್ಕಳು ಒಟ್ಟು ೬೪೦ ಜನರಿದ್ದಾರೆ. ಒಟ್ಟಾರೆ ಹಟ್ಟಿಯಲ್ಲಿನ ಸಾಕ್ಷರತೆಯ ಪ್ರಮಾಣ ನೋಡುವುದಾದರೆ ಸಾಕ್ಷರಸ್ಥರಲ್ಲಿ ಶೇಕಡ ೫೦.೧೯ ಗಂಡು ಮಕ್ಕಳಿದ್ದರೆ ಶೇಕಡ ೪೯.೮೧ ರಷ್ಟು ಹೆಣ್ಣುಮಕ್ಕಳಿದ್ದಾರೆ, ಇನ್ನು ನಿರಕ್ಷರಿಗಳ ಸರಾಸರಿ ನೋಡಿದರೆ ಶೇಕಡ ೪೭.೯೮ ರಷ್ಟು ಗಂಡುಮಕ್ಕಳು, ಶೇಕಡ ೫೨.೦೨ ರಷ್ಟು ಹೆಣ್ಣುಮಕ್ಕಳು ನಿರಕ್ಷರಿಗಳಾಗಿದ್ದಾರೆ ಸಾಕ್ಷರರ್ಹರ ಪ್ರಮಾಣ ನೋಡುವುದಾದರೆ ಶೇಕಡ ೫೩.೩೯ ರಷ್ಟು ಗಂಡುಮಕ್ಕಳು, ಶೇಕಡ ೪೬.೬೧ ರಷ್ಟು ಹೆಣ್ಣು ಮಕ್ಕಳಿದ್ದಾರೆ.

ಒಟ್ಟಾರೆ ಹಟ್ಟಿಯಲ್ಲಿನ ಜನರ ಶೈಕ್ಷಣಿಕ ಸರಾಸರಿ ಮಟ್ಟ ನೋಡಿದರೆ ಶೇಕಡ ೭೪.೯೮ ರಷ್ಟು ಗಂಡುಮಕ್ಕಳು, ಶೇಕಡ ೫೨.೦೨ ರಷ್ಟು ಹೆಣ್ಣು ಮಕ್ಕಳು ಅಕ್ಷರ ಜ್ಞಾನದಿಂದ ವಂಚಿತರಾಗಿರುವುದು ತಿಳಿದು ಬರುತ್ತದೆ ಇದಕ್ಕೆ ಕಾರಣ ಅವರಲ್ಲಿನ ಬಡತನ ಮತ್ತು ದುಡಿಮೆಯ ಅನಿವಾರ್ಯತೆಯಾಗಿದೆ ಅಲ್ಲದೆ ಮಹಿಳೆಯರ ಶೈಕ್ಷಣಿಕ ಮಟ್ಟ ಶೇಕಡ ೫೦ ಕ್ಕೂ ಕಡಿಮೆ ಇರುವುದನ್ನು ಕಾಣಬಹುದು ಕಾರಣ ಇವರಲ್ಲಿನ ಮಹಿಳೆಯರ ಬಗೆಗಿನ ಅತಿಯಾದ ಕಾಳಜಿ ಅಂದರೆ ಹುಡುಗಿಯರು ಮೈನೆರೆತರೆ ಶಾಲೆ ಬಿಡಿಸಿ ಮನೆಯಲ್ಲೇ ಉಳಿಸುತ್ತಾರೆ ಒಂದು ವೇಳೆ ಶಾಲೆಗೆ ಕಳುಹಿಸಿದರೂ ೮ನೇ ತರಗತಿಯವರೆಗೆ ಮಾತ್ರ ಹಟ್ಟಿಯಲ್ಲಿ ಶಾಲೆ ಇದ್ದು ೯ನೇ ತರಗತಿಯಿಂದ ಪಕ್ಕದ್ದ ಊರುಗಳಾದ ಚಿನ್ನೋಬನಹಳ್ಳಿ, ತುಮಕೂರ‍್ಲಳ್ಳಿ, ಮೊಳಕಾಲ್ಮೂರುಗಳಿಗೆ ಕಳಿಸಬೇಕಾಗಿ ಬರುವುದರಿಂದ ಅವರನ್ನು ಹೊರಗಡೆ ಕಳಿಸದೇ ಶಾಲೆ ಬಿಡಿಸುತ್ತಾರೆ ಮತ್ತು ಮೈನೆರೆತ ವರ್ಷದಲ್ಲೇ ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡುವುದು ಕ್ಷೇತ್ರಕಾರ್ಯದಿಂದ ಕಂಡುಕೊಂಡ ಸತ್ಯವಾಗಿದೆ ಹಾಗಾಗಿ ಹುಡುಗಿಯರನ್ನು ಚಿಕ್ಕ ವಯಸ್ಸಿಗೆ ಶಾಲೆ ಬಿಡಿಸುವುದರಿಂದ ಮಹಿಳಾ ಶೈಕ್ಷಣಿಕ ಮಟ್ಟ ಶೇಕಡ ೫೦ ಕ್ಕೂ ಕಡಿಮೆ ಕಂಡು ಬರುತ್ತದೆ. ಹಟ್ಟಿಯಲ್ಲೇ ಕನಿಷ್ಟ ೧೦ನೇ ತರಗತಿಯವರೆಗೆ ಶಾಲೆ ಕಾರ್ಯನಿರ್ವಹಿಸಿದರೆ ಹಟ್ಟಿಯ ಮಹಿಳೆಯರು ಕನಿಷ್ಟ ಎಸ್ ಎಸ್ ಎಲ್ ಸಿ ಯವರಿಗಾದರೂ ಶಿಕ್ಷಣ ಪಡೆಯಬಹುದು. ನಂತರ ಆಸಕ್ತಿ ಇರುವವರು ಪಟ್ಟಣಗಳಲ್ಲಿನ ಕಾಲೇಜಿಗೆ ಸೇರಿಸಿ ವಸತಿ ನಿಲಯಗಳಲ್ಲಿಟ್ಟು ತಮ್ಮ ಹೆಣ್ಣು ಮಕ್ಕಳನ್ನು ಓದಿಸುವ ಅವಕಾಶವಿದೆ. ಹಟ್ಟಿಯಲ್ಲಿನ ಜನರಲ್ಲಿ ಶಿಕ್ಷಣ ಪಡೆದವರು ಮತ್ತು ಶಿಕ್ಷಣದಿಂದ ವಂಚಿತರಾದವರ ಪ್ರಮಾಣವನ್ನು ಅಂಕಿ ಅಂಶಗಳನ್ನು ತಿಳಿಯಲು ಲಂಬಚಿತ್ರ ೨.೧ನ್ನು ಗಮನಿಸಿ.

### ೨.೩.೮ ಹಟ್ಟಿಯ ಮ್ಯಾಸಬೇಡರ ಜೀವನಾವರ್ತಕ ಆಚರಣೆಗಳು

ವ್ಯಕ್ತಿ ತನ್ನ ಜೀವಿತಾವಧಿಯಲ್ಲಿ ಹುಟ್ಟಿನಿಂದ ಸಾವಿನವರೆಗೆ ಹಲವಾರು ಸಂಸ್ಕಾರಗಳಿಗೆ ಒಳಪಡುತ್ತಾನೆ. ನಾಮಕರಣದಿಂದ ಪ್ರಾರಂಭವಾಗಿ ಜವಳ ತೆಗೆಸುವುದು, ಋತುಮತಿ, ವಿವಾಹ, ಸತ್ತಾಗ ಶವಸಂಸ್ಕಾರ ಹೀಗೆ ಹಲವು ಸಂಸ್ಕಾರಗಳಿಗೆ ಒಳಪಡುತ್ತಾನೆ ಇಲ್ಲಿ ಗಮನಿಸುವ ಅಂಶವೆಂದರೆ ವ್ಯಕ್ತಿ ಜನನಪೂರ್ವದಿಂದ ಅಂದರೆ ಗರ್ಭಾವಸ್ಥೆಯಲ್ಲಿರುವಾಗಿನಿಂದ ಸಾವಿನ ನಂತರವೂ ಕೆಲವು ಸಂಸ್ಕಾರಗಳಿಗೆ ಒಳಪಡುತ್ತಾನೆ ಅಂತಹ ಆಚರಣೆಗಳನ್ನು ಈ ಕೆಳಗಿನಂತೆ ಒಂದೊಂದಾಗಿ ನೋಡಬಹುದು.

#### ೨.೩.೮.೧ ಬಸುರೂಟ/ಸೀಮಂತ ಆಚರಣೆ

ಇವರಲ್ಲಿ ಜನನದ ಪೂರ್ವದಲ್ಲಿಯೇ ಕೆಲವು ಆಚರಣೆಗಳು ನಡೆಯುತ್ತವೆ. ಇತ್ತೀಚಿನ ದಿನಮಾನದಲ್ಲಿ ಸೀಮಂತ ಎಂದು ಕರೆಯುವ ಆಚರಣೆಯನ್ನು ಬೇಡರು ತಮ್ಮ ಆಡುಭಾಷೆಯಲ್ಲಿ ಬಸುರೂಟ ಎಂದು ಕರೆಯುತ್ತಾರೆ. ಅಂದರೆ ಹೆಣ್ಣು ಗರ್ಭವತಿಯಾಗಿ ಏಳು ತಿಂಗಳು ತುಂಬಿದ ನಂತರ ಗಂಡನ ಮನೆಯಲ್ಲಿ ಈ ಕಾರ್ಯವನ್ನು ಮಾಡುತ್ತಾರೆ. ಇದನ್ನು ಮಾಡುವ ಉದ್ದೇಶ ಗರ್ಭಿಣಿಯಾದ ಹೆಣ್ಣಿಗೆ ಹೆರಿಗೆ ಬೇನೆಯನ್ನು ಸಹಿಸುವ ಶಕ್ತಿಯನ್ನು ಒದಗಿಸುವಂತಹ ಆಹಾರ, ಹಣ್ಣುಗಳನ್ನು ಅವಳಿಗೆ ನೀಡುವ ಉದ್ದೇಶ ಮತ್ತು ಆ ಸಂದರ್ಭದಲ್ಲಿ ಅವಳ ಮನಸ್ಸಿಗೆ ಆನಂದವನ್ನುಂಟುಮಾಡುವುದು ಈ ಆಚರಣೆಯ ಉದ್ದೇಶವಾಗಿದೆ. ಹೀಗೆ ಮಾಡುವುದರಿಂದ ಹುಟ್ಟುವ ಮಗು ಆರೋಗ್ಯವಾಗಿ ಹುಟ್ಟುತ್ತದೆ ಮತ್ತು ಹೆರಿಗೆ ಸುಲಭವಾಗಿ ಆಗುತ್ತದೆ ಎಂಬುದು ಇವರ ನಂಬಿಕೆಯಾಗಿದೆ. ಗರ್ಭವತಿಯಾದ ಏಳನೇ ತಿಂಗಳಲ್ಲಿ ಗಂಡನ ಮನೆಯಲ್ಲಿ ಮಾಡುವ ಈ ಆಚರಣೆಯಲ್ಲಿ ಎಲ್ಲಾ ಮುತ್ತೈದೆಯರು ಸೇರಿ ಗರ್ಭಿಣಿಗೆ ಹೊಸ ಹಸಿರು ಸೀರೆ ಉಡಿಸಿ ಅರಿಶಿಣ ಹಚ್ಚಿ ಸಿಂಗರಿಸಿ ಅವಳಿಗೆ ಆರತಿ ಮಾಡುತ್ತಾರೆ ಮತ್ತು ಅಂದು ಸಿಹಿ ಅಡುಗೆ ಮಾಡಿ ತಿನಿಸುತ್ತಾರೆ. ಬಸಿರೂಟದ ಕಾರ್ಯಕ್ರಮ ಅಥವಾ ಆಚರಣೆಯಲ್ಲಿ ಬೇಡ ಮಹಿಳೆಯರು ಸೋಬಾನೆ ಪದ ಹಾಡುತ್ತಾರೆ. ಸೋಬಾನೆ ಪದಗಳಲ್ಲಿ ಆ ಬಸಿರಿ ಹೆಂಗಸಿನ ಬಯಕೆಗಳು ಏನೆಂಬುದನ್ನು ಅಲ್ಲಿನ ಪ್ರಾದೇಶಿಕತೆಗೆ ತಕ್ಕಂತೆ ಹಾಡುತ್ತಾರೆ.

ಅಪ್ಪಳ ಸಂಡಿಗೆ ಉಪ್ಪಿನಕಾಯಿ
ಎಣ್ಣೆಗೆ ಕರಿದ ಕರ್ಜಿಕಾಯಿ
ಇಂಥಾ.. ಸೌಭಾಗ್ಯದಡಿಗೆ ಉಣ್ಣಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಕಾಲ್ಪಿಲ್ಲೆ ಕಡೀಕೆ ಮಾಡಿ
ಗೋದಿ ಪಿಲ್ಲೆ ನಡೂಕೆ ಮಾಡಿ
ಹೆಜ್ಜೇ..ಮೆಲ್ ಹೆಜ್ಜೆ ಇಟ್ಟು ನಡಿಯಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಗುಜು ಗುಜು ಬಾಳೆ ಹಣ್ಣಿನ ಸೀರೆ
ಗುಲಾಲಿ ಸುಗ್ಗೆ ಸೀರೆನುಟ್ಟು
ಟೋಪ್ ಬದಿಲೆ ಮೇಲೆ ಮಾಡಿ ಒದಿಯಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಸಾದ್ ಅಂಚಿನ್ ಸೀರೆನುಟ್ಟು
ಸಾದಿನ ಬಟ್ಟು ಹಣೆಯಲ್ಲಿಟ್ಟು
ನಾಲಾರಕ್ಕೂಳು ನಡುವೆ ಕುಂದ್ರಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಪಟ್ಟೆದಂಚಿನ ಸೀರೆನುಟ್ಟು
ಮುತ್ತಿನ ಬಟ್ಟು ಹಣೆಯಲ್ಲಿಟ್ಟು
ಅತ್ಗೇ..ನಾದ್ನೇರು ನಡುವೆ ಕುಂದ್ರಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಹೂಗಾರಂಗಡಿಗೋದೆನೆಂದೆ
ಹೂವು ಎಣಿಕೆ ಮಾಡೆನೆಂದೆ
ರಾಯಾರ ಎಡಗಡೆ ಕುಂತು ಮುಡಿಯಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಅಕ್ಕ ತಂಗೇರ್ ಅತ್ಗೆ ನಾದ್ನೇರ್
ನಾವ್ ನಾಲಾರು ಕೂಡಿಕೊಂಡು
ನಾಯ್ಕನಟ್ಟಿ ಜಾತ್ರೆಗೆ ಹೊಗಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ನಾಯ್ಕನಟ್ಟಿ ಜಾತ್ರೆಗೋಗಿ
ಸ್ವಾಮಿ ತೇರು ಬರೋದು ನೊಡಿ
ಅಣ್ಣೊ ಕಾಯ್ ಎಡೆಯ ಮಾಡ್ಸಂಗಾಗೈತ್ರೀ
ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಅಣ್ಣು ಕಾಯಿ ಎಡೆಯ ಮಾಡಿ
ಸ್ವಾಮಿ ತೇರು ಬರುವುದ ನೋಡಿ

ಚಿಕ್ಕೇರಂಗಳದಾಗ ಬುತ್ತಿ ಉಣ್ಣಂಗಾಗೈತ್ರೀ

ಬಾಲಾನ ಬಸಿರಿಲಿ ನನಗೆ ಬಗಸಂಗಾಗೈತ್ರೀ..॥ ॥

ಹೀಗೆ ಕಂಪಳದೇವರ ಹಟ್ಟಿಯ ಜನಪದರು ಗರ್ಭಿಣಿಯಾದ ಹೆಣ್ಣಿಗೆ ಏಳು ತಿಂಗಳು ತುಂಬಿದಾಗ ಅವಳ ಬಯಕೆಗಳನ್ನು ಈಡೇರಿಸುವಂತಹ ಕೆಲಸ ಮಾಡುತ್ತಾರೆ ಅದಕ್ಕಾಗಿಯೇ ಬಸುರೂಟ ಎಂಬ ಆಚರಣೆಯನ್ನು ಮಾಡುತ್ತಾರೆ. ಈ ಆಚರಣೆ ಮಹಿಳಾ ಪ್ರದಾನವಾದ ಆಚರಣೆಯಾಗಿದೆ(ಅವಳ ತಂದೆ ಮತ್ತು ಮಾವ ಇವರಷ್ಟೇ ಈ ಆಚರಣೆಯಲ್ಲಿ ಭಾಗವಹಿಸುತ್ತಾರೆ). ಗರ್ಭಿಣಿಯ ತಂದೆ ತಾಯಿಯರು ಗರ್ಭಿಣಿಯ ಗಂಡನಿಗೆ ಹೊಸ ಬಟ್ಟೆ ತರುತ್ತಾರೆ.

**೨.೩.೮.೨ ಜನನ ಸಂದರ್ಭದ ಆಚರಣೆ**



ಗರ್ಭಿಣಿಗೆ ಮಾಡುವ ಸೀಮಂತ ಆಚರಣೆಯ ನಂತರ ಅವಳಿಗೆ ಒಂಬತ್ತು ತಿಂಗಳು ತುಂಬಿ ಹೆರಿಗೆಯಾದ ಸಂದರ್ಭದಲ್ಲಿ ಕೆಲವು ಆಚರಣೆಗಳನ್ನು ಈ ಹಟ್ಟಿಯ ಮ್ಯಾಸಬೇಡರಲ್ಲಿ ಆಚರಿಸುತ್ತಾರೆ. ಗರ್ಭಿಣಿ ಇದ್ದಾಗಿನಿಂದ ಹೆರಿಗೆಯಾಗುವವರೆಗೆ ಅವಳನ್ನು ಜೋಪಾನವಾಗಿ ನೋಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಸೊಪ್ಪು, ತರಕಾರಿ, ಮಾಂಸ ಮುಂತಾದ ಆಹಾರ ನೀಡುತ್ತಾರೆ. ಎಳ್ಳು, ಬಾಳೇಹಣ್ಣು, ಪರಂಗಿ ಹಣ್ಣು ಮುಂತಾದ ಕೆಲವು ಆಹಾರವನ್ನು ನಿಷೇಧಿಸುತ್ತಾರೆ. ಹಟ್ಟಿಯಲ್ಲಿ ಇಂದಿಗೂ ಸಹ ಬಹುತೇಕ ಹೆರಿಗೆಗಳನ್ನು ಸೂಲಗಿತ್ತಿಯರಿಂದ ಮಾಡಿಸುತ್ತಾರೆ. ಈ ಹಿಂದೆ ಹೆರಿಗೆಗೆಂದೇ ಪ್ರತ್ಯೇಕ ಹೆರಿಗೆ ಗುಡ್ಲು ಕಟ್ಟುವ ಪದ್ದತಿ ಇತ್ತಂತೆ, ಇತ್ತೀಚೆಗೆ ಇದು ಕಂಡುಬರುತ್ತಿಲ್ಲ ಮೊದಲು ಹಟ್ಟಿಯಲ್ಲಿ ಯಾರಿಗಾದರೂ ಹೆರಿಗೆ ನೋವು ಕಾಣಿಸಿಕೊಂಡರೆ ತಕ್ಷಣವೇ ಮನೆಯ ಹೊರಗೆ ಪ್ರತ್ಯೇಕವಾದ 'ಹೆರಿಗೆ ಗುಡ್ಲು' ಹಾಕಿ ಅದರಲ್ಲಿ ಹೆರಿಗೆ ಮಾಡಿಸುತ್ತಿದ್ದರಂತೆ. ಇವರಲ್ಲಿ ಹೆರಿಗೆ ಸ್ವಲ್ಪ ಕಷ್ಟವಾದರೆ ತಮ್ಮ ಮನೆದೇವರಿಗೆ ಕಾಸು(ನಾಲ್ಕಾಣೆ, ಒಂದುರೂಪಾಯಿ) ಹರಕೆ ಕಟ್ಟಿಕೊಂಡು ಮನೆಯಲ್ಲಿನ ನೆಲುವಿಗೆ ಕಟ್ಟುತ್ತಾರೆ. ಹೀಗೆ ಮಾಡುವುದರಿಂದ ಹೆರಿಗೆ ಸುಲಭವಾಗಿ ಆಗುತ್ತದೆ ಎಂಬುದು ಇವರ ನಂಬಿಕೆ. ಈ ಪದ್ದತಿ ಇಂದಿಗೂ ಸಹ ಇವರಲ್ಲಿ ರೂಢಿಯಲ್ಲಿದೆ. ಈ ಹಿಂದೆ ಇವರಲ್ಲಿ ಹೆರಿಗೆಯಾದಕೂಡಲೆ ಹೊಕ್ಕಳುಬಳ್ಳಿಯನ್ನು ಸೂಲಗಿತ್ತಿಯು ಕುಡುಗೋಲು ಅಥವಾ ಬಿದಿರಿನ ಚಕ್ಕೆಯಿಂದ ಕೊಯ್ದು ಗಂಟು ಹಾಕುತ್ತಿದ್ದಳು ಇತ್ತೀಚೆಗೆ ಹೊಸ ಬ್ಲೇಡನ್ನು ಬಳಸಿ ಹೊಕ್ಕಳು ಬಳ್ಳಿಯನ್ನು ಕತ್ತರಿಸುತ್ತಾರೆ.

ಹೊಕ್ಕಳುಬಳ್ಳಿ ಕತ್ತರಿಸಿದ ಜಾಗ ನಂಜಾಗದಂತೆ ಇರಲು ಆ ಜಾಗಕ್ಕೆ ಬೇವಿನ ಸೊಪ್ಪು ಅರೆದು ಹಚ್ಚುತ್ತಾರೆ. ಹೊಕ್ಕಳು ಬಳ್ಳಿಯನ್ನು ಕತ್ತರಿಸಿ ಮಾಸನ್ನು ಸೋರೆಯಲ್ಲಿ ಅಥವಾ ಹಳೆ ಮೊರದಲ್ಲಿ ಹಾಕಿಕೊಂಡು ಹೋಗಿ ತಿಪ್ಪೆಯಲ್ಲಿ ಹೂಳುತ್ತಾರೆ. ಮಗುವಿನ ಹೊಕ್ಕಳು ಒಣಗಿ ಉದುರಿದಾಗ ಅದನ್ನು ತೆಗೆದುಕೊಂಡು ಮಗುವಿನ ಜೋಲಿಗೆ ಕಟ್ಟುತ್ತಾರೆ. ವಿಶೇಷವೆಂದರೆ ಮಕ್ಕಳಾಗದೇ ಇರುವ ಮಹಿಳೆಯರು ಈ ಒಣಗಿದ ಹೊಕ್ಕಳುಬಳ್ಳಿಯನ್ನು ಯಾರಿಗೂ ತಿಳಿಯದಂತೆ ತೆಗೆದುಕೊಂಡು ಹೋಗಿ ತಿನ್ನುತ್ತಾರೆ, ಹೀಗೆ ಮಾಡುವುದರಿಂದ ಅವರು ಗರ್ಭಧರಿಸುತ್ತಾರೆ ಎಂದು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ಹೆರಿಗೆಯಾದ ದಿನದಲ್ಲಿ ಬಾಣಂತಿ ಕೈಯಲ್ಲಿ ಕುಡುಗೋಲು ಬೇವಿನ ಸೊಪ್ಪು ಕೊಟ್ಟು

ಸೂರ್ಯ ಚಂದ್ರ ನಮಸ್ಕಾರ ಮಾಡಿಸುತ್ತಾರೆ. ಅಂದು ಬೇವಿನ ಸೊಪ್ಪು ಅರೆದು ಮಗು ಮತ್ತು ತಾಯಿಗೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ನಂತರ ಮಗುವನ್ನು ಪುಟ್ಟಿಯಲ್ಲಿ ಹಾಕಿ ಗಂಡು ಮಗುವಾಗಿದ್ದರೆ ಸೂಲಗಿತ್ತಿಯು ಒಂದು ತಟ್ಟೆಯನ್ನು ಬಾರಿಸುತ್ತಾ ಗಂಡಾಗಿದೆ ಗಂಡಾಗಿದೆ ಗಂಡಾಗಿದೆ ಎಂದು ಮೂರು ಸಲ ಕೂಗುತ್ತಾಳೆ. ಹೆರಿಗೆಯಾದ ದಿನದಿಂದ ಹದಿನಾರನೇ ದಿನದವರೆಗೆ ಸೊಂದು ಗೊಂದು ಎಂದು ದಿನಬಿಟ್ಟು ದಿನ ಬಿಸಿನೀರು ಹಾಕಿ ತಾಯಿ ಮಗುವಿಗೆ ಸ್ನಾನ ಮಾಡಿಸುತ್ತಾರೆ. ಬಾಣಂತಿಯು ಬಹಿರ್ದೆಸೆಗೆ ಹೋಗಿ ಬಂದಾಗ ಅವಳ ಎದೆಹಾಲು ಬಾಗಿಲಿಗೆ ಹಿಂಡಿ ನಂತರ ಮನೆ ಒಳಗೆ ಹೋಗುತ್ತಾಳೆ ಕಾರಣ ಹೊರಗೆ ಹೋಗಿ ಬಂದಾಗ ಹೊರಗಿನ ಸೂಕ್ಷ್ಮ ಕ್ರಿಮಿಕೀಟಗಳು ತಾಯಿಯ ಎದೆಗೆ ಅಂಟಿರುತ್ತವೆ ಅಥವಾ ಪೀಡೆ, ಪಿಶಾಚಿ ಅಂಟಿಕೊಂಡಿರುತ್ತದೆ ಆದ್ದರಿಂದ ಮೊದಲ ಎದೆಹಾಲನ್ನು ಬಾಗಿಲಿಗೆ ಕರೆದು ನಂತರ ಒಳಗೆ ಹೋಗಿ ಮಗುವಿಗೆ ಹಾಲು ಕುಡಿಸುತ್ತಾಳೆ.

ಹೆರಿಗೆಯಾದ ಮೂರನೇ ದಿನದಲ್ಲಿ ಬಾಣಂತಿಯು ಮಲಗುವ ಜಾಗದಲ್ಲಿ ಅವಳ ತಲೆಯ ಬಳಿ ಒಂದು ತುಂಬಿದ ಚೆಂಬು ಇಟ್ಟು ಅದರ ಸುತ್ತ ಮಂಡಕ್ಕಿ ಅಥವಾ ಅವಳ ಹಾಸಿಗೆಯ ಸುತ್ತ ಹಿಟ್ಟಿನಿಂದ ರಂಗೋಲಿ ಬಿಡಿಸುತ್ತಾರೆ, ಕಾರಣ ಅಂದು ವಿಧಿಮುಂಡೆ(ವಿಧಿದೇವತೆ) ಬಂದು ಮಗುವಿನ ಹಣೆ ಬರಹ ಬರೆದು ಹೋಗುತ್ತಾಳೆ ಆಗ ಅವಳು ಅಲ್ಲಿನ ಮಂಡಕ್ಕಿ ತಿಂದು ನೀರು ಕುಡಿದು ಸಂತೃಪ್ತಿ ಪಟ್ಟು ಚನ್ನಾಗಿ ಹಣೆಬರಹ ಬರೆದು ಹೋಗುತ್ತಾಳೆ ಎಂಬ ನಂಬಿಕೆ, ಇದನ್ನು ಅವರು ಮುಂಜಾನೆ ತುಂಬಿದ ಚೆಂಬಿನಲ್ಲಿ ಕಡಿಮೆಯಾಗಿರುವ ನೀರು ಮತ್ತು ಕಡಿಮೆಯಾಗಿರು ಮಂಡಕ್ಕಿಯಿಂದ ವಿಧಿದೇವತೆ ಬಂದು ಹೋಗಿದ್ದಾಳೆ ಎಂದು ಅರಿಯುತ್ತಾರೆ, ಅಥವಾ ಬಾಣಂತಿಯ ಸುತ್ತ ಹಾಕಿರುವ ಹಿಟ್ಟಿನ ರಂಗೋಲಿಯ ಮೇಲೆ ಮೂಡಿರುವ ಹೆಜ್ಜೆಯ ಗುರುತುಗಳಿಂದ ವಿಧಿದೇವತೆ ಬಂದು ಹಣೆಬರಹ ಬರೆದು ಹೋಗಿದ್ದಾಳೆ ಎಂದು ನಂಬುತ್ತಾರೆ.

**ಸಣ್ಣ ಕೂಸಿನ ಹಾರೈಕೆ**

ಹಿಂದಿನ ಕಾಲದಲ್ಲಿ ಹೆರಿಗೆಯಾದ ಹಸುಗೂಸಿಗೆ ಹುರುಳಿ ಹಿಟ್ಟನ್ನು ಹಚ್ಚಿ ಸ್ನಾನ ಮಾಡಿಸುತ್ತಿದ್ದರು. ಹುರುಳಿ ಹಿಟ್ಟು ದೇಹಕ್ಕೆ ಶಾಖವನ್ನು ನೀಡುವಂಥಹದ್ದು ಆದ್ದರಿಂದ ಈ ಹಿಟ್ಟನ್ನು ಮಗುವಿಗೆ ಹಚ್ಚಿ ಸ್ನಾನ ಮಾಡಿಸುತ್ತಿದ್ದರು ಇತ್ತೀಚೆಗೆ ಈ ಪದ್ಧತಿ ಇಲ್ಲವಾಗಿದೆ. ಹೆರಿಗೆಯಾಗಿ ತಿಂಗಳು ತುಂಬಿದಾಗ ಹುಣ್ಣಿಮೆ ಅಥವಾ ಅಮವಾಸ್ಯೆಯ ದಿನ ಸೂಜಿಯನ್ನು ಕಾಯಿಸಿ ಮಗುವಿಗೆ ಮೂರು ಕಡೆ ಬರೆ ಹಾಕುತ್ತಾರೆ. ಮಗುವಿಗೆ ಯಾವುದೇ ಕಾಯಿಲೆ ಬಾರದಿರಲೆಂದು ಒಂದು ಕೇರು ಬೀಜವನ್ನು ಸೂಜಿಗೆ ಸಿಕ್ಕಿಸಿ ದೀಪದಲ್ಲಿ ಕಾಯಿಸಿ ಈ ಮೊದಲೇ ಲೊಳ್ಳೆಯಲ್ಲಿ ಸಂಗ್ರಹಿಸಿದ ತಾಯಿಯ ಎದೆ ಹಾಲಿನಲ್ಲಿ ಕೇರುಬೀಜದ ರಸವನ್ನು ಬೆರೆಸಿ ಬೆಣ್ಣೆಯಿಂದ ಅಥವಾ ತುಪ್ಪದಿಂದ ಮಗುವಿನ ನಾಲಿಗೆ, ಬಾಯಿಯನ್ನು ಸವರಿ ಕಾದ ಕೇರು ಬೀಜದ ರಸವನ್ನು ತಾಯಿಯ ಎದೆಹಾಲಿನೊಂದಿಗೆ ಕುಡಿಸುತ್ತಾರೆ. ಮಗುವಿನ ಕತ್ತಿನ ಬಳಿ ಕೈ ಕಾಲುಗಳ ಸಂದಿಯಲ್ಲಿ ಬೆವೆತು ಆ ಜಾಗ ಸೆಲೆತು ನಂಜಾದರೆ ಅಲ್ಲಿಗೆ ಜಾಲಿಮರದ ಎಲೆಯನ್ನು ತಂದು ಚೆನ್ನಾಗಿ ಒಣಗಿಸಿ ಒಣಗಿದ ಎಲೆಯನ್ನು ರುಬ್ಬಿ ಪುಡಿಮಾಡಿ ಆ ಪುಡಿಯನ್ನು

ಕೂಸಿನ ಬೆವೆಯುವ ಸ್ಥಳಕ್ಕೆ ಹಾಕುತ್ತಾರೆ ಇದು ಬೆವೆತು ನಂಜಾಗುವುದನ್ನು ತಡೆಯುತ್ತದೆ. ಮಗುವಿಗೆ ಹದಿನಾರು ದಿನದ ನಂತರ ಉತ್ತುತ್ತಿ, ಬೆಳ್ಳುಳ್ಳಿ, ಮೆಣಸು, ಇಪ್ಲಿ, ಮೋಡಿಕಡ್ಡಿ, ಜಾಜ್‌ಕಾಯಿ, ಲವಂಗ, ಏಲಕ್ಕಿಯನ್ನು ತೇದು ತಾಯಿಯ ಎದೆಹಾಲಿನೊಂದಿಗೆ ಕುಡಿಸುತ್ತಾರೆ. ಹದಿನಾರು ದಿನಗಳ ನಂತರ ಮತ್ತು ಮೂರುತಿಂಗಳ ತನಕ ಪ್ರತಿದಿನ ಬೆಳಿಗ್ಗೆ ಮಗುವಿಗೆ ಕುಡಿಸುತ್ತಾರೆ ಬಾಣಂತಿಯು ಮೂರು ತಿಂಗಳು ತನಕ ಪ್ರತಿದಿನ ರಾತ್ರಿ ಊಟಮಾಡಿದ ಮೇಲೆ ಬಜೆ ತಿಂದು ಮಗುವಿನ ಕಿವಿಯಲ್ಲಿ ಗಾಳಿ ಊದಬೇಕು ಕಾರಣ ಮಗುವಿಗೆ ಜೀರ್ಣಕ್ರಿಯೆ ಸಲೀಸಾಗಿ ಆಗಲು ಹಾಗೆ ಮಾಡುತ್ತಾರೆ.

**ಬಾಣಂತಿಗೆ ನೀಡುವ ಆಹಾರ**

"ಹೆರಿಗೆಯಾದ ೧೨-೧೩ ದಿನಗಳಲ್ಲಿ ಗಂಡನ ಮನೆಯವರು ಇಪ್ಲಿ, ಮೋಡಿಕಡ್ಡಿ, ಜಾಜ್(ಯಿ)ಕಾಯಿ, ಲವಂಗ, ಒಣಕೊಬ್ಬರಿ, ಉತ್ತುತ್ತಿ, ಕಲ್ಲು ಸಕ್ಕರೆ, ಬೆಳ್ಳುಳ್ಳಿ, ತುಪ್ಪ ಎಲ್ಲವನ್ನು ಸೇರಿಸಿ ಪುಡಿಮಾಡಿಕೊಂಡು ತರುತ್ತಾರೆ. ಈ ಮಿಶ್ರಣವನ್ನು ಬಾಣಂತಿಗೆ ತಿನ್ನಲು ಕೊಡುತ್ತಾರೆ. ಹೆರಿಗೆಯಾಗಿ ನಿಶಕ್ತಳಾದ ಅವಳಿಗೆ ಇದು ಶಕ್ತಿಯುತ ಆಹಾರವಾಗಿದೆ ಈ ಮಿಶ್ರಣವನ್ನು ಜನಪದರ ಮಾತಿನಲ್ಲಿ ಕೊಬ್ಬರಿ ಖಾರ ಎನ್ನುತ್ತಾರೆ. ಬಾಣಂತಿಗೆ ಊಟಕ್ಕೆ ಬೇಳೆ ಕಟ್ಟು, ತೆಳುವಾದ ಮುದ್ದೆಯನ್ನು ತಿನ್ನಲು ಕೊಡುತ್ತಾರೆ. ಬಾಣಂತಿಗೆ ಎದೆಹಾಲು ಕಡಿಮೆಯಾದರೆ ಸಜ್ಜೆಯನ್ನು ಕುಟ್ಟಿ ಅನ್ನಮಾಡಿ ಹಾಲಿನೊಂದಿಗೆ ತಿನ್ನಿಸುತ್ತಾರೆ ಹೆರಿಗೆಯಾದ ಹದಿನಾರನೇ ದಿನದ ಮೇಲ್ಪಟ್ಟು ಖಾರ ಕಡಿಮೆ ಹಾಕಿ ಕುರಿ ಅಥವಾ ಮೇಕೆಯ ತಲೆಯ ಮಾಂಸವನ್ನು ತಿನ್ನಿಸುತ್ತಾರೆ"(ಮಾಹಿತಿ: ಬೊಮ್ಮಕ್ಕ, ಲೋಕೀಕೆರೆ, ೫೦, ದಿನಾಂಕ: ೯.೫.೨೦೧೫).

**೨.೩.೮.೩ ನಾಮಕರಣ ಸಂದರ್ಭದ ಆಚರಣೆ**

ಜನಪದರ ಮಾತಿನಲ್ಲಿ ಹೆಸರಿಡುವ ಶಾಸ್ತ್ರ ಎಂದು ಕರೆಯುವ ಈ ಶಾಸ್ತ್ರ ಬೇಡರ ಮುಖ್ಯ ಆಚರಣೆಯಾಗಿದೆ. ಹಟ್ಟಿಯಲ್ಲಿ ಹೆಣ್ಣು ಹೆರಿಗೆಯಾದ ಮೂರು ದಿನದಲ್ಲಿ ಮನೆ, ನೆಲ ಬಳಿದು ಸ್ವಚ್ಛಗೊಳಿಸಿ ಮನೆಗೆಲ್ಲಾ ಗೋಮೂತ್ರ ಹಾಕಿಸಿ ಮನೆ ಒಳಗೆ ಕರೆದುಕೊಳ್ಳುತ್ತಾರೆ. ಮಗು ಹುಟ್ಟಿದ ಮೂರು ದಿನ, ಒಂಬತ್ತು ದಿನ, ಹನ್ನೊಂದು ದಿನ, ಹದಿನಾರು ದಿನಗಳಲ್ಲಿ ಕೆಲವರು ಮೂರು ತಿಂಗಳು ಅಥವಾ ಐದು ತಿಂಗಳಲ್ಲಿ ಮಕ್ಕಳಿಗೆ ಹೆಸರಿಡುವ ಶಾಸ್ತ್ರ ಮಾಡುತ್ತಾರೆ. ಈ ಸಮುದಾಯದವರಲ್ಲಿ ಮಗು ಹುಟ್ಟಿದರೆ ಹಬ್ಬಮಾಡಿ ಬಂಧುಬಳಗದವರೆಲ್ಲಾ ಸೇರಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಜೋಗುಳವನ್ನು ಹಾಡಿ ಮೃತಪಟ್ಟಿರುವ ತಮ್ಮ ಹಿರಿಯರಲ್ಲಿ ಯಾರಾದರೊಬ್ಬರ ಹೆಸರಿಟ್ಟು ಗುಗ್ಗರಿಯನ್ನು ತಿಂದು ಮಗುವನ್ನು ತೂಗಿ ನಾಮಕರಣ ಮಾಡುತ್ತಾರೆ. ಮಗುವಿಗೆ ಹೆಸರಿಡುವವರು ಮಗುವಿನ ಸೋದರತ್ತೆಯಾಗಿರುತ್ತಾಳೆ, ನಾಮಕರಣಕ್ಕೆ ಯಾವುದೇ ತಿಥಿ ನಕ್ಷತ್ರ, ಪಂಚಾಂಗವನ್ನು ನೋಡದೇ ತಮ್ಮ ಮನೆದೇವರ ಪೂಜಾ ವಾರಗಳಾದ ಸೋಮವಾರ, ಶನಿವಾರ ನಾಮಕರಣಕ್ಕೆ ದಿನವನ್ನು ನಿಗದಿಪಡಿಸಿ ಸಂಬಂಧಿಕರನ್ನು ಆಹ್ವಾನಿಸುತ್ತಾರೆ. ನಾಮಕರಣಕ್ಕೆ ಮಗುವಿನ ಸೋದರ ಮಾವ ಅಂದರೆ ಮಗುವಿನ ತಾಯಿಯ ಅಣ್ಣ ಅಥವಾ ತಮ್ಮ ತೊಟ್ಟಿಲನ್ನು ಹೆಗಲಮೇಲೆ ಹೊತ್ತು ತರುತ್ತಾನೆ ಅವನಿಗೆ

ಮಗುವಿನ ತಂದೆ ತಾಯಿ ಹೊಸ ಬಟ್ಟೆ ತಂದು ಕೊಡುವುದು ಪದ್ಧತಿ. ಹೀಗೆ ಸೋದರಮಾವ ತಂದ ಬಿದಿರಿನ ತೊಟ್ಟಿಲಿಗೆ ನಾಲ್ಕು ಹಗ್ಗಗಳನ್ನು ಸಮಾನವಾಗಿ ಕಟ್ಟಿ ನಡುಮನೆಯಲ್ಲಿ ತೂಗು ಬಿಟ್ಟು ಸಂಜೆ ಸುಮಾರು ಆರು ಗಂಟೆಯಿಂದ ನಾಮಕರಣಕ್ಕೆ ಸಿದ್ದತೆ ಮಾಡಿಕೊಳ್ಳುತ್ತಾರೆ.

ಮನೆದೇವರಿಗೆ ಮೊದಲು ಪೂಜೆಮಾಡಿ ನಂತರ ತೊಟ್ಟಿಲನ್ನು ಸಿಂಗರಿಸಿ ಮಗುವಿನ ಸೋದರತ್ತೆಯಿಂದ ತೊಟ್ಟಿಲು ಪೂಜೆ ಮಾಡಿಸಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸುತ್ತಾರೆ. ಈ ಶಾಸ್ತ್ರಕ್ಕೆ ವಿಶೇಷವಾಗಿ ಗುಗ್ಗರಿಯನ್ನು ಬೇಯಿಸಿ ಆ ಬೆಂದ ಗುಗ್ಗರಿಯನ್ನು ಬಿಳಿ ಬಟ್ಟೆಯಲ್ಲಿ ಗಂಟುಕಟ್ಟಿ ಮೂರು ಅಥವಾ ಐದು ಗಂಟುಗಳನ್ನು ತೊಟ್ಟಿಲಲ್ಲಿ ಇಟ್ಟಿರುತ್ತಾರೆ. ಈ ಹುರುಳಿ ಗುಗ್ಗರಿಯನ್ನು ಹೇಲಗುಗ್ಗರಿ ಎಂದು ಕರೆವರು. ಹೆಣ್ಣು ಮಗುವಾಗಿದ್ದರೆ ಮೂರು ಗಂಟು ಕಟ್ಟಿ ಮಗುವಿನ ತಲೆಯ ಕಡೆ ಎರಡು, ಕಾಲು ಕಡೆ ಒಂದು ಗಂಟನ್ನು, ಗಂಡು ಮಗುವಾಗಿದ್ದರೆ ಐದು ಗಂಟು ಕಟ್ಟಿ ಮಗುವಿನ ತಲೆಯ ಕಡೆ ಮೂರು ಕಾಲು ಕಡೆ ಎರಡು ಗಂಟುಗಳನ್ನು ಸೋದರತ್ತೆ ಇಡುತ್ತಾಳೆ, ಆಗ ಮುತ್ತೈದೆಯರು ತೊಟ್ಟಿಲು ತೂಗುತ್ತಾರೆ, ಆ ಸಂದರ್ಭದಲ್ಲಿ ಮಗುವಿನ ಸೋದರತ್ತೆ ಅಥವಾ ಸೋದರ ಮಾವ ತೊಟ್ಟಿಲಲ್ಲಿಟ್ಟ ಹುರುಳಿ ಗುಗ್ಗರಿ ಗಂಟುಗಳನ್ನು ಕೈಯಲ್ಲಿ ಮುಟ್ಟದೇ ಬಾಯಿಯಲ್ಲೇ ಕಚ್ಚಿಕೊಂಡು ಮಗುವಿನ ಹೆಸರನ್ನು ಹೇಳುತ್ತಾ ಮೂರು ಸಾರಿ ಹೊರಗೆ ಹೋಗಿ ಒಳಗೆ ಬರುತ್ತಾಳೆ ಹೀಗೆ ಹೊರಗೆ ಹೋಗಿ ಒಳಗೆ ಬರುವಾಗ ಸಂಬಂಧಿಕರು ತಮಾಷೆಗಾಗಿ ಅವಳಿಗೆ/ಅವನಿಗೆ ಬೆನ್ನಿಗೆ ಹೊಡೆಯುತ್ತಾರೆ. ಸೋದರತ್ತೆ ಇಟ್ಟ ಹೆಸರೇ ಅಂತಿಮವಾಗಿ ಉಳಿಯುತ್ತದೆ. ಇವರಲ್ಲಿ ನಾಮಕರಣ ಮಾಡುವ ಸಂದರ್ಭದಲ್ಲಿ ಜೋಗುಳ ಪದ ಹಾಡುವುದು ಸಾಮಾನ್ಯ ಆ ಜೋಗುಳ ಪದವನ್ನು ಹಟ್ಟಿಯ ಹಿರಿಯ ಮಹಿಳೆಯರೇ ಹಾಡುತ್ತಾರೆ. ಜೋಗುಳ ಪದದಲ್ಲಿ ಆ ಮಗುವಿನ ತಾಯಿ ಹೆರಿಗೆ ಬೇನೆ ತಿನ್ನುವುದರಿಂದ ಪ್ರಾರಂಭಿಸಿ ಮಗು ಹುಟ್ಟಿ ಮಗುವಿಗೆ ಹೆಸರು ಸೂಚಿಸುವ ಹಕ್ಕು ನನ್ನದಲ್ಲ ನನ್ನ ಹಿರಿಯ ಮಾವ, ಅಕ್ಕರದು ಎಂದು ಆ ಮಗುವಿನ ತಾಯಿ ಹೇಳುವ ಎಲ್ಲಾ ಸಂದರ್ಭಗಳನ್ನು ಈ ಮಹಿಳೆಯರು ನಾಮಕರಣದ ಸಂದರ್ಭದಲ್ಲಿ ಹಾಡುವ ಜೋಗುಳ ಪದದಲ್ಲಿ ಪ್ರಸ್ತಾಪಿಸುತ್ತಾರೆ.

ಬ್ಯಾನಿಯಾ ತಿನ್ನುತಾ ಕ್ವಾಣೇಗೋಗುತಾ
ಕ್ವಾಣೆ ಕ್ವಾಣೆಗೆ ನಾಕು ತ್ರಾಣಾ ದೀವಿಗೆ
ಜೇನಿನ ತುಪ್ಪದಲಿ ಜ್ಯೋತಿ ತುಂಬಿಟ್ಟೂ...
ನಮ್ಮಾ ಜಾನಕಿ ಅಡೆದಾಳು ಜನಕೊಪ್ಪ ಮಗನಾ.... ಜೋ..ಜೋ..

ಆರೂ ಅಕ್ಕಿ ಆಯಾವ ನೊಡು
ಮೂರೂ ಅಕ್ಕಿ ಶಾಯವ ನೊಡು
ಹನ್ನೆರಡು ಅಕ್ಕಿ ಬಣ್ಣವಾ ನೋಡೂ...
ನಿಮ್ಮ ಅಣ್ ತಂದ ತೊಟ್ಟಿಲು ಕಣ್ಣೆತ್ತಿ ನೋಡೇ..ಜೋ.. ಜೋ..

ಅಟ್ಟಾದ ಮ್ಯಾಗಳ ತೊಟ್ಟಿಲ ಎಲೆಯೇ
ತೊಟ್ಟಿಲದಾಗ ತೊಡರನ್ನು ಬಿಡಿಸಿ
ಬೆಚ್ಚಾ ಬೆಚ್ಚನ ನಿರು ಬಿಸಿ ನಿರು ಹಾಕೀ..
ಅದಕೇ ಇಟ್ಟಾರು ಶ್ರೀ ಗಂಧಾದ ಬೊಟ್ಟೂ..ಜ್ಯೋ..ಜೋ
ಹಾಲೂ ಬಾನಾ ಉಂಬ ಬಾಣೂತಿ ಬರೇ
ಬಾಲಮ್ಮಗೆಸರೂ ಏನಿಡಬೇಕು
ಹಿರಿಯಾ ತನದ ಮಾತು ನನಗೇಕಿರಮ್ಮಾ
ನಮ್ಮಾ ಹಿರಿಯ ಮಾವನ ಕೇಳಿ ಹೆಸರೀಡಿರಮ್ಮಾ..ಜೋ..ಜೋ
ತುಪ್ಪಾ ಬಾನಾ ಉಂಬ ಬಾಣೂತಿ ಬಾರೇ
ಪುತ್ರಮ್ಮಗೆ ಹೆಸರೆನಿಡಬೇಕು
ಹಿರಿಯ ತಾನದ ಬುದ್ದಿ ನನಗೇಕಿರಮ್ಮಾ
ನಮ್ಮಾ ಹಿರಿಯಾ ಅಕ್ಕನ ಕೇಳಿ ಹೆಸರೀಡಿರಮ್ಮಾ..ಜೋ..ಜೋ..
ಆಲೂ ಊರೂ ಸಂತೆಗೆ ಹೋಗಿ
ಬಾಲೂಗೆ ತಕ್ಕಂತ ಅಂಗೀಯ ತಂದು
ಬಾಲೂನಾ ತಾಯಿ ಒಳಲಿಂದ ಬಂದೂ
ನಮ್ಮಾ ಬಾಲಾಗೆ ಈ ಅಂಗಿ ಅವಳಾದವೆಂದೋ..ಜೋ..ಜೋ..
ಕೊಟ್ಟೂ ಊರು ಸಂತೆಗೆ ಹೋಗಿ
ಪುತ್ರಾಗೆ ತಕ್ಕಂತ ಟೋಪಿಯಾ ತಂದೋ..
ಪುತ್ರಾನಾ ತಾಯಿ ಒಳಲಿಂದಾ ಬಂದೋ..
ನಮ್ಮಾ ಪುತ್ರಾಗೆ ಈ ಟೋಪಿ ಅವಳಾದವೆಂದೋ..ಜೋ..ಜೋ..
ಜೋ ಎಂದು ಪಾಡಿರೇ ಶರಣ ಸತಿಯರೆಲ್ಲ ಕೂಡಿ
ಜೋ ಎಂದು ಪಾಡಿರೆ ನಲಿನಲಿದಾಡೀ
ತಾಯಿ ನಾಗಮ್ಮಾನಾ ಮಗನಾ ಮುದ್ದಾಡಿ..ಜೋ..ಜೋ..

ಮ್ಯಾಸಬೇಡ ಮಹಿಳೆಯರು ನಾಮಕರಣದ ಸಂದರ್ಭದಲ್ಲಿ ಹಾಡುವ ಈ ಜೋಗುಳ ಪದದಲ್ಲಿ ಇವರ ಕೌಟುಂಬಿಕ ವ್ಯವಸ್ಥೆಯ ಚಿತ್ರಣ ಕಾಣಬಹುದಾಗಿದೆ. ಮಗುವಿನ ತಾಯಿ ಮಗುವಿಗೆ ಹೆಸರಿಡುವ ಸಂದರ್ಭದಲ್ಲಿ ಹೆಸರು ಸೂಚಿಸುವ ಹಕ್ಕು ನನ್ನದಲ್ಲ ನನ್ನ ಹಿರಿಯ ಮಾವ, ಹಿರಿಯ ಅಕ್ಕನದು

ಅವರು ಸೂಚಿಸಿದ ಹೆಸರೇ ಅಂತಿಮ ಎಂದು ಹೇಳುವ ಮಾತುಗಳಲ್ಲಿ ಆ ಕುಟುಂಬದಲ್ಲಿ ಅಂತಿಮ ತೀರ್ಮಾನಗಳು ಮನೆಯ ಯಜಮಾನರದು ಎಂಬುದನ್ನು ಅರಿಯಬಹುದು. ಬಹು ಹಿಂದಿನ ಕಾಲದಲ್ಲಿ ಈ ಸಮುದಾಯದವರಲ್ಲಿ ಮಗುವಿಗೆ ನಾಮಕರಣ ಮಾಡುವಾಗ ಸೋದರತ್ತೆ ಗಂಗಳ ಬಾರಿಸುತ್ತಾ ಹೆಸರು ಕೂಗುತ್ತಿದ್ದಳಂತೆ ಮಗುವಿಗೆ ಹೆಸರನ್ನು ತಂದೆಯ ಮನೆಯ ಯಜಮಾನರ ಆಪೇಕ್ಷೆಯಂತೆ ತಮ್ಮ ಬುಡಕಟ್ಟಿನ ಪುರಾಣ ಪುರುಷರು, ಸಾಂಸ್ಕೃತಿಕ ವೀರರು, ಪಾಳೇಗಾರರು, ಮನೆದೇವರು ಮತ್ತು ಸತ್ತು ಹೋದ ಮನೆಯ ಯಜಮಾನರ ಹೆಸರನ್ನು ಮಗುವಿಗೆ ಇಡುತ್ತಾರೆ. ಈಗಲೂ ಸಹ ಈ ಹಟ್ಟಿಯಲ್ಲಿ ಒಂದು ಕುಟುಂಬದಲ್ಲಿ ಒಂದೇ ಹೆಸರಿನ ಮೂವರಿಂದ ನಾಲ್ಕು ಜನ ಸಿಗುತ್ತಾರೆ ಉದಾಹರಣೆಗೆ ತಂದೆ ಹೆಸರು ಗೊಡ್ಲು ಬೋರಣ್ಣ, ದೊಡ್ಡ ಮಗ ಪೆದ್ದ(ದೊಡ್ಡ) ಬೋರಣ್ಣ, ಮತ್ತೊಬ್ಬ ಮಗ ಸನ್ನ(ಸಣ್ಣ) ಬೋರ, ಮಗಳು ಬೋರಮ್ಮ, ಇನ್ನೊಬ್ಬ ಬೋರಸ್ವಾಮಿ ಹೀಗೆ ಮನೆದೇವರ ಅಥವಾ ತಮ್ಮ ಹಿರಿಯರ ಹೆಸರನ್ನೇ ಮಕ್ಕಳಿಗೆ ಇಡುವುದು ಇಂದಿಗೂ ಕಂಡುಬರುತ್ತಿದೆ. ನಾಮಕರಣ ಶಾಸ್ತ್ರದಲ್ಲಿ ಪಾಲ್ಗೊಂಡವರಿಗೆ ಎಲೆ, ಅಡಿಕೆ, ಬಾಳೇಹಣ್ಣು, ಕಡ್ಲೆ ಸಕ್ಕರೆ, ಹೇಲಗುಗ್ಗರಿ ಕೊಟ್ಟು ಕಳುಹಿಸುತ್ತಾರೆ. ನಾಮಕರಣದಂದು ಹೆರಿಗೆ ಮಾಡಿಸಿದ ಸೂಲಗಿತ್ತಿಗೆ ಮೂರು ಗಂಗಳ ಜೋಳ ಕೊಡುತ್ತಾರೆ. ಈ ಜೋಳವನ್ನು ಸೂಲಗಿತ್ತಿ ತನ್ನ ಮಡ್ಲಲ್ಲಿ ಕಟ್ಟಿಕೊಂಡು ಹೋಗುತ್ತಾಳೆ.

### ೨.೩.೮.೪ ಜವಳ ತೆಗೆಸುವ ಶಾಸ್ತ್ರ

ಹಟ್ಟಿಯ ಬೇಡರಲ್ಲಿ ಮಗು ಹುಟ್ಟಿ ಮೂರು ವರ್ಷದ ಒಳಗೆ ಹುಟ್ಟು ಕೂದಲು ತೆಗೆಸುವುದು ಒಂದು ಧಾರ್ಮಿಕ ಪದ್ಧತಿಯಾಗಿದೆ. ಮಗು ಹುಟ್ಟಿ ಐದು ತಿಂಗಳು, ಒಂಬತ್ತು ತಿಂಗಳು, ಒಂದು ವರ್ಷ ಮತ್ತು ಮೂರು ವರ್ಷ ತುಂಬುವುದರೊಳಗಾಗಿ ಅವರವರ ಅನುಕೂಲತೆಗೆ ತಕ್ಕಂತೆ ದೇವಸ್ಥಾನ, ದೇವರ ಪೌಳಿ, ದೇವರ ನಿಧಿ (ದೇವರ ಎತ್ತುಗಳ ರೊಪ್ಪ), ಕುರಿಹಟ್ಟಿಗಳಲ್ಲಿ ಜವಳ ತೆಗೆಸುತ್ತಾರೆ ಅಥವಾ ಅಲ್ಲಿಂದ ತೀರ್ಥ ತಂದು ತಮ್ಮ ಹಟ್ಟಿಯಲ್ಲೇ ಜವಳ ತೆಗೆಸುತ್ತಾರೆ. ಮನೆದೇವರ ಗುಡಿಯಲ್ಲಿ ಅಥವಾ ರೊಪ್ಪದಲ್ಲಿ ಪೂರ್ವಾಭಿಮುಖವಾಗಿ ಕರಿಕಂಬಳಿ ಗದ್ದುಗೆ ಹಾಸಿ, ಅಕ್ಕಿ ಕಾಳಿನ ಅಕ್ಷತೆ ಹಾಕಿ ಕಳಸ ಹೂಡಿ ದಾಸಯ್ಯ ಮತ್ತು ಪೂಜಾರಿಗಳನ್ನು ಕರೆಸಿ ಗದ್ದುಗೆ ಪೂಜೆ ಮಾಡಿಸಿ ಅದರ ಮೇಲೆ ಲಿಂಗವಸ್ತ್ರ ಬಟ್ಟೆ ಹಾಸಿ ತಾಯಿ ಮತ್ತು ಮಗುವನ್ನು ಗದ್ದುಗೆಯ ಮೇಲೆ ಕೂಡಿಸುತ್ತಾರೆ. ಆಗ ಸೋದರ ಮಾವನು ಗದ್ದುಗೆಗೆ ಪೂಜೆ ಮಾಡಿ ಪೂರ್ವಕ್ಕೆ ಮುಖಮಾಡಿ ಕೈ ಮುಗಿದುಕೊಂಡು 'ಗೌಡ್ರು, ಶ್ಯಾನಭೋಗರು, ದೈವದವರು ಮಂಡೆ ತೆಗೆಯೋಕೆ/ಮುಡಿ ತೆಗೆಯೋಕೆ ಅಪ್ಪಣೆ ಕೊಟ್ರೇನಪ್ಪೋ' ಎಂದು ಮೂರು ಸಾರಿ ಕೇಳುತ್ತಾನೆ. ಆಗ ಅಲ್ಲಿಗೆ ಬಂದಿದ್ದ ಹಿರಿಯರು 'ದೇವರ ಅಪ್ಪಣೆ' ಎಂದಾಗ ವೀಳ್ಯೆದೆಲೆಯನ್ನು ಕತ್ತರಿಯ ಹಾಗೆ ಮಾಡಿಕೊಂಡು (ಎಲೆಕತ್ತರಿ), ತಲೆ ಕೂದಲಿಗೆ ಮುಟ್ಟಿಸುತ್ತಾನೆ ನಂತರ ಕ್ಷೌರದವರು ಮಗುವಿನ ತಲೆಕೂದಲನ್ನು ಕತ್ತರಿಸುತ್ತಾರೆ. ಈ ತಲೆ ಕೂದಲನ್ನು ಎಲೆ ಅಡಿಕೆಯಲ್ಲಿಟ್ಟು ನದಿ ಅಥವಾ ಹಳ್ಳದಲ್ಲಿ ಬಿಡುತ್ತಾರೆ. ಮಗುವಿನ ತಲೆಗೂದಲು ತೆಗೆಸಿದ ನಂತರ

ತಾಯಿ ಮತ್ತು ಮಗುವಿಗೆ ಜಳಕ ಮಾಡಿಸಿ ತವರು ಮನೆಯವರು ತಂದಿದ್ದ ಹೊಸ ಬಟ್ಟೆಯನ್ನು ಉಡಿಸಿ ಕರಿ ಕಂಬಳಿಯ ಮೇಲೆ ಕೂರಿಸಿ ಉಡಿ ತುಂಬುವ ಶಾಸ್ತ್ರ ಮಾಡುತ್ತಾರೆ. ತಾಯಿಯ ತವರು ಮನೆಯವರು ಮಗುವಿಗೆ ಬೆಳ್ಳಿಯ ಉಡುದಾರ, ಬೆಳ್ಳಿಯ ಲಿಂಗದಕಾಯಿ, ಬೆಳ್ಳಿಯ ಕಡಗ, ಬಂಗಾರದ ಮುರ ಮತ್ತು ತಂದೆ ತಾಯಿಗಳಿಗೆ ಹೊಸಬಟ್ಟೆಯನ್ನು ತರುವ ಸಂಪ್ರದಾಯವಿದೆ. ತಾಯಿಗೆ ಉಡಿ ತುಂಬಿದ ನಂತರ ಸೋದರ ಮಾವ ಮಗುವಿನ ಕಿವಿಗೆ ಬಂಗಾರದ ಮುರ ಚುಚ್ಚಿಸುತ್ತಾನೆ, ಹೀಗೆ ಮಾಡುವ ಸೋದರ ಮಾವನಿಗೆ ಮಗುವಿನ ತಂದೆ ತಾಯಿ ಹೊಸಬಟ್ಟೆ ತರುತ್ತಾರೆ. ಈ ಕಾರ್ಯಕ್ರಮಕ್ಕೆ ಭಾಗವಹಿಸಿದ್ದ ಬಂಧು ಬಳಗದವರಿಗೆ ಸಿಹಿ ಅಡುಗೆ ಊಟ ಮಾಡಿಸಲಾಗುತ್ತದೆ.

**೨.೩.೮.೫ ಋತುಮತಿ ಶಾಸ್ತ್ರ**

ಹೆಣ್ಣು ಯವ್ವನಕ್ಕೆ ಕಾಲಿಡುವ ಸೂಚನೆಯನ್ನು ಗ್ರಾಮೀಣರು ಋತುಮತಿಯಾಗುವುದು ಎನ್ನುತ್ತಾರೆ. ಹಟ್ಟಿಯಲ್ಲಿ ಹೆಣ್ಣು ಋತುಮತಿಯಾಗುವುದನ್ನು ದೊಡ್ಡವಳಾಗುವುದು, ಮೈನೆರೆಯುವುದು, ವಯಸ್ಸಿಗೆ ಬರುವುದು ಮತ್ತು ತೆಲುಗಿನಲ್ಲಿ ಗೊಪ್ಪದೈಯಿಂದಿ ಎಂದು ಕರೆಯುತ್ತಾರೆ. ಇವರಲ್ಲಿ ಮೈನೆರೆದ ಹೆಣ್ಣನ್ನು ಸೂತಕ ಎಂದು ಭಾವಿಸಿ ಅವಳನ್ನು ಪವಿತ್ರಳಾಗಿ ಮಾಡುವ ಹಲವು ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸುತ್ತಾರೆ. ಹೆಣ್ಣು ಋತುಮತಿಯಾದ ದಿನವೇ ಅವಳ ಸೋದರ ಮಾವ ಹೊಂಗೆ ಮತ್ತು ಬೇವಿನ ಸೊಪ್ಪಿನಿಂದ ಮನೆಯ/ಗುಡಿಸಲ ಹೊರಗೆ ಹಸಿರು ಗುಡ್ಲು ಕಟ್ಟಿ ಪೂಜೆ ಮಾಡುತ್ತಾನೆ, ಸೋದರತ್ತೆ ಅರಿಶಿಣದ ನೀರು ಹಾಕುತ್ತಾಳೆ ನಂತರ ಹುಡುಗಿ ಗುಡಿಸಲ ಒಳಗೆ ಹೋಗಿ ಕುಳಿತುಕೊಂಡಾಗ ಸೋದರ ಮಾವ ಒಂದು ತೆಂಗಿನ ಕಾಯಿಯನ್ನು ಗುಡಿಸಲ ಒಳಗೆ ಉರುಳಿ ಬಿಡುತ್ತಾನೆ, ಆಗ ಹುಡುಗಿ ತೆಂಗಿನ ಕಾಯಿಯನ್ನು ಹೊರಗೆ ದೂಡುತ್ತಾಳೆ, ಈ ರೀತಿಯಾಗಿ ಮೂರು ಸಲ ಮಾಡಿಸುತ್ತಾರೆ. ಮೈನೆರೆತ ಹೆಣ್ಣು ಐದು ದಿನ, ಒಂಬತ್ತು ದಿನ, ಹನ್ನೊಂದು ದಿನ, ಹದಿನಾರು ದಿನಗಳವರೆಗೆ ಸೂತಕದ ಹೆಣ್ಣಾಗಿ ಹಸಿರು ಗುಡ್ಲಿನಲ್ಲಿ ಇರಬೇಕು. ಪ್ರತಿದಿನ ಸ್ನಾನಮಾಡಿ ಮಡಿವಾಳರು ಕೊಟ್ಟ ಮಡಿ ಬಟ್ಟೆಗಳನ್ನು ತೊಡಬೇಕು ಈ ದಿನಗಳಲ್ಲಿ ಹಟ್ಟಿಯವರು ಋತುವಾದ ಹೆಣ್ಣಿಗೆ ಪ್ರತಿದಿನ ಅಡುಗೆ ಮಾಡಿಕೊಂಡು ತಂದು ಅವಳಿಗೆ ಕೊಡುತ್ತಾರೆ. ತಾಯಿಯ ತವರು ಮನೆಯವರು ಋತುವಾದ ಹೆಣ್ಣಿಗೆ 'ಒಸಗೆ ಬುಟ್ಟಿ' ತರುತ್ತಾರೆ(ಅಂದರೆ ತಿಂಡಿ ತಿನಿಸು ಉಡುಗೊರೆಯನ್ನು ತರುತ್ತಾರೆ.) ಹಿಂದೆ ಋತುವಾದ ಹುಡುಗಿ ಐದು ದಿನ ಸೂತಕ ಕಳೆವವರೆಗೆ ತಟ್ಟೆಯಲ್ಲಿ ಊಟಮಾಡುವಂತಿರಲಿಲ್ಲ, ಸೋದರ ಮಾವ ತಂದುಕೊಟ್ಟ ತೆಳುವಾದ ಬಂಡೆಯ ಮೇಲೆ(ಕಲ್ಲುಮರಗೆ) ಆಕೆ ಐದು ದಿನಗಳವರೆಗೆ ಊಟ ಮಾಡಬೇಕು ಅಂದರೆ ಮೊದಲನೆಯ ದಿನ ಒಂದು ಬೆರಳಲ್ಲಿ, ಎರಡನೆಯ ದಿನ ಎರಡು ಬೆರಳಲ್ಲಿ ಒಂದೊಂದು ದಿನ ಒಂದೊಂದು ಬೆರಳು ಹೆಚ್ಚಿಸುತ್ತಾ ಐದನೆ ದಿನದಲ್ಲಿ ಐದು ಬೆರಳು ಬಳಸಿ ಊಟ ಮಾಡಬೇಕು.

**ಗುಡ್ಲು ಕುಂದ್ರಿಸುವ ಹಾಡು**

ಬೇಡರಲ್ಲಿ ಹೆಣ್ಣು ಮೈನೆರೆತರೆ ನಿಗದಿಪಡಿಸಿದ ಕೆಲವು ದಿನಗಳ ಕಾಲ ಋತುಮತಿಯನ್ನು ಮನೆಯಿಂದ ಹೊರಗೆ ಹಸಿರು ಗುಡಿಸಿಲು ಹಾಕಿ ಅದರಲ್ಲಿ ಬಿಡುತ್ತಾರೆ. ಅವಳಿಗೆ ಸೋದರತ್ತೆ

ಅರಿಶಿಣದ ನೀರು ಹಾಕುವುದು, ಸೋದರ ಮಾವ ಅವಳ ನಾಲಿಗೆಯನ್ನು ಬೇವಿನ ಕಡ್ಡಿಯಿಂದ ಸುಡುವುದು ಮುಂತಾದ ಹಲವು ಕಾರ್ಯಗಳು ನಡೆಯುತ್ತವೆ. ಈ ಎಲ್ಲಾ ಕಾರ್ಯಗಳನ್ನು ಮಹಿಳೆಯರು ಸೋಬಾನೆ ಪದಗಳಲ್ಲಿ ವರ್ಣಿಸುತ್ತಾರೆ. ಋತುಮತಿ ಹೆಣ್ಣನ್ನು ಫಲ ಕೊಡುವ ಬಾಳೆ, ನಿಂಬೆ ಇತ್ಯಾದಿ ಹಣ್ಣಿನ ಗಿಡಗಳಿಗೆ ಹೋಲಿಸಿ ಹಾಲು ಮೊಸರು ಮುಂತಾದ ಅವರ ಪಾರಂಪರಿಕ ಆಹಾರದ ಬಗ್ಗೆಯೂ ಇವರ ಸೋಬಾನೆಗಳಲ್ಲಿ ಪ್ರಸ್ತಾಪವಾಗುವುದನ್ನು ಗಮನಿಸಬಹುದು.

ಹತ್ತಿ ಹಣ್ಣಾ ಮರಕೇ ಆಕಿನೀ ಉಯ್ಯಾಲೆ...
ಆಡುತಲೇ ಮಗಳೇ ಮೈಯಾ..ನೇರೇದೇ..ಸೋ...

ಆಲೂ ಬಾನಾ ಉಂಡು ಬ್ಯಾಳೇ ಮಾಡಂದಾರೆ..
ತಾನಾಗೇ ಹೊರಗೇ ಕುಳೂತಾಳೇ..ಸೋ

ತಾನೆ ಹೋಗಿ ಹೊರಗೇ ಕುಳಿತಾಳೆ ಮಂಜಮ್ಮ
ಅಮ್ಮನ ಮುಚ್ಚಿ ಕರಾದಾಳೇ_ಸೋ
ಮುಟ್ಟಾದೆನೇ ಅಮ್ಮಾ ಮುಟ್ಟಾದಿರು ಅಡದಮ್ಮ
ಮುಟ್ಟಿದರೆ ಮೈಯ್ಯಾ ನೆರಾತೀನೇ..ಸೋ..

ಏನುಂಡು ಮೈನೆರೆತೆ ಏನುಟ್ಟು ಮೈನೆರೆತೇ
ಏನು ಕೈಯೊಳಗೇ ಇಡಾದಿದ್ದೇ...ಸೋ

ಹಾಲೂಬಾನುಂಡಿದ್ದೆ ಸಾದಿನ ಸೀರೆ ಉಟ್ಟಿದ್ದೆ
ಏಲಕ್ಕಿ ಗೊನೆಯ ಕಾಯಾ ಹಿಡಿದಿದ್ದೇ...ಸೋ.
ಏಲಕ್ಕಿ ಗೊನೆಯ ಕಾಯಾ ಹಿಡಿದಿದ್ದೆ..ಶಿವನಲ್ಲಿ
ಬಾಲಾನಾ ಫಲವಾ ಪಡಾದೇನೇ..ಸೋ...

ಈ ರೀತಿಯಾಗಿ ಸೋಬಾನೆ ಪದ ಮುಂದುವರಿಯುತ್ತದೆ. ಈ ಸೋಬಾನೆ ಪದಗಳಲ್ಲಿ ಹೆಣ್ಣು ಮೈನೆರೆತ ಸುದ್ದಿಯನ್ನು ಮನೆಯವರಿಗೆ ತಿಳಿಸಲು ಅಂಜಿ ಮುಚ್ಚಿಡಲು ಪ್ರಯತ್ನಿಸುತ್ತಾಳೆ. ತಾಯಿಯು ಮಗಳ ಸ್ಥಿತಿಯನ್ನು ಕಂಡು ಅವಳ ಅಳುಕನ್ನು ತಿಳಿದು ತಾನೇ ಹೇಳುತ್ತಾಳೆ ನೀನು ದೊಡ್ಡವಳಾಗಿದ್ದೀಯ ಎಂದು. ಕೊನೆಗೆ ಮೈನೆರೆತಾಗ ಯಾವ ಬಟ್ಟೆ ತೊಟ್ಟಿದ್ದೆ, ಯಾವ ವಸ್ತು ಹಿಡಿದಿದ್ದೆ, ಎಲ್ಲಿದ್ದೆ ಎಂದು ಕೇಳಿ ಅವುಗಳ ಆಧಾರದ ಮೇಲೆ ಅವಳ ಫಲವಂತಿಕೆಯನ್ನು ತಿಳಿಯುತ್ತಾಳೆ. ಫಲಕೊಡುವ ಹಣ್ಣುಗಳ ಮರ, ಗಿಡಗಳಿಗೆ ಮೈನೆರೆತ ಹೆಣ್ಣನ್ನು ಹಾಡಿನುದ್ದಕ್ಕೂ ಹೋಲಿಸುವುದನ್ನು ಕಾಣಬಹುದು. ಗ್ರಾಮೀಣ ಜನಪದರು ಮೈನೆರೆತ ಹೆಣ್ಣನ್ನು ತುಂಬಾ ಜಾಗರೂಕತೆಯಿಂದ ನೋಡಿಕೊಳ್ಳುವುದು ಸಾಮಾನ್ಯ. ಇಷ್ಟೇ ಅಲ್ಲದೆ ಈ ಸೋಬಾನೆ ಪದಗಳಲ್ಲಿ ಅವರ ಸಾಮಾಜಿಕ, ಕೌಟುಂಬಿಕ ಸ್ಥಿತಿಯನ್ನು ವರ್ಣಿಸುವುದನ್ನು

ಸಹ ಕಾಣಬಹುದು. ಈ ರೀತಿಯಾದಂತಹ ಸೋಬಾನೆ ಪದಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅಂದಂದಿನ ಸಾಮಾಜಿಕ, ಕೌಟುಂಬಿಕ, ವಿಧಿವಿಧಾನಗಳನ್ನು ಅರಿಯಲು ನಮಗೆ ಸಹಾಯಕವಾಗುತ್ತದೆ.

**ಗಿಡ ದಾಟಿಸುವುದು**

ಹೆಣ್ಣು ಋತುವಾದ ಒಂಬತ್ತು, ಹನ್ನೊಂದು ಅಥವಾ ಹದಿನಾರನೇ ದಿನದಲ್ಲಿ ಅವರ ಅನುಕೂಲಕ್ಕೆ ತಕ್ಕಂತ ದಿನದಲ್ಲಿ ಮನೆಯನ್ನು ಸಾರಿಸಿ ನೆಲ ಬಳಿದು ಮನೆಗೆಲ್ಲಾ ಗೋಗಂಜು ಪ್ರೋಕ್ಷಣೆ ಮಾಡುತ್ತಾರೆ ಅಂದು ಮೈನೆರೆದ ಹೆಣ್ಣಿಗೆ ಸ್ನಾನ ಮಾಡಿಸಿ ಹೊಸಬಟ್ಟೆ ಉಡಿಸಿ ಕರಿಕಂಬಳಿ ಹೊದಿಸಿಕೊಂಡು ಊರ ಹೊರಗಿನ ಬಯಲಿಗೆ ಕರೆದುಕೊಂಡು ಹೋಗಿ ಅಲ್ಲಿನ ಒಂದು ತಂಗಡಿ ಗಿಡಕ್ಕೆ ಪೂಜೆ ಮಾಡಿ ಆ ಗಿಡದ ಅಡಿಯಲ್ಲಿ ಸೋದರ ಮಾವ ತಂದಿದ್ದ ಒಣಕೊಬ್ಬರಿ, ಉತ್ತುತ್ತಿ, ಎಲೆ ಅಡಿಕೆ ಇಟ್ಟು ಪೂಜೆಮಾಡಿಸಿ ಅವಳಿಂದ ಆ ಗಿಡವನ್ನು ಮೂರು ಬಾರಿ ದಾಟಿಸುತ್ತಾರೆ. ಗಿಡವನ್ನು ಋತುವಾದ ಹೆಣ್ಣಿಗಿಂತ ಮೊದಲು ಚಿಕ್ಕ ಹುಡುಗಿಯರನ್ನು ದಾಟಿಸಿ ನಂತರ ಮೈನೆರೆದ ಹುಡುಗಿ ಗಿಡವನ್ನು ಮುಟ್ಟಿ ಮೂರು ಬಾರಿ ದಾಟುತ್ತಾಳೆ ಹೀಗೆ ದಾಟುವ ಪ್ರತಿ ಬಾರಿ ಆ ಗಿಡದಿಂದ ಎಲೆಯನ್ನು ಕಿತ್ತುಹಾಕುತ್ತಾಳೆ. ನಂತರ ಅಲ್ಲಿ ಅವಳಿಗೆ ನೀರು ಹಾಕಿ ಸೋದರ ಮಾವನವರು ತಂದಿದ್ದ ಹೊಸ ಹಸಿರು ಸೀರೆಯನ್ನು ಅಲ್ಲೇ ಪಕ್ಕದಲ್ಲಿರುವ ಸಮುದಾಯ ಭವನದಲ್ಲಿ ಉಡುಸಿ ಅದರ ಮೇಲೆ ಮತ್ತೆ ಕರಿ ಕಂಬಳಿಯನ್ನು  ಹೊದಿಸಿಕೊಂಡು ಹಿಂದಕ್ಕೆ ತಿರುಗಿ ನೋಡದಂತೆ ಸೋದರತ್ತೆ ಅವಳನ್ನು ಮನೆಗೆ ಕರೆತರುತ್ತಾಳೆ. ಮನೆಯ ಬಾಗಿಲ ಹತ್ತಿರ ಬಂದಾಗ ಈಗಾಗಲೇ ಸೋದರ ಮಾವ ತಂದಿದ್ದ ಕುರಿ ಪಿಚ್ಚಿಗೆಯನ್ನು ಸಣ್ಣ ಕುಪ್ಪೆ ಹಾಕಿರಲಾಗಿರುತ್ತದೆ ಅದರ ಮೇಲೆ ಬೆಂಕಿಯ ಕೆಂಡವನ್ನಿಟ್ಟಿರುತ್ತಾರೆ. ಅದರ ಮೇಲೆ ಒಂದು ದೀಪವನ್ನು ಹಚ್ಚಿ ಇಟ್ಟಿರುತ್ತಾರೆ. ಅಲ್ಲಿಗೆ ಬಂದ ಋತುಮತಿಗೆ ಸೋದರ ಮಾವ ಮೊದಲು ಇದ್ದಿಲನ್ನು ಕೊಟ್ಟು ಬಾಯಿಂದ ಜಗಿಯಲು ಹೇಳುತ್ತಾನೆ ಅವಳು ಇದ್ದಿಲು ಜಗಿದ ನಂತರ ಆ ಕುರಿಪಿಚ್ಚಿಗೆಯ ಮೇಲೆ ಇಟ್ಟಿದ್ದ ದೀಪದಲ್ಲಿ ಬೇವಿನ ಕಡ್ಡಿಯನ್ನು ಇಟ್ಟು ಕಾಯಿಸಿ ಕಾದ ಬೆವಿನ ಕಡ್ಡಿಯಿಂದ ಋತುವಾದ ಹೆಣ್ಣಿನ ನಾಲಿಗೆಯನ್ನು ಸುಡುತ್ತಾನೆ ನಂತರ ಗೋಗಂಜಿನಿಂದ ಹುಡುಗಿ ಮೂರು ಸಲ ಬಾಯಿ ಮುಕ್ಕಳಿಸಿ ಕುರಿ ಪಿಚ್ಚಿಗೆಯ ಕುಪ್ಪೆಯ ಮೇಲಿನ ಕೆಂಡದ ಮೇಲೆ ಉಗುಳುತ್ತಾಳೆ ಮತ್ತು ಇದ್ದಿಲಿನಿಂದ ಹಲ್ಲುಜ್ಜಿ ಕೆಂಡದ ಮೇಲೆ ಉಗುಳುತ್ತಾಳೆ. ನಂತರ ಸೋದರತ್ತೆ ಅಥವಾ ಸೋದರ ಮಾವ ಹುಡುಗಿಯ ಕಾಲಲ್ಲಿರುವ ಉಗುರುಗಳನ್ನು ಚೂರಿಯಿಂದ ಇಲ್ಲವೆ ಬ್ಲೇಡಿನಿಂದ ಕತ್ತರಿಸುತ್ತಾಳೆ ಇದಾದ ನಂತರ ಅವಳನ್ನು ಗಂಗೆಗೆ ಕರೆದುಕೊಂಡು ಹೋಗಿ ಪೂಜೆ ಮಾಡಿಸಿ ಎಲೆ, ಅಡಿಕೆ, ತಂಬಿಟ್ಟು, ಬಾಳೇಹಣ್ಣನ್ನು ಹರಿಯುವ ನೀರಿನಲ್ಲಿ ತೇಲಿಬಿಟ್ಟು ಮಣ್ಣಿನ ಅಥವಾ ಇತ್ತಾಳೆ ಗಡಿಗೆಯಲ್ಲಿ ನೀರು ತುಂಬಿಕೊಂಡು ಮುತ್ತೈದೆಯರೊಂದಿಗೆ ಮೈನರೆತ ಹೆಣ್ಣು ಮನೆಗೆ ಬರುತ್ತಾಳೆ, ಆಗ ಮನೆಯ ಬಾಗಿಲ ಬಳಿ ಅವಳ ಸೋದರ ಮಾವ ಅವಳಿಗೆ ಕೊಬ್ಬರಿ, ಉತ್ತುತ್ತಿ, ಎಲೆ, ಅಡಿಕೆಯನ್ನು ಉಡಿತುಂಬಿ ಮನೆಯ ಒಳಗೆ ಬರಮಾಡಿಕೊಳ್ಳುತ್ತಾನೆ ಮತ್ತು ಅಂದೇ ಅವಳಿಗೆ ಹಾಕಿದ್ದ ಹಸಿರು ಗುಡ್ಡನ್ನು, ಊರ ಹೊರಗೆ ತೆಗೆದುಕೊಂಡು ಹೋಗಿ ಸುಟ್ಟುಹಾಕಿ ಅದರ

ಬೂದಿಯನ್ನು ಹೊಳೆಯಲ್ಲಿ ಬಿಟ್ಟು ಬರುತ್ತಾನೆ. ಅವಳು ಊಟಕ್ಕೆ ಬಳಸುತ್ತಿದ್ದ ಕಲ್ಲು ಮರಗೆಯನ್ನು ಒಡೆದು ಹಾಕಿ ಬರುತ್ತಾನೆ. ಮೈನೆರೆತ ಒಂಬತ್ತು ಅಥವಾ ಹದಿನಾರನೇ ದಿನದಲ್ಲಿ ಬಂಧುಬಳಗದವರೆಲ್ಲಾ ಸೇರಿಕೊಂಡು ಶಾಸ್ತ್ರ ಮಾಡಿ ಅಂದು ಬಂದವರಿಗೆಲ್ಲಾ ಸಿಹಿ ಊಟಕ್ಕೆ ವ್ಯವಸ್ಥೆ ಮಾಡುತ್ತಾರೆ.

**೨.೩.೮.೬ ವಿವಾಹ ಪದ್ಧತಿ**

ಭಾರತದಲ್ಲಿ ವಿವಾಹವೆಂಬುದು ಪವಿತ್ರ ಧಾರ್ಮಿಕ ಸಂಸ್ಥೆಯಾಗಿದ್ದು ಧರ್ಮ, ಪ್ರಜಾ, ರತಿ ಇವು ವಿವಾಹದ ಪ್ರಮುಖ ಉದ್ದೇಶಗಳಾಗಿವೆ. ವ್ಯಕ್ತಿ ತನ್ನ ಪುರುಷಾರ್ಥ ಸಾಧನೆಗೆ ಧಾರ್ಮಿಕ ಕ್ರಿಯೆ ನಡೆಸಲು ಗೃಹಸ್ಥನಾಗಿರಬೇಕು ಮತ್ತು ತನ್ನ ವಂಶ ಬೆಳೆಯಲು ಮಕ್ಕಳನ್ನು ಹೊಂದಬೇಕು, ಈ ಧಾರ್ಮಿಕ ಮತ್ತು ಸಂತಾನ ಕಾರ್ಯವನ್ನು ಸಮಾಜ ಒಪ್ಪಿತ ರೀತಿಯಲ್ಲಿ ಪಡೆಯಲು ಭಾರತೀಯರಲ್ಲಿ ವಿವಾಹ ಎಂಬ ಸಂಸ್ಥೆ ಹುಟ್ಟಿಕೊಂಡಿತು ಎನ್ನಬಹುದು. ಇಂತಹ ಪ್ರಮುಖ ಮೂರು ಉದ್ದೇಶಗಳಿಗಾಗಿ ವಿವಾಹ ಹುಟ್ಟಿಕೊಂಡಿದ್ದರೂ ವಿವಾಹವನ್ನು ತನಗೆ ಇಷ್ಟ ಬಂದಂತೆ, ಇಷ್ಟ ಬಂದವರ ಜೊತೆ ಆಗುವುದನ್ನು ಸಮಾಜ ನಿಷೇಧಿಸುತ್ತದೆ. ಭಾರತದಲ್ಲಿನ ಹಲವಾರು ಸಮುದಾಯಗಳು ತಮ್ಮದೇ ಆದ ವಿವಾಹ ಪದ್ಧತಿ ನಂಬಿಕೆ, ಆಚರಣೆಗಳನ್ನು ಒಳಗೊಂಡಿದ್ದು ಅದರ ಪ್ರಕಾರವೇ ವಿವಾಹ ಕಾರ್ಯ ನೆರವೇರಿಸುವುದನ್ನು ಗಮನಿಸಬಹುದು. ಅಂತಹ ಸಮುದಾಯಗಳಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರಲ್ಲಿಯೂ ಸಹ ವೈವಾಹಿಕ ಸಂಬಂಧಗಳ ಬಗ್ಗೆ, ಆಚರಣೆಗಳ ಬಗ್ಗೆ ಕಟ್ಟು ನಿಟ್ಟಿನ ನಿರ್ಬಂಧಗಳಿರುವುದು ಕಂಡು ಬರುತ್ತದೆ. ಇವರಲ್ಲಿ 'ತೆರ' ಕೊಟ್ಟು ಹೆಣ್ಣು ತರುವ ಪದ್ಧತಿ ಜಾರಿಯಲ್ಲಿದೆ. ವಿಧವಾ ವಿವಾಹ, ಬಸವಿ ಪದ್ಧತಿ, ಕೂಡಿಕೆ ವಿವಾಹ ಪದ್ಧತಿಗಳು ಈ ಹಟ್ಟಿಯ ಜನರಲ್ಲಿ ಕಂಡು ಬರುವುದಿಲ್ಲ.

ಬೇಡರಲ್ಲಿ ವಿಶೇಷವಾಗಿ ಮದುವೆ ಸಂದರ್ಭಗಳಲ್ಲಿ ಹೆಣ್ಣಿನ ಅಥವಾ ಗಂಡಿನ ಸೋದರ ಮಾವ ಮತ್ತು ಸೋದರ ಅತ್ತೆಗೆ ವಿಶೇಷ ಗೌರವವಿರುತ್ತದೆ. ಕಾರಣ ಹೆಣ್ಣು ಗಂಡನ್ನು ಧಾರೆ ಎರೆಯುವುದು ಸೋದರ ಮಾವ, ಅರಿಶಿಣದ ನೀರನ್ನು ಗಂಡು-ಹೆಣ್ಣಿಗೆ ಮೊದಲು ಹಾಕುವುದು ಸೋದರತ್ತೆಯಾಗಿರುತ್ತಾಳೆ. ಇವರಲ್ಲಿ ಹಿಂದೆ ವಧು ವರರ ತಂದೆ ತಾಯಿಗಳೇ ಮದುವೆಯನ್ನು ನಿರ್ಧರಿಸುತ್ತಿದ್ದರು. ಮದುವೆಯ ಪೂರ್ವದಲ್ಲಿ ವಧು-ವರರು ಪರಸ್ಪರ ನೋಡುವುದು ಭೇಟಿಯಾಗುವುದು ನಿಷಿದ್ದವಿತ್ತು ಒಂದೇ ಬೆಡಗಿಗೆ ಸೇರಿದವರ ನಡುವೆ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಇಂದಿಗೂ ಸಹ ಈ ಬೆಡಗಿನ ವಿಚಾರದಲ್ಲಿ ಕಟ್ಟುನಿಟ್ಟಾದ ಅನುಸರಣೆ ಇದೆ. ಉದಾಹರಣೆಗೆ ಮಂದಲಾರು ಬೆಡಗಿನವರ ಉಪ ಗೋತ್ರವಾದ ಮಳೆಲಾರು ಬೆಡಗಿನವರಿಗೂ ಮಂದಲಾರಿಗೂ ವೈವಾಹಿಕ ಸಂಬಂಧ ನಡೆಯುವುದಿಲ್ಲ. ಇವರಲ್ಲಿನ ವಿವಾಹ ಕಾರ್ಯಗಳು ೫-೬ ದಿನಗಳ ಕಾಲ ನಡೆಯುತ್ತದೆ. ಒಂದೊಂದು ದಿನ ಒಂದೊಂದು ಕಾರ್ಯ ಮಾಡುವುದು ಸಂಪ್ರದಾಯವಾಗಿದೆ.

### ನಿಶ್ಚಿತಾರ್ಥ/ವೀಳ್ಯೆಶಾಸ್ತ್ರ

ಸಂಪ್ರದಾಯದಂತೆ ಮದುವೆ ನಿಶ್ಚಯವಾಗುವ ಮೊದಲು ಗಂಡು ಹೆಣ್ಣನ್ನು ನೋಡಲು ಹೆಣ್ಣಿನ ಮನೆಗೆ ಹೋಗಿ ಹೆಣ್ಣನ್ನು ಒಪ್ಪಿಕೊಂಡು ನಂತರ ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಬಂದು ಗಂಡಿನ ಮನೆಯನ್ನು ಒಪ್ಪಿಕೊಂಡ ನಂತರ ಎರಡೂ ಕಡೆಯವರು ಒಪ್ಪಿಕೊಂಡು ಸಂಬಂಧ ಬೆಳೆಸಲು ನಿರ್ಧರಿಸುತ್ತಾರೆ. ಒಂದು ಶುಭದಿನ ನೋಡಿ ಗಂಡಿನ ಬಂಧುಬಳಗದವರು ಹೆಣ್ಣಿನ ಮನೆಗೆ ಹೋಗುತ್ತಾರೆ ಗಂಡಿನ ಕಡೆಯವರು ಅಂದು ಬಿಳಿ ಬಣ್ಣದ ಒಂದು ಸೀರೆ, ಎರಡು ಕುಪ್ಪಸ, ಎರಡು ತೆಂಗಿನಕಾಯಿ ಹಣ್ಣು ಹೂವುಗಳನ್ನು ತೆಗೆದುಕೊಂಡು ಬರುತ್ತಾರೆ. ಅಂದು ಕರಿಕಂಬಳಿಯನ್ನು ಹಾಸಿ ವಧು–ವರರನ್ನು ಗದ್ದಿಗೆಯ ಮೇಲೆ ಕುಳ್ಳರಿಸಿ ಆರತಿಬೆಳಗಿ, ಕಾಯಿ, ಕುಪ್ಪಸ ಉಡಿ ತುಂಬುತ್ತಾರೆ. ಈ ಸಂದರ್ಭದಲ್ಲಿ ಎಲ್ಲಾ ಕುಲಬಾಂಧವರು ಇರುತ್ತಾರೆ. ವಿಶೇಷವೆಂದರೆ ಮ್ಯಾಸಬೇಡರಲ್ಲಿ ಮಳೆಲಾರು ಎಂಬ ಬೆಡಗಿನವರು ನಿಶ್ಚಿತಾರ್ಥ ಸಂದರ್ಭದಲ್ಲಿ ಕರಿ ಕಂಬಳಿಯ ಗದ್ದಿಗೆ ಹಾಸುವ ಮತ್ತು ಎತ್ತುವ ಹಕ್ಕು ಪಡೆದಿರುತ್ತಾರೆ. ಮದುವೆ ನಿಶ್ಚಯದ ಅಂಗವಾಗಿ ವಿಳ್ಯೆಶಾಸ್ತ್ರ ಮಾಡುತ್ತಾರೆ ವಿಳ್ಯೆಶಾಸ್ತ್ರ ಮಾಡುವಾಗ ಮೊದಲು ಮೂರು ಕಟ್ಟೆಮನೆ ದೊರೆಗಳಿಗೆ(ನಾಯಕನಹಟ್ಟಿ ಕಟ್ಟೆಮನೆ, ನನ್ನಿವಾಳ ಕಟ್ಟೆಮನೆ, ಗೋನೂರು ಕಟ್ಟೆಮನೆ) ಹನ್ನೆರಡು ಗುಡಿಕಟ್ಟೆಯ ಯಜಮಾನರಿಗೆ ವೀಳ್ಯೆ ತೆಗೆದಿಡುತ್ತಾರೆ. ಆ ವೀಳ್ಯೆವನ್ನು ಆಯಾ ಗುಡಿಕಟ್ಟೆ, ಕಟ್ಟೆಮನೆ ಮತ್ತು ಬೆಡಗುಗಳಿಗೆ ಸಂಬಂಧಿಸಿದ ಯಾರಾದರೊಬ್ಬರು ಬಂದು ವೀಳ್ಯೆವನ್ನು ಪಡೆಯುವುದರ ಮೂಲಕ ನಿಶ್ಚಿತಾರ್ಥಕ್ಕೆ ಒಪ್ಪಿಗೆ ಸೂಚಿಸುತ್ತಾರೆ. ಹಿಂದಿನ ಕಾಲದಲ್ಲಿ ಕಟ್ಟೆಮನೆಯ ದೊರೆ, ಗುಡಿಕಟ್ಟೆ ಯಜಮಾನ ಮತ್ತು ಪೂಜಾರಿ, ದೈವದವರ ಸಮ್ಮುಖದಲ್ಲಿ ನಿಶ್ಚಿತಾರ್ಥ ಮಾಡುತ್ತಿದ್ದರಂತೆ ಕಾರಣಾಂತರದಿಂದ ದೊರೆ, ಯಜಮಾನ, ಪೂಜಾರಿಗಳು ಬಾರದಿದ್ದಲ್ಲಿ ಅವರಿಗೆ ತೆಗೆದಿಟ್ಟ ವೀಳ್ಯೆವನ್ನು ಅವರ ಮನೆಗೆ ಮುಟ್ಟಿಸುತ್ತಿದ್ದರಂತೆ. ಪ್ರಸ್ತುತ ಇದು ಸಾಂಕೇತಿಕವಾಗಿ ಆಯಾಯ ಬೆಡಗಿಗೆ ಸಂಬಂಧಿಸಿದ ವ್ಯಕ್ತಿಗಳೇ ವೀಳ್ಯೆವನ್ನು ತೆಗೆದುಕೊಳ್ಳುವುದರ ಮೂಲಕ ಕಾರ್ಯವನ್ನು ನೆಡೆಸಿಕೊಡುತ್ತಾರೆ. ಮಳೇಲೋರು ಬೆಡಗಿನವನು ಹಾಸಿದ ಕರಿಕಂಬಳಿಯ ಗದ್ದುಗೆ ಮೇಲೆ ಹೆಣ್ಣನ್ನು ಕುಳ್ಳರಿಸಿ ಗಂಡಿನ ಕಡೆಯವರು ತಂದಿದ್ದ ಸೀರೆ, ಕುಪ್ಪಸ, ಹಣ್ಣು ಕಾಯಿ ಇತ್ಯಾದಿ ಸಾಮಾನುಗಳನ್ನು ವಧುವಿಗೆ ಉಡಿ ತುಂಬುತ್ತಾರೆ, ನಂತರ ಹೆಣ್ಣಿನ ಕಡೆ ಒಬ್ಬ ಹಿರಿಯ ವ್ಯಕ್ತಿ ಮತ್ತು ಗಂಡಿನ ಕಡೆಯ ಒಬ್ಬ ಹಿರಿಯ ವ್ಯಕ್ತಿ ಎದುರು ಬದುರು ಕುಳಿತುಕೊಂಡು ಕುಲಸ್ಥರ ಸಮ್ಮುಖದಲ್ಲಿ ಎಲೆ ಅಡಿಕೆಯನ್ನು ಬದಲಾಯಿಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಈ ಮನೆಯ ಹೆಣ್ಣನ್ನು ಇಂಥವರಿಗೆ ಕೊಟ್ವಿ ಇಂಥವರ ಹೆಣ್ಣನ್ನು ಇಂಥವರು(ನಾವು) ಮಾಡಿಕೊಂಡ್ವಿ ಎಂದು ಮೂರು ಸಲ ಹೇಳಿ ಹೆಣ್ಣನ್ನು ಖಾಯಂ ಮಾಡಿಕೊಳ್ಳುತ್ತಾರೆ. ನಿಶ್ಚಿತಾರ್ಥ ಅಥವಾ ವೀಳ್ಯೆಶಾಸ್ತ್ರ ಮುಗಿದ ನಂತರ ಯಾವುದೇ ಕಾರಣಕ್ಕೆ ಹೆಣ್ಣಿನ ಕಡೆಯವರಾಗಲಿ ಅಥವಾ ಗಂಡಿನ ಕಡೆಯವರಾಗಲಿ ಮಾತು ಬದಲಾಯಿಸುವಂತಿಲ್ಲ, ಅಂದೇ ಕೆಲವರು ಮದುವೆಯ ದಿನವನ್ನು ನಿಗಧಿಪಡಿಸುತ್ತಾರೆ. ಈ ಶಾಸ್ತ್ರಕ್ಕೆ ಯಾವುದೇ ಕಾರಣಕ್ಕೂ ಮಾಂಸದ ಅಡುಗೆ ಮಾಡುವುದಿಲ್ಲ.

**ಹಿರಿಯರ ಹಬ್ಬ/ದೈವದ ಊಟ**

ವರನ ಕಡೆಯವರು ತಮ್ಮ ಮನೆಯಲ್ಲಿ ಹಿರಿಯರ ಹಬ್ಬ ಮಾಡಿ ಕುಲಸ್ಥರಿಗೆ ಊಟ ಹಾಕುವ ಈ ಪದ್ಧತಿಗೆ ದೈವದ ಊಟ ಅಥವಾ 'ದೈದೂಟ' ಎಂದು ಕರೆಯುತ್ತಾರೆ. ವರನು ಮೊದಲು ತಮ್ಮ ಮನೆದೇವರಿಗೆ ಹೋಗಿ ಹಣ್ಣುಕಾಯಿ ಎಡೆಮಾಡಿ ತಲೆಗೆ ಹಾಲು ಹಾಕಿಸಿಕೊಂಡು ಬರುತ್ತಾರೆ. ಕಂಪಳದೇವರ ಹಟ್ಟಿಯವರು ಸಾಮಾನ್ಯವಾಗಿ ಅಲ್ಲೇ ಇರುವ ಕಂಪಳರಂಗಸ್ವಾಮಿ ಗುಡಿಗೆ ಹೋಗಿ ತೀರ್ಥ ಹಾಕಿಸಿಕೊಂಡು ಬರುತ್ತಾರೆ ಇನ್ನು ಕೆಲವರು ಅಕ್ಕಿ, ಎಲೆ, ಅಡಿಕೆ ದಕ್ಷಿಣೆ(ಕಾಸು) ತೆಗೆದುಕೊಂಡು ದೇವರ ಎತ್ತುಗಳ ಹಟ್ಟಿಗೆ ಹೋಗಿ ಅಲ್ಲಿನ ಕಿಲಾರಿಗಳಿಗೆ ಅವುಗಳನ್ನು ಒಪ್ಪಿಸುತ್ತಾರೆ. ಆಗ ಕಿಲಾರಿಯು ಮದುವೆ ಗಂಡನ್ನು ಕುಳ್ಳರಿಸಿ ಅವನ ತಲೆಯ ಮೇಲೆ ಗೋಮೂತ್ರ ಪ್ರೋಕ್ಷಿಸಿ ನೀರುಹಾಕಿ ಮೈಮೇಲಿನ ಬಟ್ಟೆ ಬಿಡಿಸಿ ಇಲ್ಲಿಂದಲೇ ತೆಗೆದುಕೊಂಡು ಹೋಗಿದ್ದ ಹೊಸ ಬಟ್ಟೆಯನ್ನು ಉಡಿಸಿ ಅಂದರೆ ಮದುಮಗನನ್ನಾಗಿ ಮಾಡಿ ಪೇಟಸುತ್ತಿ ಕಚ್ಚೆಪಂಚೆ ತೊಡಿಸಿ ಕಳುಹಿಸಿಕೊಡುತ್ತಾನೆ. ಅಲ್ಲಿ ಬಿಟ್ಟ ಬಟ್ಟೆಯನ್ನು ಮದುಮಗ ಅಲ್ಲೇ ಬಿಟ್ಟುಬರಬೇಕು. ಮನೆಗೆ ತರಬಾರದು, ಹೀಗೆ ಮನೆದೇವರ ಗುಡಿಯಲ್ಲಿ ಅಥವಾ ಕಂಪಳದೇವರ ಗುಡಿಯಲ್ಲಿ ಇಲ್ಲವೆ ದೇವರ ಎತ್ತುಗಳ ರೊಪ್ಪದಲ್ಲಿ ಮದುವೆ ಗಂಡು ತಲೆಯ ಮೇಲೆ ಹಾಲು ಇಲ್ಲವೆ ತೀರ್ಥ, ಗೋಮೂತ್ರ ಹಾಕಿಸಿಕೊಂಡು ಮದುಮಗನಾಗಿ ರೆಡಿಯಾಗಿ ಬರುವುದಕ್ಕೆ 'ಹರಿನೀರು ಹಾಕಿಸುವುದು' (ಅರಿನೀರು ಹಾಕಿಸುವುದು) ಎಂದು ಕರೆಯುತ್ತಾರೆ. ಅರಿನೀರು ಹಾಕಿಸಿಕೊಂಡು ಬಂದ ನಂತರ ಆದಿನ ಸಂಜೆ ಒಂದು ಹೊಸ ಮಣ್ಣಿನ ಕುಂಭ, ಒಂದು ಚೊಂಬಿನಲ್ಲಿ ನೀರು ತುಂಬಿಟ್ಟು ಅರಿಶಿಣ ಕುಂಕುಮದ ನೂಲನ್ನು ಎರಡಕ್ಕೂ ಕಟ್ಟುತ್ತಾರೆ. ಎರಡು ಕುಂಭದ ಮೇಲೆ ತೆಂಗಿನಕಾಯಿಯನ್ನು ಇಟ್ಟು ವಧು-ವರರಿಗೆ ತಂದಿದ್ದ ಹೊಸ ಬಟ್ಟೆಗಳನ್ನು ಏರಿಸಿ ಕಳಸ ಹೂಡಿ ಕಳಸದ ಚೊಂಬಿಗೆ ತಾಳಿಯನ್ನು ಕಟ್ಟುತ್ತಾರೆ. ಅಂದು ಹಟ್ಟಿಯಲ್ಲಿ ತಮ್ಮ ಪಿತೃಗಳಿಗೆ ಪೂಜೆ ಸಲ್ಲಿಸುತ್ತಾರೆ. ಬೇಟೆಯ ಆಯುಧಗಳಿಗೆ ಅಂದು ಪೂಜೆ ನಡೆಯುತ್ತದೆ. ಆ ದಿನ ಮ್ಯಾಸಮಂಡಲಕ್ಕೆ ಸಿಹಿ ಊಟದ ವ್ಯವಸ್ಥೆ ಮಾಡಿರುತ್ತಾರೆ. ಅಂದು ದೈವಕ್ಕೆ ಮಾಡಿದ ಅಡುಗೆಯನ್ನು ಮದ್ಲಿಂಗನು ಪೂಜೆ ಮಾಡುತ್ತಾನೆ ಈ ಸ್ಥಳದಲ್ಲಿ ದಾಸಯ್ಯನು ಇರುತ್ತಾನೆ ದಾಸಯ್ಯನು ಶಂಖ ಊದಿ ಜಾಗಟೆ ಬಾರಿಸಿ ಗೊವಿಂದಾ ಗೋವಿಂದಾ ಎಂದು ಕೂಗುತ್ತಾನೆ ನಂತರ ಊಟ ಪ್ರಾರಂಭವಾಗುತ್ತದೆ. ಮ್ಯಾಸಮಂಡಲಕ್ಕೆ (ಕುಲಸ್ಥರಿಗೆ) ಕಡ್ಡಾಯವಾಗಿ ಮೊದಲ ಪಂಕ್ತಿಯಲ್ಲಿ ಊಟ ಬಡಿಸಬೇಕಾಗುತ್ತದೆ. ನಂತರ ಹಟ್ಟಿಯವರಿಗೆ ಬಡಿಸುತ್ತಾರೆ. ಇದಕ್ಕೆ ಪೆದ್ದಲು ಪಂಡುವ(ಹಿರೇರ ಹಬ್ಬ) ಎಂದು ಕರೆಯುತ್ತಾರೆ. ಈ ಹಿರೇರ ಹಬ್ಬವನ್ನು ಗಂಡಿನ ಮನೆಯವರು ಮಾತ್ರ ಮಾಡುತ್ತಾರೆ, ಹೀಗೆ ಹಿರೇರ ಹಬ್ಬ ಮಾಡಿ ದೈವಕ್ಕೆ ಊಟ ಹಾಕಿ ಮರುದಿನ ಮದುವೆಯ ದಿಬ್ಬಣ ಹೆಣ್ಣಿನ ಮನೆಗೆ ಹೊರಡುತ್ತದೆ. ದಿಬ್ಬಣ ಹೋಗುವ ದಾರಿ ಮಧ್ಯದಲ್ಲಿ ಹುತ್ತದ ಪೂಜೆ ಮಾಡುವುದು ವಿಶೇಷ ನಂತರ ಹೆಣ್ಣಿನ ಊರಿನಲ್ಲಿ ಅಂದು ರಾತ್ರಿ ಗಂಡಿನ ಕಡೆಯವರಿಗೆ ಆತಿಥ್ಯ ನೀಡಿ ಪ್ರತ್ಯೇಕವಾಗಿ ಉಳಿಯಲು ವ್ಯವಸ್ಥೆ ಮಾಡಿರುತ್ತಾರೆ, ಮರುದಿನ ತಾಳಿಶಾಸ್ತ್ರವಿರುತ್ತದೆ. ಆ ದಿನ ರಾತ್ರಿ ಮಧುಮಗಳನ್ನು ಮತ್ತು ಮದುಮಗನನ್ನು ಸಿದ್ದಗೊಳಿಸುತ್ತಾರೆ ಮಧುಮಕ್ಕಳಿಗೆ ಅರಿಶಿಣ ಹಚ್ಚುವುದು ಮೊದಲಾದ ಕಾರ್ಯಗಳನ್ನು ಆ ದಿನ ರಾತ್ರಿಯಲ್ಲಾ ಮಾಡುತ್ತಾರೆ.

### ಮದ್ಲಿಂಗನ ಶಾಸ್ತ್ರ

ಈಗಾಗಲೇ ಹೇಳಿದಂತೆ ಮದುವೆಯ ಗಂಡನ್ನು ಸಾಮಾನ್ಯವಾಗಿ ದೇವರ ಎತ್ತುಗಳ ರೊಪ್ಪದಲ್ಲಿ (ಮುತ್ತೈಗಳ ಗೂಡು) ಅಥವಾ ಕಂಪಳರಂಗಸ್ವಾಮಿ ದೇವಸ್ಥಾನದಲ್ಲಿ ಮದ್ಲಿಂಗನನ್ನಾಗಿ ಮಾಡುತ್ತಾರೆ. ಅಲ್ಲದೆ ಅವರವರ ಮನೆದೇವರ ಪೌಳಿಗಳಲ್ಲಿ ಮಾಡುತ್ತಾರೆ. ಅಲ್ಲಿರುವ ಕಿಲಾರಿಗಳು ದೇವರ ಎತ್ತುಗಳ ಸಮ್ಮುಖದಲ್ಲಿ ಮದುಮಗನನ್ನು ನಿಲ್ಲಿಸಿ ಮದುವೆ ಮನೆಯವರು ತಂದ ಅರಿಶಿಣ ಹಾಗೂ ರೊಪ್ಪದಲ್ಲಿನ ವಿಭೂತಿಯಿಂದ ಮಿಶ್ರಮಾಡಿ ತಲೆಯ ಮೇಲೆ ನೀರನ್ನು ಹಾಕಿ ಮದ್ಲಿಂಗನನ್ನಾಗಿ ಮಾಡುತ್ತಾರೆ. ಅಲ್ಲಿ ಕುರಿ ಉಣ್ಣೆಯ ಕಂಕಣವನ್ನು ಮದ್ಲಿಂಗನ ಕೈಗೆ ಕಟ್ಟಲಾಗುತ್ತದೆ.

### ಮದ್ಲಿಂಗನ ಶಾಸ್ತ್ರದ ಹಾಡು

ಹಟ್ಟಿಯ ಕಂಪಳರಂಗಸ್ವಾಮಿ ದೇವರಿಗೆ ಸಂಬಂಧಿಸಿದವರು ಬೇರೆ ಬೇರೆ ಹಟ್ಟಿಗಳಿಂದ ಮದುವೆಯಾಗುವ ವರನು ದೇವರ ಸನ್ನಿಧಿಯಲ್ಲಿ ದೇವರ ನೀರು ಮೈಮೇಲೆ ಹಾಕಿಸಿಕೊಂಡು ಅಲ್ಲೇ ಮಧುಮಗನಾಗಿ ಹೋಗುತ್ತಾನೆ. ಇವರಲ್ಲಿ ಬಹುತೇಕ ಮದುವೆಗಳು ತಮ್ಮ ಹತ್ತಿರದ ಸಂಬಂಧಗಳಲ್ಲೇ ಆಗುತ್ತಿದ್ದವು ಮತ್ತು ಇಂದಿಗೂ ಹಾಗೆಯೇ ಮುಂದುವರಿಯುತ್ತಿವೆ ಅವುಗಳನ್ನು ಅವರು ಹಾಡುವ ಸೋಬಾನೆ ಪದಗಳಲ್ಲಿ ತಿಳಿದಿಕೊಳ್ಳಬಹುದು.

ಸೋಬಾನ ಶುಭ ಕಲ್ಯಾಣಾ ಯಾರೀಗಾದಾವಮ್ಮ
ನಾಡಿಗೆ ದೊಡ್ಡವರಾ ಮನೆ ಮುಂದೆ.. ಸೋಬಾನವೇ...

ನಾಡಿಗೇ ದೊಡ್ಡವರಾ ಮನೆಮುಂದೆ ಶುಭಕಲ್ಯಾಣ
ಆಗುಟ್ಟೆ ಈಗ  ಬೇಳೇದಾವೇ.. ಸೋಬಾನವೇ..

ಈಬೂತಿ ಇಡಿರಮ್ಮ ಈರಾದ ಮಾರನಿಗೆ
ತಾಯಮ್ಮ ಅಡದಾ ಮಗನೀಗೇ  ಸೋಬಾನವೇ..

ತಾಯಮ್ಮನಡುದಾ ಮಗನೇ ನಾಗೇಶಿಗೆ
ಈಬೂತಿಡು ಜಾಣೆ ಶುಬದಿಂದಾ ಸೋಬಾನವೇ..

ಅಕ್ಕಾ ಇಲ್ಲಾದ ಮದುವೆ ಅಕ್ಕಾರೆ ಇಲ್ಲವೆಂದು
ಈಬೂತಿ ನಾಗೇಶಿ ಈಡಾವಲ್ಲಾ  ಸೋಬಾನವೇ_

ತಂಗೀ ಇಲ್ಲಾದ ಮದುವೆ ಅಂದಾವಿಲ್ಲಾವೆಂದು
ಗಂಧಾ ನಾಗೇಶಿ ಈಡಾವಲ್ಲಾ ಸೋಬಾನವೆ............

ಇದೇ ರೀತಿ ಪದವು ಮುಂದುವರಿಯುತ್ತದೆ, ಇವರು ಹಾಡುವ ಈ ಸೋಬಾನೆ ಪದಗಳಲ್ಲಿ ಅಂದಿನ ವಿವಾಹ ಸಂಪ್ರದಾಯಗಳು ಯಾವ ರೀತಿ ನಡೆಯುತ್ತಿದ್ದವು ಎಂಬುದನ್ನು ಒಳಗೊಂಡಿವೆ

ಅಲ್ಲದೆ ಸಂಬಂಧಿಕರಾದ ಅಕ್ಕ, ತಂಗಿಯರು ಮದುವೆಗಳಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸುತ್ತಾರೆ, ಎಷ್ಟು ಪ್ರಮುಖರಾರಿದ್ದಾರೆ ಎಂಬುದನ್ನು ಮತ್ತು ಇವರಲ್ಲಿ ರಕ್ತಸಂಬಂಧಿಗಳಲ್ಲೇ ಹೆಚ್ಚಾಗಿ ವಿವಾಹವಾಗುವುದನ್ನು ಸೋಬಾನೆ ಪದಗಳಿಂದ ತಿಳಿದುಕೊಳ್ಳಬಹುದಾಗಿದೆ.

ಮದ್ಲಿಂಗನ ಉಡುಪು ಈ ಹಿಂದೆ ಮಧುಮಗನಿಗೆ ಚಡ್ಡಿ, ಚೆಲ್ಲಣ, ತಲೆಗೆ ರುಮಾಲು, ಬಿಳಿ ಅಂಗಿ ಅಥವಾ ಬರೀ ಮೈಯಲ್ಲೇ ಹೆಗಲಮೇಲೊಂದು ಕರಿಕಂಬಳಿ ಬೆಳ್ಳಿಯ ವಿರದಾಳಿ ಕೈಯಲ್ಲೊಂದು ಭಾಕು ಹಿಡಿದಿರಬೇಕು ಆ ಭಾಕುವಿಗೆ/ಚಾಕುವಿಗೆ ಕೆಂಪುವಸ್ತ್ರ ಸುತ್ತಿ ಅದರ ತುದಿಗೆ ನಿಂಬೆಹಣ್ಣನ್ನು ಸಿಕ್ಕಿಸಿರುತ್ತಾರೆ. ಕಿವಿಗೆ ಹತ್ಕಡಗ ಬೆರಳಿಗೆ ಉಂಗುರ, ಹಣೆಗೆ ವಿಭೂತಿ ಕುಂಕುಮವಿಟ್ಟುಕೊಂಡು ರುಮಾಲಿನಲ್ಲಿ(ಪೇಟ) ಹೊಂಬಾಳೆ ಸಿಕ್ಕಿಸಿಕೊಂಡು ಕೊರಳಲ್ಲಿ ಒಂದು ಹೂವಿನ ಹಾರ ಹಾಕಿ ಮಧುಮಗನನ್ನು ಸಿದ್ದಗೊಳಿಸುತ್ತಾರೆ. ಈಗಲೂ ಹೀಗೆಯೇ ಅನುಸರಿಸುತ್ತಾರೆ.

ಮಧುಮಗಳ ಉಡುಗೆ ಮಧುಮಗಳಿಗೆ ಅಂಚು ಮುಸುಕಿನ ಒಂದು ಬಿಳಿಸೀರೆ ಉಡಿಸುತ್ತಾರೆ ಅದನ್ನು ಧಾರೆಸೀರೆ ಎನ್ನುತ್ತಾರೆ. ಮತ್ತು ಆ ಸೀರೆಯನ್ನು ಗಂಡಿನ ಮನೆಯವರು ತಂದಿರುತ್ತಾರೆ. ಬಿಳಿಕುಪ್ಪಸ (ಮೊದಲು ಕುಪ್ಪಸ ತೊಡುತ್ತಿರಲಿಲ್ಲ ಅದೇ ಸೀರೆಯ ಸೆರಗನ್ನು ಹೆಗಲು, ಎದೆ ಮುಚ್ಚುವಂತೆ ಮರೆಮಾಡಿಕೊಂಡಿರುತ್ತಿದ್ದರು) ಬೆಂಡೋಲೆ, ಬುಗಡಿ ಕಡ್ಡಿ, ಬೆಳ್ಳಿಕಡಗ, ಪಟ್ಟಿ ಮುಂತಾದವುಗಳಿಂದ ಅಲಂಕರಿಸುತ್ತಾರೆ.

**ಧಾರೆ ಮುಹೂರ್ತ/ತಾಳಿಶಾಸ್ತ್ರ**

ಹಟ್ಟಿಯ ಬೇಡರಲ್ಲಿ ಅಥವಾ ಎಲ್ಲಾ ಮ್ಯಾಸಬೇಡರಲ್ಲಿ ಮದುವೆಯು ಹೆಣ್ಣಿನ ಮನೆಯ ಮುಂದೆ ಅಥವಾ ಹಟ್ಟಿಯ ದೇವಸ್ಥಾನದ ಮುಂಭಾಗ ಧಾರೆ ಮುಹೂರ್ತ ನಡೆಸುತ್ತಾರೆ. ಮೂಹೂರ್ತಕ್ಕೆ ಯಾವುದೇ ಪಂಚಾಂಗವನ್ನು ಇವರು ನೊಡುವುದಿಲ್ಲ, ಬ್ರಾಂಹ್ಮಣ, ಪುರೋಹಿತರನ್ನಾಗಲಿ ಅಥವಾ ಜಂಗಮರನ್ನಾಗಲಿ ಮದುವೆಗೆ ಕರೆತರುವುದಿಲ್ಲ, ಸಾಮಾನ್ಯವಾಗಿ ಮುಹೂರ್ತದ ಹಿಂದಿನ ದಿನವೇ ಗಂಡಿನ ಕಡೆಯವರು ಹೆಣ್ಣಿನ ಹಟ್ಟಿಗೆ ಬಂದು ವಾಸ್ತವ್ಯ ಮಾಡಿರುತ್ತಾರೆ. ಮುಹೂರ್ತದ ದಿನ ಪ್ರಾತಃಕಾಲ ಅನೇಕ ಕ್ರಿಯೆಗಳು ನಡೆಯುತ್ತವೆ. ಪೂಜಾರಿಯು ವಧು ವರರ ತಲೆಗೆ ಹಾಲು ತುಪ್ಪ ಎರೆಯುತ್ತಾರೆ ನಂತರ ಐದು ಜನರು ನೀರು ಹಾಕುತ್ತಾರೆ. ಇದಕ್ಕೆ ತೊಡುನಿಳ್ಳು(ಮೆಲೆ ನೀರು) ಎಂದು ಕರೆಯುತ್ತಾರೆ ನಂತರ ಮಧುಮಕ್ಕಳಿಗೆ ಹೊಸ ಬಟ್ಟೆ ತೊಡಿಸಿ ಕರಿಕಂಬಳಿ ಗದ್ದಿಗೆ ಹಾಸಿ ಅವರನ್ನು ಕುಳ್ಳರಿಸಿ ಕಳಸ ಹೂಡುತ್ತಾರೆ. ಹೀಗೆ ಮಾಡುವ ಶಾಸ್ತ್ರಕ್ಕೆ ಹಿರೇರ ಶಾಸ್ತ್ರ ಎಂದು ಹೆಸರು. ಮಳೆಲೋರು ಬೆಡಗಿನ ವ್ಯಕ್ತಿ ಗುರುಸ್ಥಾನದವರಿಗೆ, ಕಟ್ಟೆಮನೆಯವರಿಗೆ, ಸಮಾಜದ ಹಿರಿಯರಿಗೆ ವೀಳ್ಯೆಗಳನ್ನು ಸಲ್ಲತಕ್ಕವರಿಗೆ ಕೊಡುತ್ತಾನೆ. ಒಂದು ಕಾಯಿ ಮತ್ತು ಒಂದು ವಿಳ್ಯೆ ಕಂಬಳಿ ರೀತಿ ಹಾಗೇ ಇರುತ್ತದೆ ಅದನ್ನು ಕೊನೆಗೆ ತಾನು(ಮಳೆಲೋರು ಬೆಡಗಿನವನು) ತೆಗೆದುಕೊಳ್ಳುತ್ತಾನೆ. ವಧುವಿಗೆ ಹದಿನಾಲ್ಕು ರೂಪಾಯಿ ಅಥವಾ ಎರಡು ರೂಪಾಯಿ ತೆರವನ್ನು ವರನ ಮನೆಯವರು ಕೊಡುತ್ತಾರೆ. ಈ ಹಣದಲ್ಲಿ ಒಂದು ರೂಪಾಯಿಯನ್ನು ವರನ ಬಂಧುಗಳಿಗೆ ಮರಳಿ ಕೊಡುತ್ತಾರೆ. ಇದಾದ

ನಂತರ ಮತ್ತೊಂದು ಕಂಬಳಿಯ ಮೇಲೆ ಕಂಚಿನ ತಟ್ಟೆಯಲ್ಲಿ ವಧುವಿನ ಕೈಯನ್ನಿರಿಸುತ್ತಾರೆ. ವರನ ಕೈಯಲ್ಲಿ ಎಲೆಯನ್ನು ಸುಳಿಮಾಡಿ ಕೊಟ್ಟು ಅವನ ಕೈ ಮೂಲಕ ಎಲೆಯ ಸುಳಿಯಿಂದ ಅವಳ ಕೈ ಮೇಲೆ ಹಾಲು ಸುರಿಸುತ್ತಾರೆ. ನಂತರ ವಧುವಿನ ಕೈ ಮೇಲಿಟ್ಟು ಹಾರೈಸುವರು ತಟ್ಟೆಯಲ್ಲಿ ಹಾಲು ಮುಟ್ಟಿಸಿ 'ನನಗೆ ನೀನೇ ಗತಿ ನಿನಗೆ ನಾನೇ ಗತಿ' ಎಂದು ಪ್ರಮಾಣ ಮಾಡಿಸುತ್ತಾರೆ ನಂತರ ಮಾಂಗಲ್ಯವನ್ನು ಗುರು ಹಿರಿಯರು ಮುಟ್ಟಿ ಆರ್ಶೀವದಿಸಿ ಅದನ್ನು ವರನಿಗೆ ಕೊಡುತ್ತಾರೆ, ವರನು ವಧುವಿನ ಕೊರಳಿಗೆ ಆ ತಾಳಿಯನ್ನು ಕಟ್ಟುತ್ತಾನೆ. ಆಗ ಬಂದಿದ್ದ ಬಂಧುಗಳೆಲ್ಲಾ ಅಕ್ಷತೆಯನ್ನು ಹಾಕುತ್ತಾರೆ ಹಿಂದಿನ ಕಾಲದಲ್ಲಿ ಅಕ್ಷತೆಗಾಗಿ ಜೋಳವನ್ನು ಬಳಸುತ್ತಿದ್ದರು. ಕೆಲವು ವರ್ಷಗಳ ಹಿಂದೆ ಇವರಲ್ಲಿನ ಪಾಮುಡ್ಲಾರು ಗೋತ್ರದಲ್ಲಿ ಮದುವೆಯ ವರನು ಮದುವೆಯ ಸ್ಥಳಕ್ಕೆ ಹೋಗದೆ ಕೇವಲ ತನ್ನ ಆಯುಧ, ಭಾಕು ಕಳುಹಿಸುತ್ತಿದ್ದನು ವಧುವಿನ ಕೈಯಿಂದ ಭಾಕುವಿಗೆ ಕಂಕಣ ಕಟ್ಟಿಸುತ್ತಿದ್ದರು ಹೀಗೆ ಆ ಕೋಲಿನ ಆಯುಧ, ಅಥವಾ ಭಾಕುವಿಗೆ ಕಂಕಣ ಕಟ್ಟಿಸುವುದರ ಮೂಲಕ ಮದುವೆ ನಡೆಯುತ್ತಿತ್ತು.

ಇದೇ ರೀತಿ ಮಂದ್ಲಾರು ಪಂಗಡದಲ್ಲಿನ ಬುಲ್ಲುಡ್ಲು ಗೋತ್ರದವರು ದೇವರ ಎತ್ತಿನ ಕಿಲಾರಿಗಳು ಆಗಿರುವುದರಿಂದ ಎಲ್ಲಾ ಸಮಯದಲ್ಲೂ ಎತ್ತುಗಳ ರೊಪ್ಪದಲ್ಲಿಯೇ ಇರಬೇಕಾಗಿದ್ದರಿಂದ ಮದುವೆ ಮಂಟಪಕ್ಕೆ ತನ್ನ ಪರವಾಗಿ ಮದ್ಲಿಂಗನನ್ನಾಗಿ ತನ್ನ ಕೋಲಿನ ಆಯುಧ ಅಥವಾ ಭಾಕುವನ್ನು ತೆಗೆದುಕೊಂಡು ಹೋಗಿ ಅದಕ್ಕೆ ಸಿಂಗರಿಸಿ ವಧುವಿನಿಂದ ಕಂಕಣ ಕಟ್ಟಿಸುತ್ತಿದ್ದರು. ಈ ಹಟ್ಟಿಯಲ್ಲಿ ಇಂದಿಗೂ ಸಹ ನವ ವಧು ವರರನ್ನು ಕಾಲು ನಡಿಗೆಯಲ್ಲಿಯೇ ಮೆರವಣಿಗೆ ಮಾಡಲಾಗುತ್ತದೆ. ಪರಂಪರೆಯಿಂದಲೂ ಪಶುಪಾಲಕರಾದ ಇವರು ತಮ್ಮ ಸಾಕು ದನಗಳನ್ನು ಅದರಲ್ಲೂ ಎತ್ತುಗಳನ್ನು ತಮ್ಮ ಹಿರಿಯರು(ಮುತ್ತೈಗಳು) ದೇವರು ಎಂದು ಆರಾಧಿಸುವ ಕಾರಣ ಎತ್ತುಗಳನ್ನು ಕೃಷಿ ಕೆಲಸಕ್ಕೆ ಮಾತ್ರ ಬಳಸಬೇಕೇ ವಿನಃ ಮೆರವಣಿಗೆಯಂತಹ ವೈಭೋಗಕ್ಕೆಲ್ಲ ಬಳಸಬಾರದು ಎಂಬುದು ಇವರ ನಂಬಿಕೆಯಾಗಿದೆ ಹೀಗೆ ಮೆರವಣಿಗೆಯ ನಂತರ ಗಂಡಿನ ಮನೆಗೆ ಬಂದ ವಧುವರರನ್ನು ಬಾಗಿಲಲ್ಲೇ ತಡೆದು ವರನ ಅಕ್ಕ ಅಥವಾ ಅತ್ತೆ ನಿನ್ನ ಹೆಂಡತಿಯ ಹೆಸರೇನು? ಎಂದು ಕೇಳುತ್ತಾಳೆ ಹಾಗೆಯೇ ವಧುವನ್ನು ಸಹಾ ನಿನ್ನ ಗಂಡನ ಹೆಸರೇನು? ಎಂದು ಕೇಳುತ್ತಾರೆ. ಆಗ ವಧು□ವರರು ತಮ್ಮ ಸಂಗಾತಿಯ ಹೆಸರನ್ನು ಕಾವ್ಯಮಯವಾಗಿ ವರ್ಣಿಸಿ ಹೇಳುತ್ತಾರೆ.

**ಮನೆದುಂಬುವ ಶಾಸ್ತ್ರ**

ಮದುವೆ ಮುಗಿದ ನಂತರ ಹೆಣ್ಣನ್ನು ಕರೆದುಕೊಂಡು ಗಂಡಿನ ಮನೆಗೆ ಹೋಗುತ್ತಾರೆ. ಮನೆಯ ಬಾಗಿಲ ಹತ್ತಿರ ಹೊದಾಗ ಕೃಷಿ ಉಪಕರಣಗಳಾದ ಬಾರಿಕೋಲು, ಕೂರಿಗೆ ಬಟ್ಟಲುಗಳನ್ನು ಗಂಡಿನ ಹೆಗಲಮೇಲೆ ಇಟ್ಟು ವಧುವಿನ ಕೈಗೆ ಕಡಗೋಲು, ಬುತ್ತಿಯ ಗಂಟು ಮತ್ತು ಬಿತ್ತನೆಯ ಬೀಜಗಳನ್ನು ಕೊಟ್ಟಿರುತ್ತಾರೆ. ಸಾಂಕೇತಿಕವಾಗಿ ಭೂಮಿಯನ್ನು ಉಳುವುದು, ಬೀಜ ಬಿತ್ತುವುದು ಹೊಲದಲ್ಲಿ/ ಅಡವಿಯಲ್ಲಿ ಊಟಮಾಡುವುದು ಮೊದಲಾದ ಶಾಸ್ತ್ರಗಳನ್ನು ಮಾಡಿಸುತ್ತಾರೆ. ಈ ಹಿಂದೆ

ನಿಜವಾಗಿಯೂ ದಂಪತಿಗಳನ್ನು ಹೊಲಕ್ಕೆ ಕರೆದೊಯ್ದು ಎರಡು ಸಾಲು ಬಿತ್ತನೆ ಮಾಡಿಸುತ್ತಿದ್ದರು ಬಿತ್ತಿದ ಬೀಜ ಬೆಳೆಯುವ ಆಧಾರದ ಮೇಲೆ ಆ ಹೆಣ್ಣಿನ ಫಲವಂತಿಕೆ ಅಳೆಯುತ್ತಿದ್ದರು. ಅದು ಇಂದು ಕೇವಲ ಶಾಸ್ತ್ರವಾಗಿ ಆಚರಣೆಯಲ್ಲಿದೆ. ಮ್ಯಾಸಬೇಡರ ವೃತ್ತಿ ವ್ಯವಸಾಯ ಮತ್ತು ಕಾಡಾಡಿ ಬದುಕಿನ ಸಂಸ್ಕೃತಿಯನ್ನು ಈ ಶಾಸ್ತ್ರ ಪ್ರತಿಬಿಂಬಿಸುತ್ತದೆ. ವಧು-ವರರು ಮನೆಯ ಹತ್ತಿರ ಬಂದು ಒಳಗೆ ಹೋಗುವಾಗ ವರನ ತಂಗಿ ದಂಪತಿಗಳ ಕಾಲು ತೊಳೆದು ಹೆಣ್ಣು ಕೇಳುವ ಶಾಸ್ತ್ರ ಮಾಡುತ್ತಾಳೆ ನಂತರ ತಲೆಬಾಗಿಲಿಗೆ ಮೊಳೆ ಬಡಿದು ಹೆಣ್ಣನ್ನು ಒಳಗೆ ಕರೆದುಕೊಳ್ಳುತ್ತಾಳೆ.

**ಗಂಗೆಪೂಜೆ**

ಮನೆದುಂಬುವ ಶಾಸ್ತ್ರ ಮುಗಿದ ನಂತರ ಮರುದಿನ ಮುಂಜಾನೆ ಹಟ್ಟಿಯ ಹತ್ತಿರವಿರುವ ಕೆರೆ, ಬಾವಿ, ತೊರೆಗೆ ವಧುವನ್ನು ಕರೆದುಕೊಂಡು ಹೋಗಿ ಗಂಗೆಪೂಜೆಯನ್ನು ಮಾಡಿಸಿಕೊಂಡು ಬರುತ್ತಾರೆ. ಪೂಜೆಯ ನಂತರ ಐದು ಜನ ಮುತ್ತೈದೆಯರೊಂದಿಗೆ ವಧು ನೀರು ತುಂಬಿದ ಗಡಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ಮನೆಗೆ ಬರುತ್ತಾಳೆ ಆಗ ವರನು ಮನೆಯ ಬಾಗಿಲ ಹತ್ತಿರ ನಿಂತು ಮುತ್ತೈದೆಯರು ಹೊತ್ತು ನಿಂತ ಗಡಿಗೆಗಳಿಗೆ ಪೂಜೆ ಮಾಡಿ ನೀರು ತಂದ ಹೆಂಡತಿಯನ್ನು ಯಾರು ಯಾರು ಬಂದಿರಿ? ಎಂದು ಕೇಳುತ್ತಾನೆ ಅಗ ಹೆಂಡತಿ ನಾನು ಮತ್ತು ಗಂಗಮ್ಮ ಇಬ್ಬರೂ ಕೂಡಿ ಬಂದೆವು ಎಂದು ಹೇಳುತ್ತಾಳೆ ನಂತರ ಗಂಡ ತುಂಬಿದ ಕೊಡವನ್ನು ಇಳಿಸಿಕೊಂಡು ವಧುವನ್ನು ಒಳಗೆ ಕರೆದುಕೊಳ್ಳುತ್ತಾನೆ. ಮಾರನೆಯ ದಿನ ಹೆಣ್ಣಿನ ಕಡೆಯ ನೆಂಟರಿಷ್ಟರು ಹೆಣ್ಣನ್ನು ಕರೆದುಕೊಂಡು ತಮ್ಮ ಹಟ್ಟಿಗೆ ವಾಪಸಾಗುತ್ತಾರೆ. ಮದುವೆಯಾದ ಐದು ಅಥವಾ ಹದಿನಾರನೇ ದಿನದಲ್ಲಿ ಅಥವಾ ಅನುಕೂಲವಾದ ದಿನದಲ್ಲಿ ಗಂಡಿನ ಕಡೆಯವರನ್ನು ಬರಮಾಡಿಕೊಂಡು ಪ್ರಸ್ತದ ಕಾರ್ಯವನ್ನು ನೆರವೇರಿಸುತ್ತಾರೆ.

**ನಾಗೋಲಿ ಶಾಸ್ತ್ರ**

ಇದು ಕೊನೆಯ ಶಾಸ್ತ್ರವಾಗಿದೆ ಇದನ್ನು ಮದುವೆಯ ಮರುದಿನ ನೆರವೇರಿಸುತ್ತಾರೆ. ಈ ದಿನದಂದು ವಧು-ವರರ ಕಂಕಣಗಳನ್ನು ಬಿಚ್ಚುತ್ತಾರೆ ಮದುವೆ ಮಂಟಪವನ್ನು ಪೂಜೆ ಮಾಡಿ ಎಲ್ಲರಿಗೂ ತಾಂಬೂಲ ಹಂಚಲಾಗುವುದು. ತಾಂಬೂಲ ಹಂಚುವಾಗ ಒಂದು ವಿಶೇಷ ಕ್ರಮವನ್ನು ಅನುಸರಿಸುತ್ತಾರೆ. ತಮ್ಮ ಸಾಂಸ್ಕೃತಿಕ ನಾಯಕರಿಗೆ, ಮನೆದೇವರಿಗೆ ಪ್ರತ್ಯೇಕವಾಗಿ ತಾಂಬೂಲ ತೆಗೆದಿರಿಸಲಾಗುತ್ತದೆ. ನಂತರದಲ್ಲಿ ಸ್ಥಳೀಯ ಕಟ್ಟೆಮನೆ ಯಜಮಾನರಿಗೆ, ಮುಖಂಡರಿಗೆ ಮತ್ತು ಉಳಿದವರಿಗೆ ಹಂಚಲಾಗುವುದು. ಅಂದು ಮದುವೆಯ ಚಪ್ಪರದಲ್ಲಿ ವಧುವನ್ನು ಕುಳ್ಳರಿಸಿ ವರನು ಅವಳ ಮೇಲೆ ಬಾಗಿ ನಿಂತಾಗ ಅವನ ಮೇಲೆ ನೀರು ಹಾಕುತ್ತಾರೆ ಅದೇ ರೀತಿ ವರನನ್ನು ಕುಳ್ಳರಿಸಿ ವಧು ಬಾಗಿ ನಿಂತಾಗ ಅವಳ ಮೇಲೆ ಹಾಕಿದ ನೀರು ವರನ ತಲೆ ಮೈಮೇಲೆ ಬೀಳುವ ಹಾಗೆ ನೀರೆರೆಯುತ್ತಾರೆ. ಅಂದಿನ ದಿನವೇ ರಾತ್ರಿ ಪ್ರಸ್ತದ ಕಾರ್ಯ ನಡೆಯುವುದು ಮುಂದಿನ ದಿನಗಳಲ್ಲಿ ದಂಪತಿಗಳು ಬಂಧುಗಳ ಮನೆಗಳಿಗೆ ಪ್ರಯಾಣ ಮಾಡುತ್ತಾರೆ.

### ೨.೩.೮.೭ ಸಾವಿನ ಸಂದರ್ಭದ ಆಚರಣೆಗಳು

ಹಟ್ಟಿಯವರಲ್ಲಿ ಸಾವಿಗೆ ಸಂಬಂಧಿಸಿದಂತೆ ವೈಶಿಷ್ಟಪೂರ್ಣವಾದ ಆಚರಣೆಗಳಿವೆ. ಯಾವುದಾದರೂ ತೀವ್ರ ರೋಗದಿಂದ ಬಳಲುತ್ತಿರುವವರನ್ನು ಅಥವಾ ಮತ್ತಾವುದೋ ಕಾರಣದಿಂದ ಸಾವಿನಂಚಿನಲ್ಲಿರುವವರನ್ನು ಮನೆಯ ಹೊರಗೆ ತಂದು ಮಲಗಿಸುತ್ತಾರೆ. ಜೀವ ಹೋಗುವಾಗ ಕುಟುಂಬದವರು ಸಂಬಂಧಿಕರು ಆ ವ್ಯಕ್ತಿ ಬಾಯಿಗೆ ನೀರು ಬಿಡುತ್ತಾರೆ. ಜೀವ ಹೋದ ತಕ್ಷಣ ಓಣಿಯ ಹಾಗೂ ಹಟ್ಟಿಯ ಹಿರಿಯರೆಲ್ಲಾ ಸೇರಿ ಮುಂದಿನ ಕಾರ್ಯದ ವ್ಯವಸ್ಥೆ ಮಾಡುತ್ತಾರೆ. ವ್ಯಕ್ತಿ ಸತ್ತ ಸುದ್ದಿಯನ್ನು ಅವನ ಮನೆಯ ಒಕ್ಕಲು ಮಗ, ಮಾದಿಗ ಸಮುದಾಯದ ವ್ಯಕ್ತಿಯಿಂದ(ಮನೆಮಾದಿಗರು ಎನ್ನುತ್ತಾರೆ) ಸಂಬಂಧಿಕರ ಊರುಗಳಿಗೆ ತಲುಪಿಸಲಾಗುತ್ತಿತ್ತು ಇತ್ತೀಚೆಗೆ ಮೊಬೈಲ್ ಪೋನ್ ಮೂಲಕ ಸುದ್ದಿ ಮುಟ್ಟಿಸುತ್ತಾರೆ. ಶವದ ಮೈ ತೊಳೆದು ನೆಂಟರು ತಂದ ಹೊಸ ಬಿಳಿ ಬಟ್ಟೆಯನ್ನು ಹೊದಿಸಿ ಉದ್ದಕ್ಕೆ ಮಲಗಿಸುತ್ತಾರೆ. ಮನೆಯ/ಗುಡಿಸಲ ಮುಂದುಗಡೆಯ ಬದಿಯಲ್ಲಿ ಹೊಸ ಗಡಿಗೆಯಲ್ಲಿ ಮೂರು ಪಾವು ಅಕ್ಕಿಯನ್ನು ಬೇಯಿಸುತ್ತಾರೆ. ಆ ಸಮಯಕ್ಕಾಗಲೇ ಸ್ಮಶಾನದಲ್ಲಿ ಶವ ಹೂಳುವ ಜಾಗವನ್ನು ಗುರುತಿಸಿ ಕುಣಿ ತೆಗೆಯುವ ಕಾರ್ಯವೂ ಸಾಗಿರುತ್ತದೆ. ಸಂಬಂಧಿಕರೆಲ್ಲಾ ಬಂದ ನಂತರ ಮಾದಿಗ ಸಮುದಾಯದವರು ಸಿದ್ದಗೊಳಿಸಿದ ಕಳ್ಳಿಯ ಚಟ್ಟದಲ್ಲಿ ಮುಖ ಮೇಲೆ ಮಾಡಿ ಉದ್ದಕ್ಕೆ ಶವವನ್ನು ಮಲಗಿಸುತ್ತಾರೆ. ಇದರ ಮೇಲೆ ಬಿಳಿದಾದ ಹೊಸ ಬಟ್ಟೆಯನ್ನು ಹಾಕಿ ಭದ್ರವಾಗಿ ಕಟ್ಟಿದ ಮೇಲೆ ಶವಯಾತ್ರೆ ಪ್ರಾರಂಭವಾಗುತ್ತದೆ. ಶವದ ಮುಂದೆ ಅನ್ನದ ಸೋರೆಯನ್ನು ಹಗ್ಗದಿಂದ ಕಟ್ಟಿಕೊಂಡು ಹಿರಿಯ ಮಗ ಅಥವಾ ಕಿರಿಯ ಮಗ ಅದನ್ನು ಹಿಡಿದುಕೊಂಡು ಮುಂದೆ ಸಾಗುತ್ತಾನೆ. ಇದನ್ನು ಪಿಂಡ ಎಂದು ಕರೆಯುತ್ತಾರೆ. ಸುಡುಗಾಡಿನ ಅರ್ಧದಾರಿಗೆ ಹೋದ ಮೇಲೆ ದಾರಿಯಲ್ಲಿನ ತಂಗಟಿ ಗಿಡದ ಬುಡಕ್ಕೆ ಸಿದಿಗೆ ಇರಿಸುವರು ಕೊಳು ನೀರು ಹೊತ್ತ ಮಗ ಮತ್ತು ಸಿದಿಗೆ ಎರಡೂ ಸೇರಿಕೊಂಡು ಮೂರು ಸುತ್ತು ಸುತ್ತಿಸುವರು ನಂತರ ಅದೇ ಗಿಡದ ಬುಡದಲ್ಲಿ ಕೊಳು ನೀರಿನ ಮಡಕೆ ಇರಿಸಿ ಹೆಣದ ಹಿಂದೆ ಹೋದವರೆಲ್ಲಾ ಕೈಗೊಂದು ಕಲ್ಲು ತೆಗೆದು ಮಡಕೆ ಒಡೆದು ಹಾಕುವರು ಅಲ್ಲಿಂದ ಮುಂದಕ್ಕೆ ಹೆಣವನ್ನು ಹೊತ್ತು ಬಂಧುಬಳಗದವರು ಮುಂದೆ ನಡೆದರೆ ಕೊಳು ನೀರು ತೆಗೆದುಕೊಂಡು ಹೊದ ಮಗ ಸಿದಿಗೆ ಹೊರುವವರನ್ನು ಹಿಂತಿರುಗಿ ನೋಡದೆ ಮರಳಿ ಮನೆಗೆ ಬರುತ್ತಾರೆ.

ತಂಗಟಿ ಗಿಡದಿಂದ ಶವದ ತಲೆಯನ್ನು ದಕ್ಷಿಣ ದಿಕ್ಕಿಗೆ ಮಾಡಿಕೊಂಡು ಗುಳಿಯ ಹತ್ತಿರಕ್ಕೆ ತರುವರು ಗುಳಿಯಲ್ಲಿ ಒಂದಿಷ್ಟು ತಂಗಟಿ ಸೊಪ್ಪು ಹಾಕಿ ನೆಲವನ್ನು ಮೆತ್ತಗೆ ಮಾಡಿ ಅದರ ಮೇಲೆ ಶವವನ್ನು ಇಳಿಸಿ ಮತ್ತೆ ಮೇಲೊಷ್ಟು ಸೊಪ್ಪು ಮುಚ್ಚುವರು ಹೀಗೆ ಶವದ ಬೆನ್ನು ಭಾಗ, ಹೊಟ್ಟೆಯ ಭಾಗಕ್ಕೆಲ್ಲಾ ಸೊಪ್ಪು ಹಾಕಿ ಮುಚ್ಚಿದಮೇಲೆ ಮೊದಲು ಹಿರಿಯ ಮಗ ಅಥವಾ ಕಿರಿ ಮಗ ಶವದ ತಲೆಯಭಾಗದಲ್ಲಿ ಪೂಜೆಯನ್ನು ಮಾಡಿ ಮೊದಲು ಮೂರು ಹಿಡಿ ಮಣ್ಣು ಹಾಕುವನು ನಂತರ ನೆರದವರೆಲ್ಲಾ ಮೂರು ಮೂರು ಹಿಡಿ ಮಣ್ಣು ಹಾಕಿ ಸಮಾಧಿ ಮುಚ್ಚುತ್ತಾರೆ. ಹೀಗೆ ಸಮಾಧಿ ಮಾಡಿದ ನಂತರ ಅದರ ಮೇಲೆ ಕಲ್ಲನ್ನು ಇಟ್ಟು ಅದರ ಸುತ್ತಾ ಮುಳ್ಳು ಇಟ್ಟು ಬರುತ್ತಾರೆ.

ಮೂಲತಃ ಕಾಡುವಾಸಿಗಳಾದ ಇವರು ತಾವು ಹೂಳಿದ ಶವವನ್ನು ಕಾಡು ಪ್ರಾಣಿಗಳಾದ ನಾಯಿ, ನರಿ, ತೋಳ, ಇತರ ಪ್ರಾಣಿಗಳು ಸಮಾಧಿಯನ್ನು ಬಗೆದು ಹೆಣವನ್ನು ತಿಂದು ಹಾಕಬಾರದೆಂದು ಸಮಾಧಿಗೆ ಮಣ್ಣನ್ನು ಬಲವಾಗಿ ಹಾಕಿ ಅದರ ಮೇಲೂ ಕಲ್ಲು ಮುಳ್ಳು ಹಾಕಿಬಿಡುವರು ಹೆಣ ಹೂಳಿ ಬಂದವರು ಹಾಗೆಯೇ ಮನೆಯ ಒಳಗೆ ಹೋಗುವಂತಿಲ್ಲ ಮರಣ ಹೊಂದಿದವನ ಮನೆಯಲ್ಲಿ ಶವ ಸುಡುಗಾಡಿಗೆ ಹೋಯ್ದ ನಂತರ ಮನೆಯಲ್ಲಿ ಉಳಿದಿದ್ದ ಯಾರಾದರೂ ಗೋವಿನ ಸಗಣಿ ತಂದು ಮನೆಯ ಮುಂದೆ ಇಟ್ಟು ಅದರೊಳಗೆ ಗರಿಕೆ ಹುಲ್ಲು ಇಡುವರು ಶವಸಂಸ್ಕಾರ ಮಾಡಿ ಬಂದವರು ಅಲ್ಲೇ ಎಲ್ಲಾದರೂ ದಾರಿಯ ಮಧ್ಯದಲ್ಲಿ ಹಳ್ಳ ಅಥವಾ ಬಾವಿಯಲ್ಲಿ ಸ್ನಾನಮಾಡಿ ಇಲ್ಲವೆ ಮನೆಯ ಹೊರಗೆ ಸ್ನಾನ ಮಾಡಿ ದೇವರ ಗುಡಿಗೆ ಹೋಗಿ ನಂತರ ಮರಣ ಹೊಂದಿದವನ ಮನೆಗೆ ಹೋಗಿ ಅಲ್ಲೇ ಬಾಗಿಲಲ್ಲಿ ಇಟ್ಟಿದ್ದ ಗರಿಕೆಯನ್ನು ಕಾಲ ಹೆಬ್ಬೆರಳಿಂದ ಮುಟ್ಟಿಸಿಕೊಂಡು ಒಳಗೆ ಬರುವರು ಒಳಗೆ ಬಂದು ಅಲ್ಲಿ ಇಟ್ಟಿದ್ದ ದೀಪವನ್ನು ನೋಡಿ ಸತ್ತ ವ್ಯಕ್ತಿಯ ಬಳಗದವರಿಗೆ ವಿಳ್ಯೆ ಕೊಟ್ಟು ಹನ್ನೆರಡನೆಯ ದಿನದ ಕಾರ್ಯಕ್ಕೆ ಬರುವೆವೆಂದು ಹೇಳಿ ಹೋಗುವುದುಂಟು.

### ೨.೩.೯ ಒಳಾಡಳಿತ ಪದ್ಧತಿ

ಪ್ರತಿಯೊಂದು ಬುಡಕಟ್ಟಿನವರು ತಮ್ಮ ಸದಸ್ಯರ ವರ್ತನೆಗಳನ್ನು ನಿಯಂತ್ರಿಸಲು ಹಾಗೂ ಸಾಮಾಜಿಕ ಬದ್ಧತೆಯನ್ನು ರಕ್ಷಿಸಲು ತಮ್ಮದೇ ಆದ ನೀತಿ ನಿಯಮಗಳನ್ನು ಹೊಂದಿ ಅದಕ್ಕೆ ಅನುಸಾರವಾಗಿ ನ್ಯಾಯಪದ್ಧತಿ ರಚಿಸಿಕೊಂಡಿರುತ್ತಾರೆ. ಅದರಂತೆಯೇ ಕಂಪಳದೇವರ ಹಟ್ಟಿಯ ಮ್ಯಾಸಬೇಡರೂ ಸಹ ತಮ್ಮದೇ ಆದ ಒಳಾಡಳಿತ ಪದ್ಧತಿಯನ್ನು ಹೊಂದಿದ್ದು ಅದನ್ನು ಪರಂಪರೆಯಿಂದ ಅನುಸರಿಸಿಕೊಂಡು ಬರುತ್ತಿದ್ದಾರೆ. ತಮ್ಮ ತಮ್ಮಲ್ಲಿನ ಜಗಳ ವ್ಯಾಜ್ಯ ಧಾರ್ಮಿಕ ಕಾರ್ಯ ಮುಂತಾದ ವಿಧಿ ನಿಷೇಧಗಳಿಗೆ ಸಂಬಂಧಿಸಿದಂತೆ ಹಟ್ಟಿಯ ಪ್ರಮುಖರು ಸೇರಿ ಚರ್ಚಿಸಿ ತೀರ್ಮಾನ ಕೈಗೊಳ್ಳುವುದು ಇಂದಿಗೂ ನಡೆದುಕೊಂಡು ಬಂದಿದೆ ಇವುಗಳು ವಿವಿಧ ಹಂತದಲ್ಲಿ ತೀರ್ಮಾನ ವಾಗುತ್ತವೆ ಅಂದರೆ ಇಂದಿನ ನ್ಯಾಯವ್ಯವಸ್ಥೆಯಂತೆ ಸ್ಥಳೀಯ ನ್ಯಾಯಾಲಯ, ಉಚ್ಚ ನ್ಯಾಯಾಲಯ, ಸರ್ವೋಚ್ಚ ನ್ಯಾಯಾಲಯಗಳಂತೆ ಬೇಡರ ಒಳಾಡಳಿತ ನ್ಯಾಯಪದ್ಧತಿಯಲ್ಲೂ ಸಹ ಕೆಳಹಂತದಿಂದ ಮೊದಲು ಗುಡಿಕಟ್ಟೆ, ನಂತರ ಕಟ್ಟೆಮನೆ ಮೂರನೆಯದು ಗುರುಸ್ಥಾನ(ಕಂಪಳದೇವರ ಹಟ್ಟಿ) ಕೊನೆಯ ನ್ಯಾಯಕೇಂದ್ರ ಸಂಸ್ಥಾನ(ಆನೆಗುಂದಿ ರಾಜರ ಆಸ್ಥಾನ)ಗಳೆಂಬ ನ್ಯಾಯಕಟ್ಟೆಗಳಿವೆ ಇವುಗಳನ್ನು ಸ್ಥಳಿಯ ನ್ಯಾಯಾಲಯ, ಉಚ್ಚ ನ್ಯಾಯಾಲಯ, ಸರ್ವೋಚ್ಚ ನ್ಯಾಯಾಲಯಗಳಿಗೆ ಹೋಲಿಸಬಹುದು. ಮ್ಯಾಸಬೇಡರಲ್ಲಿ ತಮ್ಮಲ್ಲಿ ಒಂದೊಂದು ಕುಲ, ಬೆಡಗುಗಳಿಗೆ ಸಂಬಂಧಿಸಿದಂತೆ ಒಂದೊಂದು ಗುಡಿಕಟ್ಟೆಗಳಿವೆ ಇಂತಹ ಹಲವಾರು ಗುಡಿಕಟ್ಟೆಗಳು ಸೇರಿ ಪ್ರಾದೇಶಿಕವಾಗಿ ಒಂದು ಕಟ್ಟೆಮನೆ ನಿರ್ಮಾಣವಾಗಿರುತ್ತದೆ.

ಕರ್ನಾಟಕದ ಮ್ಯಾಸಮಂಡಲದ(ಬಳ್ಳಾರಿ, ಚಿತ್ರದುರ್ಗ, ತುಮಕೂರು, ದಾವಣಗೆರೆ)ಎಲ್ಲಾ ಮ್ಯಾಸಬೇಡರಿಗೆ ಮೂರು ಕಟ್ಟೆಮನೆಗಳು ಹನ್ನೆರಡು ಗುಡಿಕಟ್ಟೆಗಳು(ಹನ್ನೆರಡು ಪೆಟ್ಟಿಗೆ ದೇವರುಗಳು)ಇದ್ದು ಇವರ ಯಾವುದೇ ವ್ಯಾಜ್ಯಗಳ ನ್ಯಾಯನಿರ್ಣಯಗಳನ್ನು ಈ ಗುಡಿಕಟ್ಟೆ ಅಥವಾ ಕಟ್ಟೆಮನೆ ಇಲ್ಲವೇ

ಗುರುಸ್ಥಾನಗಳಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಸಣ್ಣ ಪುಟ್ಟ ವ್ಯಾಜ್ಯಗಳನ್ನು ಗುಡಿಕಟ್ಟೆಯಲ್ಲಿ ಬಗೆಹರಿಸಿಕೊಂಡರೆ ಗಂಭೀರ ಅಪರಾಧಗಳನ್ನು ಕಟ್ಟೆಮನೆಗಳಲ್ಲಿ ಹಾಗೂ ಗುರುಸ್ಥಾನವಾದ ಕಂಪಳದೇವರ ಹಟ್ಟಿಯಲ್ಲಿ ಬಗೆಹರಿಸಿಕೊಳ್ಳುತ್ತಾರೆ ಈ ಗುರುಸ್ಥಾನದಲ್ಲಿ ಹೆಚ್ಚಾಗಿ ಧಾರ್ಮಿಕ ವಿಚಾರಗಳು ಚರ್ಚೆಯಾಗುತ್ತವೆ(ಮಹಿತಿ: ಪೂಜಾರಿ ರೇವಣ್ಣ, ಕಂಪಳದೇವರ ಹಟ್ಟಿ)ಸಾಮಾನ್ಯವಾಗಿ "ಗುಡಿಕಟ್ಟೆ, ಕಟ್ಟೆಮನೆ ಮತ್ತು ಗುರುಸ್ಥಾನಗಳಲ್ಲಿ ಬಗೆಹರಿಯದಿದ್ದ ವ್ಯಾಜ್ಯಗಳನ್ನು ಮ್ಯಾಸಬೇಡರ ಮೂರು ಕಟ್ಟೆಮನೆಯ ಯಜಮಾನರು ಸೇರಿ ಆನೆಗುಂದಿ ರಾಜರ ಅರಮನೆ ಅಥವಾ ಅಲ್ಲಿನ ನ್ಯಾಯದ ಕಟ್ಟೆ(ಅದು ಹಂಪಿಯ ಭೀಮನ ಬಾಗಿಲ ಬಳಿ ಇದೆ)ಯಲ್ಲಿ ಸೇರಿ ಆನೆಗುಂದಿ ರಾಜರ ನೇತೃತ್ವದಲ್ಲಿ ಬಗೆಹರಿಸುತ್ತಿದ್ದರು. ಇದನ್ನು ಸಂಸ್ಥಾನ ಎಂದು ಕರೆಯುತ್ತಾರೆ"(ಮಾಹಿತಿ: ಪಾಪನಾಯಕ, ಹೂಡೇಂ, ೫೫, ಕಟ್ಟೆಮನೆ ನಾಯಕ). ಪ್ರಸ್ತುತ ಚಿತ್ರದುರ್ಗ ಜಿಲ್ಲೆಯಲ್ಲಿಯ ಮ್ಯಾಸಬೇಡರಿಗೆ ಮೂರು ಕಟ್ಟೆಮನೆಗಳು ಹನ್ನೆರಡು ಗುಡಿಕಟ್ಟೆಗಳು ಮತ್ತು ಒಂದು ಗುರುಸ್ಥಾನ ಮಾತ್ರ ಉಳಿದುಕೊಂಡಿವೆ ಮ್ಯಾಸಬೇಡರ ಪ್ರಮುಖ ಮೂರು ಕಟ್ಟೆಮನೆಗಳೆಂದರೆ, ೧) ಗೋನೂರು ಕಟ್ಟೆಮನೆ ೨) ನನ್ನಿವಾಳ ಕಟ್ಟೆಮನೆ ೩)ನಾಯಕನಹಟ್ಟಿ ಕಟ್ಟೆಮನೆ. ಕಂಪಳದೇವರ ಹಟ್ಟಿಯು ಈ ಮೂರು ಕಟ್ಟೆಮನೆಗಳಿಗೆ ಗುರುಸ್ಥಾನವಾಗಿದೆ. ಇಂದಿಗೂ ಸಹ ಕಂಪಳದೇವರ ಹಟ್ಟಿಯಲ್ಲಿ ಏನಾದರೂ ಸಂಘರ್ಷಗಳಾದರೆ ಅವುಗಳನ್ನು ಅಲ್ಲಿಯೇ ಹಿರಿಯರೆಲ್ಲಾ ಸೇರಿ ಬಗೆಹರಿಸುತ್ತಾರೆ. ಆದರೆ ಕೆಲವೊಂದು ಅಪರಾಧಗಳಿಗೆ ಮಾತ್ರ ಪೊಲೀಸ್ ಠಾಣೆ, ಕೋರ್ಟಗಳಿಗೆ ಹೋಗುತ್ತಿದ್ದಾರೆ. ಅದೂ ಸಹ ಇತ್ತೀಚಿನ ಬೆಳವಣಿಗೆಯಾಗಿದೆ.

ಕಂಪಳದೇವರ ಹಟ್ಟಿ ಅಥವಾ ಇತರ ಮ್ಯಾಸಬೇಡರ ಹಟ್ಟಿಗಳಲ್ಲಿ ಯಾವುದೇ ಒಂದು ಮನೆತನದಲ್ಲಿ ಸಂಘರ್ಷ, ಗಂಡ ಹೆಂಡತಿಯರ ಮನಸ್ತಾಪ, ಅಂತರ್ಜಾತಿ ವಿವಾಹ, ಜೈಲಿಗೆ ಹೋಗಿಬಂದರೆ, ಚಪ್ಪಲಿಯಿಂದ ಹೊಡೆಸಿಕೊಂಡರೆ, ಕೋಳಿ ತಿಂದರೆ, ಹೆಂಡ ಕುಡಿದರೆ, ಈಚಲ ಹಣ್ಣು ತಿಂದರೆ, ವಿಧವೆ ಅನೈತಿಕ ಸಂಬಂಧ ಹೊಂದಿದ್ದರೆ ಶುಭಕಾರ್ಯಗಳಲ್ಲಿ ಕುಲಸ್ಥರಿಗೆ ಊಟ ಹಾಕದಿದ್ದರೆ, ಹಟ್ಟಿಯೊಳಗೆ ಬೇಸಾಯದ ಹಸೆ ಹಾಕಿದರೆ, ದೇವರಿಗೆ ಕಾಸು ಮೀಸಲು ಕೊಡದಿದ್ದರೆ. ಒಂದೇ ಕುಲ ಅಥವಾ ಸಂಪಿಂಡದಲ್ಲಿ ವಿವಾಹವಾದರೆ, ಮಾದಿಗರ ಮನೆಯಲ್ಲಿ ಊಟ ಮಾಡಿದರೆ, ಹಟ್ಟಿಯ ಯಜಮಾನ ಅಥವಾ ಪೂಜಾರಿಗೆ ಅಪಮಾನ ಮಾಡಿದರೆ ಮೊದಲಾದ ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸಿದ ವ್ಯಕ್ತಿಗೆ ದಂಡ ಅಥವಾ ಶಿಕ್ಷೆ ವಿಧಿಸುವ ಹಕ್ಕು 'ಗುಡಿಕಟ್ಟೆ' ಮತ್ತು ಕಟ್ಟೆಮನೆಯ ಯಜಮಾನರಿಗೆ ಕೊಡಲಾಗಿರುತ್ತದೆ. ಆದ್ದರಿಂದ ಇಲ್ಲಿನ ಜನರು ದಂಡ, ಶಿಕ್ಷೆ ಮತ್ತು ಬಹಿಷ್ಕಾರಕ್ಕೆ ಹೆದರಿ ತಮ್ಮ ಸಮುದಾಯದ ಸಾಮಾಜಿಕ ನಿಯಮಗಳನ್ನು ಮೀರದೇ ಪಾಲಿಸುತ್ತಾರೆ. ಗುಡಿಕಟ್ಟೆ, ಕಟ್ಟೆಮನೆ ಮತ್ತು ಗುರುಸ್ಥಾನಗಳನ್ನು ನ್ಯಾಯದೇವತೆಯ ಪವಿತ್ರ ಸ್ಥಾನಗಳೆಂದು ಅಲ್ಲಿಯ ಯಜಮಾನ ಮತ್ತು ದೊರೆಯನ್ನು ದೇವರ ಸಮಾನ ಎಂದು ಹಟ್ಟಿಯ ಜನರು ನಂಬಿದ್ದಾರೆ. ಅಲ್ಲದೆ ಯಜಮಾನ ಮತ್ತು ದೊರೆಗಳು ಕೂಡಾ ಪ್ರಾಮಾಣಿಕರು, ನೀತಿವಂತರು, ಅನುಭವಿಕರು ಹಾಗೂ ಗಂಭೀರ ಸ್ವಭಾವದವರಾಗಿದ್ದು ನಿಷ್ಪಕ್ಷಪಾತವಾಗಿ ನ್ಯಾಯ ತೀರ್ಮಾನ ಮಾಡುತ್ತಿದ್ದಾರೆ. "ರಾಜ್ಯ ಕಾನೂನನ್ನು ನಿರ್ಮಿಸುತ್ತದೆ ಎನ್ನುವುದಕ್ಕಿಂತ ಕಾನೂನು ರಾಜ್ಯವನ್ನು ನಿರ್ಮಿಸುತ್ತದೆ"[೨೫]. ಎಂಬ ಮಾತು ಇಂಥ

ಬುಡಕಟ್ಟಿನವರ ಅಂದಿನ ನ್ಯಾಯಪದ್ಧತಿಯನ್ನು ನೋಡಿಯೇ ಹೇಳಿರಬೇಕು ಇಂದಿನ ನಮ್ಮ ಕಾನೂನು ನಿಯಮಗಳು ಬುಡಕಟ್ಟುಗಳ ಪ್ರಾಚೀನ ನ್ಯಾಯಪದ್ಧತಿಯನ್ನು ಅನುಸರಿಸಿದವುಗಳೇ ಆಗಿವೆ ಇವರ ಒಳಾಡಳಿತ ಪದ್ಧತಿಯ ಗುಡಿಕಟ್ಟೆ, ಕಟ್ಟೆಮನೆ ಮತ್ತು ಗುರುಸ್ಥಾನಗಳನ್ನು ಇಂದಿನ ನ್ಯಾಯಾಲಯಗಳಿಗೆ ಹೋಲಿಸಿದರೆ ಅವುಗಳ ಯಜಮಾನರನ್ನು ನ್ಯಾಯಾಧೀಶರಿಗೆ ಹೋಲಿಸಬಹುದು.

### ೨.೩.೯.೧ ಗುಡಿಕಟ್ಟೆ

ಮ್ಯಾಸಬೇಡರು ತಮ್ಮ ತಮ್ಮಲ್ಲಿ ತಲೆದೋರುವ ಸಮಸ್ಯೆಗಳಿಗೆ ತಮ್ಮ ತಮ್ಮಲ್ಲೇ ಪಂಚಾಯಿತಿ ಮಾಡಿ ಬಗೆಹರಿಸಿಕೊಳ್ಳುತ್ತಾರೆ. ಇವರ ಪಂಚಾಯಿತಿಗೆ ತಮ್ಮದೇ ಆದ ನ್ಯಾಯಪದ್ಧತಿ ಇದ್ದು ಪ್ರತಿಯೊಂದು ಕುಲ ಅಥವಾ ಬೆಡಗಿಗೆ ಒಂದು ಗುಡಿಕಟ್ಟೆ ರಚಿಸಿಕೊಂಡಿರುತ್ತಾರೆ. ಹಟ್ಟಿಯಲ್ಲಿನ ಪ್ರಮುಖ ದೇವರ ಸನ್ನಿಧಿ ಅಥವಾ ದೇವಸ್ಥಾಗಳನ್ನೇ ಗುಡಿಕಟ್ಟೆ ಎಂದು ಕರೆಯತ್ತಾರೆ. ಸಾಮಾನ್ಯವಾಗಿ ಹತ್ತಾರು ಹಟ್ಟಿಗಳಿಗೆ ಒಂದರಂತೆ ಗುಡಿಕಟ್ಟೆಗಳು ಇರುತ್ತವೆ ಈ ಗುಡಿಕಟ್ಟೆಯ ಹಿರಿಯನನ್ನು ಗುಡಿಕಟ್ಟೆ ಯಜಮಾನ/ದೊರೆ ಎಂದು ಕರೆಯುತ್ತಾರೆ. 'ಗುಡಿಕಟ್ಟು' ಎಂದರೆ ನಿರ್ದಿಷ್ಟವಾದ ಸಾಂಸ್ಕೃತಿಕ ನಾಯಕ/ ಕುಲದೇವರನ್ನು ಆರಾಧಿಸುವ ಹಲವು ಬೆಡಗುಗಳವರು ಸೇರಿ ತಾವು ಆ ನಾಯಕನ ಗುಡಿಕಟ್ಟಿಗೆ ಸೇರಿದವರು ಎಂದು ಕರೆದುಕೊಂಡು ಅದರಂತೆ ನಡೆದುಕೊಳ್ಳುತ್ತಾರೆ. (ಉದಾಹರಣೆ: ಬೋಸೇದೇವರು, ದಡ್ಡಿಸೂರನಾಯಕ, ಬೊಮ್ಮದೇವರು ಇತ್ಯಾದಿ) ತಮ್ಮಲ್ಲಿ ಉಂಟಾಗುವ ವ್ಯಾಜ್ಯಗಳನ್ನು ಅಯಾ ಗುಡಿಕಟ್ಟೆಗಳಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಗುಡಿಕಟ್ಟೆಗಳಲ್ಲಿ ಇತ್ಯರ್ಥವಾಗದ ಸಮಸ್ಯೆಗಳನ್ನು ಕಟ್ಟೆಮನೆಗಳ ಹಂತಕ್ಕೆ ತಗೆದುಕೊಂಡು ಹೋಗಲಾಗುತ್ತದೆ.

### ೨.೩.೯.೨ ಕಟ್ಟೆಮನೆ

ಹಲವಾರು ಗುಡಿಕಟ್ಟುಗಳು ಸೇರಿ ಒಂದು 'ಕಟ್ಟೆಮನೆ' ನಿರ್ಮಾಣವಾಗಿರುತ್ತದೆ. ಈ ಕಟ್ಟೆಮನೆಯ ಮುಖ್ಯಸ್ಥನನ್ನು 'ದೊರೆ' ಅಥವಾ ಯಜಮಾನ ಎಂದು ಕರೆಯುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಮ್ಯಾಸಬೇಡರಿಗೆ ಮೂರು ಕಟ್ಟೆಮನೆಗಳಿವೆ. ಅವುಗಳು ನಾಯಕನಹಟ್ಟಿ ಚಳ್ಳಕೆರೆ ತಾಲೂಕು, ನನ್ನಿವಾಳ ಚಳ್ಳಕೆರೆ ತಾಲೂಕು, ಗೊನೂರು ಚಿತ್ರದುರ್ಗ ತಾಲೂಕುಗಳಲ್ಲಿ ಆ ಕಟ್ಟೆಮನೆಗಳಿವೆ. ಇವರ ಕಟ್ಟೆಮನೆಯು ದೇವಸ್ಥಾನದ ಮುಂಬಾಗದ ಕಟ್ಟೆ ಅಥವಾ ದೇವಸ್ಥಾನದ ಜಗಲಿಗಳೇ ಆಗಿರುತ್ತವೆ. ಇಲ್ಲಿ ದೊರೆಯ ತಿರ್ಪು ಅಂತಿಮವಾಗಿರುತ್ತದೆ, ಹಟ್ಟಿಯ ಗುಡಿಕಟ್ಟೆ ಯಜಮಾನರಿಂದ ಬಗೆಹರಿಯದಿದ್ದ ಗಂಭೀರ ವ್ಯಾಜ್ಯಗಳನ್ನು ಕಟ್ಟೆ ಮನೆಗಳಲ್ಲಿ ಬಗೆಹರಿಸುತ್ತಾರೆ, ಆಗ ಕಟ್ಟೆಮನೆಯ ಯಜಮಾನ, ಪೂಜಾರಿ ಮತ್ತು ದೈವದವರು ಸಭೆಸೇರಿ ಅಪರಾಧಿ ಮತ್ತು ಪಿರ್ಯಾದಿ ಇಬ್ಬರನ್ನು ಕರೆಯಿಸಿ ಕೂಲಂಕುಷವಾಗಿ ವಿಷಯದ ಬಗ್ಗೆ ಪಂಚಾಯಿತಿ ನಡೆಸುತ್ತಾರೆ. ಕಂಪಳದೇವರ ಹಟ್ಟಿಯ ಬೇಡರಿಗೆ ಚಿತ್ರದುರ್ಗ ತಾಲೂಕಿನ 'ಗೋನೂರು ಪವಿತ್ರವಾದ ನ್ಯಾಯಸ್ಥಾನ ಮತ್ತು ಕಟ್ಟೆಮನೆ, ಈ ಕಟ್ಟೆಮನೆಗೆ ಎನುಮಲಾರು ಬೆಡಗಿನವರು ದೊರೆಯಾಗಿದ್ದಾರೆ. ಈ ಗೋನೂರು ಕಟ್ಟೆಮನೆಯನ್ನು ಸತ್ಯದ ಸನ್ನಿಧಿ ಎಂದು ಕರೆಯುತ್ತಾರೆ. ಈ ಗ್ರಾಮದಿಂದ ಪೂರ್ವಕ್ಕೆ ಇರುವ ಆಂಜನೇಯ ಸ್ವಾಮಿಯ ದೇವಸ್ಥಾನದ ಮುಂದೆ

'ಸತ್ಯದ ಕಟ್ಟೆಯಿದೆ' ಗುಡಿಕಟ್ಟೆಯಲ್ಲಿ ತೀರ್ಮಾನವಾಗದಿದ್ದ ವ್ಯಾಜ್ಯಗಳನ್ನು ಇಲ್ಲಿ ತೀರ್ಮಾನ ಮಾಡುತ್ತಾರೆ. ಇತ್ತೀಚೆಗೆ ಇದು ಕಡಿಮೆಯಾಗಿದೆ. ಇಲ್ಲಿ 'ಆಚಾರದ ಕಟ್ಟೆ' ಮತ್ತು 'ಅನಾಚಾರದ ಕಟ್ಟೆ' ಎಂಬ ಎರಡು ಕಟ್ಟೆಗಳಿವೆ ಆಚಾರದ ಕಟ್ಟೆಯ ಮೇಲೆ ಒಳ್ಳೆಯ ವಿಚಾರಗಳನ್ನು ತೀರ್ಮಾನ ಮಾಡಿದರೆ ಅನಾಚಾರದ ಕಟ್ಟೆಯ ಮೇಲೆ ವಿಧವೆ ಅವಿವಾಹಿತಳು ಮೊದಲಾದವರು ತಪ್ಪು ಮಾಡಿದರೆ ಅನಾಚಾರದ ಕಟ್ಟೆಯಲ್ಲಿ ತೀರ್ಮಾನ ಮಾಡಿ ದಂಡ ವಿಧಿಸಲಾಗುತ್ತಿತ್ತು ಮತ್ತು ಆ ದಂಡವನ್ನು ರಾಜ ಬೊಕ್ಕಸಕ್ಕೆ ಕಟ್ಟಬೇಕಾಗಿತ್ತು' (ಮಾಹಿತಿ: ಪಾಪನಾಯಕ, ಹುಡೇಂ, ೫೫, ಮೀಸಲುನಾಯಕ)

### ಯಜಮಾನನ ಪಾತ್ರ

ಹತ್ತಾರು ಹಟ್ಟಿಗಳಿಗೆ ಕೇಂದ್ರವಾಗಿ ಒಂದು ಹಟ್ಟಿಯಲ್ಲಿನ ಹಿರಿಯನನ್ನು ಗುಡಿಕಟ್ಟೆ ಯಜಮಾನನನ್ನಾಗಿ ನೇಮಿಸಿಕೊಂಡಿರುತ್ತಾರೆ. ಆತನಿಗೆ ಸಹಾಯಕವಾಗಿ ಪ್ರತಿ ಹಟ್ಟಿಯಿಂದಲೂ ೩–೪ ಮಂದಿ ಆಯಾ ಬೆಡಗಿನ ಹಿರಿಯರು ನೇಮಕವಾಗಿರುತ್ತಾರೆ. ಹಟ್ಟಿಯಲ್ಲಿ ಹಬ್ಬ ಜಾತ್ರೆ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಹತ್ತಾರು ಹಟ್ಟಿಯ ಜನರು ಬಂದು ದೇವರ ಸನ್ನಿಧಿಯಲ್ಲಿ ಸೇರುತ್ತಾರೆ. ಹಬ್ಬ ಜಾತ್ರೆಗಳು ಮುಗಿದ ಮೇಲೆ ದೇವರ ವೆಚ್ಚದ ಹಣವನ್ನು ಗುಡಿಕಟ್ಟೆಯ ಯಜಮಾನನಿಗೆ ಒಪ್ಪಿಸಿ ಪ್ರಸಾದ ಪಡೆಯುತ್ತಾರೆ. ಈ ಎಲ್ಲಾ ಧಾರ್ಮಿಕ ಕಾರ್ಯಗಳು ಮುಗಿದ ನಂತರ ಕುಲಸ್ಥರು ತಮ್ಮ ಸಮಸ್ಯೆ, ಜಗಳ, ಕೌಟುಂಬಿಕ ಕಲಹ, ಧಾರ್ಮಿಕ ಸಮಸ್ಯೆ ಸಾಮಾಜಿಕ ಸಮಸ್ಯೆ, ವೈವಾಹಿಕ ವಿಚಾರಗಳು, ವ್ಯಭಿಚಾರ ಮೊದಲಾದ ವಿಷಯಗಳು ಗುಡಿಕಟ್ಟೆಯ ಯಜಮಾನರ ಮುಂದೆ ಚರ್ಚಿಸಲಾಗುತ್ತಿದ್ದವು ಆಗ ಗುಡಿಕಟ್ಟೆ ಯಜಮಾನ, ಪೂಜಾರಿ, ಹಟ್ಟಿಯ ಗೌಡ ಮತ್ತು ದೈವದವರು ವಿಚಾರ ಮಾಡಿ ವ್ಯಕ್ತಿಯ ಸಮಸ್ಯೆಗಳನ್ನು ಪರಿಶೀಲಿಸಿ ತೀರ್ಪು ಕೊಡುತ್ತಿದ್ದರು. ಈ ತೀರ್ಪು ಕೇವಲ ಎಲೆ ಅಡಿಕೆ ಅಥವಾ ದಂಡ ವಿಧಿಸುವುದು, ದೇವರ ಗುಡಿಯ ದೀಪಕ್ಕೆ ಎಣ್ಣೆ ಹಾಕಿಸುವುದು ಬೇವಿನ ಕಡ್ಡಿಯಿಂದ ನಾಲಿಗೆ ಸುಡಿಸುವುದು ದೇವರ ಎತ್ತಿನ ಕಿಲಾರಿಗಳಿಂದ ತೀರ್ಥ ಹಾಕಿ ಶುದ್ದಿಗೊಳಿಸುವುದು ದೇವರ ಪೌಳಿಯಲ್ಲಿ ತೀರ್ಥ ಹಾಕಿಸುವುದು, ಬೆಂಕಿ ನೀರು ಕೊಡದೇ ಸಮುದಾಯದಿಂದ ಬಹಿಷ್ಕಾರ ಹಾಕಿಸುವುದು ಕುಲದಿಂದಲೇ ಹೊರ ಹಾಕುವುದು ಇವೇ ಮೊದಲಾದ ಶಿಕ್ಷೆ, ದಂಡ ಬಹಿಷ್ಕಾರಗಳು ವ್ಯಕ್ತಿಯ ಅಪರಾಧಗಳಿಗೆ ಸಂಬಂಧಿಸಿದಂತೆ ನೀಡುತ್ತಿದ್ದರು. ಕೆಲವೊಂದು ಸಂದರ್ಭಗಳಲ್ಲಿ ಗುಡಿಕಟ್ಟೆಯಲ್ಲಿ ಬಗೆಹರಿಯದಿದ್ದ ಗಹನವಾದ ವಿಚಾರಗಳನ್ನು ಕಟ್ಟೆಮನೆಗೆ ವರ್ಗಾಯಿಸಿ ಕಟ್ಟೆಮನೆಗಳ ಮುಖ್ಯಸ್ಥರಿಗೆ ಪತ್ರ ಬರೆದು ವಿಷಯ ಮುಟ್ಟಿಸುತ್ತಿದ್ದರು ಗುಡಿಕಟ್ಟೆಗಳೆಂದರೆ ಬರೀ ನ್ಯಾಯ ತೀರ್ಮಾನ ಮಾಡುವುದು ಇದರ ಮುಖ್ಯ ಕಾರ್ಯವಲ್ಲ ಹಬ್ಬ, ಜಾತ್ರೆ, ವಿವಾಹ ಮೊದಲಾದ ಧಾರ್ಮಿಕ ಕಾರ್ಯಗಳನ್ನು ವ್ಯವಸ್ಥಿತವಾಗಿ ಗುಡಿಕಟ್ಟೆ, ಕಟ್ಟೆಮನೆಗಳ ಯಜಮಾನರು ನಿರ್ವಹಿಸಿಕೊಂಡು ಹೋಗುತ್ತಾರೆ.

### ಪ್ರಮುಖ ಕಟ್ಟೆಮನೆಗಳು ಮತ್ತು ನಾಯಕರು

ಕಂಪಳದೇವರ ಹಟ್ಟಿ ಸೇರಿದಂತೆ ಚಿತ್ರದುರ್ಗ ಜಿಲ್ಲೆಯ ಎಲ್ಲಾ ಬೇಡರಿಗೆ ಸಂಬಂಧಿಸಿದಂತೆ ಮುಖ್ಯವಾಗಿ ಮೂರು ಕಟ್ಟೆಮನೆಗಳಿವೆ. ಅಯಾ ಕಟ್ಟೆಮನೆಗಳಿಗೆ ಅಲ್ಲಿಯ ಹಿರಿಯರನ್ನು ದೊರೆ

ಅಥವಾ ಯಜಮಾನನ್ನಾಗಿ ನೇಮಿಸುತ್ತಾರೆ. ಅಲ್ಲದೆ ಎಲ್ಲಾ ಹಟ್ಟಿಗಳ ಪ್ರತಿನಿಧಿಯಾಗಿ ಒಂದೊಂದು ಕಟ್ಟೆಮನೆಗೆ ಒಬ್ಬೊಬ್ಬ ನಾಯಕನನ್ನು ನೇಮಿಸಲಾಗಿರುತ್ತದೆ. ಆ ಕಟ್ಟೆಮನೆ ಮತ್ತು ನಾಯಕರೆಂದರೆ

೧ ನಾಯಕನಹಟ್ಟಿ ಕಟ್ಟೆಮನೆ–ಚಳ್ಳಕೆರೆ ತಾಲೂಕು, ಚಿತ್ರದುರ್ಗ ಜಿಲ್ಲೆ, ನಾಯಕನ ಹಟ್ಟಿ

೨ ನನ್ನಿವಾಳ ಕಟ್ಟೆಮನೆ–ಚಳ್ಳಕೆರೆ ತಾಲೂಕು ನನ್ನಿವಾಳ–ದೊರೆ ಬೈಯಣ್ಣ (ಎನುಮಲಾರು ಬೆಡಗು)

೩ ಗೋನೂರು ಕಟ್ಟೆಮನೆ–– ಚಿತ್ರದುರ್ಗ ತಾಲೂಕು ಗೋನೂರು

ಚಳ್ಳಕೆರೆ ತಾಲೂಕು ನಾಯಕನಹಟ್ಟಿ ಕಟ್ಟೆಮನೆಗೆ ಮೀಸೇ ನಾಯಕ/ಮೀಸಲು ನಾಯಕ, ಚಳ್ಳಕೆರೆ ತಾಲೂಕು ನನ್ನಿವಾಳ ಕಟ್ಟೆಮನೆಗೆ ಗಟ್ಟಿಮಿತ್ತೆ ನಾಯಕ, ಚಿತ್ರದುರ್ಗ ತಾಲೂಕು ಗೋನೂರು ಕಟ್ಟೆ ಮನೆಗೆ ಬೋಸೇನಾಯಕ, ಇವರು ಕಂಪಳದೇವರ ಹಟ್ಟಿಯಲ್ಲಿ ಜರುಗುವ ಎಲ್ಲ ಧಾರ್ಮಿಕ ಆಚರಣೆಗಳಿಗೆ ಹೆಗಲ ಮೇಲೆ ಕರಿಕಂಬಳಿ ಬಿಳಿ ಅಂಗಿ ಅಥವಾ ಬರಿ ಮೈಯಲ್ಲಿ ಬಿಳಿ ಪಂಚೆ ಅಥವಾ ಲಂಗೋಟಿ ಧರಿಸಿಕೊಂಡು ಕೈಯಲ್ಲೊಂದು ಬಿದಿರು ಕೋಲು ಹಿಡಿದುಕೊಂಡು ಬಂದು ದೇವರ ಪೌಳಿಯ ಮುಂದೆ ಕುಳಿತುಕೊಳ್ಳುತ್ತಾರೆ.

**ನಾಲ್ಕು ಕಟ್ಟೆಗಳು**

೧. ರಾಯಚೂರು ಕಟ್ಟೆ

೨. ಶಿರಾ ಕಟ್ಟೆ

೩. ಚಾಪೂರಿ ಕಟ್ಟೆ

೪. ಅರೇ ಸಮುದ್ರ ಕಟ್ಟೆ

**ನಾಲ್ಕು ತಟ್ಟುಗಳು**

೧. ಹಿರೇಹಳ್ಳಿ ತಟ್ಟು

೨. ಅಚ್ಚುವಳ್ಳಿ ತಟ್ಟು

೩. ರಾಚಲ್ ತಟ್ಟು

೪. ಜಾಜೂರು ತಟ್ಟು

**ಹನ್ನೆರಡು ಸಂಸ್ಥಾನಗಳು**

೧) ಆನೆಗೊಂದಿ ೨) ನಿಡಗಲ್ಲು ೩) ಚಿತ್ರದುರ್ಗ ೪) ಹರ್ತಿಕೋಟೆ ೫) ತರೀಕೆರೆ ೬) ರತ್ನಗಿರಿ ೭) ರಾಯದುರ್ಗ ೮) ಮಿಡಿಗೇಶಿ ೯) ಐಮಂಗಲ ೧೦) ಹಾಗಲವಾಡಿ ೧೧) ಪಾವಗಡ ೧೨) ಪೆನಗೊಂಡ. ಇವುಗಳಲ್ಲಿ ಕಂಪಳದೇವರ ಹಟ್ಟಿ ಗುರುಸ್ಥಾನವು ಆನೆಗೊಂದಿ ಸಂಸ್ಥಾನಕ್ಕೆ ಸೇರಿದ್ದಾಗಿದೆ.

### ೨.೩.೯.೩ ಗುರುಸ್ಥಾನಗಳು

ಮ್ಯಾಸಬೇಡರು ಕೆಲವು ಪವಿತ್ರವಾದ ದೈವ ಸನ್ನಿಧಿಗಳನ್ನು ಗುರುಸ್ಥಾನಗಳೆಂದು ಕರೆದುಕೊಂಡಿದ್ದಾರೆ. ಕಂಪಳದೇವರ ಹಟ್ಟಿಯೂ ಸಹ ಒಂದು ಗುರುಸ್ಥಾನವಾಗಿದೆ. ಕೆಲವೊಂದು ಸಂದರ್ಭಗಳಲ್ಲಿ ಗುಡಿಕಟ್ಟೆ ಮತ್ತು ಕಟ್ಟೆಮನೆಗಳಲ್ಲಿ ತೀರ್ಮಾನವಾಗದ ಹಲವು ವ್ಯಾಜ್ಯಗಳು ಗುರುಸ್ಥಾನಗಳಲ್ಲಿ ತೀರ್ಮಾನ ಮಾಡುತ್ತಾರೆ. ಕಟ್ಟೆಮನೆಗಳ ಯಜಮಾನರು ನ್ಯಾಯತೀರ್ಮಾನ ಮಾಡುವಾಗ ಕೆಲವು ಕಟ್ಟು ಕಟ್ಟಳೆಗಳನ್ನು ವಿಧಿಸುತ್ತಿದ್ದರು. ಆಗ ತಪ್ಪಿತಸ್ಥರಾದವರು ಈ ಗುರುಸ್ಥಾನಗಳಿಗೆ ಹೋಗಿ ಅಲ್ಲಿಯ ಪೂಜಾರಿ ಅಥವಾ ದಾಸಯ್ಯ, ಎತ್ತಿನ ಕಿಲಾರಿಗಳಿಂದ ತೀರ್ಥ ಹಾಕಿಸಿಕೊಂಡು ದೇವರಿಗೆ ಹಣ್ಣು ಕಾಯಿ, ದೀಪಕ್ಕೆ ಎಣ್ಣೆ, ದಂಡದ ಹಣ ಕೊಟ್ಟು ಶುದ್ಧರಾಗಿ ಬರುತ್ತಿದ್ದರು. ಮೂಲತಃ ಮ್ಯಾಸಬೇಡರಲ್ಲಿ ಎಪ್ಪತ್ತೇಳು ಹಟ್ಟಿಗಳಿದ್ದವಂತೆ ಆ ಹಟ್ಟಿಗಳಲ್ಲಿ ಈ ಕಂಪಳದೇವರ ಹಟ್ಟಿ ಮೊದಲನೆಯದು ಎಂದು ಹೇಳುತ್ತಾರೆ ಅಲ್ಲದೆ ಕಂಪಳದೇವರ ಹಟ್ಟಿಯಲ್ಲಿರುವ ಕಂಪಳರಂಗಸ್ವಾಮಿ ದೇವಸ್ಥಾನವನ್ನು 'ಗುರುಮಠ' ಎಂದೇ ಕರೆಯುತ್ತಾರೆ. ಪ್ರಸ್ತುತ ಕಂಪಳದೇವರ ಹಟ್ಟಿಯ ಕಂಪಳರಂಗಸ್ವಾಮಿ ಗುರುಸ್ಥಾನ ಮಠಕ್ಕೆ ಬಿ ರೇವಣ್ಣ ಪಟ್ಟದ ಪೂಜಾರಿಯಾಗಿದ್ದಾರೆ.

### ಕಂಪಳದೇವರ ಹಟ್ಟಿಯಲ್ಲಿ ಸರ್ಕಾರಿ ಸೌಲಭ್ಯ ಪಡೆದಿರುವವರ ಸರಾಸರಿ

ಹಟ್ಟಿಯಲ್ಲಿನ ಜನಸಂಖ್ಯೆಯಲ್ಲಿ ಸರ್ಕಾರಿ ಸೌಲಭ್ಯಗಳನ್ನು ಪಡೆದವರು ಮತ್ತು ಸೌಲಭ್ಯ ವಂಚಿತರ ಪಟ್ಟಿ ನೋಡುವುದಾದರೆ ಇಲ್ಲಿನ ಬಹುತೇಕ ಮನೆಗಳು ಸರ್ಕಾರ ನಿರ್ಮಿಸಿಕೊಟ್ಟ ಜನತಾ ಮನೆಗಳಾಗಿವೆ ಆದರೆ ಹಟ್ಟಿಗೆ ವಿದ್ಯುತ್ ಸಂಪರ್ಕ ಸರಿಯಾಗಿ ಇಲ್ಲದಿರುವ ಕಾರಣ ಸಂಜೆಯಾದರೆ ಚಿಮಣಿ ದೀಪದ ಸಹಾಯ ಪಡೆಯುತ್ತಾರೆ. ಬೀದಿ ದೀಪಗಳೂ ಸಹ ಇರುವುದಿಲ್ಲ ಬೆರಳೆಣಿಕೆಯಷ್ಟು ಜನರು ಮಾತ್ರ ಸ್ವಂತಕ್ಕೆ ವಿದ್ಯುತ್ ಹೊಂದಿದ್ದಾರೆ. ಭಾಗ್ಯ ಜ್ಯೋತಿಯ ಸೌಲಭ್ಯವನ್ನು ಕೆಲವರು ಹೊಂದಿದ್ದಾರೆ ಒಟ್ಟಾರೆ ಹಟ್ಟಿಯಲ್ಲಿ ಜನರು ಹೊಂದಿರುವ ಸರ್ಕಾರಿ ಸೌಲಭ್ಯಗಳು ಮತ್ತು ಇನ್ನೂ ಸೌಲಭ್ಯಗಳನ್ನು ಪಡೆಯಬೇಕಾದ ಜನರ ಪಟ್ಟಿಯನ್ನು ಈ ಕೆಳಗಿನಂತೆ ನೋಡೋಣ

**ಕೋಷ್ಟಕ ೨.೫–ಸರ್ಕಾರಿ ಸೌಲಭ್ಯಗಳನ್ನು ಪಡೆಯುತ್ತಿರುವರ ವಿವರ**

| ಸಮುದಾಯಗಳು | ಕುಟುಂಬಗಳು | | | | | ಸರ್ಕಾರಿ ಸೌಲಭ್ಯಗಳು | | | | | |
|---|---|---|---|---|---|---|---|---|---|---|---|
| | | ಓಟಿನ ಕಾರ್ಡ್ | | | ವಿಧವಾ ವೇತನ | ಅಂಗವಿಕಲ | | | ವೃದ್ಧಾಪ್ಯ ವೇತನ | | |
| | | ಗಂಡು | ಹೆಣ್ಣು | ಒಟ್ಟು | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಆದಿ ಕರ್ನಾಟಕ | ೪೩ | ೮೪ | ೭೩ | ೧೫೭ | | ೧ | | ೧ | ೧ | ೨ | ೩ |
| ಲಿಂಗಾಯತರು | ೭ | ೧೯ | ೧೬ | ೩೫ | | | | | ೧ | ೧ | ೨ |
| ನಾಯಕ | ೨೬೩ | ೩೮೮ | ೩೬೨ | ೭೫೦ | ೯ | ೨ | ೧ | ೩ | ೧೭ | ೧೮ | ೩೫ |
| ಒಟ್ಟು | ೩೧೩ | ೪೯೧ | ೪೫೧ | ೯೪೨ | ೯ | ೩ | ೧೪ | | ೧೯ | ೨೧ | ೪೦ |

ಹಟ್ಟಿಯಲ್ಲಿನ ಜನಸಂಖ್ಯೆಯಲ್ಲಿ ಸರ್ಕಾರಿ ಸೌಲಭ್ಯಗಳನ್ನು ಪಡೆದವರ ಸರಾಸರಿ ನೋಡುವುದಾದರೆ ಚುನಾವಣಾ ಗುರುತಿನ ಚೀಟಿ ಪಡೆದವರು ಶೇಕಡ ೩೩ ರಷ್ಟು ಗಂಡುಮಕ್ಕಳಿದ್ದರೆ ಶೇಕಡ ೩೦.೩ ರಷ್ಟು ಹೆಣ್ಣುಮಕ್ಕಳಿದ್ದಾರೆ, ಇದರಿಂದ ವಂಚಿತರ ಸರಾಸರಿ ಹೇಳುವುದಾದರೆ ಕ್ರಮವಾಗಿ ಶೇಕಡ ೧೭.೩ ರಷ್ಟು ಗಂಡುಮಕ್ಕಳು, ಶೇಕಡ ೧೯.೫ ರಷ್ಟು ಹೆಣ್ಣುಮಕ್ಕಳು ಗುರುತಿನ ಚೀಟಿ ಪಡೆದಿಲ್ಲ. ವಿಧವಾ ವೇತನ ಪಡೆಯುತ್ತಿರುವವರು ಶೇಕಡ ೧೭.೩೦೮ ರಷ್ಟಿದ್ದರೆ ವಂಚಿತರು ಶೇಕಡ ೮೨.೬೨ ರಷ್ಟಿದ್ದಾರೆ, ವೃದ್ಧಾಪ್ಯ ವೇತನ ಪಡೆಯುತ್ತಿರುವವರು ಶೇಕಡ ೪೭ ರಷ್ಟು ಗಂಡು ಮಕ್ಕಳು, ಶೇಕಡ ೫೩ ರಷ್ಟು ಹೆಣ್ಣು ಮಕ್ಕಳು ಪಡೆಯುತ್ತಿದ್ದಾರೆ, ಈ ರೀತಿಯಾಗಿ ಕಂಪಳದೇವರ ಹಟ್ಟಿಯಲ್ಲಿನ ಜನಸಂಖ್ಯೆಯ ಗಂಡು, ಹೆಣ್ಣುಗಳಲ್ಲಿ ಸರಕಾರಿ ಸೌಲಭ್ಯ ಪಡೆಯುತ್ತಿರುವವರು, ಪಡೆಯುವಲ್ಲಿ ವಿಫಲರಾದವರು, ಎಷ್ಟು ಎಂಬುದನ್ನು ಹಟ್ಟಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಜನಗಣತಿ ಮಾಡಿ ಪಡೆದ ಮಾಹಿತಿಯ ಆಧಾರದ ಮೇಲೆ ಈ ಮೇಲಿನಂತೆ ತಿಳಿಸಲಾಗಿದೆ.

**೨.೪ ಕಂಪಳದೇವರ ಹಟ್ಟಿ ಮತ್ತು ಇತರೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳ ಸಂಬಂಧ**

ಬಯಲು ಸೀಮೆಯ ಮ್ಯಾಸಬೇಡರ ಗುರುಸ್ಥಾನವೆಂದು ಕರೆಯುವ ಈ ಕಂಪಳದೇವರ ಹಟ್ಟಿಯೊಂದಿಗೆ ಚಿತ್ರದುರ್ಗ ಜಿಲ್ಲೆ, ಬಳ್ಳಾರಿ ಜಿಲ್ಲೆ ಅಲ್ಲದೆ ಕರ್ನಾಟಕದ ನಾನಾ ಜಿಲ್ಲೆಗಳಲ್ಲಿ ನೆಲೆಸಿರುವ ಬೇಡರು ಇಂದಿಗೂ ಧಾರ್ಮಿಕ, ಸಾಂಸ್ಕೃತಿಕ ಸಂಬಂಧವನ್ನು ಉಳಿಸಿಕೊಂಡು ಬಂದಿದ್ದಾರೆ. ಬಯಲುಸೀಮೆಯ ಬೇಡರು ತಮ್ಮ ಪ್ರತಿಯೊಂದು ಕಾರ್ಯಗಳಿಗೂ ಕಂಪಳದೇವರ ಹಟ್ಟಿಯ ಕಂಪಳರಂಗಸ್ವಾಮಿ ಮತ್ತು ದೇವರ ಎತ್ತುಗಳ ಬಳಿ ಬಂದು ಆರ್ಶೀವಾದ ಪಡೆದು ನಂತರ ಆರಂಭಿಸುತ್ತಾರೆ. ಅಲ್ಲದೆ ಕಂಪಳದೇವರ ಹಟ್ಟಿಯಲ್ಲಿ ಪ್ರತಿವರ್ಷ ನಡೆಯುವ ಗುಗ್ಗರಿ ಹಬ್ಬಕ್ಕೆ ತಪ್ಪದೇ ಕಾಸು, ಮೀಸಲು ತರುತ್ತಾರೆ. ಈ ಮೊದಲೇ ಹೇಳಿದಂತೆ ಕರ್ನಾಟಕದ ಬಯಲುಸೀಮೆಯಲ್ಲಿ ೭೭ ಹಟ್ಟಿಗಳಿದ್ದವಂತೆ ಅವುಗಳಲ್ಲಿ ಕಂಪಳದೇವರ ಹಟ್ಟಿಯೇ ಮೂಲ ಎಂದು ಅಲ್ಲಿನ ದೈವ ಕಂಪಳರಂಗಸ್ವಾಮಿಯೇ ಬೇಡರ ಮೂಲದೈವವೆಂದು ನಂಬಿ ಉಳಿದ ಎಲ್ಲಾ ಹಟ್ಟಿಗಳಿಂದಲೂ ಬೇಡರು ಗುಗ್ಗರಿ ಹಬ್ಬದಲ್ಲಿ ಕಾಸು ಮೀಸಲು ಹುರುಳಿಕಾಳು ತಂದು ದೈವಕ್ಕೆ ಅರ್ಪಿಸುತ್ತಾರೆ. ಇದರ ಹಿನ್ನೆಲೆಯಂದರೆ ಆಂಧ್ರದಿಂದ ವಲಸೆ ಬಂದ ಬೇಡಗಂಪಣ ಕರ್ನಾಟಕಕ್ಕೆ ಬಂದು ಹಟ್ಟಿಕಟ್ಟಿಕೊಂಡು ನೆಲೆನಿಂತ ನಂತರ ಬೇರೆ ಬೇರೆ ಕಡೆ ಚದುರಿ ಹೋಗಿದ್ದರೂ ತಾವು ಮೊದಲು ನೆಲೆನಿಂತ ಕಂಪಳದೇವರ ಹಟ್ಟಿಯನ್ನು ತಮ್ಮ ಗುರುಸ್ಥಾನವಾಗಿ ಮಾಡಿಕೊಂಡು ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ಹಟ್ಟಿಗೆ ಬಂದು ಹೋಗುತ್ತಾರೆ. ಈ ಹಟ್ಟಿಯೊಂದಿಗೆ ಇಂದಿಗೂ ಸಂಬಂಧ ಹೊಂದಿರುವ ಹಟ್ಟಿಗಳಲ್ಲಿ ಕೆಲವನ್ನು ಹೇಳುವ ಪ್ರಯತ್ನ ಮಾಡುತ್ತಿದ್ದೇನೆ. ಕಾರಣ ಎಲ್ಲಾ ಊರು ಮತ್ತು ಎಲ್ಲಾ ಹಟ್ಟಿಗಳೂ ಈ ಹಟ್ಟಿ ಮತ್ತು ಕಂಪಳರಂಗಸ್ವಾಮಿಗೆ ಸೇರಿದ್ದು ಎನ್ನುತ್ತಾರೆ. ಈ ದೇವರನ್ನು ಕುಲಸಾವಿರಕ್ಕೆ ಸೇರಿದ ದೈವ ಎನ್ನುತ್ತಾರೆ. ಹಾಗಾಗಿ ಇಲ್ಲಿಗೆ ಎಲ್ಲಾ ಹಟ್ಟಿಗಳಲ್ಲಿನ ಮ್ಯಾಸಬೇಡರು ಪರಂಪರೆಯಿಂದ ಸಾಂಸ್ಕೃತಿಕ, ಧಾರ್ಮಿಕ ಸಂಬಂಧ ಹೊಂದಿದ್ದಾರೆ.

ಕಂಪಳದೇವರ ಹಟ್ಟಿ ಸೇರಿದಂತೆ ಎಲ್ಲಾ ಹಟ್ಟಿಗಳಲ್ಲಿನ ಮ್ಯಾಸಬೇಡರು ಪ್ರಕೃತಿಯ ಆರಾಧಕರು ಮತ್ತು ಸರ್ವಚೇತನವಾದಿಗಳು ಈ ಹಟ್ಟಿಯ ಮ್ಯಾಸಬೇಡರಿಗೆ ಸಂಬಂಧಿಸಿದಂತೆ ಕರ್ನಾಟಕದಾದ್ಯಂತ

ಇವರ ನೂರಾರು ಧಾರ್ಮಿಕ ಕೇಂದ್ರಗಳು ಇರುವುದನ್ನು ಗುರುತಿಸಬಹುದು. ಈ ಬುಡಕಟ್ಟಿನ ವೀರನ ಹೆಸರು, ಬೆಡಗು, ಮನೆದೇವರು, ಮೂಲನೆಲೆ, ವಸತಿ, ಸಂಪ್ರದಾಯ ಮತ್ತು ನಂಬಿಕೆ ಮೊದಲಾದ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಇವರ ಧಾರ್ಮಿಕ ಕೇಂದ್ರಗಳನ್ನು ನಿರ್ಧರಿಸಬಹುದಾಗಿದೆ ಮೂಡಲಗಿರಿಯ ತಿರುಪತಿ ತಿಮ್ಮಪ್ಪ, ಶ್ರೀ ಶೈಲದ ಮಲ್ಲಿಕಾರ್ಜುನ, ಅಹೋಬಲದ ನರಸಿಂಹಸ್ವಾಮಿ, ಇವುಗಳು ಮೂಲತಃ ಈ ಬುಡಕಟ್ಟಿನ ಪ್ರಾಚೀನ ದೈವಗಳು ಮತ್ತು ಧಾರ್ಮಿಕ ಕೇಂದ್ರಗಳು. ಕಾಲಕ್ರಮೇಣ ಈ ಸಮುದಾಯದ ಗುಡಿಕಟ್ಟೆ, ಕಟ್ಟೆಮನೆ, ಮತ್ತು ಗುರುಸ್ಥಾನಗಳು ಕೂಡಾ ಧಾರ್ಮಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿವೆ. ಅನೇಕ ನದಿ, ಬೆಟ್ಟ, ಅರಣ್ಯ, ಹೊಂಡ, ಹಳ್ಳ ಕೊಳ್ಳ, ಒಡ್ಡು, ಪೂಜಾರಿ ದಾಸಯ್ಯ ಮತ್ತು ತಮ್ಮ ತಮ್ಮ ಸಮುದಾಯದ ಸಾಂಸ್ಕೃತಿಕ ವೀರರ ಸಮಾಧಿಗಳು ಕೂಡಾ ಈ ಸಮುದಾಯಗಳ ಧಾರ್ಮಿಕ ಕೇಂದ್ರಗಳಾಗಿವೆ. ನೇಪಾಳದ ಗಡಂಕಿ ನದಿ, ಭಾರತದ ಉತ್ತರ ಗಂಗಾನದಿ, ಕರ್ನಾಟಕದ ವೇದಾವತಿ ನದಿ(ಚಿನ್ನಹಗರಿ), ದೆಹಲಿ, ಅಯೋಧ್ಯೆ, ದ್ವಾರಕೆ, ದೇವಗಿರಿ, ವಿಂಧ್ಯಾಪರ್ವತ, ಆನೆಗೊಂದಿ, ಪಂಪಾಕ್ಷೇತ್ರ, ಶ್ರೀಶೈಲ, ಅಹೋಬಲ, ಕದಿರಿ, ವೆಂಕಟಗಿರಿ, ಕಾಳಹಸ್ತಿ ಮೊದಲಾದವು ಕೂಡಾ ಮೂಲತಃ ಮ್ಯಾಸಬೇಡರ ಧಾರ್ಮಿಕ ನೆಲೆಗಳು ಪ್ರಸ್ತುತ ಅಧ್ಯಯನದ ಸಲುವಾಗಿ ಚಿತ್ರದುರ್ಗ ಜಿಲ್ಲೆ, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿನ ಧಾರ್ಮಿಕ ಕೇಂದ್ರಗಳು ಮತ್ತು ಹಟ್ಟಿಗಳು ಕಂಪಳದೇವರ ಹಟ್ಟಿಯೊಂದಿಗೆ ಹೊಂದಿರುವ ಸಂಬಂಧವನ್ನು ತಿಳಿಸುವುದಾಗಿದೆ.

**ಕಂಪಳದೇವರ ಹಟ್ಟಿ ಮತ್ತು ಇತರ ಧಾರ್ಮಿಕ ಕೇಂದ್ರಗಳು**

ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆಸಿರುವ ಮ್ಯಾಸಬೇಡರ ಪ್ರಮುಖ ಧಾರ್ಮಿಕ ಕೇಂದ್ರಗಳೆಂದರೆ ಕಂಪಳದೇವರ ಹಟ್ಟಿಯೂ ಸೇರಿದಂತೆ ತುಮಕೂರು ಜಿಲ್ಲೆ ಪಾವಗಡ ತಾಲೂಕಿನ ನಿಡಗಲ್ಲು ಬೆಟ್ಟದ ಬುಡದಲ್ಲಿರುವ ಪವಿತ್ರ ಹೊಂಡ ರಾಮತೀರ್ಥ, ಹೊಸದುರ್ಗ ತಾಲೂಕು-ದೇವಪುರದ ಹಾಲುರಾಮೇಶ್ವರ, ಹೊಳಲ್ಕೆರೆ ತಾಲೂಕು-ದೇವರ ಗಂಜಿಕಟ್ಟೆ ಹತ್ತಿರ ಮಿಂಚೇರಿ ಅರಣ್ಯ ಮತ್ತು ಗಾದ್ರಿಗುಡ್ಡ, ಹಿರಿಯೂರು ತಾಲೂಕು-ಕೂಡಲಹಳ್ಳಿ ಹತ್ತಿರ ಕೂಡ್ಲಿ, ಸಂಗಮೇಶ್ವರ. ಮತ್ತು ವೇದಾವತಿ ನದಿ, ಖಂಡೇನಹಳ್ಳಿ ಕರಿಯಮ್ಮ, ಗೊರ್ಲತ್ತು ಕರಿಯಮ್ಮ, ಹರ್ತಿಕೋಟೆ ಓಬಳದೇವರು, ಯರಬಳ್ಳಿ ಮಾರಕ್ಕ, ಮಾರಿಕಣಿವೆಯ ಕಣಿವೆ ಮಾರಕ್ಕ, ಕೂಡ್ಲಿಗಿ ತಾಲೂಕಿನ ಮಾಕನಡುಕು ಕಂಚೋಬಳ ನರಸಿಂಹ ಸ್ವಾಮಿ, ಕುರಿಹಟ್ಟಿ ಬೊಮ್ಮದೇವರು, ಗೆದ್ದಲಗಟ್ಟೆ ಓಬಳದೇವರು, ಚಳ್ಳಕೆರೆ ತಾಲೂಕು-ರುದ್ರಮ್ಮನ ಹಳ್ಳಿ ನಲ್ಲಜರುವು ಓಬಳದೇವರು, ಕಾಟಪ್ಪನ ಹಟ್ಟಿ ಕಾಟಮ್ಮ ಲಿಂಗೇಶ್ವರ, ಗೌರಸಮುದ್ರದ ಬೊಮ್ಮಲಿಂಗೇಶ್ವರ, ದೇವರ ಹಳ್ಳಿ ದಡ್ಲು ಮಾರಮ್ಮ, ಬಂಗಾರದೇವರ ಹಟ್ಟಿಯ ಬಂಗಾರು ದೇವರು, ಬೇಡರೆಡ್ಡಿಹಳ್ಳಿ ಪೆದ್ದತಿರುಮಲ ದೇವರು, ಮಲ್ಲೂರಳ್ಳಿ ರಜಲದೇವರು, ರಾಯದುರ್ಗ ತಾಲೂಕು ಉಡೇಗೊಳ ಚಿತ್ರಲಿಂಗೇಶ್ವರ ಚಿತ್ರದುರ್ಗ ತಾಲೂಕು ಹುಣಸೆಕಟ್ಟೆ ಅಲಕೋಬಳ ದೇವರು, ಬೆಳ್ಳಗಟ್ಟದ ಸೂರ್ಯಯರಗಾಟ ನಾಯಕ, ಮುದ್ದಾಪುರದ ಓಬಳದೇವರು, ಸೊಂಡೆಕೊಳದ ನರಸಿಂಹಸ್ವಾಮಿ.

ಜಾನಕೊಂಡದ ಓಬಳದೇವರು, ಗಾದ್ರಿ ಪಾಲನಾಯಕ ಮತ್ತು ಬೋರೇದೇವರು ಚಳ್ಳಕೆರೆ ತಾಲೂಕು ಗೋರ್ಲಕಟ್ಟೆಯ ಜಗಳೂರಜ್ಜನ ಗುಡಿ, ಗೌರಸಮುದ್ರದ ಮಾರಮ್ಮ, ನಾಯಕನಹಟ್ಟಿಯ ತಿಪ್ಪೇರುದ್ರಸ್ವಾಮಿ ಮಠ, ಗೋಸಿಕೆರೆ ಸಾರ್ವಾಡೇಶ್ವರ ಸ್ವಾಮಿ ಮಠ, ಹಿರೇಹಳ್ಳಿ ದಡ್ಡಿಸೂರನಾಯಕ, ಸಟ್ಟೂರು ಸಿರಿವಾಳದ ಓಬಳದೇವರ ಕೇಂದ್ರ, ದೇವರ ಮರಿಕುಂಟೆ ಅಹೋಬಲ ನರಸಿಂಹಸ್ವಾಮಿ, ಮುಮ್ಮಡಿ ಸಾಗರದ ಅಡ್ಲಟ್ಟಿ ಭೂತಪ್ಪ, ಸೂರನಳ್ಳಿ ಹತ್ತಿರ ಕಂಡುಬರುವ ಗಾದ್ರಿಪಾಲನಾಯಕನ ಹುಲಿಕಲ್ಲು, ಬೋಸೇದೇವರ ಹಟ್ಟಿ–ಬೊಸೇದೇವರು, ಬೊರೇದೇವರಹಟ್ಟಿ ಬೋರೇದೇವರು, ಬಂಜಗೆರೆ ಓಬಳದೇವರು, ಗುಡಿಹಳ್ಳಿ ಓಬಳದೇವರು, ಹಂಪಿಯ ಚಕ್ರತೀರ್ಥ, ನಾಯಕನಹಟ್ಟಿ, ಜಗಳೂರು, ಗೋನೂರು ಮೊದಲಾದ ಧಾರ್ಮಿಕ ಕೇಂದ್ರಗಳನ್ನು ಇಲ್ಲಿ ಗುರುತಿಸಬಹುದು ಜೊತೆಗೆ ಪುರಾತನ ಕಾಲದಲ್ಲಿ ಮ್ಯಾಸಬೇಡರು ನೆಲೆಸಿದ್ದ ಪ್ರಮುಖ ಧಾರ್ಮಿಕ ಕೇಂದ್ರಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದಾಗಿದೆ. ಅವುಗಳೆಂದರೆ ನಾಗ್ತಿಹಳ್ಳಿ ಕಟ್ಟೆ, ಅಡ್ಲಟ್ಟಿ ಭೂತಪ್ಪ ಮತ್ತು ಸೂರನಹಳ್ಳಿ ಹತ್ತಿರ ಕಂಡುಬರುವ ಗಾದ್ರಿಪಾಲನಾಯಕನ ಹುಲಿಕಲ್ಲು ಪ್ರಮುಖವಾಗಿವೆ. ಈ ಎಲ್ಲಾ ಹಟ್ಟಿಗಳು ಮತ್ತು ಧಾರ್ಮಿಕ ಕೇಂದ್ರಗಳು ಕಂಪಳದೇವರ ಹಟ್ಟಿಯೊಂದಿಗೆ ಇಂದಿಗೂ ಹೊಂದಿರುವ ಸಾಂಸ್ಕೃತಿಕ ಸಂಬಂಧವನ್ನು ಈ ಕೆಳಗಿನಂತೆ ನೋಡಬಹುದು.

**ನಾಯಕನ ಹಟ್ಟಿಯೊಂದಿಗಿನ ಸಂಬಂಧ**

ಚಿತ್ರದುರ್ಗ ಜಿಲ್ಲೆಯಲ್ಲಿ ಧಾರ್ಮಿಕ ಕ್ಷೇತ್ರವೆಂದೇ ಪ್ರಸಿದ್ಧಿ ಪಡೆದ ನಾಯಕನಹಟ್ಟಿ ಕ್ಷೇತ್ರವು ಈ ಭಾಗದ ಜನರಿಗೆ ಐತಿಹಾಸಿಕ ಮತ್ತು ಧಾರ್ಮಿಕ ಸ್ಥಳವಾಗಿದೆ. ಇದು ಚಳ್ಳಕೆರೆ ತಾಲೂಕು ಕೇಂದ್ರದಿಂದ ೨೨ ಕಿ ಮೀ ದೂರದಲ್ಲಿದೆ ಮತ್ತು ಚಿನ್ನಹಗರಿ ನದಿಯ ದಕ್ಷಿಣಕ್ಕಿದೆ. ಇಲ್ಲಿ ತಿಪ್ಪೇರುದ್ರಸ್ವಾಮಿ ಎಂಬ ಪವಾಡ ಪುರುಷನ ದೇವಸ್ಥಾನವಿದ್ದು ಈ ಸ್ವಾಮಿಗೆ ಸಂಬಂಧಿಸಿದಂತೆ ಪ್ರತಿವರ್ಷ ಮಾರ್ಚ ತಿಂಗಳಲ್ಲಿ ತಿಪ್ಪೇಸ್ವಾಮಿ ಜಾತ್ರೆ ನಡೆಯುತ್ತದೆ(ಹಟ್ಟಿ ಹುಣ್ಣಿಮೆ). ಈ ಜಾತ್ರೆಗೆ ಲಕ್ಷೋಪಲಕ್ಷ ಭಕ್ತಾದಿಗಳು ಬಂದು ಸಂಭ್ರಮಿಸುತ್ತಾರೆ. ನಾಯಕನಹಟ್ಟಿಯು ಕಂಪಳದೇವರ ಹಟ್ಟಿಯೂ ಸೇರಿದಂತೆ ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡರಿಗೆ ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ ಕೇಂದ್ರವಾಗಿದೆ ಅಲ್ಲದೆ ಅವರ ಮೂರು ಮುಖ್ಯ ಕಟ್ಟೆಮನೆಗಳಲ್ಲಿ ನಾಯಕನ ಹಟ್ಟಿಯೂ ಸಹ ಒಂದಾಗಿದೆ. ಈ ನಾಯಕನ ಹಟ್ಟಿಯ ಸ್ಥಾಪಕರು ಮತ್ತು ಇಲ್ಲಿ ನೆಲೆಸಿದ ಮೂಲಿಗರು ಬೇಡರೇ ಆಗಿದ್ದಾರೆ ಮತ್ತು ಇವರು ಆಂಧ್ರದ ಶ್ರೀಶೈಲ ಪರ್ವತದ ಕರಿಮಲೆ, ಕೊಮ್ಮಮಲೆಗಳಿಂದ ಬಂದವರು ಎಂದು ಹೇಳುವರು. ಇವರು "ಪಶುಪಾಲನೆಯಿಂದ ಜೀವಿಸುತ್ತಿದ್ದು ೧೨೦೦ ಜನ್ನಿಗೆ ಆಕಳುಗಳನ್ನು ಮೇಯಿಸಿಕೊಂಡು ನಾಯಕನ ಹಟ್ಟಿ ಹತ್ತಿರ ಬಂದು ನೆಲೆಸುತ್ತಾರೆ. ಈ ವಂಶದ ಸ್ಥಾಪಕ ಕಾಟಮಲ್ಲನಾಯಕ ಎಂದು ಹೇಳಲಾಗುತ್ತದೆ"[೨೬]. ಹೀಗೆ ರಾಸುಗಳೊಂದಿಗೆ ವಲಸೆ ಬಂದ ಬೇಡರ ಗುಂಪು ಈ ಭಾಗದಲ್ಲಿ ಕಾಟಮಲ್ಲನಾಯಕನ ಮುಂದಾಳತ್ವದಲ್ಲಿ ಹಟ್ಟಿಕಟ್ಟಿಕೊಂಡು ನೆಲೆಸಿತು. ವಿಜಯನಗರದ ಶ್ರೀ ಕೃಷ್ಣದೇವರಾಯನ ನಂತರ ಅಚ್ಯುತರಾಯ ಅಧಿಕಾರದಲ್ಲಿದ್ದಾಗ ಈ ಪಾಳೇಪಟ್ಟು ಸ್ವತಂತ್ರ ಪಾಳೇಪಟ್ಟಾಗಿ ರಚನೆಗೊಂಡರು ಎಂದು ಹೇಳಲಾಗುತ್ತದೆ.

ಈ ರೀತಿಯಾಗಿ ವಲಸೆ ಬಂದು ಪಶುಪಾಲನೆ ಮಾಡುತ್ತಾ ಪಾಳೆಪಟ್ಟು ಕಟ್ಟಿಕೊಳ್ಳಲು ವಿಜಯನಗರದ ಅಚ್ಯುತರಾಯ ಅನುಮತಿ ನೀಡಿದ. ಇದನ್ನೇ ಆಧರಿಸಿ ಹೇಳುವುದಾದರೆ. ವಿಜಯನಗರಕ್ಕೂ ಪೂರ್ವದಲ್ಲಿ

ಇವರು ಇಲ್ಲಿ ನೆಲೆಸಿದ್ದರು ಎಂದು ಹೇಳಬಹುದು. "ಆಂಧ್ರ ಮೂಲದಿಂದ ಬಂದ ಕಾಟೇ ಮಲ್ಲನಾಯಕ, ಕುಂದುರ್ಪೆಗುಡ್ಡ ಗೊಸೀಕೆರೆಹಳ್ಳಿ ಹರತಿ, ನಿಡಗಲ್ಲು ಮುಂತಾದ ಸ್ಥಳಗಳಲ್ಲಿ ಮೊದಲು ತಳವೂರಿದ್ದ ನಂತರ ಸೂರ್ಯದೇವುನಿ ಪಾಪನಾಯಕನ ಮಗ ಕಾಕಳನಾಯಕ ಮತ್ತು ಇವನು ಗಿಡ-ಗಂಟೆಗಳನ್ನು ಕಡಿದು ೧೨ ಪೆಟ್ಟಿಗೆ ದೇವರುಗಳೊಂದಿಗೆ ಹಟ್ಟಿ ನಿರ್ಮಿಸಿಕೊಂಡರು. ಆ ಹಟ್ಟಿ ಕ್ರಮೇಣ ನಾಯಕನ ಹಟ್ಟಿ ಎಂದಾಯಿತು. ದೊಡ್ಡೆರ್ರಪ್ಪನಾಯಕ, ಗಿಡ್ಡೆರ್ರಪ್ಪನಾಯಕ ಇತರ ಅರಸರು ಅಪಾರ ದಾನ ಕಾರ್ಯಗಳನ್ನು ಮಾಡಿದ್ದಾರೆ. ಈ ಗಿಡ್ಡೆರ್ರಪ್ಪನಾಯಕನ ಮಗ ದೊಡ್ಡ ಮಲ್ಲಪ್ಪ ನಾಯಕನಿಗೆ ಆನೆಗೊಂದಿಯ ತಿರುಮಲರಾಜನು ೧೫೭೮ ಜೂನ್ ೨೮ ರಂದು ಈ ಭಾಗವನ್ನು ಉಂಬಳಿಯಾಗಿ ಕೊಟ್ಟ."[೨೭]. ಹೀಗೆ ಸ್ವತಂತ್ರವಾಗಿ ಹಟ್ಟಿ ನಿರ್ಮಿಸಿಕೊಂಡು ಆನೆಗೊಂದಿ ಅರಸರಿಂದ ಈ ಜಾಗವನ್ನು ಉಂಬಳಿ ಪಡೆದು ನಂತರ ವಿಜಯನಗರ ಅರಸರಿಂದ ಪ್ರೋತ್ಸಾಹ ಪಡೆದು ಸ್ವತಂತ್ರ ಪಾಳೇಪಟ್ಟು ಮತ್ತು ಪಶುಪಾಲನೆ ಮಾಡುತ್ತಾ ನೆಲೆಸಿದ ಬೇಡರು ನಾಯಕನ ಹಟ್ಟಿಯಲ್ಲದೆ ಸುತ್ತಮುತ್ತ ಚದುರಿದರು ಎಂದು ಹೇಳಬಹುದು.

ನಾಯಕನಹಟ್ಟಿಯು ಮ್ಯಾಸಬೇಡರ ಮೂರು ಕಟ್ಟೆಮನೆಗಳಲ್ಲಿ ಗೋನೂರು ಕಟ್ಟೆಮನೆ, ನನ್ನಿವಾಳ ಕಟ್ಟೆಮನೆ, ನಾಯಕನಹಟ್ಟಿ ಕಟ್ಟೆಮನೆಗಳಲ್ಲಿ ಇದೂ ಒಂದಾಗಿದೆ. ಈ ಮೂರು ಕಟ್ಟೆಮನೆಗಳಲ್ಲಿ ತೀರ್ಮಾನ ಆಗದ ವಿಷಯಗಳನ್ನು/ವ್ಯಾಜ್ಯಗಳನ್ನು ಬೇಡರ ಗುರುಸ್ಥಾನವಾದ ಕಂಪಳದೇವರ ಹಟ್ಟಿಯಲ್ಲಿ ಬಗೆಹರಿಸಲಾಗುತ್ತದೆ. ಹಾಗಾಗಿ ಕಂಪಳದೇವರ ಹಟ್ಟಿ ಮತ್ತು ನಾಯಕನಹಟ್ಟಿಗೆ ಮತ್ತು ಎಲ್ಲಾ ಮ್ಯಾಸಬೇಡರಿಗೆ ಬಿಡಿಸಲಾಗದ ಸಾಂಸ್ಕೃತಿಕ ನಂಟಿದೆ. ಕಂಪಳದೇವರ ಹಟ್ಟಿಯ ಪ್ರಮುಖ ಹಬ್ಬಗಳಾದ ಗುಗ್ಗರಿ ಹಬ್ಬ, ದೀಪಾವಳಿ ಹಬ್ಬ, ಮುಂಗಾರಿ ಹಬ್ಬಗಳಲ್ಲಿ ಈ ಮೂರು ಕಟ್ಟೆಮನೆಗಳಿಂದ ಕಟ್ಟೆಮನೆ ನಾಯಕರ ಪರವಾಗಿ ಮೂರುಮಂದಿ ನಾಯಕರನ್ನು ನೇಮಿಸಿರುತ್ತಾರೆ ಅವರು ಬಂದು ಹಬ್ಬದಲ್ಲಿ ತಮ್ಮ ಕರ್ತವ್ಯ ನಿರ್ವಹಿಸುತ್ತಾರೆ. ನಾಯಕನ ಹಟ್ಟಿಯ ಪ್ರಸಿದ್ಧ ದೈವ ತಿಪ್ಪೇರುದ್ರಸ್ವಾಮಿ ಮೂಲತಃ ಬೇಡರವನು ಎಂದು ಕೆಲವರ ವಾದ. ಇದಕ್ಕೆ ಸಾಕ್ಷಿಯಾಗಿ ಬೇಡರಲ್ಲಿನ ಹೆಸರುಗಳು, ಬೆಡಗುಗಳು, ಬಹುತೇಕ ತೆಲುಗಿನಲ್ಲಿದ್ದು ಅವುಗಳು ಪಶುಪಾಲನೆಗೆ ಸಂಬಂಧಿಸಿದಂತಿವೆ ಉದಾ: ಆಕಳು ಕಾಯುವವನು ಆವುಲಯ್ಯ, ಎತ್ತು ಕಾಯುವವನು-ಎದ್ಲಯ್ಯ, ಕುರಿ ಕಾಯುವವನು-ಗೊಡ್ಲಯ್ಯ ಹೀಗೆ ಅವರು ಮಾಡುವ ಕೆಲಸದಿಂದ ಅವರ ಹೆಸರುಗಳನ್ನು ಕರೆಯಲಾಗಿದೆ ಅದೇ ರೀತಿ ಪಶುಗಳ ಸಗಣಿಯನ್ನು ಅಡವಿಯಲ್ಲಿ ಕೂಡಿಹಾಕಿ ತಿಪ್ಪೆ ಮಾಡುವ ವೃತ್ತಿಯವನಾದ್ದರಿಂದ ಇವನಿಗೆ ತಿಪ್ಪಯ್ಯ ಎಂದು ಹೆಸರು ಬಂದಿರಬಹುದು ಎನ್ನಬಹುದು ಆದರೆ ನಿಖರ ಆಧಾರಗಳಿಲ್ಲದಿರುವುದು ಕೊರತೆ, ಹಾಗಾಗಿ ನಾಯಕನ ಹಟ್ಟಿಯ ತಿಪ್ಪೇಸ್ವಾಮಿಯನ್ನು ಮೂಲತಃ ಬೇಡರವನು ಆಗಿರಬಹುದು ಎಂದು ಊಹಿಸಬಹುದಾಗಿದೆ ಇದಕ್ಕೆ ಇನ್ನು ಹೆಚ್ಚಿನ ಸಂಶೋಧನೆ ಅಗತ್ಯ ಇದೆ. ತಿಪ್ಪೇಸ್ವಾಮಿ ಬೇಡರವನು ಎಂಬ ಮಾತಿಗೆ ಪೂರಕವಾಗಿ ಹಟ್ಟಿಯಲ್ಲಿ ನಡೆಯುವ ತಿಪ್ಪೇಸ್ವಾಮಿಯ ಜಾತ್ರೆಯಲ್ಲಿ ಬೇಡರು ಮತ್ತು ಮಾದಿಗರದು ಪ್ರಮುಖ ಪಾತ್ರವಾಗಿರುತ್ತದೆ ಮತ್ತು ಹಟ್ಟಿಯಲ್ಲಿ ತಿಪ್ಪೇಸ್ವಾಮಿಯ ಎರಡು ಗುಡಿಗಳಿದ್ದು ಅದರಲ್ಲಿ ಒಂದು ಒಳಮಠ ಮತ್ತೊಂದು ಹೊರಮಠ ತಿಪ್ಪೇಸ್ವಾಮಿಯು ಜೀವೈಕ್ಯವಾದ

ಸ್ಥಳ ಒಳಮಠದಿಂದ ಒಂದು ಕಿ. ಮೀ ದೂರದಲ್ಲಿದೆ ಅದನ್ನೇ ನಾವು ಹೊರಮಠ ಎನ್ನುತ್ತೇವೆ ಹೊರಮಠದಲ್ಲಿ ತಿಪ್ಪೇರುದ್ರಸ್ವಾಮಿ ಸಮಾಧಿಗೆ ಪ್ರತಿನಿತ್ಯ ಬೇಡರೆ ಪೂಜೆಮಾಡುತ್ತಾರೆ.

ಯಾವಾಗಲೂ ಯಾವುದೇ ಒಂದು ಬುಡಕಟ್ಟು ಸಮುದಾಯ ತಮ್ಮಲ್ಲಿ ಹುಟ್ಟಿ ಬೆಳೆದು ಮಡಿದ ತಮ್ಮ ಹಿರಿಯರನ್ನು ಸತ್ತ ನಂತರ ತಮ್ಮ ದೈವವಾಗಿ ಆರಾಧಿಸುವುದು ಕಂಡು ಬರುತ್ತದೆ. ಹೊರಮಠದ ತಿಪ್ಪೇರುದ್ರಸ್ವಾಮಿಯ ಸಮಾಧಿಗೆ ನಿತ್ಯ ಪೂಜೆ ಮಾಡುವವರು ಬೇಡರೇ ಆಗಿರುವುದರಿಂದ ತಿಪ್ಪಯ್ಯ ಮೂಲತಃ ಬೇಡರವನು ಎಂದು ಹೇಳಬಹುದಾಗಿದೆ. ಈ ಹೊರ ಮಠದ ದೇವಾಲಯವು ಹಿಂದೂ-ಮುಸ್ಲಿಂ ಶೈಲಿಯಲ್ಲಿದೆ ಲಿಂಗಪ್ಪ ಎಂಬ ಹೈದರಾಲಿಯ ನಿಯೋಜಿತ ಅಧಿಕಾರಿ ಇಲ್ಲಿ ಉಸ್ತುವಾರಿ ನೋಡಿಕೊಳ್ಳುವಾಗ ಇದನ್ನು ಕಟ್ಟಿಸಿದನು ಎನ್ನುತ್ತಾರೆ. ಕಾರಣ ಹೈದರಾಲಿಗೆ ತಿಪ್ಪೇಸ್ವಾಮಿಯ ಹರಕೆಯ ವರದಿಂದ ಪುತ್ರ ಸಂತಾನವಾಗಿರುವುದಕ್ಕೆ ಆ ಪುತ್ರನಿಗೆ ಹೈದರಾಲಿ ತಿಪ್ಪಯ್ಯ ಎಂದು ಹೆಸರು ಕರೆದಿದ್ದನು, ಕಾಲಾನಂತರದಲ್ಲಿ ತಿಪ್ಪಯ್ಯ ತಿಪ್ಪು, ಟಿಪ್ಪು, ಟಿಪ್ಪುಸುಲ್ತಾನ್ ಎಂದಾಗಿರಬಹುದು. ಎಂದು ಹೇಳಲಾಗುತ್ತದೆ. ಒಟ್ಟಾರೆಯಾಗಿ ನಾಯಕನ ಹಟ್ಟಿಯು ಬೇಡರು ಹೆಚ್ಚಾಗಿ ನೆಲೆಸಿರುವ ನೆಲೆಯಾಗಿದೆ. ಪಶುಪಾಲಕ ಸಮುದಾಯವಾದ ಬೇಡರು ಮೊದಲು ಹಟ್ಟಿಕಟ್ಟಿಕೊಂಡು ಹಟ್ಟಿ ಸಂಸ್ಕೃತಿಗೆ ಒಳಪಟ್ಟ ಸ್ಥಳ ಇದಾಗಿದೆ ಕಂಪಳದೇವರ ಹಟ್ಟಿಯ ಜನಪದರು ನಾಯಕನ ಹಟ್ಟಿಯ ಜಾತ್ರೆ/ಹಟ್ಟಿ ಹುಣ್ಣಿಮೆಯ ದಿನದಂದು ಹೊಲಕ್ಕೆ ಬೀಜ ಬಿತ್ತುವ ಮತ್ತು ಬೇರೆ ಒಳ್ಳೆಯ ಕೆಲಸಗಳನ್ನು ಆರಂಭಿಸುತ್ತಾರೆ. ಒಟ್ಟಾರೆ ಕಂಪಳದೇವರ ಹಟ್ಟಿ ಮತ್ತು ನಾಯಕನ ಹಟ್ಟಿ ಜನಪದರು ತಮ್ಮ ವ್ಯಾಜ್ಯ ತೀರ್ಮಾನಗಳು ಅಲ್ಲದೆ ಸಾಂಸ್ಕೃತಿಕವಾಗಿ ಸಂಬಂಧ ಉಳಿಸಿಕೊಂಡು ಬಂದಿದ್ದಾರೆ.

**ಹಂಪಿ ಮತ್ತು ಕಂಪಳದೇವರ ಹಟ್ಟಿ**

ಹಂಪಿಯು ಕಂಪಳದೇವರ ಹಟ್ಟಿಯ ಬೇಡ ಬುಡಕಟ್ಟಿನವರ ಧಾರ್ಮಿಕ, ಸಾಂಸ್ಕೃತಿಕ ಅನನ್ಯತೆಯ ಕೇಂದ್ರಸ್ಥಾನವಾಗಿದೆ. ಇಂದಿಗೂ ಸಹ ಹಂಪಿಯ ರಥೋತ್ಸವ, ಫಲಪೂಜೆ ಮುಂತಾದ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಗಳಲ್ಲಿ ಬೇಡರೇ ಹೆಚ್ಚಾಗಿ ಭಾಗವಹಿಸುವುದನ್ನು ನಾವು ನೋಡಬಹುದು. ಸ್ಥಳೀಯ ಬೇಡರು ಮಾತ್ರವಲ್ಲದೆ ಬೇರೆ ಬೇರೆ ಜಿಲ್ಲೆಗಳಿಂದ ಈ ಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸೇರುತ್ತಾರೆ ಮತ್ತು ಹಂಪಿ ಆನೆಗೊಂದಿ ಕಮಲಾಪುರದಿಂದಲೂ ಸಹ ಮ್ಯಾಸಬೇಡರು ಕಂಪಳದೇವರ ಹಟ್ಟಿಯ ಗುಗ್ಗರಿ ಹಬ್ಬಕ್ಕೆ ಬರುತ್ತಾರೆ. ಅದರಂತೆಯೇ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆಸಿರುವ ಎಲ್ಲಾ ಬೇಡರು ಕುಟುಂಬ ಸಮೇತರಾಗಿ ಪ್ರತಿವರ್ಷ ತಪ್ಪದೇ ಹಂಪಿಯ ಫಲಪೂಜಾ ಕಾರ್ಯಕ್ರಮಕ್ಕೆ ಬಂದು ಹೋಗುತ್ತಾರೆ. ಕಂಪಳದೇವರ ಹಟ್ಟಿಯಿಂದಲೂ ಸಹ ಈ ಸಮುದಾಯದವರು ಪ್ರತಿವರ್ಷ ತಪ್ಪದೇ ಬರುತ್ತಾರೆ. ಅಲ್ಲದೆ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಕಂಪಳದೇವರ ಹಟ್ಟಿ ಮತ್ತು ಮ್ಯಾಸಮಂಡಲದ ಎಲ್ಲಾ ಮ್ಯಾಸಬೇಡರು ಮತ್ತು ದೇವರ ಎತ್ತುಗಳೊಂದಿಗೆ ನಡೆದು ಬಂದು ಹಂಪಿಯಲ್ಲಿನ ತುಂಗಭದ್ರ ನದಿಯಲ್ಲಿ ತಮ್ಮ ಪೆಟ್ಟಿಗೆ ದೇವರುಗಳನ್ನು ಜಲಧಿ ಮಾಡಿಸಿ ಪೂಜಿಸಿಕೊಂಡು ಮರಳಿ ಹಟ್ಟಿಗೆ ಹೋಗುವುದನ್ನು ಪರಂಪರೆಯಿಂದಲೂ ಅನುಸರಿಸಿಕೊಂಡು ಬರುತ್ತಿದ್ದಾರೆ. ಈ ಪೂಜಾಕಾರ್ಯ ಹಂಪಿಯ ಚಕ್ರತೀರ್ಥದಲ್ಲಿ(ತಿರಿವಿನ ಮಡುವು) ಜರುಗುವುದು.

ಹೀಗೆ ಹನ್ನೆರಡು ವರ್ಷಗಳಿಗೊಮ್ಮೆ ಕಂಪಳದೇವರ ಹಟ್ಟಿಯಿಂದ ಹಂಪಿಗೆ ಬೇಡ ಬುಡಕಟ್ಟಿನವರು ಬಂದು ಪೂಜಿಸಿಕೊಂಡು ಹೋಗುವ ಆಚರಣೆಯನ್ನು ಪೆಡೆಕಟ್ಟು ಪಂಡಗ(ಹೆಡೆಕಟ್ಟಿನ ಹಬ್ಬ) ಎನ್ನುತ್ತಾರೆ. ಬೇಡರ ಕಂದೆಲುಗು ಮಾತಿನಲ್ಲಿ ಪೆಡೆಕಟ್ಟು ಪಂಡಗ ಎಂದು ಕರೆಯುವ ಈ ಹೆಡೆಕಟ್ಟಿನ ಹಬ್ಬ ಕಂಪಳದೇವರ ಹಟ್ಟಿ ಮತ್ತು ಹಂಪಿಯ ಸಾಂಸ್ಕೃತಿಕ ಅನನ್ಯತೆಯ ಸಂಕೇತವಾಗಿದೆ ಹಟ್ಟಿಯಲ್ಲಿ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಶ್ರಾವಣಮಾಸದಲ್ಲಿ ಮಾಡುವ ಈ ಹಬ್ಬದಲ್ಲಿ ಕಂಪಳದೇವರ ಹಟ್ಟಿ ಮತ್ತು ಸುತ್ತಮುತ್ತಲ ಹಟ್ಟಿಯ ಬೇಡರು ಸೇರಿ ಹಂಪಿಗೆ ತಮ್ಮ ಪೆಟ್ಟಿಗೆ ದೇವರು ಮತ್ತು ದೇವರ ಎತ್ತುಗಳೊಂದಿಗೆ ಬಂದು ಚಕ್ರತೀರ್ಥದಲ್ಲಿ ದೇವರುಗಳನ್ನು ಪೂಜಿಸಿಕೊಂಡು ಮರಳಿ ಹಟ್ಟಿಯನ್ನು ಸೇರುತ್ತಾರೆ. ವಿಶೇಷವೆಂದರೆ ಕಂಪಳದೇವರ ಹಟ್ಟಿಯಿಂದ ಹಂಪಿಯವರೆಗೆ ತಮ್ಮ ದೇವರನ್ನು ಪಟ್ಟದ ಪೂಜಾರಿಯ ತಲೆಯ ಮೇಲೆ ಹೊರಿಸಿಕೊಂಡು ಜೊತೆಯಲ್ಲಿ ದೇವರ ಎತ್ತುಗಳನ್ನು ಹೊಡೆದುಕೊಂಡು ಇಡೀ ಸಮುದಾಯದವರು ನಡೆದು ಬಂದು ದೇವರನ್ನು ಪೂಜಿಸಿಕೊಂಡು ಮರಳಿ ನಡೆದು ಹೋಗಿ ಹಟ್ಟಿಯನ್ನು ಸೇರುತ್ತಾರೆ. ಈ ಆಚರಣೆಯು ಬೇಡರು ತುಂಗಭದ್ರ ನದಿಯೊಂದಿಗಿನ ಸಂಬಂಧವನ್ನು ಪ್ರತಿಬಿಂಬಿಸುತ್ತದೆ.

**ನಾಗ್ತಿ ಹಳ್ಳಿ ಮತ್ತು ಕಂಪಳದೇವರ ಹಟ್ಟಿ**

ಚಳ್ಳಕೆರೆ ತಾಲೂಕು ದೇವರ ಮರಿಕುಂಟೆಯಿಂದ ಪಶ್ಚಿಮಕ್ಕೆ ಸುಮಾರು ಮೂರು ಕೀ ಮೀ ದೂರದಲ್ಲಿ ನಾಗ್ತಿಹಳ್ಳಿ ಎಂಬ ಪಾಳು ಬಿದ್ದ ಪುಟ್ಟ ಹಟ್ಟಿ ಕಂಡುಬರುತ್ತದೆ. ಈ ಹಟ್ಟಿ ಮ್ಯಾಸಬೇಡರ ಪ್ರಮುಖ ಧಾರ್ಮಿಕ ದೇಂದ್ರ ಹಾಗೂ ವಾಸಸ್ಥಾನವಾಗಿದೆ. ನಾಗತಿಹಳ್ಳಿ-ನಗ್ತಿಹಳ್ಳಿ ಕಟ್ಟೆ ಎಂದೇ ಈಗ ಕರೆಯುತ್ತಿದ್ದಾರೆ. ಈ ಹಟ್ಟಿಯಲ್ಲಿ ನೆಲೆಸಿದ್ದ ಮ್ಯಾಸಬೇಡರು ಮೂಲತಃ ಆಂಧ್ರಪ್ರದೇಶದ ಅಹೋಬಲ, ಶ್ರೀಶೈಲ, ಕದರಿ, ತಿರುಪತಿ ಮತ್ತು ನಿಡಗಲ್ಲು ಪ್ರಾಂತ್ಯದಿಂದ ಮುಸಲ್ಮಾನರ ಹಾವಳಿಯಿಂದ ಬೇಸತ್ತು ಕರ್ನಾಟಕದ ಕಡೆಗೆ ವಲಸೆ ಬಂದಿದ್ದಾರೆ. ತಾವು ಬರುವಾಗ ತಮ್ಮ ಮನೆದೇವರನ್ನು ಮತ್ತು ದೇವರ ಪರಿಕರಗಳನ್ನು ಜೊತೆಗೆ ತಂದು ಪ್ರತ್ಯೇಕವಾಗಿ ನಾಗ್ತಿಹಳ್ಳಿ ಎಂಬ ಕಾಡಿನಲ್ಲಿ ತಮ್ಮ ದೇವರನ್ನು ಪ್ರತಿಷ್ಠಾಪಿಸಿಕೊಂಡು ಪಶುಪಾಲನೆ ಮತ್ತು ಕೃಷಿಯನ್ನು ಮಾಡಿಕೊಂಡು ನೆಲೆಸಿದ್ದರೆಂದು ತಿಳಿದುಬರುತ್ತದೆ. ನಾಗ್ತಿಹಳ್ಳಿ ಊರಬಾಗಿಲಲ್ಲಿ ನೆಲಮಟ್ಟದಿಂದ ೨೪ ಇಂಚು ಎತ್ತರ, ೨೪ ಇಂಚು ಸುತ್ತಳತೆಯ ಬಿಳಿಯ ಕಲ್ಲು ಕಂಬವಿದೆ, ಇದನ್ನು ಊರುಬಾಗಿಲ ಕಲ್ಲು ಎನ್ನುತ್ತಾರೆ. ಈ ಕಲ್ಲಿನಿಂದ ದಕ್ಷಿಣಕ್ಕೆ ಸುಮಾರು ೨೫೦ ಅಡಿ ದೂರದಲ್ಲಿ ನಾಗರಕಲ್ಲುಗಳು ಕಂಡುಬರುತ್ತವೆ. ಪೂರ್ವಾಭಿಮುಖವಾಗಿ ಜೋಡಿಸಲ್ಪಟ್ಟ ಸುಂದರವಾದ ನಾಗರಕಲ್ಲುಗಳು ನಾಗರ ಹಾವಿನ ವಿವಿಧ ಭಂಗಿಯ ಚಿತ್ರಗಳು ಇಲ್ಲಿ ಕಂಡುಬರುತ್ತವೆ. ಈ ನಾಗರಕಲ್ಲುಗಳಿಂದಲೇ ಈ ಪ್ರದೇಶಕ್ಕೆ ನಾಗ್ತಿಹಳ್ಳಿ ಎಂಬ ಹೆಸರು ಬಂದಿದೆ ಮ್ಯಾಸಬೇಡರು ಆದಿಯಿಂದಲೂ ಸಹ ನಾಗಾರಾಧಕರಾಗಿದ್ದರೆ. ಇವರು ಪೂಜಿಸುವ ದೇವರುಗಳು ಬೆಳ್ಳಿಯ ನಾಗಾಭರಣಗಳೇ ಆಗಿವೆ. ಹಿಂದೆ ಮ್ಯಾಸಬೇಡರು ನೆಲೆಸಿದ್ದ ವಸತಿ ವ್ಯವಸ್ಥೆ ಅಥವಾ ಪ್ರಮುಖ ಧಾರ್ಮಿಕ ಕೇಂದ್ರ ನಾಗ್ತಿಹಳ್ಳಿ ಇಂದು ಹೇಳಲು ಹೆಸರಿಲ್ಲದಂತೆ ಅಳಿದು ಹೋಗಿದೆ.

**ದೇವಪುರದ ಹಾಲುರಾಮೇಶ್ವರ ಮತ್ತು ಕಂಪಳದೇವರ ಹಟ್ಟಿ**

ಇದು ಹೊಸದುರ್ಗದಿಂದ ೮ ಕಿ ಮೀ ದೂರದಲ್ಲಿ ತಾಳ್ಯರಸ್ತೆಯಲ್ಲಿದೆ. ಮಾಡದಕೆರೆಯ ಹೋಬಳಿಯ ದೇವಪುರ ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಈ ಕ್ಷೇತ್ರ ಒಳಪಡುತ್ತದೆ. ಇದು ಹಾಲಿನಂತೆ ಬೆಳ್ಳಗಿರುವ ನೀರಿನ ಪವಿತ್ರ ಹೊಂಡದಿಂದ ಪ್ರಸಿದ್ದವಾಗಿದೆ ಆದುದರಿಂದ ಇದನ್ನು ಹಾಲುರಾಮೇಶ್ವರ ಎಂದು ಕರೆಯಲಾಗಿದೆ. ಹೊಳಲ್ಕೆರೆ, ಹೊಸಪೇಟೆ, ಹಿರಿಯೂರು, ಮೊಳಕಾಲ್ಮೂರು ತಾಲೂಕಿನ ಕಂಪಳದೇವರ ಹಟ್ಟಿಯ ಹಾಗೂ ಇತರ ಹಟ್ಟಿಗಳ ಮ್ಯಾಸಬೇಡರು ತಮ್ಮ ದೇವರುಗಳನ್ನು ಈ ಪ್ರದೇಶಕ್ಕೆ ಜಲ್ದಿಗೆ(ಜಲಧಿಗೆ/ಗಂಗೆಪೂಜೆಗೆ) ಕರೆದುಕೊಂಡು ಹೋಗಿ ಬರುತ್ತಾರೆ. ಮಳೆ ಬೆಳೆ ಸಮೃದ್ಧಿಯಾದಾಗ ಪೂಜಾರಿ ಅಥವಾ ದಾಸಯ್ಯಗಳಿಗೆ ಪಟ್ಟಕಟ್ಟುವಾಗ ಹಟ್ಟಿಯ ಎಲ್ಲಾ ಜನರು ಹರಕೆ ಮಾಡಿಕೊಂಡು ದೇವರು ಮತ್ತು ಪರಿವಾರಗಳೊಂದಿಗೆ ಈ ಪುಣ್ಯಕ್ಷೇತ್ರಕ್ಕೆ ಬರುತ್ತಾರೆ.

**ಎದ್ಲಟ್ಟಿ/ಎತ್ತಿನ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ನಾಯಕನಹಟ್ಟಿ ಹೋಬಳಿಯಲ್ಲಿ ಬರುವ ಹಟ್ಟಿಯಿದು. ಈ ಹಟ್ಟಿಯ ಜನರೆಲ್ಲಾ ಮ್ಯಾಸನಾಯಕರೇ ಆಗಿದ್ದು ಇವರ ಪಶುಪಾಲನಾ ವೃತ್ತಿಯಿಂದ ಈ ಹಟ್ಟಿಗೆ ಎತ್ತಿನ ಹಟ್ಟಿ ಎಂದು ಹೆಸರು ಬಂದಿದೆ ಎನ್ನುತ್ತಾರೆ. ಈಗಲೂ ಈ ಹಟ್ಟಿಯಲ್ಲಿ ಹೆಚ್ಚು ಪಶುಪಾಲನೆ ಕಂಡುಬರುತ್ತದೆ. ಈ ಹಟ್ಟಿಯಿಂದ ಬೇಡರು ಪ್ರತಿವರ್ಷ ತಮ್ಮ ಮೂಲ ದೈವ ಕಂಪಳರಂಗಸ್ವಾಮಿಯನ್ನು ಪೂಜಿಸಲು ಕಂಪಳದೇವರ ಹಟ್ಟಿಗೆ ಗುಗ್ಗರಿ ಹಬ್ಬಕ್ಕೆ ಕಾಸು, ಹಾಲು, ಮೊಸರು ಹುರುಳಿಕಾಳನ್ನು ತೆಗೆದುಕೊಂಡು ಬರಿಗಾಲಲ್ಲಿ ನಡೆದುಕೊಂಡು ಅಥವಾ ಎತ್ತಿನ ಗಾಡಿಗಳಲ್ಲಿ ಬಂದು ಅರ್ಪಿಸುತ್ತಾರೆ.

**ಎದ್ದಲು ಬೊಮ್ಮಯ್ಯನ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಬೊಮ್ಮಯ್ಯ ಎಂಬ ವ್ಯಕ್ತಿ ಹಿಂದೆ ನಿರಾಶ್ರಿತನಾಗಿದ್ದು ಅಕ್ಕ-ಪಕ್ಕದ ಊರುಗಳ ದನಗಳನ್ನು/ಎತ್ತುಗಳನ್ನು ಕಾಯುತ್ತಿದ್ದನು ದನಗಳನ್ನು ಮೇಯಿಸಿಕೊಂಡು ಮದ್ಯಾಹ್ನದ ವಿಶ್ರಾಂತಿಗೆ ಇಲ್ಲಿನ ಹುಣಸೇಮರಗಳ ನೆರಳಲ್ಲಿ ದನಗಳನ್ನು ತರುಬುತ್ತಿದ್ದನು, ಕಾಲಾನಂತರ ಅಲ್ಲಿ ಗುಡಿಸಿಲು ಕಟ್ಟಿಕೊಂಡು ನೆಲೆಸಿದ ಹೀಗೆ ಸ್ಥಾಪಿಸಿದ ಹಟ್ಟಿಗೆ ಎದ್ದುಲು ಬೋರಯ್ಯನ ಹಟ್ಟಿ ಎಂದು ಕರೆಯಲಾಯಿತು. ಈ ಹಟ್ಟಿಯಿಂದಲೂ ಸಹ ಕಂಪಳರಂಗಸ್ವಾಮಿಯ ಗುಗ್ಗರಿ ಹಬ್ಬಕ್ಕೆ ಕಾಸು ಮೀಸಲು ತಪ್ಪದೇ ತರುತ್ತಾರೆ.

**ಉಗ್ಗಿ ನಿಂಗಯ್ಯನ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ನಿಂಗಯ್ಯ ಎಂಬ ವ್ಯಕ್ತಿಯ ವಂಶಸ್ಥರು ಈ ಹಟ್ಟಿ ಕಟ್ಟಿದಾಗ ಹಟ್ಟಿ ಜನರಿಗೆ ಉಗ್ಗಿ ಊಟ ಹಾಕಿಸಿದ್ದರಿಂದ ಈ ಹಟ್ಟಿಗೆ ಉಗ್ಗಿ ನಿಂಗಯ್ಯನ ಹಟ್ಟಿ ಎನ್ನುತ್ತಾರೆ. ಮೊಳಕಾಲ್ಮೂರು ತಾಲೂಕಿನಲ್ಲಿ ಚಿನ್ನ ಹಗರಿ ನದಿ ದಡದಲ್ಲಿ ಈ ಹಟ್ಟಿ ಇದೆ. ಈ ಹಟ್ಟಿಯಲ್ಲಿ ಗೌರಸಮುದ್ರದ ಮಾರಮ್ಮನ ಗುಡಿ ಮತ್ತು ಊರ ಮಾರಮ್ಮನ ಗುಡಿಗಳಿವೆ ಉಗ್ಗಿನಿಂಗಯ್ಯನ ಹಟ್ಟಿಯಿಂದಲೂ ಸಹ ಬೇಡರು ಕಂಪಳದೇವರ ಹಟ್ಟಿ ಗುರುಸ್ಥಾನಕ್ಕೆ ಬರುತ್ತಾರೆ.

**ಕನ್ನಿಬೋರಯ್ಯನ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಕನ್ನಿಬೋರಯ್ಯನ ಹಟ್ಟಿಯು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಪೂಜಾರಹಳ್ಳಿ ಗ್ರಾಮ ಪಂಚಾಯಿತಿಗೆ ಸೇರುತ್ತದೆ. ಬೇಡರ ಸಾಂಸ್ಕೃತಿಕ ನಾಯಕ ಯರಮಂಚಿನಾಯಕ ಹಿಂದೆ ಪಶುಪಾಲನೆ ಮಾಡುತ್ತಾ ಸುತ್ತುತ್ತಿರುವಾಗ ತನ್ನ ಕಾಫು ಕಂಪಳದೊಡನೆ ಇಲ್ಲಿ ನೆಲೆಸಿದ್ದನೆಂದು ಜನಪದರು ಹೇಳುತ್ತಾರೆ, ಇಲ್ಲಿನ ಜನರು ಇಂದಿಗೂ ಹಂಪಿ ಆನೆಗೊಂದಿ ಜರಿಮಲೆ ಮೊದಲಾದ ಚಾರಿತ್ರಿಕ ಮತ್ತು ಧಾರ್ಮಿಕ ಸ್ಥಳಗಳಿಗೆ ನಡೆದುಕೊಳ್ಳುತ್ತಾರೆ. ಹತ್ತಿರದ ಕಂಪಳದೇವರ ಹಟ್ಟಿಯೊಂದಿಗೂ ಸಹ ಧಾರ್ಮಿಕ ಸಂಬಂಧವನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ.

**ದೊರೆಗಳ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ರಾಮದುರ್ಗವನ್ನು ಆಳಿದ್ದ ದೊರೆಗಳ ಸಂತತಿಯವರು ರಾಮದುರ್ಗದ ನಾಶದ ನಂತರ ಇಲ್ಲಿ ಬಂದು ಹಟ್ಟಿಕಟ್ಟಿಕೊಂಡು ನೆಲೆಸಿದ್ದರಿಂದ ಈ ಹಟ್ಟಿಯನ್ನು ದೊರೆಗಳ ಹಟ್ಟಿ ಎಂದು ಕರೆಯುತ್ತಾರೆ. ಮ್ಯಾಸರೂ ಸಹ ಕಂಪಳದೇವರ ಹಟ್ಟಿಯನ್ನು ಗುರುಸಂಸ್ಥಾನವೆಂದು ಅಂಗೀಕರಿಸಿ ಹಟ್ಟಿಗೆ ಪ್ರತಿವರ್ಷ ಕುಟುಂಬ ಸಮೇತರಾಗಿ ಬಂದು ಪೂಜಿಸಿಕೊಂಡು ಹೋಗುತ್ತಾರೆ.

**ಬೋಸೇದೇವರ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಚಳ್ಳಕೆರೆ ತಾಲೂಕಿನ ಧಾರ್ಮಿಕ ಕೇಂದ್ರ ನಾಯಕನಹಟ್ಟಿಯಿಂದ ೫ ಕಿ ಮೀ ಅಂತರದಲ್ಲಿರುವ ಈ ಹಟ್ಟಿಯಲ್ಲಿ ಮ್ಯಾಸನಾಯಕರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಈ ಹಟ್ಟಿಯಲ್ಲಿ ಬೋಸೇದೇವರು ನೆಲೆಸಿರುವ ಹಿನ್ನಲೆಯಲ್ಲಿ ಬೊಸೇದೇವರ ಹಟ್ಟಿ ಎಂದು ಕರೆಯುತ್ತಾರೆ. ಈ ಹಟ್ಟಿಯಲ್ಲಿ ಮೊದಲು ಬೂಸೇವೆ ನಡೆಯುತ್ತಿತ್ತು(ತೆಲುಗಿನಲ್ಲಿ ಬುವ್ವ- ಎಂದರೆ ಅನ್ನ, ಸೇವೆ ಎಂದು ಅರ್ಥ) ಅಂದರೆ ಅನ್ನ ಸಂತರ್ಪಣೆ ನಡೆಯುತ್ತಿತ್ತು ಎಂದರ್ಥ, ಮೂಲದಲ್ಲಿ ಈ ದೇವರನ್ನು ಬೂಸೇದೇವರು ಎಂದು ಕರೆಯಲಾಗುತ್ತಿತ್ತು. ಕಾಲಾನಂತರ ಬುಸೇದೇವರು ಬೋಸೇದೇವರಾಗಿ ಬೂಸದೆವರ ಹಟ್ಟಿ ಬೋಸೇದೇವರ ಹಟ್ಟಿಯಾಗಿ ಪರಿವರ್ತನೆಯಾಗಿರಬೇಕು. ಕಂಪಳದೇವರ ಹಟ್ಟಿಯಲ್ಲಿ ಗುಗ್ಗರಿ ಹಬ್ಬವಾಗುವ ಸಮಯಕ್ಕೆ ಬೋಸೇದೇವರ ಹಟ್ಟಿಯ ಎಲ್ಲಾ ಮ್ಯಾಸರು ದೇವರ ಗುಡಿಯ ಹತ್ತಿರ ತಮ್ಮ ತಮ್ಮ ಮನೆಯಲ್ಲಿ ತಾವು ಬೆಳೆದ ಹುರುಳಿಕಾಳನ್ನು ತಮ್ಮ ಶಕ್ತಾನುಸಾರ ತಂದು ಒಂದೆಡೆ ಸಂಗ್ರಹಿಸಿ ಜೊತೆಗೆ ಕಾಸು ಮೀಸಲು ತೆಗೆದುಕೊಂಡು ಮಡಿಯಿಂದ ಬರಿಗಾಲಲ್ಲಿ ನಡೆದುಕೊಂಡು ಅಥವಾ ಎತ್ತಿನ ಗಾಡಿಯಲ್ಲಿ ಕಂಪಳದೇವರ ಹಟ್ಟಿಗೆ ಬಂದು ದೇವರಿಗೆ ಅರ್ಪಿಸುತ್ತಾರೆ.

**ಬೋರೇದೇವರ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಚಳ್ಳಕೆರೆಯಿಂದ ನಾಯಕನಹಟ್ಟಿಗೆ ಹೋಗುವ ದಾರಿಯಲ್ಲಿಯೇ ಇರುವ ಈ ಹಟ್ಟಿಯನ್ನು ಖುದಾಪುರ ಎಂದೂ ಸಹ ಕರೆಯುತ್ತಾರೆ. ಈ ಹಟ್ಟಿಯಲ್ಲಿ ಬೋರೇದೇವರ ಗುಡಿ ಇರುವುದರಿಂದ ಬೊರೇದೇವರ ಹಟ್ಟಿ ಎನ್ನುತ್ತಾರೆ. ಇಲ್ಲಿಯ ಎಲ್ಲಾ ಮ್ಯಾಸನಾಯಕರು ಕಂಪಳದೇವರ ಹಟ್ಟಿಯಲ್ಲಿನ ತಮ್ಮ ಮೂಲ ದೈವ ಬೇಡಗಂಪಳದ ದೈವ ಕಂಪಳರಂಗನ ಜಾತ್ರೆಗೆ ಬರುತ್ತಾರೆ.

**ಬೆಳವಿನಮರದ ಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಮೊಳಕಾಲ್ಮೂರು ತಾಲೂಕು ನೇರ್ಲಹಳ್ಳಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಹಟ್ಟಿಯಿದು. ಈ ಪರಿಸರದಲ್ಲಿ ಸಾಕಷ್ಟು ಬ್ಯಾಲದ ಮರಗಳು ಇದ್ದಿದ್ದರಿಂದ ಬೆಳ್ಳಿ ಹಣ್ಣು, ಬ್ಯಾಲದ ಹಣ್ಣು, ಬ್ಯಾಲದ ಮರ, ಬೆಳ್ಳಮರ ಹೀಗೆ ಬ್ಯಾಲದ ಮರಗಳು ಇರುವ ಈ ಹಟ್ಟಿಗೆ ಬೆಳವಿನ ಮರದ ಹಟ್ಟಿ ಎಂದು ಕರೆದಿದ್ದಾರೆ.

**ಕುರಿಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿಯಿಂದ ಈಶಾನ್ಯ ದಿಕ್ಕಿಗೆ ೨ ಕಿ ಮೀ ದೂರದಲ್ಲಿರುವುದೇ ಕುರಿಹಟ್ಟಿ ಗ್ರಾಮ, ಹಿಂದೆ ಕುರಿಗಳಿಗೆ ಮೇವು ನೀರಿಗೆಂದು ಪಶ್ಚಿಮದಿಂದ ವಲಸೆ ಬಂದ ಬೇಡರು ತಮಗೂ ಮತ್ತು ಕುರಿಗಳಿಗೂ ನೀರಿನ ಸೌಲಭ್ಯಕ್ಕಾಗಿ ಕೆರೆಯೊಂದು ಅಲ್ಲಿಯೇ ಇದ್ದುದ್ದರಿಂದ ಕುರಿಗಳಿಗಾಗಿ ಹಟ್ಟಿಯೊಂದನ್ನು ಕಟ್ಟಕೊಂಡು ಅಲ್ಲೇ ನೆಲೆಸಿದರು. ಹೀಗೆ ನೆಲೆಸಿದ ಆ ಸ್ಥಳಕ್ಕೆ ಕುರಿಹಟ್ಟಿ ಎಂದು ಹೆಸರು ಬಂದಿತೆಂದು ಹೇಳುತ್ತಾರೆ. ಪ್ರಾಯಶಃ ವಲಸೆ ಪ್ರವೃತ್ತಿಯ ಮ್ಯಾಸಬೇಡರು ನೆಲೆನಿಂತ ಹಟ್ಟಿಗಳು ಸಾಕಷ್ಟಿವೆ. ಕುರಿಹಟ್ಟಿಯಿಂದಲೂ ಸಹ ಮ್ಯಾಸಬೇಡರು ಕಾಸು ಮೀಸಲನ್ನು ತೆಗೆದುಕೊಂಡು ಕಂಪಳರಂಗಸ್ವಾಮಿ ಜಾತ್ರೆಗೆ ಮತ್ತು ತಮ್ಮಲ್ಲಿ ಬಗೆಹರಿಯದ ವ್ಯಾಜ್ಯಗಳನ್ನು ಗುರುಸ್ಥಾನವಾದ ಕಂಪಳದೇವರ ಹಟ್ಟಿಯಲ್ಲಿ ಬಗೆಹರಿಸಿಕೊಳ್ಳುತ್ತಾರೆ.

**ರಾಯಾಪುರದ ಮ್ಯಾಸರಟ್ಟಿ ಮತ್ತು ಕಂಪಳದೇವರ ಹಟ್ಟಿ**

ಮೊಳಕಾಲ್ಮೂರು ಸಮೀಪವಿರುವ ಈ ಹಟ್ಟಿಯನ್ನು ಪದಿನಾರ್ ದೇವರ ಹಟ್ಟಿ, ಪದ್ನಾರ್ ದೇವರ ಹಟ್ಟಿ ಎಂದು ಕರೆಯುತ್ತಾರೆ. ಇಲ್ಲಿನ ಮ್ಯಾಸರ ದೇವರು ಓಬಳೇಶ್ವರ ಈ ದೇವರನ್ನು ಪದಿಯಾಗಳದೇವರು ಹಾಗೂ ಗುಡ್ಡಿದೇವರು ಎಂದು ಕರೆಯುತ್ತಾರೆ. ಈಗಲೂ ದೇವಾಲಯ ಆಧುನೀಕರಣಗೊಂಡರೂ ಪದಿಯಾಗಳ ದೇವರನ್ನು ಸಂಕೇತಿಸುವಂತೆ ದೇವಾಲಯದ ಪಕ್ಕದಲ್ಲಿ ಲಕ್ಕಿಸೊಪ್ಪಿನ ಗುಡಿಸಲು ಇರುವುದನ್ನು ಕಾಣಬಹುದು. ಅಂದರೆ ಪದಿಯಿಂದ(ಪೊದೆ) ಹುಟ್ಟಿದ ದೇವರು ಎನ್ನುವ ಗ್ರಹಿಕೆ. ಪ್ರಾಚೀನ ೧೨ ಕಟ್ಟೆಮನೆಗಳಲ್ಲಿ ಇದೂ ಒಂದು. ಹಿಂದೆ ಶ್ರೀಶೈಲದಿಂದ ಮ್ಯಾಸರು ರಾಸುಗಳೊಂದಿಗೆ ೧೨ ಪೆಟ್ಟಿಗೆ ದೇವರುಗಳ ಸಮೇತ ಇಲ್ಲಿಗೆ ಬಂದರೆಂದು ಹೇಳಲಾಗುತ್ತದೆ. ಇಲ್ಲಿ ಅಜ್ಜಡ್ಲು, ಬೊಡೇಪಾಡ್ಲು, ಕೊಂಡನರು, ರಾಬುಲು, ಮುಂತಾದ ಬೆಡಗಿನವರು ವಾಸಿಸುತ್ತಿದ್ದಾರೆ. ಈ ಹಟ್ಟಿಯಲ್ಲಿ ಬರೀ ಮ್ಯಾಸರೇ ನೆಲೆಸಿದ್ದಾರೆ. ಕಂಪಳದೇವರ ಹಟ್ಟಿಯಲ್ಲಿನ ಜನರು ಮೊದಲು ಇಲ್ಲಿ ನೆಲೆಸಿ ನಂತರ ಕಂಪಳದೇವರ ಹಟ್ಟಿ ಕಟ್ಟಿಕೊಂಡು ನೆಲೆಸಿದರೆನ್ನಲಾಗುತ್ತದೆ. ಈ ಮ್ಯಾಸರಟ್ಟಿಯಿಂದಲೂ ಬೇಡರು ಕಂಪಳದೇವರ ಹಟ್ಟಿಗೆ ದೈವಕಾರ್ಯಗಳಿಗೆ ಕಾಸುಮೀಸಲು ತಂದು ಪೂಜಿಸಿಕೊಂಡು ಹೋಗುತ್ತಾರೆ.

**ಕಾತ್ರಿಕೇನಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಕಂಪಳದೇವರ ಹಟ್ಟಿಗೆ ೧೦ ಕಿ ಮೀ ದೂರದಲ್ಲಿರುವ ಹಟ್ಟಿ ಇದು. ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕಿನ ಪೂಜಾರಹಳ್ಳಿ ಗ್ರಾಮಪಂಚಾಯಿತಿಗೆ ಸೇರಿದ ಹಟ್ಟಿ, ಕಾರ್ತಿಕೇಯ ಮುನಿ ಕುಮಾರಸ್ವಾಮಿ

ಬೆಟ್ಟದಿಂದ ಕಣ್ಣಕುಪ್ಪೆಗೆ ಹೋಗುವಾಗ ಇಲ್ಲಿ ನೆಲೆನಿಂತು ಹೋಗಿದ್ದ ಎಂಬ ಹಿನ್ನೆಲೆಯಲ್ಲಿ ಈ ಹಟ್ಟಿಗೆ ಕಾತ್ರಿಕೇಯ ಹಟ್ಟಿ ಎಂದು ಹೆಸರು ಬಂದಿತು ಎಂದು ಹೇಳುತ್ತಾರೆ. ಅಲ್ಲದೆ ಈ ಹಟ್ಟಿಯಲ್ಲಿ ಪುರಾತನವಾದ ಈಶ್ವರ ದೇವಾಲಯವಿದೆ ಆದ್ದರಿಂದ ಕಾತ್ರಿಕೇಯ ಮುನಿ ಇಲ್ಲಿ ನೆಲೆಸಿರಬಹುದು ಎಂದು ಊಹಿಸಬಹುದಾಗಿದೆ. ಕಾತ್ರಿಕೇನಹಟ್ಟಿಯಲ್ಲಿ ಗಾದರಿಪಾಲನಾಯಕ, ರಾಜಲು ದೇವರು, ಬೋರೇದೇವರು, ಕರಿಯಮ್ಮ, ಆಂಜನೇಯ, ದುರುಗಮ್ಮ ಮುಂತಾದ ದೇವಾಲಯಗಳಿವೆ. ಈ ಹಟ್ಟಿಯ ಮ್ಯಾಸಬೇಡರು ಕಂಪಳರಂಗಸ್ವಾಮಿಗೆ ನಡೆದುಕೊಳ್ಳುತ್ತಾರೆ. ಗುಗ್ಗರಿ ಹಬ್ಬ, ದೀಪಾವಳಿ, ಮುಂಗಾರಿ ಹಬ್ಬಗಳಲ್ಲಿ ಕಂಪಳದೇವರ ಹಟ್ಟಿಗೆ ಬಂದು ಕಂಪಳರಂಗಸ್ವಾಮಿಗೆ ಮೀಸಲು ಅರ್ಪಿಸುತ್ತಾರೆ.

**ತಿರುಪತಿ ಮತ್ತು ಕಂಪಳದೇವರ ಹಟ್ಟಿ**

ಕಂಪಳದೇವರ ಹಟ್ಟಿಯನ್ನು ಮ್ಯಾಸಬೇಡರಿಗೆ ಸಂಬಂಧಿಸಿದಂತೆ ಕರ್ನಾಟಕದ ತಿರುಪತಿ ಎಂದೇ ಕರೆಯುತ್ತಾರೆ, ಕಾರಣ ಇಲ್ಲಿನ ಪ್ರಮುಖ ದೈವ ಕಂಪಳರಂಗಸ್ವಾಮಿಯು ತಿರುಪತಿಯ ತಿಮ್ಮಪ್ಪನೇ ಎಂದು ಹೇಳುತ್ತಾರೆ. ಅದಕ್ಕೆ ಇವರಲ್ಲಿ ಮೌಖಿಕ ಕಥೆಯೂ ಸಹ ಇದೆ. ಅಲ್ಲದೆ ಇವರು ಕಂಪಳರಂಗನನ್ನು ಪೂಜಿಸುವ ವಿಧಿ ವಿಧಾನಗಳಿಗೂ ತಿರುಪತಿಯಲ್ಲಿ ವೆಂಕಟರಮಣನಿಗೆ/ತಿಮ್ಮಪ್ಪನಿಗೆ ನಡೆಯುವ ಪೂಜಾ ವಿಧಿ ವಿಧಾನಗಳಿಗೂ ಯಾವುದೇ ವ್ಯತ್ಯಾಸವಿಲ್ಲ. ಒಂದೇ ಬಗೆಯ ನೋಮುಗಳು/ಪೂಜಾವಿಧಾನಗಳು ನಡೆಯುತ್ತವೆ. ಮ್ಯಾಸಬೇಡರ ಸಾಂಸ್ಕೃತಿಕ ನಾಯಕ ಜಗಳೂರು ಪಾಪನಾಯಕ ತಿಮ್ಮಪ್ಪನ ದರ್ಶನ ಪಡೆಯಲು ತಿರುಪತಿಗೆ ಹೋಗಿ ಅಲ್ಲಿ ಪವಾಡ ಮಾಡಿ ತಿಮ್ಮಪ್ಪನನ್ನು ಒಲಿಸಿಕೊಂಡು ಒಪ್ಪಂದಮಾಡಿಕೊಂಡು ತನ್ನೊಡನೆ ಕರೆ ತಂದು ಕಂಪಳದೇವರ ಹಟ್ಟಿಯಲ್ಲಿ ಪ್ರತಿಷ್ಠಾಪನೆ ಮಾಡಿದ ಕಥೆ ಇವರಲ್ಲಿ ಪ್ರಚಲಿತದಲ್ಲಿದೆ. ತಿರುಪತಿಯು ಕಂಪಳದೇವರ ಹಟ್ಟಿಯೂ ಸೇರಿದಂತೆ ಎಲ್ಲಾ ಮ್ಯಾಸಬೇಡರಿಗೆ ಪವಿತ್ರ ಧಾರ್ಮಿಕ ಕ್ಷೇತ್ರವಾಗಿದೆ.

**ನನ್ನಿವಾಳ ಮತ್ತು ಕಂಪಳದೇವರ ಹಟ್ಟಿ**

ಮ್ಯಾಸಬೇಡರ ಮೂರು ಕಟ್ಟೆಮನೆಗಳಲ್ಲಿ ನನ್ನಿವಾಳ ಕಟ್ಟೆಮನೆಯೂ ಒಂದು. ಇದು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿಗೆ ಸೇರಿದ ಹಳ್ಳಿ, ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ೧೦ ಕಿ ಮೀ ದೂರದಲ್ಲಿರುವ ನನ್ನಿವಾಳದ ಹಿನ್ನೆಲೆ ಬಗ್ಗೆ ಚಾರಿತ್ರಿಕವಾಗಿ, ಮೌಖಿಕವಾಗಿ ಸಾಕಷ್ಟು ಸ್ವಾರಸ್ಯಕರ ಕಥೆಗಳು ದೊರೆಯುತ್ತವೆ. "ಈ ಮುಂಚೆ ಇದನ್ನು ನಂದಿವಾಳ ಎಂದು ಕರೆಯುತ್ತಿದ್ದರು ಅಂದರೆ ಊರಿಗೆ ಅಂಟಿಕೊಂಡಂತೆ ಇರುವ ಬೆಟ್ಟ ನಂದಿ(ಎತ್ತು) ಯ ಭಜದ 'ಹಿಣಿಲಿ' ನಂತೆ ಕಾಣುವುದರಿಂದ ಸಹಜವಾಗಿ ನಂದಿವಾಳ ಎಂಬ ಹೆಸರು ಬಂದಿರಬೇಕು ಆದರೆ ಅಲ್ಲಿದ್ದ ದೊರೆ 'ನನ್ನೆಮ್ಮ' ಎಂಬ ಮುಸ್ಲಿಂ ಹೆಂಗಸಿನೊಂದಿಗೆ ಸಂಪರ್ಕವಿಟ್ಟುಕೊಂಡಿದ್ದ ಆಕೆ ತನ್ನ ಪ್ರಿಯಕರನ ಮನವೊಲಿಸಿ ನನ್ನ ಹೆಸರು ಮತ್ತು ನಮ್ಮ ಮುಸ್ಲಿಂ ಸಂಪ್ರದಾಯ ಶಾಶ್ವತವಾಗಿ ಇರುವಂತೆ ಮಾಡುವುದೇ ನೀನು ನನಗೆ ಕೊಡುವ ಕಾಣಿಕೆ ಎಂದು ಒಪ್ಪಿಸಿದಳು ಆದ್ದರಿಂದ ದೊರೆ ನಂದಿವಾಳವನ್ನು ನನ್ನಿವಾಳವೆಂದು ಕರೆಯಬೇಕು ಹಾಗೂ ಈ ಕಟ್ಟೆಮನೆಗೆ ಸೇರಿದ ಮ್ಯಾಸನಾಯಕರು ಮುಸ್ಲಿಮರಂತೆ 'ಮುಂಜಿ'(ಸುಂತಿ) ಮಾಡಿಸಿಕೊಳ್ಳಬೇಕೆಂಬ

ಆಜ್ಞೆ ಮಾಡಿದನೆಂಬ ಐತಿಹ್ಯಗಳು ಹೇಳುತ್ತವೆ"[೨೮]. ಅದರಂತೆ ನಡೆದುಕೊಂಡ ಅಲ್ಲಿನ ಬೇಡರು ತೀರಾ ಇತ್ತೀಚಿನವರೆಗೂ ಮುಂಜಿಮಾಡಿಸಿಕೊಳ್ಳುತ್ತಿದ್ದರು ಇವರನ್ನು ಮುಂಜಿನಾಯಕರು ಎಂದು ಇಂದಿಗೂ ಕರೆಯುತ್ತಾರೆ. ಹೀಗೆ ಮುಸ್ಲಿಂ ಮಹಿಳೆಯಿಂದ ಈ ಊರಿಗೆ ನನ್ನಿವಾಳ ಎಂದು ಕರೆದಿರುವುದು ತಿಳಿದು ಬರುತ್ತದೆ. ಈ ನನ್ನಿವಾಳವೂ ಸಹ ಮ್ಯಾಸಬೇಡರಿಗೆ ವಿಶೇಷ ಸ್ಥಳವಾಗಿದೆ. ಇಲ್ಲಿನ ಕಟ್ಟೆಮನೆ ಇಂದಿಗೂ ತನ್ನ ಕಾರ್ಯ ನಿರ್ವಹಿಸುತ್ತಿದೆ. ನನ್ನಿವಾಳ ಕಟ್ಟೆಮನೆಯೂ ಸಹ ಕಂಪಳದೇವರ ಹಟ್ಟಿ ಗುರುಸ್ಥಾನಕ್ಕೆ ಸೇರಿದ್ದಾಗಿದೆ. ಈ ಕಟ್ಟೆಮನೆಯಲ್ಲಿ ತೀರ್ಮಾನವಾಗದ ವ್ಯಾಜ್ಯಗಳು ಕಂಪಳದೇವರ ಹಟ್ಟಿಯಲ್ಲಿ ಬಗೆಹರಿಸಿಕೊಳ್ಳುವುದುಂಟು ಕಂಪಳದೇವರ ಹಟ್ಟಿಯ ಹಬ್ಬಾಚರಣೆಗೆ ನನ್ನಿವಾಳದಿಂದ ಬೇಡರು ಕಾಸು ಮೀಸಲು ತಂದು ದೇವರಿಗೆ ಅರ್ಪಿಸುತ್ತಾರೆ. ಈ ಕಟ್ಟೆಮನೆಯ ನಾಯಕರ ಪರವಾಗಿ ಕಂಪಳದೇವರ ಹಟ್ಟಿಯ ಸಮೀಪದ ಸೂರಮ್ಮನ ಹಳ್ಳಿಯ ಮೀಸಲುನಾಯಕ ಬಂದು ಭಾಗವಹಿಸಿ ತನ್ನ ಪಾಲಿನ ಕರ್ತವ್ಯ ನಿರ್ವಹಿಸುತ್ತಾನೆ. ಕರ್ತವ್ಯವೆಂದರೆ ಹಿಂದೆ ಇವರು ಆಯಾ ಕಟ್ಟೆಮನೆಗೆ ಸಂಬಂಧಿಸಿದಂತೆ ವ್ಯಾಜ್ಯಗಳ ಮಾಹಿತಿಯನ್ನು ಹಳ್ಳಿಗಳಿಗೆ ತಿಳಿಸುವವರಾಗಿದ್ದು ಹಬ್ಬಗಳಲ್ಲಿ ಇವರ ಈ ಕಾರ್ಯಕ್ಕೆ ಪ್ರತಿಫಲವಾಗಿ ಗೌರವ ಸಲ್ಲಿಸಿ ಪ್ರಸಾದ ನೀಡುತ್ತಿದ್ದರು ಎಂದು ಹೇಳುತ್ತಾರೆ ಅದು ಇಂದಿಗೂ ಕಂಪಳದೇವರ ಹಟ್ಟಿಯ ಹಬ್ಬಗಳಲ್ಲಿ ಮುಂದುವರೆದುಕೊಂಡು ಬಂದಿದೆ.

**ಗೌರಸಮುದ್ರ ಮತ್ತು ಕಂಪಳದೇವರ ಹಟ್ಟಿ**

ಮ್ಯಾಸಬೇಡರ ಸಾಂಸ್ಕೃತಿಕ ನೆಲೆಗಳಲ್ಲಿ ಗೌರಸಮುದ್ರವೂ ಒಂದು. ಇದು ತಾಲೂಕು ಕೇಂದ್ರವಾದ ಚಳ್ಳಕೆರೆಯಿಂದ ೩೦ ಕಿ ಮೀ ಈಶಾನ್ಯ ದಿಕ್ಕಿಗಿದೆ. ಗೌರಸಮುದ್ರವು ಆಂಧ್ರ ಮತ್ತು ಕರ್ನಾಟಕದ ಗಡಿಗ್ರಾಮವಾಗಿದೆ, ಗೌರಸಮುದ್ರದಲ್ಲಿ ಪ್ರಸಿದ್ದ ದೇವತೆ ಮಾರಮ್ಮನ ಗುಡಿಯಿದ್ದು ಪ್ರತಿವರ್ಷ ಸೆಪ್ಟೆಂಬರ್ ತಿಂಗಳ ಮೊದಲ ಮಂಗಳವಾರದಂದು ಮಾರಮ್ಮನ ಜಾತ್ರೆ ನಡೆಯುತ್ತದೆ. ಚಳ್ಳಕೆರೆ ತಾಲೂಕಿನಲ್ಲಿ ನಾಯಕನಹಟ್ಟಿಯನ್ನು ಬಿಟ್ಟರೆ ಎರಡನೇ ದೊಡ್ಡ ಜಾತ್ರೆ ಗೌರಸಮುದ್ರ ಮಾರಮ್ಮನ ಜಾತ್ರೆ. ಈ ಜಾತ್ರೆಯಲ್ಲಿ ಬಯಲುಸೀಮೆಯ ಎಲ್ಲಾ ಮ್ಯಾಸಬೇಡರು ಸೇರುತ್ತಾರೆ. ಗೌರಸಮುದ್ರದ ಮಾರಮ್ಮನ ಜಾತ್ರೆ ಮೊದಲು ಆದ ನಂತರ ಈ ಭಾಗದ ಅಂದರೆ ಬಯಲುಸೀಮೆಯ ಎಲ್ಲಾ ಊರುಗಳಲ್ಲಿ ಒಂದೊಂದು ಮಂಗಳವಾರ ಮಾರಮ್ಮನ ಹಬ್ಬ ಮಾಡಲಾಗುತ್ತದೆ. ಒಟ್ಟು ನಾಲ್ಕು ಮಂಗಳವಾರ ಮಾರಮ್ಮನ ಹಬ್ಬ ಮಾಡಲಾಗುತ್ತದೆ. ಗೌರಸಮುದ್ರವು ಹಿಂದೆ ಮ್ಯಾಸಬೇಡರ ಕಟ್ಟೆಮನೆಯಾಗಿತ್ತು ಎಂದು ಹೇಳಲಾಗುತ್ತದೆ. ಆದರೆ ಈಗ ಅದು ಕಟ್ಟೆಮನೆಯಾಗಿ ಉಳಿದಿಲ್ಲ. ಗೌರಸಮುದ್ರವನ್ನು ಆಡುಮಾತಿನಲ್ಲಿ ಗೊಸಮುದ್ರ ಎಂದೂ ಕರೆಯುತ್ತಾರೆ. ಚಳ್ಳಕೆರೆ ಜಿಲ್ಲೆಯಲ್ಲಿ ಬಹುತೇಕ ಪಶುಪಾಲಕರೇ ಇರುವುದರಿಂದ ಮೊಳಕಾಲ್ಮೂರು, ಚಳ್ಳಕೆರೆ ಭಾಗದಲ್ಲಿನ ವೇದಾವತಿ ನದಿ ದಂಡೆಯಲ್ಲಿ ಪಶುಪಾಲಕರು ನೆಲೆಸಿದ್ದು ತಾವು ನೆಲೆಸಿದ ನದಿ ಪರಿಸರವನ್ನು ಸಮುದ್ರ ಎಂದೂ ತಮ್ಮ ಸಾಕುದನಗಳಲ್ಲಿನ ಆಕಳುಗಳನ್ನು ಗೋವುಗಳೆಂದು ಆ ಪ್ರದೇಶಕ್ಕೆ ಗೋವು ಸಮುದ್ರ, ಗೊಸಮುದ್ರ, ಗೋಸಂದ್ರ, ಗೌರ ಸಮುದ್ರ ಎಂದು ಹೆಸರು ಬಂದಿರಬಹುದು ಎಂದು ಊಹಿಸಬಹುದಾಗಿದೆ. ಕಾರಣ ಅಲ್ಲಿ ಪಶುಪಾಲಕ

ಸಮುದಾಯಗಳೇ ಹೆಚ್ಚು ಇವೆ. ಗೌರಸಮುದ್ರದ ಮಾರಮ್ಮನ ಜಾತ್ರೆಯನ್ನು ಮಧ್ಯಾಹ್ನದ ಮಾರಮ್ಮ ಎಂದು ಹೇಳಲಾಗುತ್ತದೆ. ಇದು ತುಂಬಾ ದೊಡ್ಡ ಜಾತ್ರೆಯಾದರೂ ಸಹ ಗೌರಸಮುದ್ರದ ಊರಿನಿಂದ ಹೊರಗೆ ತುಮ್ಮಲಿನಲ್ಲಿ ನಡೆಯುತ್ತದೆ, ಆದರೆ ಬೆಳಗಿನಿಂದ ಮದ್ಯಾಹ್ನಕ್ಕೆ ಜಾತ್ರೆ ಮುಗಿದು ಹೋಗುತ್ತದೆ.

ಮ್ಯಾಸಬೇಡರ ಸಾಂಸ್ಕೃತಿಕ ನಾಯಕ ಯರ್ರಮಂಚ ನಾಯಕ ಎಂಬ ವ್ಯಕ್ತಿ ಇದ್ದು ಈತ ಕುದಾಪುರ ಬೊರೇದೇವರ ಆಚರಣೆಯಲ್ಲಿ ಮೊದಲು ಕಂದು ಓತುವನ್ನು ವಾಸೆ ಕೊಯ್ಯುವುದು ಹಿಂದಿನಿಂದ ನಡೆದುಕೊಂಡು ಬಂದಿರುತ್ತದೆ ಒಂದು ಬಾರಿ ಯರ್ರಮಂಚನಾಯಕ ತಡವಾಗಿ ಬಂದಿದ್ದರಿಂದ ಬೇಡರಲ್ಲಿ ಬೇರೆಯವರು ಕರಿ ಓತುವನ್ನು ವಾಸೆಕೊಯ್ಯುತ್ತಾರೆ ಆಗ ತಡವಾಗಿ ಅಲ್ಲಿಗೆ ಬಂದ ಯರ್ರಮಂಚ ನಾಯಕನು ಕೋಪಗೊಂಡು ತನ್ನ ಮಗನನ್ನೇ ವಾಸೆಕೊಯ್ಯುತ್ತಾನೆ ಇದರಿಂದ ಅವನನ್ನು ಕುಲದಿಂದ ಹೊರ ಹಾಕಲಾಗುತ್ತದೆ, ಆಗ ಯರ್ರಮಂಚನಾಯಕನು ಇಡೀ ಮ್ಯಾಸಮಂಡಲವನ್ನು ಒಂದು ಮದ್ಯಾಹ್ನ ಒಂದೆಡೆ ಸೇರುವಂತೆ ಮಾಡುತ್ತೇನೆ ಎಂದು ಶಪಥಮಾಡಿ ಹೊರಡುತ್ತಾನೆ ಆಗ ಗೌರಸಮುದ್ರದ ಮಾರಮ್ಮನನ್ನು ಬೇಡಿಕೊಂಡು ಅಲ್ಲಿ ಸೂರ್ಯನಿಗೆ ಒಂಟಿ ನಮಸ್ಕಾರ ಮಾಡಿ ಗೌರಸಮುದ್ರವನ್ನು 'ಐವೋಜಿ ಮಠ' ಎಂದು ಕರೆದುಕೊಳ್ಳುತ್ತಾನೆ ಅವನು ಶಪಥ ಮಾಡಿದಂತೆ ಇಡಿ ಮ್ಯಾಸಬೇಡರು ಬಂದು ಮಧ್ಯಾಹ್ನದ ವೇಳೆಗೆ ಗೌರಸಮುದ್ರದ ಮಾರಮ್ಮನ ಜಾತ್ರೆಯಲ್ಲಿ ಸೇರುತ್ತಾರೆ. ಅಲ್ಲಿ ಮಾರಮ್ಮನಿಗೆ ಬೇಟೆ ಮಾಡಿಕೊಂಡು ನಂತರ ತುಮ್ಮಿನಲ್ಲಿ ಎತ್ತು ಗಾಡಿಗಳ ಸಮೇತ ಗೌರಸಮುದ್ರದ ಊರ ಹೊರಗೆ ಅಥವಾ ಸುತ್ತ ಮುತ್ತಲ ಹೊಲಗದ್ದೆ, ಕಣಗಳಲ್ಲಿ ಗಾಡಿಗಳನ್ನು ನಿಲ್ಲಿಸಿಕೊಂಡು ಅಡುಗೆ ಮಾಡಿಕೊಂಡು ಊಟಮಾಡಿ ಹೊರಡುತ್ತಾರೆ.

**ಅಶೋಕ ಸಿದ್ದಾಪುರ ಮತ್ತು ಕಂಪಳದೇವರ ಹಟ್ಟಿ**

ಮೊಳಕಾಲ್ಮೂರು ತಾಲೂಕಿನಲ್ಲಿರುವ ಈ ಕ್ಷೇತ್ರವು ಬೇಡರ ಪವಿತ್ರ ಕ್ಷೇತ್ರವಾಗಿದೆ ಇದನ್ನು ಜಟಿಂಗ ರಾಮೇಶ್ವರ ಎಂದೂ ಸಹ ಕರೆಯುತ್ತಾರೆ. ಇಲ್ಲಿ ಕುಮಾರ ರಾಮನ ಗರಡಿ ಮನೆ ಎಂದು ಕರೆಯುವ ಮನೆಯಿದೆ. ಅಲ್ಲದೆ ಆತನನ್ನು ಜಟಿಂಗ ರಾಮೇಶ್ವರ ಎಂದು ಪೂಜಿಸಲಾಗುತ್ತದೆ. ಇಲ್ಲಿ ಕಂಪಳರಂಗಸ್ವಾಮಿಯನ್ನು ೫-೧೦ ವರ್ಷಗಳಿಗೊಮ್ಮೆ ಇಡೀ ಮ್ಯಾಸಮಂಡಲ ದೇವರನ್ನು ಹೊರಡಿಸಿಕೊಂಡು ಪಟ್ಟದ ಪೂಜಾರಿಯು ದೇವರ ಪುಟ್ಟಿಯನ್ನು ತಲೆಯ ಮೇಲೆ ಹೊತ್ತುಕೊಂಡು ಅಶೋಕ ಸಿದ್ದಾಪುರದಲ್ಲಿನ ಕಂಪಳರಂಗಸ್ವಾಮಿ ಗುಡಿಗೆ ಬಂದು ಅಲ್ಲೇ ಇರುವ ಕಂಪಳರಂಗಸ್ವಾಮಿಯ ಮಡುವಿನಲ್ಲಿ ದೇವರ ಒಡವೆಗಳನ್ನು ತೊಳೆದು(ಜಲಧಿ ಮಾಡಿಸಿ) ಪೂಜಿಸಿಕೊಂಡು ಬರುತ್ತಾರೆ, ಹೋಗುವಾಗ ಮತ್ತು ಮರಳಿ ಬರುವಾಗ ಇಡೀ ಮ್ಯಾಸಮಂಡಲ ಬರಿಗಾಲಿನಲ್ಲಿ ನಡೆದುಕೊಂಡು ಹೋಗಿ ನಡೆದುಕೊಂಡೇ ಬರುತ್ತಾರೆ. ಈ ಪರಿಸರದಲ್ಲಿ ಕುಮ್ಮಟದುರ್ಗದ ಕುಮಾರರಾಮನ ಗುಡಿ ಇರುವುದಕ್ಕೂ ಕಂಪಳದೇವರ ಹಟ್ಟಿಯ ಮತ್ತು ಇತರ ಮ್ಯಾಸಬೇಡರು ಇಲ್ಲಿಗೆ ಕಂಪಳರಂಗಸ್ವಾಮಿ ಮತ್ತು ದೇವರ ಎತ್ತುಗಳೊಡನೆ ಬಂದು ಹೋಗುವುದನ್ನು ನೊಡಿದರೆ ಕಂಪಿಲರಾಯನ ಸೈನಿಕರಾಗಿದ್ದ ಬೇಡರು ಅಲ್ಲಿಂದ ತಮ್ಮ ದೈವದೊಡನೆ ವಲಸೆ ಬಂದು ಕೆಲ ಕಾಲ ಅಶೋಕ ಸಿದ್ದಾಪುರದಲ್ಲಿ

ನೆಲೆಸಿ ತಮ್ಮ ರಾಜ ಕಂಪಿಲರಾಯ, ಮತ್ತು ಕುಮಾರ ರಾಮನನ್ನು, ಆರಾಧಿಸಿ ನಂತರ ಕಂಪಳದೇವರ ಹಟ್ಟಿಗೆ ಬಂದು ನೆಲೆಸಿರಬಹುದು ಎಂಬ ಅನುಮಾನ ಬರುತ್ತದೆ. ಅದು ಏನೇ ಇದ್ದರೂ ಕಂಪಳದೇವರ ಹಟ್ಟಿ ಮತ್ತು ಜಟಿಂಗರಾಮೇಶ್ವರಕ್ಕೆ(ಅಶೋಕ ಸಿದ್ದಾಪುರ) ಇಂದಿಗೂ ಒಂದು ಧಾರ್ಮಿಕ ಸಾಂಸ್ಕೃತಿಕ ಸಂಬಂಧ ಇದೆ. ಈ ಎರಡೂ ಕ್ಷೇತ್ರಗಳು ಬೇಡರ ನಲೆಗಳಾಗಿವೆ.

**ನುಂಕೆಮಲೆ ಕ್ಷೇತ್ರ ಮತ್ತು ಕಂಪಳದೇವರ ಹಟ್ಟಿ**

ಮೊಳಕಾಲ್ಮೂರು ತಾಲೂಕಿನಲ್ಲಿನ ಪ್ರಸಿದ್ದ ಬೆಟ್ಟ ಈ ನುಂಕೆಮಲೆ ಬೆಟ್ಟ, ಇಲ್ಲಿ ನುಂಕಮಲೆಸಿದ್ದೇಶ್ವರ/ ನುಂಕಪ್ಪ ಎಂಬ ದೇವರ ಗುಡಿ ಇದ್ದು ವರ್ಷಕ್ಕೊಮ್ಮೆ ದೊಡ್ಡ ಜಾತ್ರೆ ಜರುಗುತ್ತದೆ. ಇಲ್ಲಿ ಬೇಡರೇ ಹೆಚ್ಚಾಗಿ ನೆಲೆಸಿದ್ದು ನುಂಕಪ್ಪನ ಜಾತ್ರೆಯಲ್ಲಿ ಪ್ರತಿಯೊಂದು ಕೆಲಸ ಕಾರ್ಯಗಳು ಬೇಡರವೇ ಆಗಿರುತ್ತವೆ, ಅಲ್ಲದೆ ವಿಶೇಷವಾಗಿ ಈ ಜಾತ್ರೆಯಲ್ಲಿ ಬೇಡರು ಸಿಡಿ ಆಡುತ್ತಾರೆ. ಕಂಪಳದೇವರ ಹಟ್ಟಿಯೂ ಸೇರಿದಂತೆ ಬೇಡರ ಪವಿತ್ರ ಕ್ಷೇತ್ರಗಳಲ್ಲಿ ಇದೂ ಸಹ ಒಂದಾಗಿದೆ. ಕಂಪಳದೇವರ ಹಟ್ಟಿಯಿಂದ ಬೇಡರು ಪ್ರತಿವರ್ಷ ನುಂಕಪ್ಪನ ಜಾತ್ರೆಗೆ ಬರುತ್ತಾರೆ ಹಾಗೆಯೇ ಕಂಪಳದೇವರ ಹಟ್ಟಿಯ ಗುಗ್ಗರಿ ಹಬ್ಬಕ್ಕೆ ಇಲ್ಲಿಂದ ಭೈರವೇಶ್ವರ ದೇವರನ್ನು ಹೊರಡಿಸಿಕೊಂಡು ಕಂಪಳದೇವರ ಹಟ್ಟಿಗೆ ಹೋಗಿ ಅಲ್ಲಿ ಹಬ್ಬ ಮುಗಿಯುವವರೆಗೆ ದೇವರನ್ನು ಅಲ್ಲೇ ಕಂಪಳರಂಗಸ್ವಾಮಿಯ ಪೌಳಿಯ ಪಕ್ಕದಲ್ಲಿನ ಸಣ್ಣ ಪೌಳಿಯಲ್ಲಿಟ್ಟು ಎಲ್ಲಾ ಮ್ಯಾಸಬೇಡರು ಪೂಜಿಸುತ್ತಾರೆ. ಜಾತ್ರೆ ಮುಗಿದ ನಂತರ ಮರಳಿ ನುಂಕಮಲೆಗೆ ದೇವರನ್ನು ತರಲಾಗುತ್ತದೆ ಈ ರೀತಿಯಾಗಿ ಕಂಪಳದೇವರ ಹಟ್ಟಿ ಮತ್ತು ನುಂಕಮಲೆ ಕ್ಷೇತ್ರಕ್ಕೆ ಧಾರ್ಮಿಕ ಸಂಬಂಧವಿದೆ.

**ಆನೆಗೊಂದಿ ಮತ್ತು ಕಂಪಳದೇವರ ಹಟ್ಟಿ**

ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ಹೊಂದಿರುವ ಆನೆಗೊಂದಿ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲೂಕಿನ ಪ್ರಾಚೀನ ಗ್ರಾಮ. ಇದು "ವಾಲ್ಮೀಕಿ, ಬೇಡ, ನಾಯಕರ ಮೂಲನೆಲೆ ಬೇಟೆಯಲ್ಲಿ ನಿರತರಾದ ಬೇಡರಿಗೆ ಇದು ಆವಾಸಸ್ಥಾನವಾಗಿತ್ತು. ಶಬರಿಯ ನೆಲೆ ಇದರ ಪಕ್ಕದಲ್ಲಿದೆ. ಬೇಡರಿಗೆ ಅರಮನೆ ಮತ್ತು ಗುರುಮನೆಗಳೆರಡು ಆನೆಗೊಂದಿಯೇ"[೨೯]. ಆನೆಗೊಂದಿಯ ಅರಮನೆ ಬೇಡರಿಗೆ ಸಂಬಂಧಿಸಿದಂತೆ ಮೂರು ಕಟ್ಟೆಮನೆಗಳಿದ್ದು ಆ ಮೂರು ಕಟ್ಟೆಮನೆಗಳಲ್ಲಿ ತೀರ್ಮಾನ ಆಗದ ವಿಷಯವನ್ನು ಗುರುಸ್ಥಾನವಾದ ಕಂಪಳದೇವರ ಹಟ್ಟಿಯಲ್ಲಿ ತೀರ್ಮಾನ ಮಾಡುತ್ತಾರೆ. ಅಲ್ಲೂ ತೀರ್ಮಾನ ಆಗದಿದ್ದರೆ ಅಂತಿಮವಾಗಿ ಅರಮನೆ ಅಂದರೆ ಆನೆಗೊಂದಿಯ ರಾಜರ ಅರಮನೆಯಲ್ಲಿ ಬಗೆಹರಿಸಲಾಗುತ್ತದೆ. ಮ್ಯಾಸಬೇಡರ ಈ ಎಲ್ಲಾ ನ್ಯಾಯ ವ್ಯವಸ್ಥೆಯನ್ನು ನೋಡಿದರೆ ಕಂಪಳದೇವರ ಹಟ್ಟಿಯ ಬೇಡರು ಮೂಲತಃ ಹಂಪಿ ಆನೆಗೊಂದಿ, ಕುಮ್ಮಟದುರ್ಗದ ಪರಿಸರದಲ್ಲಿದ್ದವರು ಕಾಲಾನಂತರ ಅಲ್ಲಿಂದ ವಲಸೆ ಬಂದು ಇಲ್ಲಿ ಹಟ್ಟಿ ಕಟ್ಟಿಕೊಂಡು ನೆಲೆಸಿರಬಹುದು ಎಂದು ತಿಳಿದು ಬರುತ್ತದೆ. ಆನೆಗೊಂದಿ ಮತ್ತು ಕಂಪಳದೇವರ ಹಟ್ಟಿಗೆ ಸಾಮುದಾಯಿಕ, ಸಾಂಸ್ಕೃತಿಕ, ಧಾರ್ಮಿಕ ಸಂಬಂಧವಿದೆ.

**ಕಪ್ಪಡ ಬಂಡಿಹಟ್ಟಿ ಮತ್ತು ಕಂಪಳದೇವರ ಹಟ್ಟಿ**

ಈ ಕ್ಷೇತ್ರ ಮೊಳಕಾಲ್ಮೂರು ತಾಲೂಕಿನ ಹತ್ತಿರದ ನೇರ್ಲಹಳ್ಳಿ, ಕೋನಸಾಗರ ಮಧ್ಯೆ ಇದೆ. ಇಲ್ಲಿ "ಇಪ್ಪತ್ತನೆಯ ಶತಮಾನದ ಯರಮಂಚಯ್ಯನ ಮಗ ಪದ್ದಯ್ಯನೆಂಬ ವೀರನ ವೀರಗಲ್ಲಿದೆ"[೩೦]. ಈ ಸಾಂಸ್ಕೃತಿಕ ನಾಯಕನ ಬಗ್ಗೆ ಇಲ್ಲಿನ ಜನಪದರು ಹೇಳುವ ಕಥೆಯೊಂದು ಹೀಗಿದೆ. ಕುರಿಗಳನ್ನು ಕಾಯುತ್ತಾ ಕುರಿಮಂದೆಯನ್ನು ಈ ಪ್ರದೇಶದಲ್ಲಿ ಕಟ್ಟಿಕೊಂಡಿರುತ್ತಾನೆ. ಈತನು ಒಂದು ದಿನ ಕುರಿಮಂದೆಗೆ ದಾಳಿ ಮಾಡಿದ ಚಿರತೆಯನ್ನು ಕೊಂದನು, ಕೋನಸಾಗರದ ಗುಡ್ಡದಲ್ಲಿ ಈ ಘಟನೆ ನಡೆದಿದೆ ಎನ್ನುತ್ತಾರೆ ಆದ್ದರಿಂದ ಈ ಪ್ರದೇಶ ಬೇಡರಿಗೆ ಪವಿತ್ರ ಸ್ಥಳವಾಗಿದೆ. ಕಂಪಳದೇವರ ಹಟ್ಟಿಯಲ್ಲಿನ ದೈವ ಮತ್ತು ಬೇಡಗಂಪಣ ಕಂಪಳದೇವರ ಹಟ್ಟಿಗೆ ಬರುವ ಮೊದಲು ಇಲ್ಲಿ ನೆಲೆಸಿದ್ದರು ಎಂದು ಹೇಳುತ್ತಾರೆ. ಚಿರತೆಯೊಡನೆ ಹೋರಾಡಿ ಸಮಾಧಿಯಾದ ಪೆದ್ದಯ್ಯನ ಸ್ಮಾರಕ ಇಂದು ಆರಾಧನಾ ದೇವತೆಯಾಗಿದೆ. ಇದಕ್ಕೆ ಅವನ ಮನೆತನದವರಾದ 'ಕರಿನಾರು' ಬೆಡಗಿನವರು ಪೂಜೆ, ಹಬ್ಬ, ಆಚರಣೆಗಳನ್ನು ಮಾಡುತ್ತಾರೆ. ಈ ಹಟ್ಟಿಯಿಂದಲೂ ಸಹ ಬೇಡರು ಕಂಪಳದೇವರ ಹಟ್ಟಿಗೆ ಬಂದು ಗುಗ್ಗರಿ ಹಬ್ಬದಲ್ಲಿ ಕಾಸು, ಮೀಸಲು, ಹುರುಳಿಕಾಳನ್ನು ತೆಗೆದುಕೊಂಡು ಬಂದು ಕಂಪಳರಂಗಸ್ವಾಮಿಗೆ, ಪಾಪನಾಯಕ ಸ್ವಾಮಿಗೆ ಅರ್ಪಿಸುತ್ತಾರೆ. ಒಟ್ಟಾರೆಯಾಗಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಸಾಮಾಜಿಕ ಜೀವನ, ಒಳಾಡಳಿ ಪದ್ಧತಿ, ಪಾರಂಪರಿಕ ವೈದ್ಯಪದ್ಧತಿ, ಜೀವನಾವರ್ತಕ ಆಚರಣೆಗಳು ಮುಂತಾದುವುಗಳನ್ನು ಹಟ್ಟಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಕಂಡುಕೊಂಡಂತೆ ಹಟ್ಟಿಯ ಮ್ಯಾಸಬೇಡರು ಆಧುನಿಕತೆಗೆ ಒಳಗಾಗುತ್ತಿದ್ದರೂ ತಮ್ಮಲ್ಲಿನ ಆಚರಣೆಗಳು, ಕಟ್ಟೆಮನೆಯ ನ್ಯಾಯ ವ್ಯವಸ್ಥೆ, ಪಾರಂಪರಿಕ ವೈದ್ಯದಂತಹ ಕೆಲವೊಂದು ತಿಳುವಳಿಕೆಗಳನ್ನು ಉಳಿಸಿಕೊಂಡು ಬರುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

**ಅಡಿಟಿಪ್ಪಣಿ**

೧. ಮಲ್ಲೇಪುರಂ ಜಿ ವೆಂಕಟೇಶ್(ಸಂ), ಶಂಬಾ ಕೃತಿಸಂಪುಟ–೨, ೧೯೯೯ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೧೪೦.

೨. ಅದೇ ಪುಟ–೧೪೧

೩. ಅದೇ ಪುಟ–೧೪೧

೪. ಪ್ರಭಾಕರ ಎ ಎಸ್,(ಸಂ), ಆದಿವಾಸಿ ಆಖ್ಯಾನ, ೨೦೦೬, ಮಹೇಂದ್ರಕುಮಾರ್ ಬಿ ಪಿ(ಲೇ), ಬುಡಕಟ್ಟು ಜನಾಂಗದಲ್ಲಿ ಸೀಮೆಯ ಪರಿಕಲ್ಪನೆ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪುಟ–೧೭೭.

೫. ಗೋಪಾಲ ಬಾ ರಾ, ಕಾರ್ಪಸ್ ಆಫ್ ಕನ್ನಡ ಇಸ್ಕ್ರಿಪ್ಷನ್ಸ(ಸಂ–೧), ೧೯೮೫, ಕದಂಬ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್ ಸ್ಟಡೀಸ್, ಶಾಸನ, ಸಿರ್ಸಿ, ಪುಟ–೧೦೫.

೬. ತಿಪ್ಪೇಸ್ವಾಮಿ ಎಸ್, ರಕ್ಷಣಾ ವಾಸ್ತುಶಿಲ್ಪ, ಚಿತ್ರದುರ್ಗ ಜಿಲ್ಲೆ, ಪಿಎಚ್ ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೯

೭. ಸಪ್ಪನ್ ಬಿ ಎನ್, ೧೯೯೮, ಚಿತ್ರದುರ್ಗ ಜಿಲ್ಲೆ ಗೆಜಿಟಿಯರ್, ಪುಟ-೭.

೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೨.

೯. ಅದೇ, ಪುಟ-೧೩.

೧೦. ಅದೇ, ಪುಟ-೧೩.

೧೧. ಅದೇ, ಪುಟ-೪೨.

೧೨. ಪುರುಷೋತ್ತಮ ಬಿಳಿಮಲೆ, ಚಲುವರಾಜು(ಸಂ), ೧೯೯೬, ಹಂಪಿ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೦೬.

೧೩. ಸಣ್ಣ ಓಬಯ್ಯ ಎಸ್ ಕೆ, ೨೦೦೦, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೪೨.

೧೪. ಗೋವಿಂದರಾಜು ಟಿ, ೨೦೦೬, ಹಳ್ಳಿಮನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೫.

೧೫. ಅದೇ, ಪುಟ-೩೮.

೧೬. ಮಂಜುನಾಥ ಬೇವಿನ ಕಟ್ಟಿ(ಸಂ), ವಾಲ್ಮೀಕಿ ಸಂಪದ, ಚಿತ್ರಲಿಂಗಯ್ಯ ಎಂ ಎ(ಲೇ), ಬೇಡನಾಯಕರ ಬೆಡಗುಗಳ ವಿಶ್ಲೇಷಣೆ, ವಾಲ್ಮೀಕಿ ಮಹಾ ಸಂಸ್ಕೃತಿ, ರಾಜನಳ್ಳಿ, ಪುಟ-೫೭.

೧೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೫, ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಮುತ್ತಯ್ಯ ಎಸ್ ಎಂ(ಲೇ), ಬುಡಕಟ್ಟು ನೆಲೆಯಲ್ಲಿ ಬೇಡರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೨೨.

೧೮. ತಾರಿಹಳ್ಳಿ ಹನುಮಂತಪ್ಪ(ಸಂ), ೨೦೦೨, ಕಮಲಾಪುರದ ಬೇಡನಾಯಕರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ಸಣ್ಣ ಪಾಪಯ್ಯ(ಲೇ), ಬೇಡನಾಯಕರ ಸಂಸ್ಕೃತಿಯಲ್ಲಿ ಪಶುಪಾಲನಾ ಕುರುಹುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೯.

೧೯. ದೇವೇಂದ್ರಕುಮಾರ ಹಕಾರಿ, ೨೦೦೦, ಸಂಧ್ಯಾರೆಡ್ಡಿ ಕೆ ಆರ್(ಸಂ), ಗ್ರಾಮೀಣ ಉಡುಗೆ ತೊಡುಗೆಗಳು, ಶಾಲಿನಿ ರಘುನಾಥ(ಲೇ), ಉತ್ತರ ಕರ್ನಾಟಕದ ಆಭರಣಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು,ಮುನ್ನುಡಿ.

೨೦. ಸಣ್ಣ ಓಬಯ್ಯ ಎಸ್ ಕೆ, ೨೦೦೦, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೪೪.

೨೧. ದೇವೇಂದ್ರಕುಮಾರ ಹಕಾರಿ, ೨೦೦೦, ಸಂಧ್ಯಾರೆಡ್ಡಿ ಕೆ ಆರ್(ಸಂ), ಗ್ರಾಮೀಣ ಉಡುಗೆ ತೊಡುಗೆಗಳು, ಶಾಲಿನಿ ರಘುನಾಥ(ಲೇ), ಉತ್ತರ ಕರ್ನಾಟಕದ ಆಭರಣಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೯೬ ಅದೇ,

೨೨. ಪುಟ-೧೨೫.

೨೩. ಅದೇ,ಪುಟ-೧೨೬.

೨೪. ಅದೇ, ಪುಟ-೧೦೬.

೨೫. ಅಕ್ಕ ಮಹಾದೇವಿ, ೧೯೮೪, ಬುಡಕಟ್ಟು ನ್ಯಾಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೮.

೨೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೪೩.

೨೭. ಅದೇ, ಪುಟ-೧೪೪.

೨೮. ಮೀರಾಸಾಬಿ ಹಳ್ಳಿ ಶಿವಣ್ಣ, ೨೦೦೩, ಮ್ಯಾಸಮಂಡಲ, ಕನ್ನಡಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೩೪.

೨೯. ಅದೇ, ಪುಟ-

೩೦. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ಪುಟ-೫೩.

# ಅಧ್ಯಾಯ: ಮೂರು
# ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ

೩.೧ ಬೇಟೆ ಜ್ಞಾನಪರಂಪರೆ
೩.೨ ಪಶುಪಾಲನಾ ಜ್ಞಾನಪರಂಪರೆ
೩.೩ ಕೃಷಿ ಜ್ಞಾನಪರಂಪರೆ
೩.೪ ಪಾರಂಪರಿಕ ಆಹಾರಪದ್ಧತಿ
೩.೫ ಪಾರಂಪರಿಕ ವೈದ್ಯಪದ್ಧತಿ

# ಅಧ್ಯಾಯ: ಮೂರು

# ಕಂಪಳದೇವರ ಹಟ್ಟಿಯ ಜ್ಞಾನಪರಂಪರೆ

## ಪ್ರಸ್ತಾವನೆ

ಭೂಮಿಯ ಮೇಲೆ ಮಾನವ ಸೃಷ್ಟಿಯಾದಾಗಿನಿಂದ ಇಂದಿನವರೆಗೆ ವಿವಿಧ ಹಂತಗಳಲ್ಲಿ ವಿಕಾಸ ಹೊಂದಿ ಇಂದಿನ ಸ್ಥಿತಿ ತಲುಪಿದ್ದಾನೆ. ಮಾನವನ ಈ ವಿಕಾಸದ ಹಂತದಲ್ಲಿ ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಹೀಗೆ ವಿವಿಧ ವಿಕಾಸದ ಹಂತಗಳಿದ್ದು ಅವುಗಳಲ್ಲಿ ಬೇಟೆಗಾರಿಕೆ ಪ್ರಮುಖ ವಿಕಾಸದ ಹಂತವಾಗಿದೆ. "ಯಾವುದೇ ಪ್ರಾಣಿ ತನ್ನ ಹಸಿವನ್ನು ತಣಿಸಿಕೊಳ್ಳಲು ಆಹಾರಕ್ಕಾಗಿ ಇತರೆ ಜೀವಂತ ಪಶು, ಪ್ರಾಣಿ-ಪಕ್ಷಿಗಳನ್ನು ಹಿಡಿದು ಕೊಂದು ತಿನ್ನುವ ಕಲೆಗಾರಿಕೆಯನ್ನು ಬೇಟೆ ಎಂದು ಕರೆಯುತ್ತೇವೆ"[1]. ಮಾನವ ಆದಿಯಲ್ಲಿ ಕಾಡಿನಲ್ಲಿರುವ ಗೆಡ್ಡೆ-ಗೆಣಸುಗಳನ್ನು ಸಂಗ್ರಹಿಸಿ ತಿನ್ನುತ್ತಿದ್ದ. ತರುವಾಯ ಬೇಟೆಯನ್ನು ಅವಲಂಬಿಸಿದ ಈ ಶೋಧನೆಯಿಂದ ಆಹಾರ ಸಂಗ್ರಹಣೆ ವಿಕಾಸವಾಗಿ ಮಾನವನ ಸಾಮಾಜಿಕ ವಿಕಾಸಕ್ಕೂ ಕಾರಣವಾಯಿತು. ಬೇಟೆಗಾರಿಕೆಯು ಮಾನವನ ಭೌತಿಕ ವಿಕಾಸವಾದರೆ ಬೇಟೆಯ ಜೀವನವು ಸಾಮಾಜಿಕ ವಿಕಾಸವಾಗಿರುತ್ತದೆ. ಅಂದಿನ ಜನರ ಸಾಮಾಜಿಕ ರಚನೆ ಸಾಮಾನ್ಯವಾಗಿ ಅಗತ್ಯಕ್ಕೆ ತಕ್ಕಂತೆ ಇತ್ತು. ಬೇಟೆಗಾರರು ಆಹಾರ ಸಂಗ್ರಹಕಾರರು ನಿಷ್ಠೆಯಿಂದ ಪೂರ್ವಗ್ರಹವಿಲ್ಲದೆ ಹಗೆತನವಿಲ್ಲದೆ ಜೀವಿಸುತ್ತಿದ್ದರು. ಬೇಟೆಗಾರಿಕೆ ಆರ್ಥಿಕ ಪರಿಸರದ ಸ್ಥಿತಿಗೆ ಸಮಾಜದ ಮುನ್ನಡೆಗೆ ಕಾರಣವಾಗಿತ್ತು. ಹೀಗೆ ಬೇಟೆಯಿದ ಪ್ರಾರಂಭವಾದ ಮಾನವನ ಜೀವನ ನಿರ್ವಹಣೆಯು ಇಂದು ಎಲ್ಲಾ ಮಾನವ ಸಮುದಾಯಗಳಲ್ಲಿ ಸಾಕಷ್ಟು ಬದಲಾವಣೆ ಪಡೆದಿದೆ. ಆದರೆ ಬೇಡರು ಮತ್ತು ಇತರ ಕೆಲವು ಬುಡಕಟ್ಟುಗಳಲ್ಲಿ ಬೇಟೆ ಪದ್ಧತಿ ಕಣ್ಮರೆಯಾಗಿದ್ದರೂ ಆಚರಣೆಯಲ್ಲಿ ಇನ್ನೂ ಉಳಿದುಕೊಂಡು ಬಂದಿರುವುದು ವಿಶೇಷ.

ಇಂಗ್ಲೀಷ್‌ನ hunting ಪದಕ್ಕೆ ಕನ್ನಡದಲ್ಲಿ 'ಬೇಟೆ' ಎಂದು ಕರೆಯಲಾಗಿದೆ. ಬೇಟೆಯಾಡುವವರಿಗೆ ಬೇಟೆಗಾರರು, ಗುರಿಕಾರ, ಬೇಡರೆಂದು ಕರೆಯುವರು. ಇವರು ಬೇಟೆಯನ್ನೇ ವೃತ್ತಿಯಾಗಿ

ಮಾಡಿಕೊಂಡಿರುವುದು ಸ್ಪಷ್ಟ. ಬೇಟೆ ಎಂಬ ಪದ ಮೂಲ ದ್ರಾವಿಡ ಪದದಿಂದ ಬಂದಿದ್ದಾಗಿದೆ. ಪಂಚ ದ್ರಾವಿಡ ಭಾಷೆಯಲ್ಲಿ ಬೇಟೆಯನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ತಮಿಳಿನಲ್ಲಿ ವೇಟ್ಟೈ, ವೇಟೆ, ವೇಡು, ಎಂದು, ಮಲಯಾಳದಲ್ಲಿ ವೇಟ್ಟೈ ಎಂತಲೂ ತುಳುವಿನಲ್ಲಿ ಬೋಣ್ಣೆ ಅಥವಾ ಬೋಟೆಯಂತಲೂ ತೆಲುಗಿನಲ್ಲಿ ಏಟ, ವೇಟ. ಎಂದು ಕರೆಯುತ್ತಾರೆ. ಆದಿ ಮಾನವನಿಗೆ ಬೇಟೆಯು ಎರಡು ಮುಖ್ಯ ಕಾರಣಗಳಿಗಾಗಿ ಅಗತ್ಯವಾಗಿತ್ತು. ಮೊದಲನೆಯದಾಗಿದೆ ರಕ್ಷಣೆ ಮತ್ತು ಎರಡನೆಯದಾಗಿ ಆಹಾರೋತ್ಪಾದನೆಗಾಗಿ. ಆದಿಯಲ್ಲಿ ಮಾನವ ಒಂಟಿಯಾಗಿ ಅರಣ್ಯ ಪ್ರದೇಶದಲ್ಲಿ ಅಲೆದಲೆದು ಗೆಡ್ಡೆ-ಗೆಣಸು ಹಾಗೂ ಕೈಗೆ ಸಿಕ್ಕ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಹಸಿವನ್ನು ನೀಗಿಸಿಕೊಳ್ಳುತ್ತಿದ್ದನೆಂದು ತಿಳಿದು ಬರುತ್ತದೆ. ಸಸ್ಯಾಹಾರ ಮಾಂಸಾಹಾರ, ಹಿಂಸೆ, ಅಹಿಂಸೆ ಎಂಬ ಪರಿಕಲ್ಪನೆ ಅವರಿಗಿರಲಿಲ್ಲ. ಆಹಾರಕ್ಕಾಗಿ ಬೇಟೆ ಆಡುವುದನ್ನು ರೂಢಿಸಿಕೊಂಡನೋ ಅಥವಾ ರಕ್ಷಣೆಗಾಗಿ ಬೇಟೆ ರೂಢಿಸಿಕೊಂಡನೋ ಎಂಬುದನ್ನು ನಿಖರವಾಗಿ ಹೇಳಲಾಗದು. ಒಟ್ಟಾರೆ ಆಹಾರ ಸಂಗ್ರಹಣೆ ಬೇಟೆ ಒಟ್ಟೊಟ್ಟಿಗೆ ಬಂದವು ಎಂದು ಹೇಳಬಹುದು ಹೀಗೆ ಬೇಟೆ ಪದ್ಧತಿ ಹುಟ್ಟಿಕೊಂಡಿದ್ದು ಮತ್ತು ಅದು ಉಳಿದುಕೊಂಡು ಬರುತ್ತಿರುವುದರ ಕಾರಣಗಳನ್ನು ಐದು ರೀತಿಯಲ್ಲಿ ಹೇಳಬಹುದಾಗಿದೆ.

**೧) ರಕ್ಷಣೆ ಮತ್ತು ಆಹಾರೋತ್ಪಾದನೆಗಾಗಿ**

ಕಾಡುಗಳಲ್ಲಿ ಪ್ರಾಣಿಗಳಂತೆ ಜೀವಿಸುತ್ತಿದ್ದ ಮಾನವನು ಆಹಾರಕ್ಕಾಗಿ ಗೆಡ್ಡೆ-ಗೆಣಸುಗಳನ್ನು ಹುಡುಕುತ್ತಾ ಸುತ್ತುತ್ತಿರುವಾಗ ಇತರ ಕಾಡುಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ರಕ್ಷಣೆಗಾಗಿ ಮರದ ಪೊಟರೆ, ಬಂಡೆಗಳ ಆಸರೆಗಳಲ್ಲಿ ನೆಲಸತೊಡಗಿದರು ಹೀಗೆ ಗುಹೆಗಳೇ ಆದಿ ಮಾನವನ ಮನೆಗಳು/ನೆಲೆಗಳಾದವು ಒಂದು ಪರಿಮಿತ ಭದ್ರತೆಯನ್ನು ಒದಗಿಸುತ್ತಿದ್ದ ಆತನ ವಸತಿಗಳು ಕಾಡುಪ್ರಾಣಿಗಳಿಂದ ಪೂರ್ಣ ಪ್ರಮಾಣದ ರಕ್ಷಣೆಗೆ ಅನರ್ಹವಾಗಿದ್ದವು "ಪರಿಮಿತ ಭದ್ರತೆಗಳಿರುವ ಗುಹೆ, ಗುಡಿಸಲುಗಳಂತಹ ವಸತಿಗಳಲ್ಲಿ ವಾಸಿಸುತ್ತಿದ್ದ ಆತನು ಕಾಡು ಮೃಗಗಳಿಂದ ತನ್ನ ಜೀವ ರಕ್ಷಣೆಗಾಗಿ ಅವುಗಳನ್ನು ಬೇಟೆಯಾಡುವ ಅನಿವಾರ್ಯತೆ ಒಳಗಾಗಿರಬೇಕು. ಈ ರೀತಿ ಬೇಟೆಯಾಡಿ ಕೊಂದ ಎಲ್ಲಾ ಪ್ರಾಣಿಗಳ ಮಾಂಸವನ್ನು ಆತನು ರುಚಿ ನೋಡಿರಲೂ ಸಾಕು ಅವುಗಳ ಪೈಕಿ ನಾಲಿಗೆಗೆ ಒಗ್ಗಿದ ಹೊಟ್ಟೆಗೆ ಪಥ್ಯವೆನಿಸಿದ ಪ್ರಾಣಿಗಳ ಮಾಂಸ ಮಾತ್ರ ಆಹಾರಕ್ಕೆ ಯೋಗ್ಯವಾಗಿ ಮುಂದುವರಿದಿರಬಹುದು"[೨]. ಅವುಗಳನ್ನು ಇಂದಿಗೂ ಸಹ ಮುಂದುವರೆಸಿಕೊಂಡು ಬರುತ್ತಿರುವುದನ್ನು ಗಮನಿಸಬಹುದು.

**೨) ಪೈರು ಹಾಗೂ ದನಕರುಗಳ ರಕ್ಷಣೆಗೆ**

ಆದಿಮ ಹಂತದಿಂದ ಮಾನವ ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಹೀಗೆ ವಿಕಾಸ ಹೊಂದುತ್ತಾ ಬಂದಾಗ ಬೇಟೆ, ಕೃಷಿಯ ಹಂತದಲ್ಲಿ ತನ್ನ ಸಂಪತ್ತಾದ ದನಕರುಗಳು ಮತ್ತು ಕೃಷಿಯ ಫಸಲುಗಳಿಗೆ ಕಾಡು ಮೃಗಗಳಾದ ಹಂದಿ, ಹುಲಿ, ಸಿಂಹ, ಆನೆ ಮುಂತಾದ ಪ್ರಾಣಿಗಳಿಂದ ತೊಂದರೆಯಾದಾಗ ಅವುಗಳನ್ನು ನಿಯಂತ್ರಿಸಲು ಬೇಟೆಯಾಡುವುದು ಅನಿವಾರ್ಯವಾಗಿತ್ತು. ಹಾಗಾಗಿ ಬೇಟೆ ಪದ್ಧತಿ ಮುಂದುವರೆದುಕೊಂಡು ಬಂದಿತು.

**೩) ಪ್ರತಿಷ್ಠೆ, ಕೀರ್ತಿಯನ್ನು ಮೆರೆಯಲು ಬೇಟೆ**

ಮಾನವನಲ್ಲಿ ಆಸ್ತಿ ಅಂತಸ್ತಿನ ಪರಿಕಲ್ಪನೆ ಬಂದ ಮೇಲೆ ರಾಜ ರಾಜ್ಯ ದೊರೆಗಳು, ಪಾಳೇಪಟ್ಟುಗಳು ಹುಟ್ಟಿಕೊಂಡು ರಾಜ ಮಹಾರಜರು-ಪಾಳೇಗಾರರು ಪ್ರಾಂತ್ಯವನ್ನು ಆಳುತ್ತಿದ್ದ ಸಂದರ್ಭದಲ್ಲಿ ಬೇಟೆ ಎನ್ನುವಂತಹದ್ದು ಒಂದು ಪ್ರತಿಷ್ಠೆಯ ಮಾತಾಯಿತು. ಒಂದು ಕಾಲದಲ್ಲಿ ಆಹಾರಕ್ಕಾಗಿ ಹುಟ್ಟಿಕೊಂಡ ಬೇಟೆಯು ರಾಜ-ಮಹಾರಾಜರ, ಪಾಳೆಗಾರರ ಕಾಲದಲ್ಲಿ ಪ್ರತಿಷ್ಟೆಯ ಮಾತಾಯಿತು. ಹುಲಿ, ಸಿಂಹ, ಚಿರತೆ ಮುಂತಾದ ಕ್ರೂರ ಪ್ರಾಣಿಗಳನ್ನು ಬೇಟೆಯಾಡುವನನ್ನು ಶೂರ, ಧೀರ ಎಂದು ಕರೆಯಲಾಯಿತು. ಹಾಗು ಈ ಹಂತದಲ್ಲಿ ಬೇಟೆಯು ಪ್ರತಿಷ್ಠೆಗಾಗಿ ಆಡುವ ಆಟವಾಯಿತು.

**೪) ಚರ್ಮ, ಕೊಂಬು, ಇತ್ಯಾದಿಗಳ ಸಂಗ್ರಹಣೆಗೆ**

ಆಧುನಿಕತೆಯು ಬೆಳೆದಂತೆಲ್ಲಾ ಕಾಡುಪ್ರಾಣಿಗಳ ಚರ್ಮ, ಕೊಂಬು, ಎಲುಬು ದಂತಗಳಿಂದ ಉಪಯುಕ್ತ ಔಷಧಗಳನ್ನು ಮತ್ತು ಇತರ ಸಾಮಗ್ರಿಗಳನ್ನು ತಯಾರಿಸಿ ಉಪಯೋಗಕ್ಕೆ ಬಳಸಿಕೊಳ್ಳುವುದನ್ನು ಕಂಡುಕೊಂಡ ಮೇಲೆ ಕಾಡು ಪ್ರಾಣಿಗಳಿಗೆ ಉತ್ತಮ ಬೆಲೆ ದೊರೆಯತೊಡಗಿತು. ಆದ್ದರಿಂದ ಅವುಗಳ ಮಾಂಸ, ಚರ್ಮ, ಮೂಳೆ, ದಂತಗಳಿಗಾಗಿ ಕಾಡುಪ್ರಾಣಿಗಳನ್ನು ಬೇಟೆಯಾಡುವುದು ಪ್ರಾರಂಭವಾಯಿತು. ಸರ್ಕಾರ ವನ್ಯಪ್ರಾಣಿಗಳ ಸಂರಕ್ಷಣೆಯಾಗಬೇಕು ಇಲ್ಲದಿದ್ದರೆ ಪ್ರಾಣಿ ಸಂಕುಲವೇ ನಾಶವಾಗುತ್ತದೆ ಎಂದು ಬೇಟೆಯನ್ನು ನಿಷೇಧಿಸಿತು. ಆದರೂ ಸಹ ಕದ್ದು ಮುಚ್ಚಿ ವನ್ಯಪ್ರಾಣಿಗಳನ್ನು ಬೇಟೆಯಾಡುವುದು ಮುಂದುವರಿದಿದೆ ಎನ್ನಬಹುದು.

**೫) ಆಚರಣೆಗಳಲ್ಲಿ ಬೇಟೆ**

ಇತ್ತೀಚಿನ ದಿನಗಳಲ್ಲಿ ಅರಣ್ಯ ನೀತಿ ಕಾಯಿದೆಯಿಂದ ಬೇಟೆಯನ್ನು ನಿಷೇಧಿಸಿದ್ದರಿಂದ ಪರಂಪರೆಯಿಂದಲೂ ಬೇಟೆಯಾಡಿ ಜೀವಿಸುತ್ತಿದ್ದಂತಹ ಸಮುದಾಯಗಳಿಗೆ ಇದು ನುಂಗಲಾರದ ತುತ್ತಾಯಿತು. ಜೀವನಕ್ಕೆ ಪರ್ಯಾಯ ವೃತ್ತಿಗಳನ್ನು ಆಯ್ದುಕೊಂಡ ಬೇಟೆ ಮೂಲದ ಸಮುದಾಯಗಳು ತಮ್ಮ ಪಾರಂಪರಿಕ ವೃತ್ತಿಯಾದ ಬೇಟೆಯನ್ನು ಬಿಡಬಾರದು ಎಂಬ ಕಾರಣಕ್ಕೆ ಹಬ್ಬ ಆಚರಣೆಗಳಲ್ಲಿ ಬೇಟೆಗೆ ಹೋಗುವುದನ್ನು ರೂಢಿಸಿಕೊಂಡು ಮುಂದುವರೆಸಿಕೊಂಡು ಬಂದಿದ್ದಾರೆ. ಶಾಸ್ತ್ರೋಕ್ತವಾಗಿ ಹಿಂದಿನಂತೆ ಎಲ್ಲಾ ಶಸ್ತ್ರ ಸಜ್ಜಿಕೆಗಳೊಂದಿಗೆ ಬೇಟೆ ನಾಯಿಗಳೊಂದಿಗೆ ಇಡೀ ದಂಡು ಕಾಡಿಗೆ ಹೋಗಿ ಹಂದಿ, ಮೊಲ, ಉಡ, ಇತ್ಯಾದಿ ಪ್ರಾಣಿಗಳನ್ನು ಬೇಟೆಯಾಡಿಕೊಂಡು ಬಂದು ಊರಲ್ಲಿ ಮೆರವಣಿಗೆ ಮಾಡಿ ಅವುಗಳ ಕಿವಿ, ಬಾಲವನ್ನು ಕತ್ತರಿಸಿ ಊರ ಬಾಗಿಲ ಬುಡ್ಡೇಕಲ್ಲಿಗೆ ಹೂಳುತ್ತಾರೆ. ಈ ರೀತಿಯಾಗಿ ಬೇಟೆ ಎಂಬುದು ಪರಂಪರೆಯಿಂದಲೂ ಸಹ ಜನ ಸಮುದಾಯಗಳಲ್ಲಿ ಬೇರೆ ಬೇರೆ ರೂಪಗಳನ್ನು ಪಡೆಯುತ್ತಾ ಉಳಿದುಕೊಂಡು ಬಂದಿದೆ. ಇಂತಹ ಬೇಟೆ ಮೂಲ ಬುಡಕಟ್ಟು ಸಮುದಾಯಗಳಲ್ಲಿ ಬೇಡ ಬುಡಕಟ್ಟು ಒಂದು.

ಬೇಟೆ ವೃತ್ತಿಯಿಂದಲೇ ಬೇಡ ಎಂಬ ಹೆಸರು ಪಡೆದ ಬೇಡ ಬುಡಕಟ್ಟಿನವರು ಪಶುಪಾಲಕ ಸಮುದಾಯದವರಾಗಿದ್ದರೂ ಸಹ ಕಾಡಿನಲ್ಲಿ ಹೆಚ್ಚು ಕಾಲ ಜೀವಿಸುತ್ತಾ ಬೇಟೆ ತಂತ್ರಗಳನ್ನು

ಹೊಂದಿದ್ದರಿಂದ ಇವರ ಬೇಟೆ ಪದ್ಧತಿಯಿಂಲೇ ಇವರಿಗೆ ಬೇಡರು ಎಂಬ ಹೆಸರು ಬಂದಿದೆ ಎನ್ನಬಹುದು ಆದರೆ ಒಂದು ಕಾಲಕ್ಕೆ ಬೇಟೆಯಿಂದಲೇ ತಮ್ಮ ಜೀವನ ನಿರ್ವಹಿಸುತ್ತಿದ್ದ ಬೇಡರು ಇಂದು ಅರಣ್ಯನಾಶ, ಅರಣ್ಯ ಕಾಯಿದೆಯಿಂದ ಬೇಟೆಯಿಂದ ವಿಮುಖರಾಗಿ ಬೇಟೆಯನ್ನು ಆಡದಿದ್ದರೂ ಸಹ ಆಗೊಮ್ಮೆ ಇಗೊಮ್ಮೆ ಕೆಲವರು ಬೇಟೆಗೆ ಹೋಗಿ ಹಂದಿ, ಮೊಲ, ಇಲಿ, ಉಡಾ, ಮುಂತಾದ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದಾರೆ. ಅದೂ ಸಹ ವಿರಳವೆಂದೇ ಹೇಳಬೇಕು. ಆದರೆ ಕಂಪಳದೇವರ ಹಟ್ಟಿಯ ಎಲ್ಲಾ ಬೇಡರು ಆಚರಣೆಗಳಲ್ಲಿ ಬೇಟೆಗೆ ಹೋಗುವುದನ್ನು ಕಾಣಬಹುದು. ಇವರ ಬೇಟೆ ಜ್ಞಾನವು ಪರಂಪರೆಯಿಂದ ಬಂದಂತಹದು. ತಮ್ಮ ತಂದೆ, ಅಜ್ಜಂದಿರಿಂದ ಬೇಟೆ ತಂತ್ರಗಳನ್ನು ಮತ್ತು ಕಾಡು ಪ್ರಾಣಿಗಳ ಗುಣ ಸ್ವಭಾವಗಳನ್ನು ಅರಿತುಕೊಂಡಿದ್ದಾರೆ. ಇಂತಹ ಹಟ್ಟಿಯ ಬೇಡರ ಬೇಟೆ ಜ್ಞಾನಪರಂಪರೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

### ೩.೧ ಬೇಟೆ ಜ್ಞಾನ ಪರಂಪರೆ

ಬೇಡರು ಬೇಟೆಯ ವಿವಿಧ ತಂತ್ರೋಪಾಯಗಳನ್ನು ಮೃಗ, ಪಕ್ಷಿ, ಕೀಟಾದಿಗಳಿಂದಲೇ ಕಲಿತಿರುವುದು ಸ್ಪಷ್ಟ ಈ ಬಗೆಗೆ ಯಾವ ವಿವಾದವಿಲ್ಲ. ಜೇಡನಿಂದ ಬಲೆ ಒಡ್ಡುವುದನ್ನು ಕಲಿತರೆ, ಚಿರತೆ, ಹುಲಿ, ಹಲ್ಲಿಗಳಿಂದ ಮನುಷ್ಯ ಬೇಟೆ ವಿಧಾನವನ್ನು ಅರಿತು ಸೀಳುನಾಯಿಗಳಿಂದ ಸಮೂಹ ಬೇಟೆಯನ್ನು, ಮೂಳ್ಳುಹಂದಿಗಳಿಂದ ಬಾಣ ಬಿಡುವಿಕೆಯನ್ನು ಕರಗತ ಮಾಡಿಕೊಂಡನು. ನಿರಂತರವಾಗಿ ಕಾಡಿನಲ್ಲೇ ಹೆಚ್ಚು ಕಾಲ ಬಾಳಿದ ಬೇಡರು ಕಾಡು ಪ್ರಾಣಿ-ಪಕ್ಷಿಗಳ ಚಲನವಲನ, ತಂತ್ರಗಾರಿಕೆ, ಅವುಗಳು ಗರ್ಭಧರಿಸುವ ಕಾಲ, ಆಹಾರ ಸ್ವೀಕರಿಸುವ ಸಮಯ ಎಲ್ಲವನ್ನೂ ಅರಿತವರಾಗಿದ್ದಾರೆ. ಹಾಗಾಗಿ ಕಾಡುಪ್ರಾಣಿಗಳ ಬೇಟೆ ಅಥವಾ ಅವುಗಳ ತಂತ್ರಗಾರಿಕೆ  ಕಲಿಯಲು ಇವರಿಗೆ ಕಷ್ಟವಾಗಲಿಲ್ಲ. ಬೇಡರು ಬೇಟೆಗೆ ಉಪಯೋಗಿಸುವ ಪ್ರಮುಖ ಆಯುಧಗಳಾದ ಭರ್ಚಿ, ಚಂದ್ರಾಯುಧ, ಗಂಡುಗೊಡಲಿ, ಬಲೆ, ಬಿಲ್ಲು ಇತ್ಯಾದಿಗಳು ಸಾಂಪ್ರದಾಯಿಕ ಆಯುಧಗಳಾಗಿವೆ. ಹೊರನೋಟಕ್ಕೆ ಇವು ಸರಳವಾಗಿ ಕಂಡರೂ ಬಳಕೆಯಲ್ಲಿ ಬಲಶಾಲಿ ಹಾಗೂ ಹೆಚ್ಚು ಪರಿಣಾಮಕಾರಿಯಾಗಿವೆ.

ಚಿತ್ರದುರ್ಗ ಜಿಲ್ಲೆಯೂ ಸೇರಿದಂತೆ ಕಂಪಳದೇವರ ಹಟ್ಟಿಯ ಸುತ್ತಮುತ್ತಲಿನ ಕಾಡುಗಳು ಕುರುಚಲು ಕಾಡುಗಳಾದ್ದರಿಂದ ಇಲ್ಲಿ ಹಂದಿ, ಇಲಿ, ಜಿಂಕೆ, ಉಡ, ಅಳಿಲು, ಮುಳ್ಳಂದಿ, ಪಕ್ಷಿಗಳಾದ ಗೌಜುಗ ಹಕ್ಕಿ, (ಕೌಜುಗ) ಪಾರಿವಾಳ, ಬೆಳವ, ಕಾಡುಕೋಳಿ, ಗಿಳಿ, ಗೊರವಂಕ, ನವಿಲು ಮುಂತಾದ ಪ್ರಾಣಿ ಪಕ್ಷಿಗಳು ವಾಸವಿದ್ದು ಇವುಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ಸೇವಿಸುತ್ತಾರೆ. ಪುರಾತನ ಕಾಲದಿಂದಲೂ ಬೇಡರು ಬೇಟೆಯ ಪದ್ಧತಿಯನ್ನು ಬೇಟೆ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಈ ಸಮುದಾಯವು ಬೇಟೆಯನ್ನು ಆಹಾರ ಮತ್ತು ಹವ್ಯಾಸಿ ಸಂಪ್ರದಾಯವಾಗಿಯೂ ಪಾಲಿಸುತ್ತಾ ಬಂದಿದೆ. ಇವರ ಬದುಕಿನಲ್ಲಿ ಬೇಟೆಯ ಪಾತ್ರ ಮತ್ತು ಬೇಟೆಯ ಪಾರಂಪರಿಕ ಜ್ಞಾನವನ್ನು ಅರಿಯುವುದು ಪ್ರಸ್ತುತ ಸಂದರ್ಭದಲ್ಲಿ ಪ್ರಮುಖವೆನಿಸುತ್ತದೆ. ಹಟ್ಟಿಯ ಬೇಡರ ಬೇಟೆ ವಿಧಾನ, ತಂತ್ರಗಾರಿಕೆ ಮುಂತಾದವುಗಳನ್ನು ತಿಳಿಯುವ ಮೊದಲು ಅವರು

ಮಾಡುವ ಬೇಟೆಗಳನ್ನು ಪ್ರಾಣಿಬೇಟೆ, ಪಕ್ಷಿಬೇಟೆ ಎಂದು ಎರಡು ಬಗೆಗಳಲ್ಲಿ ವಿಂಗಡಿಸಿಕೊಂಡು ಪ್ರಾಣಿಗಳ ಬೇಟೆಯಲ್ಲಿ ಬಳಸುವ ತಂತ್ರ, ಪಕ್ಷಿಗಳಲ್ಲಿ ಬಳಸುವ ತಂತ್ರ ವಿಧಾನಗಳನ್ನು ಅರಿಯೋಣ.

**೩.೧.೧ ಪ್ರಾಣಿಬೇಟೆ**

ಈ ಮೊದಲೇ ಹೇಳಿರುವಂತೆ ಮೂಲತಃ ಅರಣ್ಯವಾಸಿಗಳಾದ ಬೇಡರಿಗೆ ಬೇಟೆಯು ಆಹಾರಕ್ಕಾಗಿ ಅನಿವಾರ್ಯವಾಗಿತ್ತು ಮತ್ತು ತನ್ನ, ತನ್ನ ಸಂಪತ್ತಿನ ರಕ್ಷಣೆಗೂ ಬೇಟೆ ಅನಿವಾರ್ಯವಾಗಿತ್ತು. ಆದ್ದರಿಂದ ಇವರು ಬೇಟೆಯನ್ನು ತಮ್ಮ ಜೀವನ ಕ್ರಮದ ಒಂದು ಭಾಗವಾಗಿ ಅಳವಡಿಸಿಕೊಂಡಿದ್ದರು. "ಪ್ರಾಣಿಗಳ ಚಲನ-ವಲನ ಆಹಾರ ಕ್ರಮ, ವಾಸಿಸುವ ಜಾಗಗಳಾದ ಗವಿ, ಪೊಟರೆ, ಪೊದೆ, ಬಿಲ ಮುಂತಾದವುಗಳನ್ನು ಗುರುತಿಸಿ ಅವುಗಳ ದೌರ್ಬಲ್ಯವನ್ನು ಬಳಸಿಕೊಂಡು ಸುಲಭವಾಗಿ ತಮ್ಮ ತಂತ್ರಕ್ಕೆ ಅಥವಾ ವಿಧಾನಕ್ಕೆ ಸಿಲುಕಿಕೊಳ್ಳುವಂತೆ ಅಥವಾ ಇಡಾಗುವಂತೆ ಮಾಡುವ ಕಲೆಯೇ ಬೇಟೆ"[೩]. ಮೊಲ, ಹಂದಿ, ಮೀನು, ಉಡಾ, ಅಳಿಲು(ಈಣಚಿ), ಮುಂಗೂಸಿ, ಮುಳ್ಳುಹಂದಿ ಮುಂತಾದ ಪ್ರಾಣಿಗಳ ಚಲನ-ವಲನ ಆಹಾರಕ್ರಮ, ವಾಸಿಸುವ ಜಾಗ ಅವುಗಳ ದೌರ್ಬಲ್ಯವನ್ನು ಅರಿತಿರುವ ಹಟ್ಟಿಯ ಬೇಡರು ಅವುಗಳನ್ನು ನೈಪುಣ್ಯತೆಯಿಂದ ಬೇಟೆಯಾಡುತ್ತಾರೆ. ಕಾಡು ಪ್ರಾಣಿಗಳ ಬೇಟೆಯ ಸಂದರ್ಭದಲ್ಲಿ ಬೇಟೆಯ ತಂತ್ರ ಮರೆತರೆ ಜೀವಕ್ಕೆ ಆಪತ್ತು ಬರುವ ಸಾಧ್ಯತೆ ಇರುತ್ತದೆ. ಬೇಟೆಯಾಡುವುದು ಧೈರ್ಯ ತಂತ್ರಗಾರಿಕೆಯ ಸಂಕೇತವಾಗಿರುತ್ತದೆ. ಬೇಡರಲ್ಲಿ ಹಿಂದೆ ವೃತ್ತಿಯಾಗಿದ್ದ ಬೇಟೆ ಇಂದು ಪ್ರವೃತ್ತಿ, ಹವ್ಯಾಸದ ಸ್ವರೂಪವನ್ನು ಪಡೆದಿದೆ. ಹಟ್ಟಿಯ ಬೇಡರು ಹಿಂದಿನಿಂದಲೂ ಮತ್ತು ಇಂದಿಗೂ ತಾವು ಆಹಾರಕ್ಕಾಗಿ ಬೇಟೆಯಾಡುತ್ತಿರುವ ಪ್ರಾಣಿಗಳು ಮತ್ತು ಬೇಟೆ ತಂತ್ರಗಳು, ಉಪಕರಣಗಳು ಮುಂತಾದ ಬೇಟೆ ಪಾರಂಪರಿಕ ಜ್ಞಾನದ ಬಗ್ಗೆ ಈ ಕೆಳಗಿನಂತೆ ತಿಳಿಯೋಣ.

**ಮೊಲದ ಬೇಟೆ**

ಬೇಡರ ಕಂದೆಲುಗು ಭಾಷೆಯಲ್ಲಿ ಮೊಲವನ್ನು ಕುಂದ್ಲಿ ಎನ್ನುತ್ತಾರೆ. ಮೊಲದ ಬೇಟೆಯನ್ನು ಕುಂದ್ಲಿಯಾಟಮು ಎನ್ನುತ್ತಾರೆ. ಬಯಲು ಸೀಮೆಯ ಕುರುಚಲು ಕಾಡುಗಳಲ್ಲಿ ಹೆಚ್ಚಾಗಿ ಹಾಗೂ ಎಲ್ಲೆಡೆಯೂ ದೊರೆಯುವಂತಹ ಪ್ರಾಣಿ ಇದಾಗಿರುವುದರಿಂದ ಇದರ ಬೇಟೆ ಹೆಚ್ಚಾಗಿ ಆಡುತ್ತಾರೆ. ಮೊಲವು ಅತ್ಯಂತ ಚುರುಕಾದ ಪ್ರಾಣಿಯಾಗಿದೆ. ದೂರದಿಂದಲೇ ಬೇರೆ ಪ್ರಾಣಿಗಳ ಅಥವಾ ಮಾನವರ ಶಬ್ದ ಮತ್ತು ವಾಸನೆಯನ್ನು ಅತಿ ಸೂಕ್ಷ್ಮವಾಗಿ ಗ್ರಹಿಸುವ ಪ್ರಾಣಿ ಮತ್ತು ಅತಿ ವೇಗವಾಗಿ ಓಡುತ್ತದೆ. ಮೊಲದ ಓಟದ ಕುರಿತು ಬೇಟೆಗಾರರೇ ಹೇಳುವ ಮಾತೊಂದು ಹೀಗಿದೆ ಮೊಲವು ತನ್ನಷ್ಟಕ್ಕೆ ತಾನು ಹೀಗೆ ಹೇಳಿಕೊಳ್ಳುತ್ತದಂತೆ. ನನ್ನ "ಹಿಂದಿನ ಕಾಲು ಉದ್ದ ಇರುವಂತೆ ಮುಂದಿನ ಕಾಲುಗಳೂ ಸಹ ಉದ್ದವಿದ್ದಿದ್ದರೆ ಬೇಟೆಗಾರನ ಮನೆಯ ಮುಂದೆ ಹೋಗಿ ಕುಣಿಯುತ್ತಿದ್ದೆ"(ಮಾಹಿತಿ: ದೇವೇಂದ್ರಪ್ಪ. ೫೦, ಕಮಲಾಪುರ, ಡಿ ಗುಂಪಿನ ನೌಕರ, ಕನ್ನಡ ವಿಶ್ವವಿದ್ಯಾಲಯ ಹಂಪಿ). ಅಂದರೆ ಬೇಟೆಗಾರನಿಗೆ ಸವಾಲು ಹಾಕುತ್ತಿದ್ದೆ ಎನ್ನುವ ಮಾತಿದು. ಆದರೆ ಅದರ ಮುಂದಿನ ಎರಡು ಕಾಲುಗಳು ಚಿಕ್ಕವಿರುವುದೇ ಅದರ ದೌರ್ಬಲ್ಯ ಇದನ್ನು ಬೇಟೆಗಾರರು ಬಲ್ಲರು. ಮೊಲವನ್ನು ಹಿಡಿಯುವ ಬೇಟೆಗಾರನಿಗೆ

ಮೊಲಕ್ಕಿಂತ ಹೆಚ್ಚಿನ ಜಾಣ್ಮೆ ಮತ್ತು ಚುರುಕುತನ ಬೇಕಾಗುವುದು. ಮೊಲದ ಬೇಟೆಯ ತಂತ್ರವನ್ನು ಹಟ್ಟಿಯ ಬೇಡರು ಪರಂಪರೆಯಿಂದ ಪಡೆದವರು. ಮೊಲಗಳನ್ನು ಹಲವು ವಿಧಾನಗಳ ಮೂಲಕ ಬೇಟೆಯಾಡುತ್ತಾರೆ.

**ಬಲೆಹಾಕಿ ಬೇಟೆಯಾಡುವುದು**

ಹಟ್ಟಿಯ ಬೇಡರು ಮೊಲದ ಬೇಟೆಗೆ ಹೋಗುವ ಮುನ್ನ ಮೊದಲು ಒಂದೆರಡು ದಿನ ಅಡವಿಯಲ್ಲಿ ಓಡಾಡಿ ಮೊಲಗಳು ಓಡಾಡಿರುವ ಅಂದರೆ ಅವು ಆಹಾರ ಹುಡುಕುತ್ತಾ ಬರುವ ಜಾಗಗಳನ್ನು ಪತ್ತೆಹಚ್ಚಿಕೊಂಡು ಒಂದು ದಿನ ಹಗಲು ಹೊತ್ತಿನಲ್ಲಿ ಬಲೆಗಳೊಂದಿಗೆ ಬೇಟೆಗೆ ಹೋಗುತ್ತಾರೆ. ಬಲೆಹಾಕಿ ಬೇಟೆ ಆಡುವುದನ್ನು ಸೋವು ಬೇಟೆ ಎಂದೂ ಸಹ ಕರೆಯುವರು ಕಾರಣ ಮೊಲಗಳು ನೆಲೆಸಿರುವಂತಹ ಸ್ಥಳ ಅವುಗಳ ಓಡಾಟ ಮತ್ತು ಹಿಕ್ಕೆಗಳನ್ನು ಗಮನಿಸಿ ಆ ಜಾಗದಲ್ಲಿ ೩-೪ ಬಲೆಗಳನ್ನು ಉದ್ದುದ್ದವಾಗಿ ಬಿಟ್ಟು, ಕೊನೆಯ ಎರಡು ಕಡೆ ಇಬ್ಬರು ಗಿಡಗಳ ಮರೆಯಲ್ಲಿ ಅವಿತುಕೊಂಡು ಅಂಚಿನಲ್ಲಿ ಇಬ್ಬರು ಒಂದು ಬದಿಯಿಂದ ಬಲೆ ಬಿಟ್ಟಿರುವ ಬದಿಯ ಕಡೆ ಕೋಲುಗಳಿಂದ ಪೊದೆ, ಪೊಟರೆ, ಗಿಡಗಳನ್ನು ಬಡಿಯುತ್ತಾ ಸದ್ದು ಮಡುತ್ತಾ ಸೋವಿಕೊಳ್ಳುತ್ತಾ ಬರುತ್ತಾರೆ. ಒಂದು ಕಡೆಯಿಂದ ಸೋವಿಕೊಂಡು ಬಂದಾಗ ಪೊದೆಗಳಲ್ಲಿರುವ ಮೊಲಗಳು ಓಡಿಹೋಗಲು ಯತ್ನಿಸಿ ಬಲೆಯಲ್ಲಿ ಸಿಲುಕಿಕೊಳ್ಳುತ್ತವೆ. ಹೀಗೆ ಹೋಗಿ ಬಲೆಯಲ್ಲಿ ಬೀಳುವಂತೆ ಮಾಡುವುದರಿಂದ ಈ ವಿಧಾನಕ್ಕೆ ಸೋವು ಬೇಟೆ ಎನ್ನುತ್ತಾರೆ. ಇವರು ಬಲೆಯನ್ನು ತಾವೇ ತಯಾರಿಸಿಕೊಂಡಿರುತ್ತಾರೆ ಮತ್ತು ಬೇಟೆಗೆ ಬಲೆ ಬಿಡುವಾಗ ತುಂಬಾ ಚಾಣಾಕ್ಷತನದಿಂದ ಬಿಡುತ್ತಾರೆ. ೩-೪ ಬಲೆಗಳನ್ನು ಉದ್ದುದ್ದವಾಗಿ ಬಿಡುವರು ಕೊನೆಯ ಎರಡು ಕಡೆ ಹಗ್ಗಗಳಿಂದ ಕಟ್ಟಿರುತ್ತಾರೆ. ಬಲೆಗಳಿಗೆ ಎರಡು ಕಡ್ಡಿಗಳನ್ನು ಸೂಕ್ಷ್ಮವಾಗಿ ನಿಲ್ಲಿಸಿ ಒಂದು ಚಿಕ್ಕ ಪ್ರಾಣಿ ಸ್ಪರ್ಷವಾದರೂ ಬಲೆ ಸುತ್ತಿಕೊಳ್ಳುವಂತೆ ಚತುರತೆಯಿಂದ ಬಲೆ ಬಿಡುವರು. ಬಲೆಯ ಅಂಚಿನಲ್ಲಿ ಇಬ್ಬರು ಅವಿತುಕೊಂಡಿರುತ್ತಾರೆ. ಅವರನ್ನು ಹೊರತು ಪಡಿಸಿ ಉಳಿದವರು ಬಲೆಗೆ ಅಭಿಮುಖವಾಗಿ ಅನತಿ ದೂರದಿಂದ ಕೊಲು ಕಲ್ಲುಗಳಿಂದ ಶಬ್ದ ಮಾಡುತ್ತಾ ಸೋವಿಕೊಂಡು ಬರುತ್ತಾರೆ ಆಗ ಮೊಲಗಳು ಭಯದಿಂದ ಬಲೆ ಇರುವ ಕಡೆ ಜನರು ಇಲ್ಲದಿರುವುದನ್ನು ನೋಡಿ ಅಪಾಯವಿಲ್ಲವೆಂದು ತಿಳಿದು ಓಡಲಾರಂಭಿಸುತ್ತವೆ. ಹೀಗೆ ಓಡುವಾಗ ಬಲೆಗೆ ಬಂದು ಬೀಳುತ್ತವೆ. ಮೊಲ ಬಲೆಗೆ ಬಿದ್ದಾಗ ಅಂಚಿನಲ್ಲಿರುವ ವ್ಯಕ್ತಿಗಳು ಬಲೆಯ ಸಮೇತ ಮೊಲವನ್ನು ಮುದುರಿಕೊಂಡು ನಂತರ ಅದನ್ನು ಬಲೆಯಿಂದ ಬಿಡಿಸಿಕೊಂಡು ಚೀಲದೊಳಗೆ ಹಾಕಿಕೊಂಡು ಪುನಃ ಊಡುಗಡ್ಡಿಯನ್ನು ನಿಲ್ಲಿಸುವರು. ಹೀಗೆ ಬೇಟೆಯಾಡಿದಂತಹ ಮೊಲಗಳನ್ನು ಕೊಯ್ದು ಅಡುಗೆ ಮಾಡಿಕೊಂಡು ಊಟಮಾಡುತ್ತಾರೆ. ಜನಪದರ ಮಾತಿನಲ್ಲಿ ಮೊಲದ ಮಾಂಸವನ್ನು ಅಡವಿಯ ಬಂಗಾರ ಎನ್ನುತ್ತಾರೆ.

**ಬೆಳದಿಂಗಳ ಬೇಟೆ**

ಮೊಲಗಳ ಆಹಾರ ಎಳೆಯ ಹುಲ್ಲು, ಜೊಬ್ಬು ಕರಿಕೆ, ಮೊಲಗಳು ನೀರು ಕುಡಿಯುವುದಿಲ್ಲವೆಂದು ಹೇಳಲಾಗುತ್ತದೆ. ಮೊಲ ರಾತ್ರಿಯಲ್ಲಿ ಹೆಚ್ಚಾಗಿ ಮೇಯಲು ಬರುತ್ತವೆ. ಅದರಲ್ಲೂ ಬೆಳದಿಂಗಳ

ರಾತ್ರಿಯಲ್ಲಿ ನಿರ್ಭಯವಾಗಿ ಓಡಾಡುತ್ತಾ ಗರಿಕೆಯ ಚಿಗುರನ್ನು ತಿನ್ನುತ್ತಿರುತ್ತವೆ. ಆದ್ದರಿಂದ ರಾತ್ರಿಯ ಹೊತ್ತಿನಲ್ಲಿ ಅಂದರೆ ಸಂಜೆ ೭-೧೨ ಗಂಟೆಯ ಸಮಯದಲ್ಲಿ ಇಲ್ಲವೆ ಬೆಳಗಿನ ಜಾವ ೪-೬ ಗಂಟೆಯ ಸಮಯದಲ್ಲಿ ಬಲೆ ಒಡ್ಡಿ ಬೇಟೆಯಾಡುತ್ತಾರೆ. ಈ ವಿಧಾನಕ್ಕೆ ಸಂಜೆ ಹೊಳೆ ಮತ್ತು ಬೆಳಗಿನ ಹೊಳೆ ಮೊಲದ ಬೇಟೆ ಎನ್ನುತ್ತಾರೆ. ಹಗಲಿನಲ್ಲಿ ಮೊಲಗಳು ಓಡಾಡಿರುವ ಜಾಗ, ಅವು ಹಿಕ್ಕೆ ಹಾಕಿರುವ ಜಾಗವನ್ನು ನೋಡಿ ಗುರುತಿಸಿಕೊಂಡು. ಸಂಜೆ ೭-೧೨ ಗಂಟೆಯ ಸಮಯದಲ್ಲಿ ಬಲೆ ಕಟ್ಟಿ ಮನೆಗೆ ಬರುತ್ತಾರೆ ಅವು ಮೇಯಲು ಅಲ್ಲಿಗೆ ಬಂದೊಡನೆ ಬಲೆಗೆ ಸಿಕ್ಕಿ ಸಾಯುತ್ತವೆ. ಇಲ್ಲವೇ ಬಲೆ ಒಡ್ಡಿ ಅಲ್ಲೇ ಅವಿತು ಕುಳಿತುಕೊಂಡಿರುತ್ತಾರೆ. ತಮ್ಮ ಗುರುತು ಇತರ ಪ್ರಾಣಿಗಳಿಗೆ ಸಿಗದಂತೆ ಜಾಗ್ರತೆ ವಹಿಸುತ್ತಾರೆ. ಅಲ್ಲೇ ಇರುವ ಸೊಪ್ಪುಗಳಿಂದ ಮೈಗೆಲ್ಲಾ ಹೊದಿಕೆಮಾಡಿಕೊಂಡು ಗಿಡಗಳಲ್ಲಿ ತಾವು ಗಿಡಗಳಂತೆ ಕುಳಿತಿರುತ್ತಾರೆ. ಬಲೆಯ ಸ್ವಲ್ಪ ದೂರದಲ್ಲಿ ಯಾವುದೇ ಪ್ರಾಣಿ ಬಂದರೂ ತಮಗೆ ಗೊತ್ತಾಗುವಂತೆ ಡಬ್ಬಕ್ಕೆ ಸಣ್ಣ ಕಲ್ಲುಗಳನ್ನು ಹಾಕಿ ದಾರ ಕಟ್ಟಿರುತ್ತಾರೆ. ಪ್ರಾಣಿಗಳು ಬಂದಾಗ ಆ ದಾರಕ್ಕೆ ತಗುಲಿ ಶಬ್ದ ಬರುತ್ತದೆ. ಆಗ ಅವರು ಜಾಗೃತರಾಗುತ್ತಾರೆ. ಮೊಲ ಬಂದರೆ ಅದು ಬಲೆಗೆ ಸಿಲುಕಿಕೊಂಡ ತಕ್ಷಣ ಬೇಗನೆ ಹೋಗಿ ಹಿಡಿದುಕೊಳ್ಳುತ್ತಾರೆ. ಅಥವಾ ಬೇರೆ ಕ್ರೂರ ಪ್ರಾಣಿಗಳು ಬಂದಿದ್ದರೆ ತಮ್ಮನ್ನು ಗುರುತಿಸುತ್ತವೆ, ವಾಸನೆ ಹಿಡಿಯುತ್ತವೆ ಎಂದು ನಿಧಾನವಾಗಿ ಬಲೆಯ ಊಡುಕಡ್ಡಿಯನ್ನು ಕೆಡವಿ ಬಲೆಯನ್ನು ನೆಲಸಮಮಾಡಿ ಆ ಕ್ರೂರ ಪ್ರಾಣಿಯು ಹೋಗುವವರೆಗೂ ಉಸುರು ಬಿಗಿ ಹಿಡಿದು ಕುಳಿತಿರುತ್ತಾರೆ. ನಂತರ ಮತ್ತೆ ಬಲೆ ಒಡ್ಡುತ್ತಾರೆ. ಒಂದು ವೇಳೆ ಸಂಜೆಯ ವೇಳೆ ಮೊಲಗಳು ಬಂದು ಬೀಳದಿದ್ದರೆ ಅದೇ ಜಾಗದಲ್ಲಿ ಬೆಳಗಿನ ಜಾವ ೩ ಗಂಟೆಯವರೆಗೆ ಕಾದು ಕುಳಿತು ನಂತರ ೩-೫ ಗಂಟೆಯ ಅವಧಿಯಲ್ಲಿ ಬಲೆ ಒಡ್ಡಿ ಕಾಯುತ್ತಾರೆ.

ರಾತ್ರಿ ಸಂಜೆಯಲ್ಲಿ ಹೊಲಗಳಿಗೆ ಮೇಯಲು ಹೋಗಿದ್ದ ಮೊಲಗಳು ಬೆಳಗಿನ ಜಾವ ಮರಳಿ ಬರುವಾಗ ಬೇಡರ ಈ ಬಲೆಗೆ ಸಿಲುಕಿಕೊಳ್ಳುವವು. ಹೀಗೆ ಮೊಲದ ಬೇಟೆಯನ್ನು ರಾತ್ರಿ ವೇಳೆ ಆಡುತ್ತಾರೆ. ಮೊಲದ ಬೇಟೆಯ ಸಂದರ್ಭದಲ್ಲಿ ವಹಿಸಬೇಕಾದ ಎಚ್ಚರ ಎಂದರೆ ಗಾಳಿಯು ಎತ್ತ ಕಡೆ ಬೀಸುತ್ತದೆ ಎಂಬುದನ್ನು ಅರಿತುಕೊಂಡು ಗಾಳಿಯ ವಿರುದ್ಧ ದಿಕ್ಕಿನಲ್ಲಿ ಬೇಟೆಗಾರರು ಇರುತ್ತಾರೆ. ಇಲ್ಲವಾದರೆ ಮನುಷ್ಯನ ವಾಸನೆ ಮೊಲಗಳು ಗ್ರಹಿಸಿ ಎಚ್ಚರಗೊಳ್ಳುತ್ತವೆ. ಬೆಳದಿಂಗಳ ರಾತ್ರಿಯಲ್ಲಿ ಆಡುವ ಬೇಟೆಗೆ 'ಠಕ್ಕು' ಬೇಟೆ ಎಂದು ಕರೆಯುತ್ತಾರೆ. ಮೊಲಗಳು ಇರುವ ಪೊದೆಗಳು ಅಥವಾ ಅವು ಓಡಾಡುವ ಜಾಗಗಳನ್ನು ಗುರುತಿಸಿ ಬಲೆಯನ್ನು ಒಡ್ಡಿ ಬಲೆಯ ಅಂಚಿನಲ್ಲಿ ಇಬ್ಬರು ಅವಿತು ಕುಳಿತು ಉಳಿದವರು ಕಲ್ಲುಗಳನ್ನು ಹಿಡಿದುಕೊಂಡು ಅವುಗಳನ್ನು ಠಕ್ಕು ಠಕ್ಕು ಎಂದು ಕುಟ್ಟುತ್ತಾ ಸದ್ದು ಮಾಡುತ್ತಾ ಬರುತ್ತಾರೆ. ಆಗ ಮೊಲವು ಗದ್ದಲವಿಲ್ಲದ ಕಡೆ ಓಡುತ್ತದೆ ಆಗ ಅಲ್ಲಿ ಬಲೆಗೆ ಬೀಳುತ್ತದೆ.

ಹೆಜ್ಜೆ ಗುರುತು ಅಥವಾ ಹಿಕ್ಕೆ ಮೊಲದ ಬೇಟೆ: ಮೊಲ ಅವಿತು ಕುಳಿತ ಪೊದೆ, ಪೊಟರೆಯನ್ನು ಅದರ ಹೆಜ್ಜೆ ಮತ್ತು ಹಿಕ್ಕೆಗಳಿಂದ ಗ್ರಹಿಸಿ. ಆ ಪೊದೆ ಅಥವಾ ಪೊಟರೆಯ ಸುತ್ತ ಬಲೆ ಬಿಟ್ಟು

ಕೂಗುತ್ತಾರೆ ಅಥವಾ ಪೊದೆಗೆ ಕಲ್ಲು ಹಾಕುತ್ತಾ ಮೊಲ ಪೊದೆಯಿಂದ ಹೊರಬರುವಂತೆ ಮಾಡಿ ಬಲೆಗೆ ಬೀಳಿಸುವುದು ಇದರ ವಿಶೇಷತೆ.

ಉರುಲು ಬೇಟೆ: ಹಟ್ಟಿಯ ಅನುಭವಿ ಬೇಡರು ತಮ್ಮ ಬೇಟೆ ಅನುಭವ ಮತ್ತು ತಿಳುವಳಿಕೆಯಿಂದ ಮೊಲದ ಕುತ್ತಿಗೆಗೆ ನೇಣು ಬಿಗಿದುಕೊಳ್ಳುವಂತೆ ಅಲ್ಯುಮಿನಿಯಂ ತಂತಿಯಿಂದ ಉರುಲುಗಳನ್ನು ತಯಾರಿಸುವರು. ಈ ಉರುಲುಗಳನ್ನು ಮೊಲಗಳು ಓಡಾಡುವ ಜಾಗದಲ್ಲಿ ಗಿಡಗಳ ಮಧ್ಯೆ ರಾತ್ರಿಯ ವೇಳೆಯಲ್ಲಿ ಕಟ್ಟಿ ಬರುತ್ತಾರೆ. ರಾತ್ರಿ ವೇಳೆಯಲ್ಲಿ ಬಂದ ಮೊಲಗಳು ಈ ತಂತಿ ಉರುಲಿನಲ್ಲಿ (ಪಾನ್ಸೆಯಲ್ಲಿ) ಸಿಲುಕಿಕೊಂಡು ಉರುಲು ಬಿಗಿದು ಸತ್ತಿರುತ್ತದೆ ಬೇಟೆಗಾರರು ಮುಂಜಾನೆ ಹೋಗಿ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವ ಮೊಲಗಳನ್ನು ಉರುಲಿನಿಂದ ಬಿಡಿಸಿಕೊಂಡು ಬರುತ್ತಾರೆ. ಈ ಉರುಲುಗಳನ್ನು ಎಷ್ಟು ಚಾಣಾಕ್ಷತೆಯಿಂದ ಮಾಡಿರುತ್ತಾರೆ ಎಂದರೆ ಮೊಲವು ಒಮ್ಮೆ ಈ ಉರುಲಿನಲ್ಲಿ ಸಿಕ್ಕಿಕೊಂಡರೆ ಮುಗಿಯಿತು. ಅದರಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲ ಅದು ಬಿಡಿಸಿಕೊಳ್ಳಲು ಪ್ರಯತ್ನಪಟ್ಟಷ್ಟು, ಒದ್ದಾಡಿದಷ್ಟು ಉರುಲು ಕುತ್ತಿಗೆಗೆ ಬಿಗಿಯಾಗುತ್ತಾ ಹೋಗುತ್ತದೆ. ಮೊಲವು ಒದ್ದಾಡಿ ಒದ್ದಾಡಿ ಪ್ರಾಣ ಬಿಡುತ್ತದೆ.

**ಹಣೆ ಬ್ಯಾಟರಿ ಬಳಸಿ ಬೇಟೆ**

ಮೊಲವು ಕತ್ತಲಲ್ಲಿ ಆಹಾರ ಮೇಯಲು ಬರುವುದರಿಂದ ಬೇಡರು ರಾತ್ರಿಯ ಹೊತ್ತು ಬ್ಯಾಟರಿ ಬೆಳಕಿನ ಸಹಾಯದಿಂದ ಬೇಟೆಯಾಡುತ್ತಾರೆ. ಪ್ರಖರವಾದ ಬೆಳಕಿನ ಬ್ಯಾಟರಿಯನ್ನು ತಲೆಗೆ(ಹಣೆಗೆ) ಕಟ್ಟಿಕೊಂಡು ಮೊಲಕ್ಕೆ ಬಿಡುತ್ತಾರೆ ಅದರ ಬೆಳಕು ಮೊಲದ ಮುಖದ ಮೇಲೆ ಬಿದ್ದಾಗ ಅದು ಕಿವಿ ನಿಮಿರಿಸಿ ಆ ಬೆಳಕನ್ನೆ ದಿಟ್ಟಿಸಿ ನೋಡುತ್ತದೆ. ಕೂಡಲೆ ಬೇಟೆಗಾರರು ಕೋಲಿನಿಂದ ಮೊಲವನ್ನು ಹೊಡೆದುರುಳಿಸುತ್ತಾರೆ. ಅಮವಾಸ್ಯೆಯ ಕತ್ತಲಿನಲ್ಲಿ ಒಂದು ಕೈ ಬ್ಯಾಟರಿಯ ಕಟ್ಟನ್ನು ಹಾಕಿಕೊಂಡು ಹೆಗಲಿಗೆ ಚಾರ್ಜ್ ಮಾಡಿದ ಚಿಕ್ಕ ಆಟೋರಿಕ್ಷಾದ ಬ್ಯಾಟರಿಯನ್ನು ಹಾಕಿಕೊಂಡು ಬೇಟೆಗೆ ಹೋಗುವರು. ಇದರ ಬೆಳಕು ಹೆಚ್ಚು ಪ್ರಖರವಾಗಿರುವುದರಿಂದ ದೂರದವರೆಗೆ ಪ್ರಕಾಶಿಸುತ್ತದೆ. ಬೇಟೆಗಾರರ ಹೆಜ್ಜೆ ಸಪ್ಪಳ ಮೊಲಗಳಿಗೆ ಕೇಳಿಸದಂತೆ ಒಂದು ಬಗೆಯ ಸದ್ದು ಮಾಡುವ ಹಾರನ್ ಹಾಕಿಕೊಂಡು ಬರುತ್ತಾರೆ. ಬ್ಯಾಟರಿ ಬೆಳಕಿನಲ್ಲಿ ಪ್ರಾಣಿಗಳ ಕಣ್ಣು ಫಳ ಫಳ ಹೊಳೆಯುತ್ತವೆ. ಅವುಗಳ ಕಣ್ಣುಗಳ ಬಣ್ಣದಿಂದಲೇ ಇದು ಯಾವ ಪ್ರಾಣಿ ಎಂದು ಗ್ರಹಿಸುವ ಕೌಶಲ್ಯತೆ ಇವರಲ್ಲಿದೆ ಬ್ಯಾಟರಿ ಬೆಳಕಿನಲ್ಲಿ ಮೊಲ ಕಂಡರೆ ಹಾರನ್ ಹಾಕಿಕೊಂಡು ಸಮೀಪ ಹೋಗಿ ದೊಣ್ಣೆಯಿಂದ ಹೊಡೆದು ಸಾಯಿಸುತ್ತಾರೆ. ಅದನ್ನು ಚೀಲದಲ್ಲಿ ಹಾಕಿಕೊಂಡು ಮತ್ತೆ ಬ್ಯಾಟರಿ ಬೆಳಕಿನಲ್ಲಿ ಮುಂದೆ ಸಾಗುತ್ತಾರೆ.

**ಇಲಿ ಬೇಟೆ(ಯಲಕಲಯಾಟ)**

ಸಾಮಾನ್ಯವಾಗಿ ಚಿಕ್ಕ ಚಿಕ್ಕ ಹುಡುಗರು ಇಲಿ ಬೇಟೆಗೆ ಹೋಗುತ್ತಾರೆ. ಇಲಿಗಳಲ್ಲಿ ಎರಡು ಬಗೆ, ಊರ ಇಲಿ (ಊರಲ್ಲಿ ಮನೆಗಳಲ್ಲಿ ವಾಸಿಸುತ್ತಿರುತ್ತವೆ.) ಮತ್ತು ಅಡವಿ ಇಲಿ. ಇವರು ಊರ ಇಲಿಯನ್ನು ತಿನ್ನುವುದಿಲ್ಲ ಆದರೆ ಅಡವಿ ಇಲಿಗಳನ್ನು ಬೇಟೆಯಾಡಿಕೊಂಡು ಬಂದು ಅವುಗಳ

ಮಾಂಸವನ್ನು ತಿನ್ನುತ್ತಾರೆ. ನೆಲದೊಳಗೆ ಬೋನು ಮಾಡಿಕೊಂಡು ಅದರಲ್ಲಿ ಇಲಿಗಳ ದಂಡು ವಾಸವಾಗಿರುತ್ತದೆ. ಇವುಗಳನ್ನು ಬೇಟೆಯಾಡಲು ವಿಶೇಷ ಬೇಟೆ ಜ್ಞಾನದ ಅವಶ್ಯಕತೆ ಇದೆ. ಇಲಿ ಬೇಟೆಗೆ ಸಾಮಾನ್ಯವಾಗಿ ಮಳೆ ಬಂದ ಮರುದಿನ ಹೋಗುತ್ತಾರೆ. ಕಾರಣ ನೆಲದಲ್ಲಿನ ಇಲಿಗಳ ಬೋನುಗಳನ್ನು ಅಗೆಯಲು ಸುಲಭ ಮತ್ತು ಇಲಿಗಳ ಹೆಜ್ಜೆ ಗುರುತು ಹಿಕ್ಕೆಗಳನ್ನು ನೋಡಿ ಇಲಿ ಇರುವ ಜಾಗವನ್ನು ಪತ್ತೆ ಹಚ್ಚಲು ಸುಲಭ ಆದ್ದರಿಂದ ಮಳೆ ಬಂದ ಮರುದಿನ ಹೋಗುತ್ತಾರೆ. ಮೊದಲು ಇಲಿಗಳಿರುವ ಬೋನನ್ನು ಗುರುತಿಸಿ ಆ ಬೋನಿಗೆ ಹೊಂದಿಕೊಂಡಂತೆ ಸುತ್ತಮುತ್ತ ಇರುವ ಸಣ್ಣ ಬೋನುಗಳನ್ನು ಮೊದಲು ಕಲ್ಲುಗಳಿಂದ ಮುಚ್ಚಿ ನಂತರ ಬೋನಿನ ಮುಖ್ಯ ರಂಧ್ರವನ್ನು ಕೋಲು, ಹಾರೆಕೋಲು, ಸಲಕೆ, ಗುದ್ದಲಿಯಿಂದ ಅಗೆದು ಇಲಿಗಳನ್ನು ಹೊರ ಬರುವಂತೆ ಮಾಡುತ್ತಾರೆ. ಮೊದಲೇ ಕೋಲುಗಳನ್ನು ಹಿಡಿದು ಬೋನಿನ ಸುತ್ತ ಸ್ವಲ್ಪ ದೂರದಲ್ಲಿ ನಿಂತಿರುವ ಹುಡುಗರು ಇಲಿಗಳು ಹೊರ ಬಂದಕೂಡಲೇ ಹೊಡೆಯುತ್ತಾರೆ. ಇಲಿಗಳು ಚಿಕ್ಕವು ಮತ್ತು ವೇಗವಾಗಿ ಓಡಾಡುವುದರಿಂದ ಅವುಗಳನ್ನು ಹೊಡೆಯಲು ಚಾಣಾಕ್ಷತನ ಬೇಕು. ತೆಳ್ಳನೆಯ ಕೋಲುಗಳಿಂದ ಜಾರಿ ಹೊಡೆಯಬೇಕು ಒಂದು ವೇಳೆ ಇವರಿಂದ ತಪ್ಪಿಸಿಕೊಂಡು ಹೋದರೆ ಇವರೊಡನೆ ಬಂದಿರುವ ಬೇಟೆನಾಯಿಗಳು ಇಲಿಗಳನ್ನು ಅಟ್ಟಿಸಿಕೊಂಡು ಹೋಗಿ ಹಿಡಿಯುತ್ತವೆ ಹಿಡಿದು ಬೇಟೆಗಾರನಿಗೆ ಒಪ್ಪಿಸುತ್ತವೆ.

**ಊದ್ರೆ ಇಡುವುದು/ಹೊಗೆ ಹಾಕುವುದು**

ಒಂದು ಡಬ್ಬದಲ್ಲಿ ಕೆಂಡಗಳನ್ನು ಹಾಕಿಕೊಂಡು ಎರಡು ಬದಿಯಲ್ಲಿ ಚಿಕ್ಕ ರಂಧ್ರಗಳನ್ನು ಮಾಡಿ ಮುಚ್ಚುತ್ತಾರೆ. ಬೋನಿನ ಬಾಯಿಗೆ ಡಬ್ಬವನ್ನು ಇಟ್ಟು ಹಸಿರು ಸೊಪ್ಪನ್ನು ಹಾಕಿ ಊದುತ್ತಾರೆ ಆಗ ಹೊಗೆ ಬೋನಿನ ತುಂಬ ತುಂಬಿಕೊಂಡು ಇಲಿಗಳು ಬೋನಿನಲ್ಲೇ ಸಾಯುತ್ತವೆ. ಇಲಿ ಬೋನಿನಲ್ಲಿ ಹಾವುಗಳು ಇರುವ ಸಾಧ್ಯತೆಯಿದ್ದು ಈ ಬೇಟೆಯಲ್ಲಿ ಅನಾಹುತಗಳು ಸಂಭವಿಸಬಹುದಾದ ಸಾಧ್ಯತೆ ಇರುತ್ತದೆ. ಬೇಡರ ಕಂದೆಲುಗು ಭಾಷೆಯಲ್ಲಿ ಇಲಿ ಬೇಟೆಯನ್ನು ಯಲಕಲಯಾಟ ಎನ್ನುತ್ತಾರೆ. ಹೀಗೆ ಇಲಿಗಳನ್ನು ಬೇಟೆಯಾಡಿಕೊಂಡು ಕಡಿಮೆ ಇಲಿ ಸಿಕ್ಕರೆ ಅಲ್ಲೇ ಅಡವಿಯಲ್ಲೇ ಸುಟ್ಟು ತಿನ್ನುತ್ತಾರೆ ಬಹಳ ಇಲಿ ಸಿಕ್ಕರೆ ಮನೆಗೆ ತಂದು ಸಾರು ಮಾಡಿಕೊಂಡು ತಿನ್ನುತ್ತಾರೆ.

**ಅಳಿಲು ಬೇಟೆ(ಇಣಚಿ ಬೇಟೆ)**

ಅಳಿಲು ಬೇಟೆಯನ್ನು ಸಹ ಮಕ್ಕಳು ಆಡುತ್ತಾರೆ. ಊರಿನ ಪಕ್ಕದಲ್ಲಿ ಕಣಗಳಲ್ಲಿ ಇರುವ ಮರಗಳಲ್ಲಿ ವಾಸವಾಗಿರುವ ಅಥವಾ ಹೊಲಗಳಲ್ಲಿ ಮರಗಳಲ್ಲಿ ವಾಸವಾಗಿರುವ ಅಳಿಲುಗಳನ್ನು ವಿಶೇಷವಾಗಿ ತಯಾರಿಸಿದ ಬಲೆಯಿಂದ ಬೇಟೆ ಮಾಡುತ್ತಾರೆ. ಅಳಿಲಿನ ಮಾಂಸವನ್ನು ಔಷಧಿಯ ಆಹಾರವಾಗಿ ಸೇವಿಸುತ್ತಾರೆ. ಕೆಮ್ಮು ಜಾಸ್ತಿ ಇದ್ದವರು, ರೋಗಿಗಳು ಈ ಅಳಿಲಿನ ಮಾಂಸ ತಿಂದರೆ ರೋಗ ವಾಸಿಯಾಗುತ್ತದೆ ಎಂಬ ನಂಬಿಕೆ ಇದೆ. "ಅಳಿಲು ಮರದ ಮೇಲೆ ವಾಸಮಾಡುವ ಬಾಚಿ ಹಲ್ಲುಳ್ಳ ಪ್ರಾಣಿ ವರ್ಗಕ್ಕೆ ಸೇರಿದ ಪೊದೆ ಬಾಲದ ಒಂದು ಸಣ್ಣ ಪ್ರಾಣಿ ಬೆನ್ನಿನ ಮೇಲೆ ಬಂಗಾರದ ವರ್ಣದ

ಮೂರು ಗೆರೆಗಳಿವೆ ಇವುಗಳನ್ನು ಶ್ರೀ ರಾಮಚಂದ್ರನು ಕೊಟ್ಟನೆಂದು ಹೇಳುತ್ತಾರೆ"". ಇದು ಹೆಚ್ಚಾಗಿ ಹಣ್ಣುಗಳನ್ನು ತಿಂದು ಬದುಕುತ್ತದೆ. ಅಳಿಲನ್ನು ಬಲೆ, ಬಿಲ್ಲು, ಕೋಲುಗಳಿಂದ ಅಥವಾ ಬೋನು ಉಪಯೋಗಿಸಿ ಬೇಟೆಯಾಡುತ್ತಾರೆ. ಅಳಿಲು ಮರದಲ್ಲಿರುವುದನ್ನು ಗಮನಿಸಿ ಮರದ ಸುತ್ತಲೂ ದೂರದಲ್ಲಿ ಸುತ್ತಲೂ ಕೋಲುಗಳನ್ನು ಹಿಡಿದು ಕೆಲವರು ನಿಂತಿರುತ್ತಾರೆ. ಪೊದೆ ಇರುವಂತಹ ಕಡೆ ಬಲೆಯನ್ನು ಹಾಕಿರುತ್ತಾರೆ.

ಅಕ್ಕ-ಪಕ್ಕ ಮರಗಳಿಲ್ಲದ ಒಂಟಿಮರದಲ್ಲಿ ಅಳಿಲು ಇದ್ದರೆ ಬೇಟೆ ಸುಲಭವಾಗುತ್ತದೆ. ಕಾರಣ ಅದು ಒಂದು ಮರದಿಂದ ಮತ್ತೊಂದು ಮರಕ್ಕೆ ಹೋದರೆ ಹಿಡಿಯುವುದು ಕಷ್ಟವಾಗುತ್ತದೆ. ಹೀಗೆ ಒಂಟಿಮರದಲ್ಲಿ ಅಳಿಲು ಇರುವುದನ್ನು ಪತ್ತೆಮಾಡಿ ಸುತ್ತಲೂ ನಿಂತು ಬಲೆ ಹಾಕಿ. ಒಬ್ಬ ಮರವನ್ನು ಹತ್ತಿ ತುದಿಯಿಂದ ಬುಡದ ಕಡೆಗೆ ಕೊಲಿನಿಂದ ರೆಂಬೆಗಳನ್ನು ಬಡಿಯುತ್ತಾ ಸದ್ದು ಮಾಡುತ್ತಾ ಬರುತ್ತಾನೆ. ಆಗ ಅಳಿಲುಗಳು ಮರದಿಂದ ಕೆಳಗೆ ಜಿಗಿದು ಓಡಲು ಪ್ರಯತ್ನಿಸುತ್ತವೆ ಆಗ ಕೆಳಗೆ ನಿಂತಿದ್ದ ಬೇಟೆಗಾರರು ಕೊಲಿನಿಂದ ಹೊಡೆದುರುಳಿಸುತ್ತಾರೆ. ಒಂದು ವೇಳೆ ಪೊದೆಯಲ್ಲಿ ಹೋಗಿ ತಪ್ಪಿಸಿಕೊಳ್ಳೊಣವೆಂದು ಅಳಿಲು ಪೊದೆಯ ಕಡೆಗೆ ಹೋದರೆ ಅಲ್ಲಿ ಇವರು ಹಾಕಿರುವ ಬಲೆಯಲ್ಲಿ ಬಿದ್ದು ಸಿಕ್ಕಿಕೊಳ್ಳುತ್ತದೆ. ಕೆಲವೊಮ್ಮೆ ಚಾಟರಿಬಿಲ್ಲಿನಿಂದಲೂ ಅಳಿಲು ಬೇಟೆಯಾಡುತ್ತಾರೆ.

**ಬಡಗಾಲ್ ಬಂಡೆ ಬೇಟೆ**

ಒಂದು ಅಗಲವಾದ ಬಂಡೆಯನ್ನು ಗೋಡಿಯಾಗಿ ಅಥವಾ ಓರೆಯಾಗಿ ಬೀಳುವಂತೆ ಒಂದು ಅಡ್ಡ ಕಟ್ಟಿಗೆ ಒಂದು ಓರೆ ಕಡ್ಡಿಗಳಿಂದ ಸೂಕ್ಷ್ಮವಾಗಿ ನಿಲ್ಲಿಸಿರುತ್ತಾರೆ ಬಂಡೆ ಭಾರವಾಗಿದ್ದು ಅದಕ್ಕೆ ಆಸರೆಯಾಗಿ ನಿಲ್ಲಿಸಿರುವ ಕಡ್ಡಿಗಳಿಗೆ ಏನಾದರೂ ಸ್ವಲ್ಪ ತಗುಲಿದರೂ ಬಂಡೆ ಬೀಳುವಂತೆ ಇಟ್ಟಿರುತ್ತಾರೆ ಮತ್ತು ಬಂಡೆಯ ಕೆಳಗೆ ಕಾಳುಗಳನ್ನು ಹಾಕಿರುತ್ತಾರೆ. ಕಾಳುಗಳನ್ನು ತಿನ್ನಲು ಬಂಡೆಯ ಕೆಳಗೆ ಬರುವ ಅಳಿಲು ಇಲಿ, ಪಕ್ಷಿಗಳು ಆ ಕಡ್ಡಿಗಳಿಗೆ ತಮ್ಮ ಮೈ ತಾಕಿದರೆ ಆ ಬಂಡೆ ಅವುಗಳ ಮೇಲೆ ಬಿದ್ದು ಬಿಡುತ್ತದೆ ಈ ವಿಧಾನದಿಂದಲೂ ಸಹ ಅಳಿಲನ್ನು ಬೇಟೆಯಾಡುತ್ತಾರೆ ಅಳಿಲು ಮಾತ್ರವಲ್ಲದೆ ಹಕ್ಕಿಗಳನ್ನು ಸಹ ಈ ಬಡಗಾಲ್ ಬಂಡೆ ವಿಧಾನದಿಂದ ಬೇಟೆಯಾಡುತ್ತಾರೆ.

**ಉಡದ ಬೇಟೆ**

ಉಡವು ಹಲ್ಲಿ ಆಕಾರದ ಹಲ್ಲಿಗಿಂತ ದೊಡ್ಡದಾಗಿರುವ ಒಂದು ಸರಿಸೃಪ ಪ್ರಾಣಿ. ತೆಲುಗಿನಲ್ಲಿ ಇದನ್ನು 'ಉಡಮು' ಎನ್ನುತ್ತಾರೆ. ಇದರ ಬೇಟೆಯನ್ನು ಬೇಡರು ತಮ್ಮ ಮಾತಿನಲ್ಲಿ 'ಉಡಮುಯಾಟ' ಎನ್ನುತ್ತಾರೆ. ಉಡವು ಪಕ್ಷಿಗಳ ಮೊಟ್ಟೆ, ಹುಳ-ಹುಪ್ಪಡಿ, ಹಸಿ ಮಣ್ಣನ್ನು ತಿಂದು ಬದುಕುತ್ತದೆ. ಮರದ ಪೊಟರೆ, ಹುತ್ತ, ಬಂಡೆಗಳ ಸಂಧಿಯೊಳಗೆ ಇದರ ವಾಸ. ಉಡದ ಮಾಂಸ ಅನೇಕ ರೋಗಗಳಿಗೆ ಔಷಧಿಯಾಗಿ ಬಳಕೆಯಾಗುತ್ತದೆ. ಉಡದ ನೇಣ(ಕೊಬ್ಬು) ಕಾಲುನೋವಿಗೆ, ಮೈ-ಕೈ, ನೋವಿಗೆ ಔಷಧಿಯಾಗಿ ಬಳಸುತ್ತಾರೆ. ಇದರ ಕೊಬ್ಬು/ನೇಣದಲ್ಲಿ ಅರಿಶಿಣ, ಈರುಳ್ಳಿ ಬೆರೆಸಿದರೆ ಅನೇಕ ವರ್ಷಗಳ ವರೆಗೆ ಅದನ್ನು ಬಳಸಬಹುದು ಅದು ಕೆಡುವುದಿಲ್ಲ.

ಹಟ್ಟಿಯ ಬೇಡರು ಉಡವನ್ನು ಸಹಾ ತುಂಬಾ ಚಾಣಾಕ್ಷತೆಯಿಂದ ಬೇಟೆಯಾಡುತ್ತಾರೆ. ಕೆಲವೊಮ್ಮೆ ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಕಂಡು ಬಂದರೆ ಯಾವುದೇ ಪೂರ್ವಸಿದ್ಧತೆ ಇಲ್ಲದೆ, ಕೈಗೆ ಸಿಕ್ಕ ದೊಣ್ಣೆ, ಕುಡುಗೋಲು, ಮಚ್ಚು ಹಿಡಿದು ಹಿಂಬಾಲಿಸುತ್ತಾರೆ. ಉಡದ ಹಿಂದೆ ಓಡುವುದು ಅಷ್ಟು ಸುಲಭದ ಕೆಲಸವಲ್ಲ ಅನುಭವಿ ಬೇಟೆಗಾರರು ಉಡದ ಹಿಂದೆ ಓಡದೆ ಅದರ ಬದಿಯಲ್ಲಿ ಬೆನ್ನಟ್ಟುತ್ತಾರೆ. ಕಾರಣ ಉಡವು ಓಡುವಾಗ ಇದರ ಕಾಲಿಗೆ ಸಣ್ಣ ಪುಟ್ಟ ಕಲ್ಲುಗಳು ಸಿಕ್ಕು ರಭಸವಾಗಿ ಹಿಂದಕ್ಕೆ ಓಡುತ್ತವೆ. ಆ ಕಲ್ಲುಗಳು ಗುಂಡಿನಂತೆ ಪುಟಿದು ಹಿಂದೆ ಓಡುವವರಿಗೆ ಬಿದ್ದು ಗಾಯ ಮಾಡುವವು ಅಲ್ಲದೆ ಕಲ್ಲಿನ ಚೂರು, ಧೂಳು ಕಣ್ಣಿಗೆ ಬಿದ್ದು ಅವನು ಅದನ್ನು ಸರಿಪಡಿಸಿಕೊಳ್ಳುವ ಒಳಗೆ ಉಡವು ಮಾಯವಾಗಿ ಬಿಡುತ್ತದೆ. ಆದ ಕಾರಣ ಅನುಭವಿಗಳು ಉಡದ ಹಿಂದೆ ಓಡದೆ ಪಕ್ಕದಲ್ಲಿ ಓಡುತ್ತಾರೆ ಆದರೂ ಅದನ್ನು ಹಿಡಿಯಲು ನಾಯಿಗಳ ಸಹಾಯ ಅಗತ್ಯ, ನಾಯಿಗಳು ಉಡವನ್ನು ಬೆನ್ನಟ್ಟಿ ಹೋಗಿ ಹಿಡಿಯುತ್ತವೆ. ಉಡವು ತಾನು ನಿತ್ಯ ಓಡಾಡದ ಜಾಗ ಮತ್ತು ತಾನು ಆಹಾರ ಹುಡುಕುವ ಜಾಗದಲ್ಲಿ ತನ್ನ ನೆಲೆಯನ್ನು ಮಾಡಿಕೊಂಡಿರುತ್ತದೆ. ಅದು ಓಡಿ ಬಂಡೆಯ ಸಂಧಿ, ಹುತ್ತದಲ್ಲಿ ಸೇರಿಕೊಂಡರೆ. ಆ ಜಾಗವನ್ನು ನಾಯಿಗಳು ಗುರುತಿಸಿ ಬೇಟೆಗಾರರು ಬರುವವರೆಗೆ ಅಲ್ಲೇ ಸುತ್ತುತ್ತಿರುತ್ತವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ "ಉಡ ಸಾಮಾನ್ಯವಾಗಿ ಕಲ್ಲಿನ ಇರುಕಿನಲ್ಲಿ ಹೆಚ್ಚು ವಾಸಿಸುತ್ತವೆ. ಕಲ್ಲಿನ ಹೂವುಗಳ ಬಣ್ಣ ಉಡದ ಬಣ್ಣ ಒಂದೇ ಆಗಿರುವುದರಿಂದ ಸರಿಯಾಗಿ ಗಮನವಿಟ್ಟು ನೋಡದಹೊರತು ಇದರ ಇರುವಿಕೆ ಕಾಣಿಸುವುದಿಲ್ಲ"[೫] . ಈಗಾಗಲೇ ಹೇಳಿದಂತೆ ಉಡವು ತಾನು ವಾಸಿಸುವ ಜಾಗದ ಸುತ್ತಮುತ್ತ ಇಂತಹ ಜಾಗವನ್ನು ಗುರುತಿಸಿಕೊಂಡಿರುತ್ತದೆ. ಅದು ಓಡಿ ಇಂತಹ ಜಾಗದಲ್ಲಿ ಅಡಗಿಕೊಂಡರೆ ಅದನ್ನು ಹಿಡಿಯುವುದು ಅಷ್ಟು ಸುಲಭವಲ್ಲ ಆಗ ಬೇಟೆಗಾರರ ಬೇಟೆ ತಂತ್ರ, ಜಾಣ್ಮೆ ಒರಗೆ ಹಚ್ಚಲಾಗುತ್ತದೆ. ಹಟ್ಟಿಯ ಬೇಡರು ಪೂರ್ವಸಿದ್ಧತೆಯೊಂದಿಗೆ ಉಡದ ಬೇಟೆಗೆ ಹೋಗುವುದಾದರೆ ಮಳೆ ಬಂದ ಮಾರನೇಯ ದಿನ ಹೊರಡುತ್ತಾರೆ. ಕಾರಣ ಮಳೆ ಬಂದು ಭೂಮಿಯ ಉಷ್ಣ/ಗಮ್ಮ ಹೆಚ್ಚಾಗಿ ಅದರ ಬಾದೆಗೆ ಉಡಗಳು ತಮ್ಮ ಪೊಟರೆಗಳಿಂದ ಹೊರ ಬರುತ್ತವೆ. ಮತ್ತೊಂದು ಕಾರಣವೆಂದರೆ ಮಳೆ ಬಂದಾಗ ಕ್ರಿಮಿಕೀಟಗಳು ಹೆಚ್ಚಾಗುತ್ತವೆ. ಅವುಗಳನ್ನು ತಿನ್ನಲು ಮತ್ತು ಹಸಿಮಣ್ಣನ್ನು ತಿನ್ನಲು ಉಡಗಳು ಹೊರ ಬರುತ್ತವೆ. ಆದ್ದರಿಂದ ಈ ಸಂದರ್ಭದಲ್ಲಿ ಉಡದ ಬೇಟೆಗೆ ಹೋಗುತ್ತಾರೆ.

ಮೇಲೆ ಹೇಳಿದಂತೆ ಬೇಟೆಗಾರರಿಂದ ತಪ್ಪಿಸಿಕೊಂಡು ಉಡವು ಹುತ್ತ, ಗವಿ, ಪೊಟರೆಗಳಲ್ಲಿ ಸೇರಿಕೊಂಡರೆ ಹಾರೆ, ಈಟಿ ಬರ್ಜಿಗಳಿಂದ ಅಗೆಯುತ್ತಾರೆ, ಅವು ನಿಷ್ಪ್ರಯೋಜನವಾದರೆ ಹುತ್ತಕ್ಕೆ ಅಥವಾ ಪೊಟರೆಗೆ ಹೊಗೆ ಹಾಕುತ್ತಾರೆ. ಆಗ ಒಳಗೆ ಹೊಗೆಗೆ ಉಸಿರು ಕಟ್ಟಿದ ಉಡ ಕಲ್ಲಿನಿಂದ ಹೊರ ಬರುತ್ತದೆ ಈ ಸಮಯವನ್ನು ಕಾಯುತ್ತಿದ್ದ ಬೇಡರು ಕುಡುಗೋಲು, ಮಚ್ಚಿನಿಂದ ಉಡವನ್ನು ಹೊಡೆದು ಸಾಯಿಸುತ್ತಾರೆ. ಒಂದು ವೇಳೆ ಅದು ಉಸಿರಾಡದಂತಹ ಜಾಗದಲ್ಲಿದ್ದು ಬೇಡರಿಗೆ ಕೈಗೆ ಸ್ವಲ್ಪ ಮಾತ್ರ ಸಿಗುವಂತಹ ಸ್ಥಿತಿಯಲ್ಲಿದ್ದಾಗ ಅದನ್ನು ಹಿಡಿಯಲು ಯತ್ನಿಸುತ್ತಾರೆ. ಆಗ ಅದು ಒಂದು ವೇಳೆ ಬಂಡೆಗೆ ಪಟ್ಟು ಹಿಡಿದರೆ ಅದನ್ನು ಹಿಡಿದು ಎಳೆಯುವುದು ಸಾಧ್ಯವಾಗದ ಮಾತು.

ಅದಕ್ಕೆ ಜನಪದರು 'ಉಡ ಪಟ್ಟು ಹಿಡಿದರೆ ಏಳು ಜತೆ ಎತ್ತು ಕಟ್ಟಿ ಎಳೆಸಿದರೂ ಬರುವುದಿಲ್ಲ ಎನ್ನುತ್ತಾರೆ'. ಆದರೆ ಪಟ್ಟು ಹಿಡಿದ ಉಡವನ್ನು ಸಹ ಸರಳವಾಗಿ ಹಿಡಿಯುವ ತಂತ್ರಗಾರಿಕೆ ಇವರಲ್ಲಿದೆ.

ಉಡದ ದೌರ್ಬಲ್ಯವನ್ನು ಅರಿತಿರುವ ಬೇಡರು ಅದು ಬಂಡೆಗೆ ಪಟ್ಟು ಹಿಡಿದಾಗ ಅದರ ಗುದದ್ವಾರಕ್ಕೆ ಅಥವಾ ಮರ್ಮಾಂಗಕ್ಕೆ ಉತ್ತರಾಣಿ ಕಡ್ಡಿಯಿಂದ(ಒಂದು ಬಗೆಯ ಹುಲ್ಲು ಕಡ್ಡಿ) ಅಥವಾ ಈಟಿಯಿಂದ ತಿವಿಯುತ್ತಾರೆ. ಆಗ ಅದು ತನ್ನ ಪಟ್ಟ ಸಡಿಲಿಸುತ್ತದೆ. ಆಗ ಅದರ ಬಾಲವನ್ನು ಅದರ ಬಾಯಿಗೆ, ಕುತ್ತಿಗೆಗೆ ಸೇರಿಸಿ ಕಟ್ಟಿ ಹಿಡಿಯುವರು ಕಾರಣ ಉಡವನ್ನು ಜೀವಂತ ಹಿಡಿದು ತರುವಾಗ ಅದು ತನ್ನ ಬಾಲದಿಂದ ಹೊಡೆಯುತ್ತದೆ ಅದರ ಬಾಲದ ಹೊಡೆತ ಬಾರಿಕೋಲಿನ(ಚಾಟಿಯ) ಏಟಿನಂತೆ ಬೀಳುತ್ತದೆ. ಎನ್ನುತ್ತಾರೆ. ಮತ್ತು ಬಾಯಿಯಿಂದ ಕಚ್ಚುತ್ತದೆ. ಆದ್ದರಿಂದ ಅದರ ಬಾಲವನ್ನು ಸುತ್ತಿ ಮನೆಗೆ ತರುತ್ತಾರೆ. ಉಡದ ಮಾಂಸ ನಾಟಿ ಔಷಧಿಯಾಗಿ ಬಳಕೆಯಾಗುತ್ತದೆ. ಅದರ ತುಪ್ಪವನ್ನು (ನೇಣವನ್ನು/ಕೊಬ್ಬನ್ನು) ಬೇಡರು ಉಡುಮುನೇಯ್ಯಿ ಎನ್ನುತ್ತಾರೆ. ಅದರ ಚರ್ಮದಿಂದ ಸಣ್ಣ ಸಣ್ಣ ಸಂಗೀತ ವಾದ್ಯಗಳನ್ನು ತಯಾರಿಸುತ್ತಾರೆ. ಒಟ್ಟಾರೆಯಾಗಿ ಉಡದ ಬೇಟೆ ಅಷ್ಟು ಸುಲಭವಲ್ಲ, ಉಡದ ಗುಣ, ಸ್ವಭಾವಗಳನ್ನು ಅರಿತ ಬೇಡರು ತಾವು ಪರಂಪರೆಯಿಂದ ಕಲಿತು ರೂಢಿಸಿಕೊಂಡು ಬಂದಿರುವ ಬೇಟೆ ತಂತ್ರಗಳಿಂದ ಹಿಡಿಯುತ್ತಾರೆ.

**ಮೀನಿನ ಬೇಟೆ (ಚಾಪ್ಲುಯಾಟ)**

ಮೊದಲು ಹೆಚ್ಚಾಗಿ ರೂಢಿಯಲ್ಲಿದ್ದ ಮೀನಿನ ಬೇಟೆಯು ಇಂದು ಇವರಲ್ಲಿ ಕಡಿಮೆಯಾಗಿದೆ ಕಾರಣ ಹಟ್ಟಿಯ ಸುತ್ತಮುತ್ತಲಿನ ಜನಿಗೆ ಹಳ್ಳ, ಬಾವಿ, ಕೆರೆಗಳಲ್ಲಿ ನೀರು ಬತ್ತಿ ಹೋಗಿರುವುದು. ಹಟ್ಟಿಯವರೇ ಹೇಳುವಂತೆ ಈ ಹಿಂದೆ ಹಟ್ಟಿಯ ಪಕ್ಕದಲ್ಲಿನ ಜನಿಗೆ ಹಳ್ಳದಲ್ಲಿ ಸಾಕಷ್ಟು ನೀರು ಹರಿಯುತ್ತಿದ್ದು ಬಿಡುವಿನ ವೇಳೆಯಲ್ಲಿ ಹೋಗಿ ಮೀನುಗಳನ್ನು ಹಿಡಿದು ತಂದು ಆಹಾರಕ್ಕೆ ಬಳಸುತ್ತಿದ್ದರು. ಮೀನಿನ ಬೇಟೆಗೆ ಬಲೆ, ಗಾಳ, ಕೊಳೆ ಮುಂತಾದ ಸಲಕರಣೆಗಳನ್ನು ಉಪಯೋಗಿಸುತ್ತಿದ್ದದ್ದು ತಿಳಿದು ಬರುತ್ತದೆ. ಅವರು ಮೀನಿನ ಬೇಟೆಗೆ ಬಳಸುವ ಸಲಕರಣೆಗಳು ಮತ್ತು ಬೇಟೆ ತಂತ್ರಗಳೆಂದರೆ,

ಬಲೆಯ ವಿಧಾನ: ಬೇಡರು ಮೀನು ಬೇಟೆಗೆ ಬಲೆಗಳನ್ನು ಬಳಸುತ್ತಾರೆ. ಸೊಳ್ಳೆಪರದೆಯಂತಿರುವ ಬಲೆಗಳನ್ನು ಬಳಸುತ್ತಾರೆ. ಬಲೆಗಳಲ್ಲಿ ಎರಡು ವಿಧ ೧. ದೊಡ್ಡ ಬಲೆ ೨. ಸಣ್ಣ ಬಲೆ. ಸಣ್ಣ ಬಲೆಯನ್ನು ಎರಡು ಕಡೆ ದೊಡ್ಡ ಕೋಲುಗಳನ್ನು ಕಟ್ಟಿ ಅರ್ಧಚಂದ್ರಾಕಾರದ ಬಲೆಯನ್ನು ಮಾಡಿ ಹಿಡಿಯುತ್ತಾರೆ. ಕೆಲವರು ಹಳ್ಳದಲ್ಲಿ ಒಂದು ಕಡೆಯಿಂದ ಬಲೆಯಿರುವ ಕಡೆಗೆ ನೀರಿನಲ್ಲಿ ಶೋಧಿಸುತ್ತಾ ಬರುತ್ತಾರೆ. ಇಬ್ಬರು ಬಲೆ ಹಿಡಿದುಕೊಂಡರೆ ಉಳಿದವರು ಮಡುವು ಅಥವಾ ಹಳ್ಳದಲ್ಲಿ ಸಪ್ಪಳ ಮಾಡಿಕೊಂಡು ಬಂದು ಒಂದೇ ಸಾರಿ ಎಲ್ಲರೂ ಸೇರಿ ಬಲೆಯನ್ನು ಎತ್ತುತ್ತಾರೆ. ಆಗ ಬಲೆಯಲ್ಲಿ ಬಿದ್ದಿರುವ ಮೀನುಗಳನ್ನು ಒಬ್ಬ ಚೀಲದಲ್ಲಿ ಹಾಕಿಕೊಂಡು ಹಿಡಿದುಕೊಳ್ಳುತ್ತಾನೆ.

ಮತ್ತೊಂದು ವಿಧಾನವೆಂದರೆ ಮೂರು ಅಡಿ ಅಗಲ, ೨೦-೩೦ ಅಡಿ ಉದ್ದವಿರುವ ದೊಡ್ಡ ಬಲೆಯಿದ್ದು ಈ ಬಲೆಯನ್ನು ಆಳವಾದ ನೀರಿನಲ್ಲಿ ಹಾಕುತ್ತಾರೆ. ನೀರಿನಲ್ಲಿ ೨-೩ ಅಡಿ ಎತ್ತರದಲ್ಲಿ

ಬಲೆ ಇದ್ದು ಎರಡು ದಡಗಳಿಗೆ ಕಟ್ಟಿರುತ್ತಾರೆ ಈ ಬಲೆಯಲ್ಲಿ ಸಣ್ಣ, ದೊಡ್ಡ ಗಾತ್ರದ ಮೀನುಗಳು ಬೀಳುತ್ತವೆ. ಇವರು ಸಾಮಾನ್ಯವಾಗಿ ಮೀನಿನ ಬೇಟೆಯನ್ನು ಮಳೆಗಾಲದಲ್ಲಿ ಆಡುತ್ತಾರೆ. ಮಳೆ ಬಿದ್ದು ಕೆರೆ, ಬಾವಿ, ಹಳ್ಳದಲ್ಲಿ ಹೊಸ ನೀರು ಬಂದಾಗ ಮೀನುಗಳು ಮೇಲಕ್ಕೆ ಹತ್ತುತ್ತವೆ. ಆಗ ಸುಲಭವಾಗಿ ದೊರೆಯುತ್ತವೆ ಎಂಬುದು ಅವರ ಬೇಟೆಜ್ಞಾನ. ಬೇಸಿಗೆಯಲ್ಲೂ ಸಹ ಮೀನಿನ ಬೇಟೆ ಆಡುತ್ತಾರೆ. ಬಯಲ-ಸೀಮೆಯಲ್ಲಿ ಕೆರೆ ಕಾಲುವೆಗಳಲ್ಲಿ ಕಂಡು ಬರುವ ಮೀನುಗಳೆಂದರೆ ಬಾಳ, ಚಿತ್ತರೆ, ಮೊಟ್ಟು, ಉಸಗೆ, ತಕ್ಕಡಿ, ಬುರ್ದೆ ಮೊಟ್ಟು, ಗೂದ್ಲೆ ಹೊಟ್ಟುಟ್ಟೆ, ಬುದ್ದುಗ, ಹಾವುಮೀನು ಉಲುಸೆ ಮುಂತಾದವುಗಳು.

**ಬಂಕದ ಬಲೆಯಿಂದ ಬೇಟೆ**

ಹಟ್ಟಿಯ ಬೇಡರು ಈ ಹಿಂದೆ ಹಗರಿ ನದಿಯಲ್ಲಿ ಬಂಕದ ಬಲೆಯಿಂದ ಮೀನುಗಳನ್ನು ಹಿಡಿಯುತ್ತಿದ್ದರು ಎಂದು ಹೇಳುತ್ತಾರೆ. ಇವರು ಸೊಳ್ಳೆಪರದೆಯನ್ನು ವೃತ್ತಾಕಾರದ ಕೋಲುಗಳಿಗೆ ಸುತ್ತಿ ಸೀಮೆಎಣ್ಣೆ ಲಾಳಿಕೆಯ ಹಾಗೆ ಕೋಲುಗಳಿಗೆ ಜೋಡಿಸಲಾಗಿರುತ್ತದೆ. ಕೆಳಗಿನ ಉದ್ದವಾದ ತುದಿಯನ್ನು ಬಟ್ಟೆಯಿಂದ ಗಂಟು ಹಾಕಲಾಗಿರುತ್ತದೆ. ಒಂದು ಕೈಯಿಂದ ಬಂಕದ ಬಲೆಯನ್ನು ಮುಕ್ಕಾಲು ಭಾಗ ನೀರಿನಲ್ಲಿ ಮುಳುಗಿಸಿ ಮತ್ತೊಂದು ಕೈಯಿಂದ ಕೋಲಿನ ಮೂಲಕ ಬಲೆಯ ಕಡೆಗೆ ಮೀನುಗಳನ್ನು ಸೋವಲಾಗುತ್ತದೆ. ನೀರಿನಲ್ಲಿ ಮುಳುಗಿರುವ ಬಲೆಯಲ್ಲಿ ಮೀನುಗಳು ಹೋದಾಗ ಬಲೆಯನ್ನು ಮೇಲೆ ಎತ್ತಿ ಮೀನುಗಳನ್ನು ಗಂಟಿನೊಳಗೆ ಸೇರುವಂತೆ ಮಾಡಲಾಗುತ್ತದೆ. ಹೀಗೆ ೨-೩ ಬಾರಿ ಮಾಡಿ ನಂತರ ಬಂಕದ ಬಲೆಯನ್ನು ನೀರಿನಿಂದ ಹೊರತೆಗೆದು ಗಂಟನ್ನು ಬಿಚ್ಚಿ ನೀರು ತುಂಬಿದ ಪಾತ್ರೆಯಲ್ಲಿ ಮೀನುಗಳನ್ನು ಹಾಕುತ್ತಾರೆ.

ಕೂಳೆ ಹೂಡುವುದು: "ಕುಣಿ ಅಥವಾ ಕೂಳೆಯು ಎಳೆ ಮೀನುಗಳನ್ನು ಹಿಡಿಯುವ ಸಾಧನವಾಗಿದ್ದು ಎರಡು ಅಥವಾ ಮೂರು ಅಡಿ ಉದ್ದವಿರುವ ಬಿದಿರಿನ ಕಡ್ಡಿಗಳಿಂದ ಮತ್ತು ತೆಂಗಿನ ಕಡ್ಡಿಗಳಿಂದ ಇದನ್ನು ತಯಾರಿಸುವರು. ಇದರ ಮೇಲ್ಭಾಗ ಅಗಲವಾಗಿದ್ದು ತೆರೆದುಕೊಂಡಿರುತ್ತದೆ. ಕೆಳಭಾಗ ಚಿಕ್ಕದಾಗಿ ಮುಚ್ಚಿಕೊಂಡಿರುವುದು"[೬]. ಹರಿಯುವ ನೀರಿನಲ್ಲಿ ಮೀನುಗಳು ಹರಿವಿಗೆ ವಿರುದ್ಧವಾಗಿ ಚಲಿಸುತ್ತಿರುತ್ತವೆ ಎಂಬ ತಿಳುವಳಿಕೆ ಇರುವ ಬೇಡರು ನೀರು ಹರಿಯುವ ದಿಕ್ಕಿಗೆ ಅಗಲವಾಗಿರುವ ಕೂಳಿಯ ಮುಂಭಾಗವನ್ನು ಇಟ್ಟು, ಅದರ ಮೂಲಕ ನೀರು ಹರಿಯುವಂತೆ ತಂತ್ರ ರೂಪಿಸುವರು. ಕೂಳಿಯ ಅಕ್ಕ-ಪಕ್ಕದಲ್ಲಿ ಹೋಗುವ ನೀರಿಗೆ ತಡೆಗೋಡೆ ಕಟ್ಟುವರು, ಅದರೊಳಗೆ ಆಗ ಅನಿವಾರ್ಯವಾಗಿ ನೀರು, ಮೀನು ಕೂಳಿಯ ಮೂಲಕ ಹರಿಯಬೇಕಾಗುತ್ತದೆ. ಒಮ್ಮೆ ಮೀನು ಕೂಳಿಯೊಳಗೆ ಹೋದರೆ ಹೊರಗೆ ಬರಲು ಸಾಧ್ಯವಾಗುವುದಿಲ್ಲ ಅಂತಹ ತಂತ್ರರೂಪಿಸಿ ಕೂಳಿಯನ್ನು ತಯಾರಿಸುತ್ತಾರೆ. ಕೂಳೆಯನ್ನು ಮೊಣಕಾಲು ಮಟ್ಟದಲ್ಲಿ ತೆಳುವಾಗಿ ಹರಿಯುವ ನೀರಿನಲ್ಲಿ ಬಳಸಲಾಗುವುದು ವಿಶೇಷವಾಗಿ ಮಳಲೆಕುನ್ನಿ ಎಂಬ ಚಿಕ್ಕ ಮೀನುಗಳನ್ನು ಹಿಡಿಯಲು ಮಾತ್ರ ಈ ವಿಧಾನವನ್ನು ಬಳಸುವರು. ಈ ಬೇಟ ವಿಧಾನವನ್ನು ಇತ್ತೀಚೆಗೆ ಹಟ್ಟಿಯಲ್ಲಿ ಯಾರೂ ಬಳಸುತ್ತಿಲ್ಲ.

**ಕಳ್ಳಿ ಅಥವಾ ನೊರೆಬರುವ ಕಾಯಿ ಬಳಸಿ ಬೇಟೆ**

ಸಣ್ಣ ಪುಟ್ಟ ಮಡುವುಗಳಲ್ಲಿನ ಮೀನುಗಳನ್ನು ಹಿಡಿಯಲು ಇವರು ಸುಲಭ ಉಪಾಯವನ್ನು ಮಾಡುತ್ತಾರೆ. ಮಳೆಗಾಲದಲ್ಲಿ ಮಡುವುಗಳು/ಗುಂಡಿಗಳು ತುಂಬಿದ್ದು ಅವುಗಳಲ್ಲಿನ ಮೀನುಗಳನ್ನು ಹಿಡಿಯಲು ಸೋಪಿನಂತೆ ನೊರೆ ಬರುವ ಕಾಯಿಯನ್ನು ಚೆನ್ನಾಗಿ ಜಜ್ಜಿ ಮೀನು ಹಿಡಿಯಬೇಕಾಗಿರುವ ಮಡುವಿನಲ್ಲಿ ರಾತ್ರಿ ಹೋಗಿ ಬೆರಸಿ ಬರುತ್ತಾರೆ. ಮುಂಜಾನೆ ಹೋಗಿ ನೋಡಿದರೆ ಮೀನುಗಳೆಲ್ಲಾ ಸತ್ತು ತೇಲುತ್ತಿರುತ್ತವೆ ಅವುಗಳನ್ನು ಸಂಗ್ರಹಿಸಿ ತರುತ್ತಾರೆ. ಕಳ್ಳಿಗಿಡದ ಹಾಲು, ಕತ್ತಾಳೆಗಿಡದ ರಸವನ್ನು ಸಹ ಈ ವಿಧಾನದಲ್ಲಿ ಬಳಸುತ್ತಾರೆ. ಇದರಿಂದ ಗುಂಡಿಯಲ್ಲಿನ ನೀರು ವಿಷವಾಗಿ ಅದರಲ್ಲಿನ ಮೀನುಗಳು ಸಾಯುತ್ತವೆ. ಅವುಗಳನ್ನು ತಂದು ತಿನ್ನುವಾಗ ಮಾತ್ರ ಬೇಡರು ಎಚ್ಚರವಹಿಸುತ್ತಾರೆ ಕಾರಣ ಅವುಗಳು ವಿಷಪೂರಿತವಾಗಿರುವುದರಿಂದ ಅವುಗಳ ಹೊಟ್ಟೆಯೊಳಗಿನ ಎಲ್ಲಾ ಅಂಶವನ್ನು ತೆಗೆದುಹಾಕಿ ಉಳಿದ ಭಾಗವನ್ನು ಅಡುಗೆ ಮಾಡಿ ಊಟ ಮಾಡುತ್ತಾರೆ.

**ಗಾಳ ಹಾಕಿ ಬೇಟೆ**

ಗಾಳ ಹಾಕಿ ಮೀನು ಬೇಟೆಯಾಡುವ ಪದ್ಧತಿ ಸಾಮಾನ್ಯವಾಗಿ ಎಲ್ಲಾ ಕಡೆ ಕಂಡುಬರುತ್ತದೆ ಗಾಳವನ್ನು 'ಗಾಣ' ಎಂತಲೂ ಕರೆಯುತ್ತಾರೆ. "ಗಾಳ ಎಂದರೆ ಉದ್ದವಾದ ಒಂದು ಕೋಲಿಗೆ ದಾರಕಟ್ಟಿ ಅದರ ಕೊನೆಗೆ ಪಿನ್ನಿನಂತಿರುವ ತಂತಿಯ ಕೊಂಡಿಯ ತುದಿಗೆ ಎರೆಹುಳುವನ್ನು ಸಿಕ್ಕಿಸಿ ಮೀನಿನ ಬಾಯಿಗೆ ಒಡ್ಡುತ್ತಾರೆ"[೬]. ಎರೆಹುಳುವನ್ನು ಜನಪದರು ಗಾಣದ ಹುಳ ಎಂದೂ ಸಹ ಕರೆಯುತ್ತಾರೆ. ಗಾಳಕ್ಕೆ ಹುಳ ಏರಿಸಿ ನೀರಿನಲ್ಲಿ ಬಿಡುತ್ತಾರೆ ಗಾಣದ ಹುಳವನ್ನು ತಿನ್ನಲು ಬಂದ ಮೀನು ಗಬಕ್ಕನೆ ಅದನ್ನು ನುಂಗುತ್ತದೆ ಆಗ ಕೊಂಡಿಯಾಕಾರದ ಗಾಣದ ಮುಳ್ಳು ಮೀನಿನ ಗಂಟಲಲ್ಲಿ ಸಿಕ್ಕಿಕೊಂಡು ಒದ್ದಾಡುತ್ತದೆ ಆಗ ಗಾಳದ ಕೋಲು ಹಿಡಿದು ದಂಡೆಯ ಮೇಲಿರುವ ಬೇಟೆಗಾರ ಗಾಳವನ್ನು ಜೋರಾಗಿ ಎತ್ತುತ್ತಾನೆ. ಆಗ ಗಾಣಕ್ಕೆ ಸಿಕ್ಕ ಮೀನು ದಂಡೆಗೆ ಬಂದು ಬೀಳುತ್ತದೆ. ಅದನ್ನು ಹಿಡಿದುಕೊಂಡು ಚೀಲದಲ್ಲಿ ಹಾಕಿಕೊಂಡು ಮತ್ತೆ ಅದೆಪದ್ಧತಿ ಮುಂದುವರೆಸಿ ಎಷ್ಟು ಸಾಧ್ಯವೋ ಅಷ್ಟು ಮೀನು ಹಿಡಿಯುತ್ತಾನೆ. ಆದರೆ ಈ ಗಾಣದ ಬೇಟೆಗೆ ಬೇಟೆಗಾರನಿಗೆ ಹೆಚ್ಚಿನ ತಾಳ್ಮೆ ಬೇಕಾಗುತ್ತದೆ. ಕೆಲವೊಮ್ಮೆ ಮೀನುಗಳು ಸೂಕ್ಷ್ಮತೆಯನ್ನು ಗಮನಿಸಿ ಬೇಗನೆ ಗಾಣವನ್ನು ಕಚ್ಚುವುದಾಗಲಿ ನುಂಗುವುದಾಗಲಿ ಮಾಡುವುದಿಲ್ಲ. ಕಂಪಳದೇವರ ಹಟ್ಟಿಯ ಬೇಡರು ಈ ಎಲ್ಲಾ ಬೇಟೆ ತಂತ್ರಗಳನ್ನು ಬಳಸಿ ಮೀನಿನ ಬೇಟೆಯನ್ನು ಮಾಡುತ್ತಾರೆ.

**ಜಿಂಕೆ (ಚಿಗರೆ) ಬೇಟೆ**

ಒಂದು ಕಾಲಕ್ಕೆ ಬೇಡರಿಗೆ ಪ್ರತಿಷ್ಠೆಯ ಬೇಟೆಯಾಗಿದ್ದ ಚಿಗರಿ ಬೇಟೆಯು ಇಂದು ಕಣ್ಮರೆಯಾಗಿದೆ. ಈ ಹಿಂದೆ ಕಂಪಳದೇವರ ಹಟ್ಟಿಯ ಸುತ್ತಮುತ್ತಲ ಕಮರನ ಕಾವಲಿನಲ್ಲಿ ಜಿಂಕೆಗಳು ಹೆಚ್ಚಾಗಿದ್ದು ಅವುಗಳನ್ನು ಭರ್ಚಿ, ಕೊಡಲಿ, ಬಲೆ, ಬೇಟೆನಾಯಿಗಳ ಸಹಾಯದಿಂದ ಬೇಟೆಯಾಡುತ್ತಿದ್ದರು. ಆದರೆ ಇತ್ತೀಚೆಗೆ ಜಿಂಕೆ ಬೇಟೆಯನ್ನು ಸಂಪೂರ್ಣ ಬಿಟ್ಟಿರುವುದಾಗಿ ಹೇಳುತ್ತಾರೆ. ಹಿಂದಿನವರು

ಜಿಂಕೆಯನ್ನು ಬೇಟೆಯಾಡಿ ಅದರ ಮಾಂಸವನ್ನು ತಿನ್ನುತ್ತಿದ್ದರು ಮತ್ತು ಜಿಂಕೆಯ ಕೊಡುಗಳನ್ನು ಪ್ರತಿಷ್ಠೆಗಾಗಿ ಮನೆಗಳ ಜಂತೆ, ಬಾಗಿಲ ಮೇಲೆ ಇಡುತ್ತಿದ್ದರು ಈಗಲೂ ಸಹ ಕೆಲವರ ಮನೆಗಳಲ್ಲಿ ಜಿಂಕೆಯ ಕೊಂಬುಗಳನ್ನು ಕಾಣಬಹುದಾಗಿದೆ. ಹಟ್ಟಿಯ ಜನರು ಕುರಿ ಮೇಯಿಸಲು ಅಥವಾ ದನಕರು ಕಾಯಲು ಹೋದಾಗ ಕೆಲವೊಮ್ಮೆ ಜಿಂಕೆಯ ಮರಿಗಳು ಸಿಕ್ಕಿರುವ ಉದಾಹರಣೆಗಳಿವೆ. ಅವುಗಳನ್ನು ತಂದು ಸಾಕಿಕೊಂಡು ಕೊನೆಗೆ ಅವುಗಳ ಮಾಂಸ ಸೇವಿಸಿರುವುದು ತಿಳಿದು ಬರುತ್ತದೆ. ಪ್ರಸ್ತುತ ದಿನಗಳಲ್ಲಿ ಕಂಪಳದೇವರ ಹಟ್ಟಿಯ ಬೇಡರು ಜಿಂಕೆಯ ಬೇಟೆಯನ್ನು ಆಡುತ್ತಿಲ್ಲ. ಜಿಂಕೆ ಬೇಟೆಯನ್ನು ತೆಲುಗಿನಲ್ಲಿ ಜಿಂಕಲಯಾಟ ಎನ್ನುತ್ತಾರೆ.

**ಹಂದಿ ಬೇಟೆ**

ಹಂದಿಬೇಟೆಯನ್ನು ಬೇಡರು ತಮ್ಮ ಕಂದೆಲಗು ಭಾಷೆಯಲ್ಲಿ ಪಂದಿಯಾಟಮು ಎಂದು ಹೇಳುತ್ತಾರೆ. ಬೇಡರಲ್ಲಿ ಹಂದಿ ಬೇಟೆಯು ಇಂದು ಆಚರಣೆಗಳಲ್ಲಿ ಉಳಿದುಕೊಂಡು ಬಂದಿದೆ. ಮೊಲದ ಬೇಟಿಯು ಚುರುಕುತನಕ್ಕೆ ನಿದರ್ಶನವಾದರೆ ಹಂದಿ ಬೇಟೆಯು ಎದೆಗಾರಿಕೆಗೆ ನಿದರ್ಶನವಾದುದು. ಹಂದಿಯನ್ನು ಒಬ್ಬರು ಇಬ್ಬರು ಸೇರಿ ಬೇಟೆಯಾಡಲಾಗದು. ಗುಂಪುಗೂಡಿ ಶಸ್ತ್ರಾಸ್ತ್ರಗಳೊಂದಿಗೆ, ಬೇಟೆ ನಾಯಿಗಳೊಂದಿಗೆ ಬೇಟೆಗಾರರ ಗುಂಪೇ ಹೋಗಬೇಕಾಗುತ್ತದೆ. ಹಟ್ಟಿಯಲ್ಲಿ ಕೇವಲ ಯುಗಾದಿ ಹಬ್ಬದ ಆಚರಣೆಯ ಸಂದರ್ಭದಲ್ಲಿ ಮಾತ್ರ ಹಂದಿಬೇಟೆಯನ್ನು ಕಾಣಬಹುದು. ಹಂದಿಯನ್ನು ಬೆನ್ನಟ್ಟಿ ಭರ್ಚಿಯಿಂದ ಕೊಲ್ಲುವ, ಬಲೆಯಿಂದ ಹಿಡಿಯುವ ಮುಂತಾದ ವಿಧಾನಗಳಿಂದ ತಂತ್ರಗಾರಿಕೆಯಿಂದ ಬೇಟೆಯಾಡುತ್ತಾರೆ. ಹಟ್ಟಿಯ ಬೇಡರು ಈ ಹಿಂದೆ ಹಂದಿಯನ್ನು ತಿನ್ನುವ ಪದ್ಧತಿ ಇರಲಿಲ್ಲ. ಇತ್ತೀಚೆಗೆ ಹಂದಿಯ ಮಾಂಸ ಪೌಷ್ಟಿಕ ಆಹಾರವೆಂದು ತಿಳಿದು ಹಂದಿಯನ್ನು ತಿನ್ನಲು ಪ್ರಾರಂಭಿಸಿದ್ದಾರೆ. "ಕೋಟಿ ಕೊಟ್ಟಾದರೂ ಗೊಟಿ ತಿನ್ನು". ಎಂಬ ಜನಪದರ ಮಾತಿನಂತೆ ಇಂದು ಹಂದಿಯ ಮಾಂಸಕ್ಕೆ ವಿಶೇಷ ಬೇಡಿಕೆ ಇದೆ.

**ಭರ್ಚಿ ಬೇಟೆ**

ಹಟ್ಟಿಯ ಬೇಡರೆಲ್ಲರೂ ಯುಗಾದಿಯಲ್ಲಿ ದೇವರ ಗುಡಿಯ ಹತ್ತಿರ ಸೇರಿ ಭರ್ಚಿ, ಕೊಡಲಿ, ಗಂಡುಗೊಡಲಿ, ಕುಡಗೋಲು, ಬಲೆ ಮುಂತಾದ ಆಯುಧಗಳು ಮತ್ತು ಬೇಟೆ ನಾಯಿಗಳೊಂದಿಗೆ ಸೇರಿ ದೇವರಿಗೆ ಪೂಜೆ ಮಾಡಿ ಒಟ್ಟಾಗಿ ಬೇಟೆಗೆ ಹೋಗುತ್ತಾರೆ ಹಂದಿ ಇರುವ ಜಾಗವನ್ನು ಪತ್ತೆ ಹಚ್ಚಿ ಯಾವುದಾದರೂ ಒಂದು ದಿಕ್ಕಿನಲ್ಲಿ ಕೆಲವರು ಭರ್ಚಿ ಹಿಡಿದು ಮರವೇರಿ ಕುಳಿತಿರುತ್ತಾರೆ. ಉಳಿದವರು ಹಂದಿ ಇರುವ ಜಾಗವನ್ನು ಸುತ್ತುವರಿದು ಗಲಾಟೆ ಮಾಡುತ್ತಾ ಸೋವುತ್ತಾ ಬರುತ್ತಾರೆ. ಆಗ ಹಂದಿಯು ಗಲಾಟೆ ಇಲ್ಲದ ಕಡೆ ಓಡಲು ಪ್ರಾರಂಭಿಸುತ್ತದೆ. ಅಲ್ಲಿ ಮರಗಳ ಮೇಲೆ ಅವಿತಿರುವ ಅನುಭವಿ ಬೇಟೆಗಾರರು ಭರ್ಚಿಯನ್ನು ಎಸೆದು ಹಂದಿಯನ್ನು ಕೊಲ್ಲುತ್ತಾನೆ. ಆದರೆ ಇದು ಅಷ್ಟು ಸುಲಭವಾದ ಕೆಲಸವಲ್ಲ. ಕೆಲವೊಮ್ಮೆ ಹಂದಿಯನ್ನು ಬೆನ್ನಟ್ಟಿ ಭರ್ಚಿ, ಈಟಿಯಿಂದ ಕೊಲ್ಲುತ್ತಾರೆ.

**ಬಲೆಯ ಬೇಟೆ ವಿಧಾನ**

ಹಂದಿಯನ್ನು ಬಲೆಯಿಲ್ಲದೆ ಹಾಗೇ ಬೇಟೆಯಾಡುವುದು ತುಂಬಾ ಕಷ್ಟ. ಹಾಗಾಗಿ ಬಲೆಯನ್ನು ಬಳಸಿ ಹಂದಿಯ ಬೇಟೆಯನ್ನು ಆಡುತ್ತಾರೆ. ಹಂದಿಯ ಬಲೆಯನ್ನು ಬಲಿಷ್ಟವಾದ ದಾರಗಳಿಂದ ನೇಯಲಾಗಿರುತ್ತದೆ. ಬೇಡರು ಹಂದಿ ಬೇಟೆಗೆ ಹೋದ ಸಂದರ್ಭದಲ್ಲಿ ಒಂದು ಇಕ್ಕಟ್ಟಾದ ಸ್ಥಳದಲ್ಲಿ ಈ ಬಲೆಯನ್ನು ಒಡ್ಡುತ್ತಾರೆ ಅಣತಿ ದೂರ ಬಲೆಯ ಎರಡೂ ಬದಿಗಳನ್ನು ಬಲಿಷ್ಠವಾಗಿ ಗಟ್ಟಿಯಿರುವ ಗಿಡ ಅಥವಾ ಮರಗಳಿಗೆ ಕಟ್ಟುತ್ತಾರೆ. ಅಕ್ಕ-ಪಕ್ಕ ಬಲೆಯ ಮೇಲೆ ದೊಡ್ಡ ಗುಂಡುಗಳನ್ನು ಹೇರುತ್ತಾರೆ. ಕಾರಣ ಹಂದಿಯು ಬಲಿಷ್ಠವಾದ ಪ್ರಾಣಿ ಅದು ಬಲೆಯನ್ನು ನುಗ್ಗಿ ಕಿತ್ತುಕೊಂಡು ಹೋಗುವ ಸಾಧ್ಯತೆ ಇರುತ್ತದೆ. ಆದ್ದರಿಂದ ಒಳ್ಳೆಯ ಆಯಕಟ್ಟಿನ ಸ್ಥಳದಲ್ಲಿ ಗಟ್ಟಿಯಾಗಿ ಬಲೆ ಹಾಕಿ ಅಕ್ಕ-ಪಕ್ಕ ಒಂದಿಬ್ಬರು ಅವಿತು ಕುಳಿತುಕೊಂಡಿರುತ್ತಾರೆ ಉಳಿದ ಬೇಟೆಗಾರರು, ಕಾಡಿನ ಇನ್ನೊಂದು ದಿಕ್ಕಿನಿಂದ ಬಲೆ ಇರುವ ದಿಕ್ಕಿನ ಕಡೆ ಸೋವುತ್ತಾ ಸೋವುತ್ತಾ ಗಲಾಟೆ ಮಾಡುತ್ತಾ ಬರುತ್ತಾರೆ ಹೀಗೆ ಮಾಡುವುದರಿಂದ ಗದ್ದಲಕ್ಕೆ ಹೆದರಿದ ಹಂದಿಯು ಆ ಆಯಕಟ್ಟಿನ ಜಾಗದಲ್ಲಿ ಓಡಲು ಮುಂದಾಗಿ ಬಲೆಯಲ್ಲಿ ಬೀಳುತ್ತದೆ. ಆಗ ತಕ್ಷಣ ಅಲ್ಲೇ ಅವಿತು ಕುಳಿತಿದ್ದ ಬೇಡರು ಭರ್ಜಿಯಿಂದ ತಿವಿದು ಅಥವಾ ಗಂಡುಗೊಡಲಿಯಿಂದ ಕಡಿದು ಹಂದಿಯನ್ನು ಕೊಲ್ಲುತ್ತಾರೆ.

**ಮದ್ದು ಮಾಡುವ ಬೇಟೆ ವಿಧಾನ**

ಹಂದಿಗಳನ್ನು ಗುಂಪುಗೂಡಿ ಬೇಟೆಯಾಡುವುದಲ್ಲದೇ ಸುಲಭವಾಗಿಯೂ ಸಹ ಮದ್ದು ಇಡುವ ಮೂಲಕ ಬೇಟೆಯಾಡುತ್ತಾರೆ. ಹಟ್ಟಿಯ ಜನರು ತಮ್ಮ ಹೊಲಗದ್ದೆಗಳಿಗೆ ದಾಳಿ ಮಾಡುವ ಹಂದಿಗಳನ್ನು ನಿಯಂತ್ರಿಸಲು ಅಥವಾ ಆಹಾರಕ್ಕಾಗಿ ಹಂದಿಯನ್ನು ಬೇಟೆಯಾಡಲು ಸಹ ಮದ್ದು ವಿಧಾನವನ್ನು ಬಳಸುತ್ತಾರೆ. ಬೇಡರು ಪ್ರಾಣಿಗಳ ಚಟುವಟಿಕೆಯನ್ನು ಚೆನ್ನಾಗಿ ಅರಿತವರಾಗಿದ್ದಾರೆ. ಯಾವ ಪ್ರಾಣಿ ಯಾವಾಗ ಚಟುವಟಿಕೆಯಿಂದ ಇರುತ್ತದೆ. ಯಾವಾಗ ಹೊರಗೆ ಬರುತ್ತದೆ. ಯಾವ ಆಹಾರ ಸೇವಿಸುತ್ತದೆ ಯಾವಾಗ ದಷ್ಟ-ಪುಷ್ಟವಾಗಿ ಬೆಳೆದಿರುತ್ತದೆ ಎಂಬ ಅಂಶಗಳನ್ನು ಬಲ್ಲವರಾಗಿರುತ್ತಾರೆ ಅಂತೆಯೇ ಹಟ್ಟಿಯ ಜನಪದರು ತಮ್ಮ ಪೈರನ್ನು ಹಾಳು ಮಾಡುವ ಹಂದಿಯನ್ನು ಕೊಲ್ಲಲು ಅದರ ದೌರ್ಬಲ್ಯವನ್ನು ಅರಿತು ಬೇಟೆಯಾಡುವರು. ಹಂದಿಗೆ ಮೂಗು ತುಂಬಾ ಸೂಕ್ಷ್ಮ ದೂರದಿಂದಲೇ ಇತರ ಪ್ರಾಣಿಗಳ, ಮನುಷ್ಯರ ವಾಸನೆಯನ್ನು ಗ್ರಹಿಸುತ್ತದೆ. ಹಂದಿಯ ಈ ಚುರುಕುತನವನ್ನೇ ಬಳಸಿಕೊಂಡು ಅದನ್ನು ಬೇಟೆಯಾಡುವ ಚಾಣಾಕ್ಷತೆ ಬೇಡರಲ್ಲಿದೆ. ಇವರು ಹಂದಿಗಳು ಓಡಾಡುವ ಸ್ಥಳಗಳಲ್ಲಿ ಕುರಿ, ಮೇಕೆಯ ಕರುಳುಗಳಿಗೆ ಸಿಡಿಮದ್ದು ಸೇರಿಸಿ ಉಂಡೆಕಟ್ಟಿ ಕಾಣದಂತೆ ಗಿಡದ ಬುಡದಲ್ಲಿ ಇಟ್ಟಿರುತ್ತಾರೆ. ಹಂದಿಗೆ ಕುರಿಯ ಕರುಳು ಎಂದರೆ ತುಂಬಾ ಇಷ್ಟ ಅದರ ವಾಸನೆಯನ್ನು ಗ್ರಹಿಸಿದ ಹಂದಿಯು ಆಸೆಯಿಂದ ಬಂದು ಮದ್ದು ಮಿಶ್ರಿತ ಕರುಳಿನ ಉಂಡೆಯನ್ನು ಗಬಗಬನೆ ತಿನ್ನುತ್ತದೆ ಆಗ ತಕ್ಷಣವೇ ಮದ್ದು ಸಿಡಿದು ಹಂದಿಯ ಬಾಯಿ, ತಲೆ ಸಿಡಿದು ಹಂದಿ ಸ್ಥಳದಲ್ಲಿ ಸಾಯುತ್ತದೆ. ಮಾವಿನ ವಾಟೆಯಲ್ಲೂ ಸಹ ಮದ್ದು ಸೇರಿಸಿ ಇಡುತ್ತಾರೆ. ಮಾವಿನ ವಾಟೆಯೂ ಸಹ

ಹಂದಿಗೆ ಪ್ರಿಯವಾದುದು. ಮದ್ದು ಕಡಿದು ಸತ್ತ ಹಂದಿಯನ್ನು ಮರುದಿನ ಮುಂಜಾನೆ ಬಂದು ಎತ್ತಿಕೊಂಡು ಹೋಗುತ್ತಾರೆ ಒಂದು ವೇಳೆ ಹಂದಿಯು ಮದ್ದು ಕಡಿದು ಸಿಡಿಮದ್ದು ಸಿಡಿದು ಅಲ್ಲೇ ಸಾಯದೆ ಬೇರೆ ಕಡೆ ಹೋಗಿದ್ದರೆ ಮರುದಿನ ಬೇಡರು ಹಂದಿಯ ರಕ್ತಸ್ರಾವದ ಜಾಡು ಹಿಡಿದು ಹೋಗುವವರು ಒಂದು ವೇಳೆ ಇನ್ನು ಹಂದಿ ಬದುಕಿದ್ದರೆ ಭರ್ಚಿಯಿಂದ ತಿವಿದು ಕೊಂದು ತರುತ್ತಾರೆ. ಇತ್ತೀಚಿನ ದಿನಗಳಲ್ಲಿ ಹಟ್ಟಿಯ ಬೇಡರಲ್ಲಿ ಹಂದಿ ಬೇಟೆಯು ಕೇವಲ ಒಂದು ಸಾಂಪ್ರದಾಯಿಕ ಆಚರಣೆಯಾಗಿ ಮಾತ್ರ ಉಳಿದುಕೊಂಡು ಬಂದಿದೆ.

**ಮುಳ್ಳು ಹಂದಿ ಬೇಟೆ**

ಮುಳ್ಳು ಹಂದಿ ಬೇಟೆಯನ್ನು ಇವರ ಭಾಷೆಯಲ್ಲಿ ಏದುಮುಯಾಟ ಎನ್ನುತ್ತಾರೆ. ಮುಳ್ಳುಹಂದಿಯನ್ನು ಮ್ಯಾಸಬೇಡರ ಕಂದೆಲುಗು ಭಾಷೆಯಲ್ಲಿ 'ಏದುಮು' ಎನ್ನಲಾಗುತ್ತದೆ. ಮುಳ್ಳಂದಿಯು ಹೆಗ್ಗಣದ ಆಕಾರದಲ್ಲಿರುತ್ತದೆ. ಮೈ ತುಂಬಾ ಮುಳ್ಳುಗಳನ್ನು ಹೊಂದಿರುತ್ತದೆ. ದೈವದತ್ತವಾಗಿ ಬಂದಿರುವ ಮುಳ್ಳುಗಳಿಂದ ತನ್ನನ್ನು ರಕ್ಷಣೆ ಮಾಡಿಕೊಳ್ಳುತ್ತದೆ. ತನ್ನ ಮೈಯನ್ನು ಶತ್ರುವಿನ ಕಡೆಗೆ ಕೊಡವುತ್ತದೆ. ಹೀಗೆ ಮಾಡಿದಾಗ ಅದರ ಮೈಯಲ್ಲಿರುವ ಮುಳ್ಳುಗಳು ಬಾಣದಂತೆ ದಿಕ್ಕು ದಿಕ್ಕಿಗೆ ಪಸರಿಸಿ ಬೇಟೆಗಾರರ, ಇತರರ ಮೈಗೆಲ್ಲಾ ಚುಚ್ಚಿಕೊಳ್ಳುತ್ತವೆ. ಹೀಗೆ ಮುಳ್ಳುಹಂದಿಯ ಮುಳ್ಳುಗಳಿಂದ ಗಾಯಗೊಂಡ ಪ್ರಾಣಿಗಳು ಅಥವಾ ಮನುಷ್ಯ ನಂಜಿನಿಂದ ಊದಿಕೊಂಡು ಕಷ್ಟಪಡುತ್ತಾನೆ. ಇಂತಹ ಅಪಾಯದ ಪ್ರಾಣಿಯನ್ನು ಸಹ ಬೇಡರು ಚಾಣಾಕ್ಷತೆಯಿಂದ ಬೇಟೆಯಾಡುವ ಜ್ಞಾನವನ್ನು ಪರಂಪರೆಯಿಂದ ಕಲಿತುಕೊಂಡು ಬಂದಿದ್ದಾರೆ. ಮುಳ್ಳು ಹಂದಿಯು ಮೈಯೆಲ್ಲಾ ಮುಳ್ಳಿನಿಂದ ಕೂಡಿದ ಗಟ್ಟಿಯಾದ ಚಿಪ್ಪನ್ನು ಹೊಂದಿರುತ್ತದೆ. ಆದರೆ ಅದರ ತಲೆಯು ತುಂಬಾ ಸೂಕ್ಷ್ಮ ಮತ್ತು ಚಿಕ್ಕದು ಇದನ್ನು ಅರಿತ ಬೇಟೆಗಾರರು ಅದರ ತಲೆಯನ್ನು ಹೊಡೆದು ಬೇಟೆಯಾಡುತ್ತಾರೆ. ಇಲ್ಲವಾದರೆ ಮುಳ್ಳ ಹಂದಿಯನ್ನು ಹೊಡೆಯಲಾಗದು ಅದು ಅಪಾಯದ ಸೂಚನೆ ಅರಿತೊಡನೆ ತನ್ನ ತಲೆಯನ್ನು ಚಿಪ್ಪಿನಲ್ಲಿ ಸೇರಿಸಿಕೊಂಡು ಬಿಡುತ್ತದೆ. ಆಗ ಬೇಟೆಗಾರರು ಎಷ್ಟೇ ಜೋರಾಗಿ ಹೊಡೆದರೂ, ದೊಡ್ಡ ದೊಡ್ಡ ಕಲ್ಲುಗಳನ್ನು ಅದರ ಮೇಲೆ ಜೋರಾಗಿ ಹಾಕಿದರೂ ಅದು ಸಾಯುವುದಿಲ್ಲ. ಮುಳ್ಳುಹಂದಿಯು ಅಪಾಯದ ಸಂದರ್ಭದಲ್ಲಿ ತಲೆಯನ್ನು ಚಿಪ್ಪಿನಲ್ಲಿ ಸೇರಿಸಿಕೊಂಡು ಉಸಿರು ಕಟ್ಟಿಕೊಳ್ಳುವ ಮೂಲಕ ತನ್ನನ್ನು ರಕ್ಷಿಸಿಕೊಳ್ಳುವುದರ ಜೊತೆಗೆ ತನ್ನ ಗಟ್ಟಿಯಾದ ಚೂಪಾದ ಮುಳ್ಳುಗಳನ್ನು ಬಾಣದಂತೆ ಮನುಷ್ಯರ ಅಥವಾ ಇತರ ಪ್ರಾಣಿಗಳ ಮೇಲೆ ಬಿಡುತ್ತಾ ತನ್ನನ್ನು ರಕ್ಷಿಸಿಕೊಳ್ಳುತ್ತದೆ. ಆದರೆ ಬೇಡರು ಮಾತ್ರ ಅದನ್ನು ಚಾಣಾಕ್ಷತನದಿಂದ ಬೇಟೆಯಾಡಿಯೇ ಆಡುತ್ತಾರೆ.

ಮುಳ್ಳುಹಂದಿಯ ತಲೆ ಮೆತ್ತಗಿರುವುದನ್ನು ತಿಳಿದ ಬೇಡರು ಅದರ ತಲೆಗೆ ಹೊಡೆದು ಸಾಯಿಸುತ್ತಾರೆ. ಮುಳ್ಳಹಂದಿಗೆ ಸಂಬಂಧಿಸಿದಂತೆ ಒಂದು ಮಾತು ಹೀಗಿದೆ 'ಮುಳ್ಳುಹಂದಿ(ಏದುಮು) ಹತ್ತಿ ಮರದ ಕೆಳಗೆ ಹೋಗುವುದಿಲ್ಲ ಕಾರಣ ಹತ್ತಿ ಹಣ್ಣು ಅದರ ತಲೆಗೆ ಬಿದ್ದರೆ ಸಾಕು ಅದು ಸಾಯುತ್ತದೆ'. ಇದರ ಜೀವ ಅದರ ತಲೆಯಲ್ಲೇ ಅಡಗಿದೆ ಎಂಬ ತಿಳುವಳಿಕೆ ಬೇಡರದ್ದು. ಬೇಟೆನಾಯಿ ಮತ್ತು

ಬೇಡರು ಮುಳ್ಳಹಂದಿಯನ್ನು ಇಕ್ಕಾಟ್ಟಾದ ಜಾಗದಲ್ಲಿ ತರುಬಿಕೊಂಡು ಅದು ತಲೆ ಹೊರಗೆ ಹಾಕುವವರೆಗೆ ಕಾದು ಕುಳಿತು ಅದಕ್ಕೆ ಅರಿವಾಗದಂತೆ ಉದ್ದವಾದ ದೊಣ್ಣೆಯಿಂದ ಹೊಡೆದು ಸಾಯಿಸುತ್ತಾರೆ. ಇದನ್ನು ಕಾಡಿನಲ್ಲೇ ಸುಟ್ಟು ಮುಳ್ಳುಗಳನ್ನೆಲ್ಲಾ ತೆಗೆದು ಚಿಪ್ಪನ್ನು ಬಿಡಿಸಿ ಅದರ ಮಾಂಸವನ್ನು ಮಾತ್ರ ಮನೆಗೆ ತರುತ್ತಾರೆ. ಮಾಟ ಮಂತ್ರ ಮಾಡಲು ಇದರ ಮುಳ್ಳುಗಳನ್ನು ಬಳಸುತ್ತಾರೆ. ಮತ್ತು ಇದರ ಮುಳ್ಳನ್ನು ತಂದು ತಮಗೆ ಆಗದವರ(ಶತ್ರುಗಳ) ಮನೆಯ ಸೂರಿನಲ್ಲಿ ಅವರಿಗೆ ತಿಳಿಯದಂತೆ ಇಟ್ಟರೆ ಅವರ ಮನೆಯಲ್ಲಿ ಪ್ರತಿನಿತ್ಯ ಜಗಳಗಳು ನಡೆಯುತ್ತವೆ. ಎಂಬ ನಂಬಿಕೆ ಇವರಲ್ಲಿದೆ, ಆದ್ದರಿಂದ ಅದರ ಮುಳ್ಳು ಮತ್ತು ಚಿಪ್ಪನ್ನು ಕಾಡಿನಲ್ಲೇ ಸುಟ್ಟು ಮಾಂಸವನ್ನು ಮಾತ್ರ ಮನೆಗೆ ತರುತ್ತಾರೆ.

**೩.೧.೨ ಪಕ್ಷಿ ಬೇಟೆ**

ಬೇಡರು ಕೇವಲ ಪ್ರಾಣಿಗಳನ್ನು ಮಾತ್ರ ಬೇಟೆಯಾಡುವುದಿಲ್ಲ, ಪಕ್ಷಿಗಳನ್ನು ಸಹ ಬೇಟೆಯಾಡುವ ತಂತ್ರಗಾರಿಕೆಯನ್ನು ಹೊಂದಿದ್ದಾರೆ. ಪ್ರಾಣಿ ಬಲಿಷ್ಠವಾದುವು, ಚುರುಕಾದವು, ಕೆಲವು ಅಪಾಯಕಾರಿಯಾದವು ಹಾಗಾಗಿ ಪ್ರಾಣಿ ಬೇಟೆ ಕಷ್ಟ, ಪಕ್ಷಿಗಳು ಚಿಕ್ಕವು ಅಸಹಾಯಕವಾದವೂ ಮತ್ತು ಅಪಾಯವನ್ನುಂಟು ಮಾಡಲಾರವು ಎಂದು ಯೋಚಿಸುವಂತಿಂಲ್ಲ ಕಾರಣ ಪಕ್ಷಿಗಳು ತುಂಬಾ ಸೂಕ್ಷ್ಮಜಾತಿಗಳಾಗಿದ್ದು ಇವುಗಳನ್ನು ಬೇಟೆಯಾಡಲು ಪ್ರಾಣಿ ಬೇಟೆಗಿಂತ ವಿಶಿಷ್ಟ ತಂತ್ರಗಾರಿಕೆ, ತಾಳ್ಮೆ ಬೇಟೆಗಾರನಿಗೆ ಇರಬೇಕಾಗುತ್ತದೆ. ಪ್ರಾಣಿ ಬೇಟೆಗೆ ಹೋದಂತೆ ಹೆಚ್ಚು ಜನ ಗುಂಪಾಗಿ ಹೋಗದೇ ಒಬ್ಬರು ಅಥವಾ ಇಬ್ಬರು ಪಕ್ಷಿಗಳ(ಹಕ್ಕಿ-ಪಿಕ್ಕಿಗಳು) ಬೇಟೆಗೆ ಹೋಗುತ್ತಾರೆ. ಹಟ್ಟಿಯ ಬೇಡರು ತಾವು ಬೇಟೆಯಾಡುವ ಪಕ್ಷಿಗಳು ಮತ್ತು ಬಳಸುವ ಪರಿಕರಗಳು ಹಾಗೂ ಅವರು ಹೊಂದಿರುವ ಬೇಟೆ ಜ್ಞಾನ ಪರಂಪರೆಯನ್ನು ಈ ಕೆಳಗಿನಂತೆ ನೋಡಬಹುದು.

**ಕೌಜುಗ ಬೇಟೆ (ಗೌಜುಗ ಪಕ್ಷಿ)**

ಇದು ಒಂದು ಕೋಳಿಯ ಜಾತಿಗೆ ಸೇರಿದ ಪಕ್ಷಿ. ಇದನ್ನು ಚಿತ್ರಪಕ್ಷಿ ಎಂದು ಕರೆಯುತ್ತಾರೆ ಅಲ್ಲದೇ ಬೇಡರ ಭಾಷೆಯಲ್ಲಿ ಕೌಜುಮು ಎಂದು ಇದರ ಬೇಟೆಯನ್ನು ಕೌಜುಮುಯಾಟ ಎಂದು ಕರೆಯುತ್ತಾರೆ. ಇದು ಅಡವಿ, ಹೊಲ-ಗದ್ದೆಗಳಲ್ಲಿ ಕಂಡು ಬರುತ್ತದೆ. ಕೌಜುಗ ಪಕ್ಷಿಯ ಮಾಂಸವು ಗಟ್ಟಿ ಹಾಗೂ ಸತ್ವಯುತವಾದ ಆಹಾರ ಮತ್ತು ಔಷಧಿಯ ಗುಣವುಳ್ಳ ಆಹಾರ ಆದ್ದರಿಂದ ಮಾಂಸಕ್ಕಾಕಿ ಇದರ ಬೇಟೆಯನ್ನು ಆಡುತ್ತಾರೆ. ಕೌಜುಗಗಳನ್ನು ಹಿಡಿಯಲು ಹಲವಾರು ವಿಧಾನಗಳನ್ನು ಇವರು ಬಳಸುತ್ತಾರೆ.

ಸಾಕಿದ ಕೌಜುಗದ ಸಹಾಯದಿಂದ ಬೇಟೆ "ಬೇಡರು ಅಡವಿಯಲ್ಲಿ ಸಂಚರಿಸುವಾಗ ಅಥವಾ ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಕೌಜುಗ ಪಕ್ಷಿ ಮರಿ ಮಾಡಿರುವುದು ಕಂಡು ಬಂದರೆ ಅಥವಾ ಅದು ಮರಿಮಾಡಿರುವುದನ್ನು ಅರಿಯದೆ ಅದನ್ನು ಬೇಟೆಯಾಡಿದರೆ ಅದರ ಚಿಕ್ಕ ಚಿಕ್ಕ ಮರಿಗಳನ್ನು ಮನೆಗೆ ತಂದು ಸಾಕುತ್ತಾರೆ. ಈ ಸಾಕುವ ವಿಧಾನದಲ್ಲಿ ಅವರ ಪಾರಪಂರಿಕ ಜ್ಞಾನ

ವಿಧಾನವನ್ನು ಗಮನಿಸಬಹುದು. ಹೇಗೆಂದರೆ ಚಿಕ್ಕ ಚಿಕ್ಕ ಮರಿಗಳಿಗೆ ಸ್ವತಃ ತಿನ್ನಲು ಬರುವುದಿಲ್ಲ ಮರಿಗಳಿಗೆ ಕಾಳುಗಳನ್ನು ತಿನ್ನುವ ಶಕ್ತಿ ಇರುವುದಿಲ್ಲ ಅಂತಹ ವೇಳೆಯಲ್ಲಿ ಬೇಡರು ಅಡವಿಯಲ್ಲಿ ಅಲೆದು ಗೆದ್ದಲು ಹುಳುಗಳಿರುವಲ್ಲಿ ಹೋಗಿ ಆ ಗೆದ್ದಲು ಹುಳುಗಳನ್ನು ತಂದು ಮುಳ್ಳುಗಾಯಿ (ಮುಳ್ಳುಗಡ್ಡೆ, ಅಂದರೆ ಕಾಲಿನಲ್ಲಿ ಸಿಕ್ಕಿಕೊಂಡ ಮುಳ್ಳನ್ನು ತೆಗೆಯಲು ಬಳಸುವ ಒಂದು ಬಗೆಯ ಸಾಧನ) ಯಿಂದ ಒಂದೊಂದೆ ಗೆದ್ದಲು ಹುಳುವನ್ನು ಕೌಜುಗದ ಮರಿಯ ಬಾಯಿಗೆ ಕೊಡುತ್ತಾ ತಿನ್ನಿಸುತ್ತಾರೆ. ಮರುದಿನ ಗೆದ್ದಲು ಸಿಕ್ಕ ಜಾಗದಲ್ಲೇ ಸಗಣಿಯ ಕುಳ್ಳನ್ನು ಹಾಕಿ ಬಂದಿರುತ್ತಾರೆ. ಆ ಕುಳ್ಳಿಗೆ ಮತ್ತೆ ಅಲ್ಲೇ ಗೆದ್ದಲುಗಳು ಹುಟ್ಟಿಕೊಂಡಿರುತ್ತವೆ"(ಮಾಹಿತಿ:ದೊಡ್ಡ ಸೂರಯ್ಯ, ಕಂಪಳದೇವರ ಹಟ್ಟಿ, ೫೦). ಮರುದಿನ ಅದರಂತೆ ಮಾಡುತ್ತಾರೆ. ಹೀಗೆ ಮೊದಮೊದಲು ಗೆದ್ದಲು ಹುಳು ನಂತರ ಕಾಳುಗಳನ್ನು ತಿನ್ನಿಸಿ ಸಾಕಿಕೊಂಡ ಕೌಜುಗಗಳಿಂದ ಅಡವಿಯ ಇತರ ಕೌಜುಗಗಳನ್ನು ಬೇಟೆಯಾಡುತ್ತಾರೆ. ಸಾಕಿದ ಕೌಜುಗವನ್ನು ಪಂಜರದಲ್ಲಿ ಇಟ್ಟು ಅದನ್ನು ಕಾಡಿನಲ್ಲಿ ಒಂದು ಮರದ ರೆಂಬೆಗೆ ಕಟ್ಟಿ ಮರದ ಕೆಳಗೆ ಬಲೆಯನ್ನು ಹಾಕಿ ದೂರದಲ್ಲಿ ಕುಳಿತು ಕೌಜುಗದಂತೆ ಸಿಳ್ಳು ಹಾಕಿ ಸದ್ದು ಮಾಡುತ್ತಾರೆ. ಆಗ ಅವರು ಸಾಕಿದ ಕೌಜುಗ ಅದೂ ಸಹ ಸದ್ದು ಮಾಡುತ್ತದೆ. ಅದರ ಸದ್ದಿಗೆ ಕಾಡಿನಲ್ಲಿರುವ ಇತರ ಕೌಜುಗಗಳು ತಮ್ಮ ಸಂಗಾತಿ ಎಂದು ತಿಳಿದು ಮರದ ಬಳಿ ಬಂದು ಅಲ್ಲಿ ಇರುವ ಕಾಳುಗಳನ್ನು ತಿನ್ನುತ್ತಾ ಬೇಟೆಗಾರ ಒಡ್ಡಿದ ಬಲೆಯಲ್ಲಿ ಸಿಲುಕಿಕೊಳ್ಳುತ್ತವೆ. ಕೆಲವೊಮ್ಮೆ ಅವನ್ನು ಜೀವಂತವಾಗಿಯೂ ಹಿಡಿಯುತ್ತಾರೆ. ಈ ರೀತಿ ಕೌಜುಗಗಳನ್ನು ಹಿಡಿಯಲು ವಿಶೇಷ ಕುಣಿಕೆಗಳಿಂದ ಕೂಡಿದ ಪಾಜಿಗಳನ್ನು ಬಳಸುತ್ತಾರೆ. ಬಿದಿರು ಕಡ್ಡಿ, ಕುದುರೆಯ ಬಾಲದ ಕೂದಲು, ಎತ್ತಿನ ಬಾಲದ ಕೂದಲುಗಳಿಂದ ಉರುಲು ಹಾಕಿ (ಪಾಜಿ ಮಾಡಿ) ಇದನ್ನು ಪೊದೆ ಅಥವಾ ಬೇಲಿ ಮರದ ಬುಡದಲ್ಲಿ ಬಿಡುವರು ಅದರ ಹಿಂಬದಿಯಲ್ಲಿ ಸಾಕಿದ ಕೌಜುಗದ ಪಂಜರವನ್ನು ಕಾಣದಂತೆ ಇಟ್ಟು ಅದು ಕೂಗುವಂತೆ ಮೊದಲು ತಾವು ಸಿಳ್ಳು ಹಾಕಿ, ನಂತರ ಅದು ಕೂಗಿ ಅದರ ಸದ್ದನ್ನು ಕೇಳಿ ಅಲ್ಲಿಗೆ ಬಂದ ಕೌಜುಗಗಳು ಪಾಜಿಯಲ್ಲಿ ಸಿಕ್ಕಿಕೊಂಡು ಒದ್ದಾಡಿ ಸಾಯುತ್ತವೆ. ಆಗ ಬೇಟೆಗಾರ ಅಲ್ಲಿಗೆ ಬಂದು ಪಾಜಿಯಿಂದ ಕೌಜುಗವನ್ನು ಬಿಡಿಸಿ ರೆಕ್ಕೆ ಕಟ್ಟಿ ಮತ್ತೊಂದೆಡೆಗೆ ಪಾಜಿ ಇಟ್ಟು ಮತ್ತೆ ಅದೇ ರೀತಿ ಮಾಡುತ್ತಾನೆ.

**ಅಡವಿ ಪಾರಿವಾಳದ ಬೇಟೆ**

ಅಡವಿ ಪಾರಿವಾಳದ ಮಾಂಸವನ್ನು ಸಹ ಆಹಾರ ಮತ್ತು ಆರೋಗ್ಯದ ದೃಷ್ಟಿಯಿಂದ ಬೇಡರು ತಿನ್ನುತ್ತಿದ್ದಾರೆ ಇದರ ಮಾಂಸವನ್ನು ಪಾರ್ಶ್ವವಾಯು(ಲಕ್ವ) ಬರದಂತೆ ತಡೆಯಲು ತಿನ್ನುತ್ತಾರೆ. ಅಥವಾ ಆ ಕಾಯಿಲೆ ಇರುವವರಿಗೆ ಅಡವಿ ಪಾರಿವಾಳದ ಮಾಂಸವನ್ನು ತಿನ್ನಿಸುತ್ತಾರೆ. ಅಡವಿ ಪಾರಿವಾಳಗಳು ಸಾಮಾನ್ಯವಾಗಿ ಪಾಳು ಬಿದ್ದ ಬಾವಿ, ಪಾಳು ಮನೆ, ಪಾಳು ಬಂಗಲೆಗಳಲ್ಲಿ ಹೆಚ್ಚಾಗಿ ವಾಸವಾಗಿರುತ್ತವೆ. ಅವುಗಳನ್ನು ಹಿಡಿಯಲು ಬೇಡರು ಬಲೆಯನ್ನು ಬಳಸುತ್ತಾರೆ. ಹಗಲಿನ ಹೊತ್ತು ಬೇಟೆಯಾಡುವುದಾದರೆ ಅವು ವಾಸವಾಗಿರುವ ಬಾವಿಗೆ ಸಂಪೂರ್ಣವಾಗಿ ಬಲೆಯಿಂದ ಮುಚ್ಚಿ ಬಡಿಗೆಯಿಂದ ಶಬ್ದ ಮಾಡುವರು ಆಗ ಆ ಶಬ್ದಕ್ಕೆ ಹೆದರಿದ ಪಾರಿವಾಳಗಳು ಬಾವಿಯಿಂದ

ಹೊರಗೆ ಬರಲು ಮುಂದಾಗುತ್ತವೆ. ಆಗ ಬಲೆಯಲ್ಲಿ ಸಿಕ್ಕಿಕೊಳ್ಳುತ್ತವೆ. ಆಗ ಸುತ್ತಲೂ ಇರುವ ಬೇಟೆಗಾರರು ಅವುಗಳನ್ನು ಬಿಡಿಸಿ ಚೀಲದಲ್ಲಿ ಹಾಕಿಕೊಳ್ಳುತ್ತಾರೆ. ರಾತ್ರಿಯ ಸಮಯದಲ್ಲಾದರೆ ಬಾವಿಗೆ ಬಲೆಯನ್ನು ಹಾಕಿ ಬಾವಿಯ ಒಳಗೆ ಬ್ಯಾಟರಿ ಬೆಳಕು ಬಿಡುತ್ತಾರೆ ಆ ಬೆಳಕಿಗೆ ಹೆದರಿದ ಪಾರಿವಾಳಗಳು ಹೊರಗೆ ಬಂದು ಬಲೆಗೆ ಬೀಳುತ್ತವೆ.

**ಪುರಲೆ ಹಕ್ಕಿ ಬೇಟೆ**

ಪುರಲೆ ಹಕ್ಕಿಯು ಕೌಜುಗ ಹಕ್ಕಿಯ ಜಾತಿಗೆ ಸೇರಿದ ಪಕ್ಷಿಯಾಗಿದೆ. ಗಾತ್ರದಲ್ಲಿ ಕೌಜುಗ ಹಕ್ಕಿಗಿಂತ ಚಿಕ್ಕದಿರುತ್ತದೆ. ಪುರಲೆ ಹಕ್ಕಿಗಳಲ್ಲಿ ಹಲವು ವಿಧಗಳಿವೆ. ಅವುಗಳ ಗುಣಸ್ವಭಾವದ ಆಧಾರದ ಮೇಲೆ ಜನಪದರು ಪುರಲೆ ಹಕ್ಕಿಗಳಲ್ಲಿ ವಿವಿಧ ಹೆಸರಿನ ಪುರಲೆಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ ಕುಲ್ಡ ಪುರಲೆ, ಕೆಂದ ಪುರಲೆ, ಚಿಪ್ಲಕ್ಕಿ, ಗೇರುಗ ಮುಂತಾದ ಹೆಸರುಗಳಿಂದ ಗುರುತಿಸುತ್ತಾರೆ.

ಪುರಲೆಗಳು ಚಿಕ್ಕ ಹಕ್ಕಿಗಳಾಗಿರುದರಿಂದ ಇವುಗಳ ಗಾತ್ರಕ್ಕೆ ಅನುಗುಣವಾಗಿ ಸಣ್ಣ ಉರುಲಿನ ಪಾಜಿಯನ್ನು ತಯಾರಿಸಿಕೊಂಡಿರುತ್ತಾರೆ. ಕುಲ್ಡು ಪುರಲೆ, ಗೇರುಗ ಹೆಸರಿನ ಹಕ್ಕಿಗಳು ಗುಂಪು ಗುಂಪಾಗಿ ಬರುವುದರಿಂದ ಬಲೆಯನ್ನು ಅಥವಾ ಪಾಜಿಯನ್ನು (ಉರುಲು) ಪೊದೆಯ ಒಂದು ದಿಕ್ಕಿಗೆ ಉದ್ದವಾಗಿ ಬಿಟ್ಟು ವಿರುದ್ಧ ದಿಕ್ಕಿನಿಂದ ಕಲ್ಲು ಕಟ್ಟಿಗೆಗಳಿಂದ ನೋಡುತ್ತಾ ಬರುವರು. ಆಗ ಕುಲ್ಡು ಪುರಲೆ ಮತ್ತು ಗೇರುಗ ಪುರಲೆಗಳು ಬಂದರೆ ಒಂದರ ಹಿಂದೆ ಒಂದರಂತೆ ಸಾಲಾಗಿ ಬಂದು ಪಾಜಿಯ ಉರುಲಿನಲ್ಲಿ ಸಿಕ್ಕಿಕೊಳ್ಳುತ್ತವೆ. ಅವುಗಳನ್ನು ಹಿಡಿದು ಚೀಲದಲ್ಲಿ ಹಾಕಿಕೊಳ್ಳುತ್ತಾರೆ. ಚಿಪ್ಲಕ್ಕಿ ಮತ್ತು ಕೆಂದಪುರಲೆಗಳು ಗುಂಪಾಗಿ ಬರುವುದಿಲ್ಲ ಎರಡು ಅಥವಾ ನಾಲ್ಕು ಮಾತ್ರ ಬರುತ್ತವೆ. ಇವುಗಳನ್ನು ಪೊದೆಯಲ್ಲಿ ಪಾಜಿ ಹಾಕಿ ಪೊದೆಯ ಹಿಂಬದಿಯಲ್ಲಿ ಕುಳಿತು ಸಿಳ್ಳು ಹಾಕಿ ಕರೆದು ಪಾಜಿಯಲ್ಲಿ ಬೀಳುವಂತೆ ಮಾಡುವರು.

ಬಡಗಲು ಬಂಡೆ ವಿಧಾನ: ಬೇಟೆಗಾರರು ಅಡವಿಯಲ್ಲಿ ಅಲೆದಾಡಿ ಪುರಲೆಗಳು ಮೇದು ಹೋದ ಸ್ಥಳವನ್ನು ಅವುಗಳು ಕೆದರಿದ ಗುರುತಿನ ಮೇಲೆ ಗುರುತಿಸಿ ಆ ಜಾಗದಲ್ಲಿ ಪ್ರತಿನಿತ್ಯ ಮೂರು–ನಾಲ್ಕು ದಿನಗಳವರೆಗೆ ಕಾಳುಹಾಕಿ ಬರುತ್ತಾರೆ. ದಿನನಿತ್ಯ ಅದೇ ಜಾಗದಲ್ಲಿ ಕಾಳುಗಳನ್ನು ಮೇದು ರುಚಿಗಂಡ ಪುರಲೆಗಳು ಪ್ರತಿ ದಿನ ಅಲ್ಲಿಗೆ ಮೇಯಲು ಬರುತ್ತವೆ. ಇದನ್ನು ಖಚಿತಪಡಿಸಿಕೊಂಡ ಬೇಡರು ದೊಡ್ಡ ಚಪ್ಪಟೆಯಾದ ಕಲ್ಲಿಗೆ ಚಿಕ್ಕ ಕಡ್ಡಿಗೋಲು ಇಟ್ಟು ನಿಲ್ಲಿಸಿ ಒಂದು ಸಣ್ಣ ಕಡ್ಡಿಯಿಂದ ಅದು ಬೀಳುವಂತೆ ತಂತ್ರ ರೂಪಿಸುತ್ತಾರೆ. ಇದನ್ನೇ ಬಡಗಲು ಬಂಡೆ ಎನ್ನುವರು. ಈ ಬಡಗಲು ಬಂಡೆ ಕೆಳಗೆ ಕಾಳನ್ನು ಹಾಕಿರುತ್ತಾರೆ. ಪುರಲೆಗಳು ಬಂಡೆಯ ಕೆಳಗಿನ ಕಾಳುಗಳನ್ನು ತಿನ್ನಲು ಬಂದು ಕಾಲು ಕೆದರಿ ಕಾಳು ತಿನ್ನಲು ಪ್ರಾರಂಭಿಸುತ್ತವೆ. ಹಾಗೆ ಅವು ಕಾಲು ಕೆದರಿದಾಗ ಬಡಗಲು ಬಂಡೆಗೆ ಆಸರವಾಗಿ ನಿಲ್ಲಿಸಿ ಅವುಗಳಿಗೆ ಜೋಡಿಸಿದ ಸಣ್ಣ ಕಟ್ಟಿಗೆಗೆ ಪುರಲೆ ತಗಲುತ್ತದೆ. ಹೀಗೆ ಆ ಕಟ್ಟಿಗೆ ಪುರಲೆಯ ದೇಹ ಸ್ವಲ್ಪ ತಗುಲಿದರೆ ಸಾಕು ಆ ಕಲ್ಲು ಚಪ್ಪೆಂದು ಅವುಗಳ ಮೇಲೆ ಬೀಳುವುದು. ಮರುದಿನ ಬೇಡರು ಅಲ್ಲಿಗೆ ಹೋಗಿ ಸತ್ತ ಪುರಲೆಗಳನ್ನು ತೆಗೆದುಕೊಂಡು ಬರುತ್ತಾರೆ. ಇಂತಹ ಬೇಟೆ ತಂತ್ರವನ್ನೇ ಬಳಸಿ ಬೇಟೆಯಾಡುವುದನ್ನು ಇಂದಿಗೂ ಕಾಣಬಹುದು.

**೩.೧.೩ ಬೇಟೆಯ ಬಗೆಗಿನ ನಂಬಿಕೆ ಮತ್ತು ನಿಷೇಧಗಳು**

ಹಟ್ಟಿಯ ಮ್ಯಾಸಬೇಡರು ಮೂಲತಃ ಪಶುಪಾಲಕರು ಎಂದು ಅವರ ಬೆಡಗುಗಳಿಂದ ತಿಳಿದು ಬರುತ್ತದೆ. ಅದರಂತೆಯೇ ಇವರು ಪರಂಪರೆಯಿಂದಲೂ ಸಹ ಬೇಟೆಗಾರರೂ ಎಂಬುದು ಸಹ ಖಚಿತ. ಪ್ರಾಚೀನ ಕಾಲದಲ್ಲಿ ತಮ್ಮ ದಿನನಿತ್ಯದ ಆಹಾರಕ್ಕಾಗಿ ಕಾಡು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತಿದ್ದ ಇವರು ಕಾಲಾನಂತರ ಹಬ್ಬ ಆಚರಣೆಗಳಲ್ಲಿ ಬೇಟೆಯಾಡುವುದನ್ನು ರೂಢಿಸಿಕೊಂಡರು. ಆದರೆ ತಾವು ಪರಂಪರೆಯಿಂದ ಕಲಿತುಕೊಂಡು ಬಂದಿರುವಂತ ಬೇಟೆ, ತಂತ್ರಗಳು ಇಂದಿಗೂ ಉಳಿಸಿಕೊಂಡು ಅನುಸರಿಸಿಕೊಂಡು ಬರುತ್ತಿರುವುದು ವಿಶೇಷ.

**ನಂಬಿಕೆ ಮತ್ತು ನಿಷೇಧಗಳು**

- ಬೇಟೆಗೆ ಹೊರಡುವ ಮೊದಲ ದಿನ ರಾತ್ರಿ ಕನಸಿನಲ್ಲಿ ಹಂದಿ, ಮೀನು ಬಂದರೆ ರಾಹು, ಶುಭ ಎಂದು ನಂಬುತ್ತಾರೆ.
- ಕನಸಿನಲ್ಲಿ ಬೇಟೆಯಾಡುವ ದೃಶ್ಯ ಕಂಡರೆ ಬೇಟೆ ಫಲಕಾರಿಯಾಗುವುದಿಲ್ಲ ಎಂದು ನಂಬುತ್ತಾರೆ.
- ಬೇಟೆಗೆ ಹೊರಡುವಾಗ ಕತ್ತೆ ಅರಚಿದರೆ ಒಳ್ಳೆಯದು ಎಂಬ ನಂಬಿಕೆ.
- ಬೇಟೆ ಬಗ್ಗೆ ಆಲೋಚಿಸುತ್ತಿರುವಾಗ ಹಲ್ಲಿ ನುಡಿದರೆ ಬೇಟೆ ಫಲಕಾರಿಯಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ.
- ಬೇಟೆಗೆ ಹೊರಟಾಗ ಕಟ್ಟಿಗೆ ಹೊರೆ, ಬೆಕ್ಕು ವಿಧವೆಯರು ಅಡ್ಡ ಬಂದರೆ ಅಪಶಕುನ ಎನ್ನುತ್ತಾರೆ.
- ಬೇಟೆಗೆ ಹೊರಟಾಗ ಕಾಗೆ ಕೂಗಿದರೆ, ಅಡ್ಡ ಬಂದರೆ ರೆಕ್ಕೆಯಿಂದ ಬಡಿದರೆ ಬೇಟೆಗಾರನಾದವನಿಗೆ ಅಶುಭವೆಂದು ನಂಬಿಕೆಯಿದೆ.
- ಬೇಟೆಗೆ ಹೊರಟಿರುವಾಗ ಆಪ್ತರು ಊಟ ಮಾಡಿಕೊಂಡು ಹೋಗು ಎನ್ನಬಾರದು.
- ಬೇಟೆಗೆ ಹೊರಡುವ ಸಂದರ್ಭದಲ್ಲಿ ಮನೆಯಲ್ಲಿ ಹೆಣ್ಣು ಮಕ್ಕಳು ಮುಟ್ಟಾಗಿದ್ದರೆ ನೆಲ ಸಾರಿಸುತ್ತಿದ್ದರೆ, ಕಸ ಗುಡಿಸುತ್ತಿದ್ದರೆ ಬೇಟೆಗೆ ಅವಲಕ್ಷಣ ಎನ್ನುತ್ತಾರೆ.
- ಬೇಟೆಗೆ ಹೊರಡುವಾಗ ಮನೆ ಬಾಗಿಲು ಹಾಕಬಾರದು.
- ಒಂದು ವೇಳೆ ಬೇಟೆಯಾಗದಿದ್ದರೆ ಬೇಟೆಗಾರರ ಗುಂಪಲ್ಲಿ ಒಬ್ಬ ವ್ಯಕ್ತಿಗೆ ಬಟ್ಟೆ ಬಿಚ್ಚಿ ಬೆತ್ತಲು ಮಾಡಿ ಬೇಟೆ ಸೊಪ್ಪನ್ನು (ಜಿರುಂಡೆ ಸೊಪ್ಪು) ಕಟ್ಟಿ ತಮ್ಮೊಡನೆ ಬೇಟೆ ಆಗುವವರೆಗೆ ಹಾಗೆ ಸುತ್ತಿಸುತ್ತಿರುತ್ತಾರೆ. ಅಥವಾ ಬೇಟೆಗೆ ಹೊರಡುವಾಗ ಎದುರು ಬಂದ ಅಥವಾ ಮಾತನಾಡಿಸಿದ ವ್ಯಕ್ತಿಯ ಚಿತ್ರವನ್ನು ಮೂರು ದಾರಿ ಕೂಡುವ ಸ್ಥಳದಲ್ಲಿ ಬಿಡಿಸಿ ಚಪ್ಪಲಿಯಿಂದ ಹೊಡೆದು ಅದರ ಮೇಲೆ ಉಚ್ಚೆ(ಮೂತ್ರ) ಮಾಡುತ್ತಾರೆ ಹೀಗೆ ಮಾಡುವುದರಿಂದ ಬೇಟೆಯ ಅಪಶಕುನ ಹೋಗುತ್ತದೆ ಎಂಬುದು ನಂಬಿಕೆ.

•ಮುಳ್ಳು ಹಂದಿಯನ್ನು ಬೇಟೆಯಾಡಿದರೆ ಅದರ ಮಾಂಸವನ್ನು ಅಡವಿಯಲ್ಲೇ ಸುಟ್ಟು ಮನೆಗೆ ತರುತ್ತಾರೆ. ಕಾರಣ ಅದರ ಮುಳ್ಳುಗಳನ್ನು ಮನೆಗೆ ತಂದರೆ ಮನೆಗಳಲ್ಲಿ ಜಗಳ ಸಂಭವಿಸುತ್ತದೆ ಎಂಬ ನಂಬಿಕೆ ಇದೆ.

•ಶ್ರಾವಣ ಮಾಸದಲ್ಲಿ ಯಾವ ಬೇಟೆಯನ್ನು ಆಡುವುದಿಲ್ಲ ಕಾರಣ ಆ ಸಂದರ್ಭದಲ್ಲಿ ಜೀವಿಗಳು ಗರ್ಭಧರಿಸಿರುವ ಸಂದರ್ಭವಾಗಿರುತ್ತದೆ.

•ನವಿಲನ್ನು ಬೇಟೆಯಾಡಿದರೆ ಮುಂಗೈ ಊನವಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ ಕಾರಣ ನವಿಲು ರಾಷ್ಟ್ರೀಯ ಪಕ್ಷಿ ಅದರ ಸಂರಕ್ಷಣೆಯಾಗಬೇಕು ಎಂಬ ಹಿನ್ನೆಲೆಯಲ್ಲೇ ತಾವೇ ಹಾಕಿಕೊಂಡ ನಿಯಮ ಇದು ಎಂದು ಕಾಣುತ್ತದೆ.

•ಬೇಟೆಗೆ ಹೋದಾಗ ತೋಳವು ಅಡ್ಡ ಬಂದರೆ ಬೇಟೆ ಸಿಗುತ್ತದೆ ಎಂಬ ನಂಬಿಕೆ ಇದೆ.

•ಮನೆಯಿಂದ ಬೇಟೆಗೆ ಹೊರಡುವಾಗ ಆಯುಧಗಳು ಹೊಸ್ತಿಲಿಗೆ ತಗುಲಿದರೆ ಅಪಶಕುನ. ಇಂತಹ ಇನ್ನು ಅನೇಕ ಬೇಟೆ ಸಂಬಂಧಿ ನಂಬಿಕೆಗಳು ಹಟ್ಟಿಯ ಬೇಡರಲ್ಲಿ ಹಿಂದಿನಿಂದಲೂ ರೂಢಿಯಲ್ಲಿವೆ

**೩.೨ ಪಶುಪಾಲನಾ ಜ್ಞಾನಪರಂಪರೆ**

ಕೃಷಿ ಪ್ರಧಾನವಾದ ನಮ್ಮಲ್ಲಿ ಪಶು ಸಂಗೋಪನೆಗೆ ಹೆಚ್ಚು ಮಹತ್ವವಿದೆ ಎತ್ತು, ಎಮ್ಮೆ, ಕುರಿ, ಮೇಕೆ ಇತರ ಪ್ರಾಣಿಗಳು ಒಂದಲ್ಲ ಒಂದು ರೀತಿಯಲ್ಲಿ ಕೃಷಿ ಬದುಕಿಗೆ ಸಹಾಯಕವಾಗಿ ಜೀವಿಸುತ್ತಿವೆ. ಇವುಗಳ ಪಾಲನೆ-ಪೋಷಣೆ ಮನುಷ್ಯನ ಪಾಲನೆ ಪೋಷಣೆಯಷ್ಟೇ ಮಹತ್ವವಾದುದು. ಆದಿ ಮಾನವನಿಗೆ ಮೊದಲು ಈ ಪಶುಪಾಲನೆ, ಕೃಷಿಗಳ ಬಗ್ಗೆ ತಿಳುವಳಿಕೆ ಇರಲಿಲ್ಲ ಬೇಟೆಯಾಡುತ್ತಾ ಅವುಗಳ ಮಾಂಸ, ಹಣ್ಣು-ಹಂಪಲುಗಳನ್ನು ತಿನ್ನುತ್ತಾ ಅಡವಿಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುತ್ತಿದ್ದನು ಕಾಲಾನಂತರ ಕಾಡಿನ ಮೃದು ಸ್ವಭಾವದ ಪ್ರಾಣಿಗಳನ್ನು ಅವುಗಳು ಮರಿ ಹಾಕಿದ ಸಂದರ್ಭದಲ್ಲಿ ಹಿಡಿದು ಸಾಕತೊಡಗಿದ. ನಂತರ ಅವುಗಳನ್ನು ಆಹಾರಕ್ಕೆ ಬಳಸುತ್ತಿದ್ದ. ಹಾಗೇ ಕಾಲ ಕಳೆದಂತೆ ಕೃಷಿಯನ್ನು ಕಂಡುಕೊಂಡನು. ಕೃಷಿಯಲ್ಲಿ ದನಗಳ ಗೊಬ್ಬರ ಉಪಯುಕ್ತ ಎಂಬುದನ್ನು ಅರಿತ ಮೇಲೆ ಅವುಗಳನ್ನು ಹೆಚ್ಚು ಆಸಕ್ತಿಯಿಂದ ಪಾಲನೆ ಮಾಡತೊಡಗಿದ. ನಂತರ ಅವುಗಳನ್ನು ಕೃಷಿಗೆ ಬಳಸತೊಡಗಿದ. ಹೀಗೆ ಪಶುಪಾಲನೆ ಬೆಳೆದು ಬಂದಿತು ಎಂದು ಹೇಳಲಾಗುತ್ತದೆ ಒಟ್ಟಾರೆ ಪಶುಪಾಲನೆ ಮತ್ತು ಕೃಷಿ ಒಟ್ಟೊಟ್ಟಿಗೆ ಹುಟ್ಟಿಕೊಂಡವು ಎಂದು ಹೇಳಬಹುದು. ಭಾರತದಲ್ಲಿ ಬಹಳ ಹಿಂದಿನಿಂದಲೂ ದನಗಳು ಜನಜೀವನದಲ್ಲಿ ತುಂಬಾ ಪ್ರಮುಖ ಪಾತ್ರ ವಹಿಸಿವೆ, ಆರ್ಯರು ತಮ್ಮ ದನಗಳ ಯೋಗಕ್ಷೇಮಕ್ಕಾಗಿ ಅವುಗಳಿಗೆ ಹುಲ್ಲು ನೀರು ಯಥೇಚ್ಚವಾಗಿ ದೊರೆಯುತ್ತಿದ್ದ ಸ್ಥಳಗಳಿಗೆ ವಲಸೆ ಹೋಗುತ್ತಿದ್ದುದಾಗಿ ವೇದಗಳಿಂದ ತಿಳಿದು ಬರುತ್ತದೆ. ಭಾರತದಲ್ಲಿ ಮಾತ್ರವಲ್ಲ ಎಲ್ಲಾ ದೇಶಗಳಲ್ಲೂ ಭಾರತದ ಎಲ್ಲಾ ರಾಜ್ಯಗಳಲ್ಲೂ ಇಂದಿಗೂ ಪಶುಪಾಲನೆ ಹೆಚ್ಚಿನದಾಗಿ ಕಂಡು

ಬರುತ್ತದೆ. ಪಶುಪಾಲನೆಯನ್ನು ವೃತ್ತಿಯನ್ನಾಗಿಸಿಕೊಂಡ ಕಾಡುಗೊಲ್ಲ, ಗೌಳಿಗ, ಮ್ಯಾಸಬೇಡರಂತಹ ಅನೇಕ ಬುಡಕಟ್ಟುಗಳು ಕರ್ನಾಟಕದಲ್ಲಿ ಕಂಡು ಬರುತ್ತವೆ. ಕರ್ನಾಟಕ ರಾಜ್ಯ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಪಶುಪಾಲನೆ ವೃತ್ತಿ ಮತ್ತು ಅವರಲ್ಲಿನ ಪಶುವೈದ್ಯ ಜ್ಞಾನದ ಬಗ್ಗೆ ನಾವು ನೋಡುವುದಾದರೆ ಅವರಲ್ಲಿ ಪಶುಪಾಲನೆ ಮತ್ತು ಪಶುವೈದ್ಯಕ್ಕೆ ಸಂಬಂಧಿಸಿದಂತೆ ಅಪಾರವಾದ ಜ್ಞಾನವಿದೆ.

ಕಂಪಳದೇವರ ಹಟ್ಟಿಯ ಜನಪದರು ಬಹುತೇಕ ಕೃಷಿಕರಾಗಿದ್ದಾರೆ. ಮತ್ತು ಪಶುಪಾಲಕರಾಗಿದ್ದಾರೆ. "ಕೃಷಿ ಸಂಸ್ಕೃತಿಯಲ್ಲಿ ಸಾಕು ಪ್ರಾಣಿಗಳಿಗೆ ಮಹತ್ವದ ಸ್ಥಾನವಿದೆ. ಪ್ರಾಣಿಗಳಿಲ್ಲದ ಕೃಷಿಕನ ಮನೆ ಆತ್ಮವಿಲ್ಲದ ದೇಹವಿದ್ದಂತೆ"[8]. ಕೃಷಿ ಸಂಸ್ಕೃತಿಯ ಜನಪದರು ತಮ್ಮ ಕೃಷಿ ಕೆಲಸಕ್ಕೆ ನೆರವಾಗಲು ಮತ್ತು ಹಾಲು ಹೈನಕ್ಕಾಗಿ ದನಕರುಗಳನ್ನು ಹೆಚ್ಚಾಗಿ ಸಾಕುತ್ತಾರೆ. ಕೃಷಿ ಬದುಕಿಗೆ ದನಕರುಗಳು ಎಷ್ಟು ಅವಶ್ಯಕ ಎಂಬುದನ್ನು ಅವರಲ್ಲೇ ರೂಢಿಯಲ್ಲಿರುವ 'ಎತ್ತಿಲ್ಲದವನಿಗೆ ಎದೆಯಿಲ್ಲ' ಎಂಬ ಒಂದು ಗಾದೆ ಮಾತಿನ ಮೂಲಕ ಅರಿಯಬಹುದು. ಅಷ್ಟೇ ಅಲ್ಲ ದನಗಳನ್ನೇ ತಮ್ಮ ಸಂಪತ್ತು ಎಂದು ಹೇಳುವ ವಾಡಿಕೆ ಇಂದಿಗೂ ಇವರಲ್ಲಿದೆ. ಹಿಂದೆ ಇವರಲ್ಲಿ ಮದುವೆಗಳಂತಹ ಸಂದರ್ಭದಲ್ಲಿ ಹೆಣ್ಣು, ಗಂಡುಗಳ ಮನೆಯವರ ಆರ್ಥಿಕ ಬಲಾಬಲ ತಿಳಿಯಲು ನಿಮ್ಮ ಮನೆಯಲ್ಲಿ ಎಷ್ಟು ದನಗಳಿವೆ ಎಂದು ಪರಸ್ಪರ ಕೇಳಿ ತಿಳಿಯುತ್ತಿದ್ದರು. ತಮ್ಮ ಮಗಳನ್ನು ಹೆಚ್ಚು ದನಗಳಿರುವ ಮನೆಗೆ ಕೊಟ್ಟು ಹಾಲು, ಮೊಸರು ಇರುವ ಮನೆಗೆ ಮಗಳನ್ನು ಕೊಟ್ಟೆವು ಎಂದು ಸಂತೃಪ್ತಿ ಪಡುತ್ತಿದ್ದರು. ಇಂದಿಗೂ ಸಹ ಹಟ್ಟಿಯ ಹಿರಿಯರು ಮಳೆಯನ್ನು ಮಳೆರಾಯ ಅಂದರೆ ತಂದೆ ಎಂದೂ ಭೂಮಿಯನ್ನು ಭೂಮಿತಾಯಿ ಎಂದು ಮತ್ತೆ ದನಕರುಗಳನ್ನು ಸಂಪತ್ತೆಂದು ಭಾವಿಸುತ್ತಾರೆ.

ಆದರೆ ಇತ್ತೀಚಿನ ದಿನಗಳಲ್ಲಿ ಮಳೆ, ಬೆಳೆ ಕೊರತೆಯಿಂದ ಆಧುನಿಕತೆಯ ಪ್ರಭಾವದಿಂದ ಹಳ್ಳಿಯಲ್ಲಿ ದನಕರುಗಳನ್ನು ಸಾಕುವುದು ಕಡಿಮೆಯಾಗಿದೆ. ಆದರೂ ಮನೆಗೆ ಒಂದು ಎರಡರಂತೆ ದನಗಳು ಇದ್ದೇ ಇವೆ. ಇಂತಹ ಭವಿಷ್ಯತ್ತನ್ನು ಅಂದಿನ ಹಿರಿಯರು ಊಹಿಸಿದ್ದರೋ ಏನೋ ಹಾಗಾಗಿ ತಮ್ಮ ಪಶು ಸಂಪತ್ತು ನಾಶವಾಗಬಾರದು ಎಂದು ದೇವರ ಹೆಸರಲ್ಲಿ ಸತ್ತ ತಮ್ಮ ಪೂರ್ವಿಕರ ನೆನಪಿಗಾಗಿ ಹಸು, ಎತ್ತುಗಳನ್ನು ಬಿಡುವ ಮತ್ತು ಆ ದೇವರ ಎತ್ತನ್ನು ನೋಡಿಕೊಳ್ಳಲು ಒಂದು ಮನೆತನವನ್ನು ಕಿಲಾರಿ ಮನೆತನ/ಕಿಲಾರಿಗಳೆಂದು ನೇಮಕ ಮಾಡಿದಂತೆ ಕಾಣುತ್ತದೆ. ಆದ ಕಾರಣ ತಮ್ಮ ದೇವರುಗಳಿಗೆ, ಹಿರಿಯರುಗಳಿಗೆ ಗೌರವ ಪೂರ್ವಕವಾಗಿ ಎತ್ತು ಹಸುಗಳನ್ನು ಬಿಡುತ್ತಾ ತಮ್ಮ ಸಂಸ್ಕೃತಿ, ಸಮುದಾಯದ ಐಕ್ಯತೆ ಕಾಪಾಡಿಕೊಂಡು ಮುಂದುವರೆಸಿಕೊಂಡು ಹೋಗುವ ಉದ್ದೇಶಕ್ಕಾದರೂ ಕಂಪಳದೇವರ ಹಟ್ಟಿ ಮತ್ತು ಈ ಭಾಗದ ಮ್ಯಾಸಬೇಡರಲ್ಲಿ ಪಶುಪಾಲನೆ ಪರಂಪರೆ ಉಳಿದುಕೊಂಡು ಬರುತ್ತಿದೆ. ಹಟ್ಟಿಯಲ್ಲಿ ಸಾಕು ದನಕರುಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

ಕೋಷ್ಟಕ ೩.೧– ಹಟ್ಟಿಯಲ್ಲಿನ ಸಾಕು ದನಕರುಗಳ ವಿವರ

| ಕ್ರ.ಸಂ. | ಸಮುದಾಯಗಳು | ಕುಟುಂಬಗಳು | ಪಶುಸಂಪತ್ತು | | | | | |
|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಒಟ್ಟು |
| ೧ | ಆದಿ ಕರ್ನಾಟಕ | ೪೩ | ೧೬ | ೧೨ | ೭ | ೧೬ | ೪೩ | ೯೪ |
| ೨ | ಲಿಂಗಾಯತರು | ೭ | ೮ | ೮ | | | | ೧೬ |
| ೩ | ನಾಯಕ | ೨೬೩ | ೧೪೮ | ೧೯೪ | ೩೧ | ೩೧೭೮ | ೪೦೭ | ೩,೯೫೮ |
| | ಒಟ್ಟು | ೩೧೩ | ೧೭೨ | ೨೧೪ | ೩೮ | ೩೧೯೪ | ೪೫೦ | ೪೦೬೮ |

ಕೋಷ್ಟಕ ೩.೧ ರಲ್ಲಿ ವಿವರಿಸಿರುವಂತೆ ಕಂಪಳದೇವರ ಹಟ್ಟಿಯಲ್ಲಿನ ಆದಿ ಕರ್ನಾಟಕದವರು ೧೬ ಎತ್ತುಗಳನ್ನು, ೧೨ ಆಕಳುಗಳನ್ನು, ೭ ಎಮ್ಮೆ, ೧೬ ಕುರಿ, ೪೩ ಮೇಕೆಗಳು ಒಟ್ಟು ೯೪ ದನಕರುಗಳನ್ನು ಸಾಕಿದ್ದಾರೆ. ಹಾಗೆಯೇ ಲಿಂತಾಯತರು ೮ ಎತ್ತುಗಳು, ೮ ಆಕಳುಗಳನ್ನು ಸಾಕಿದ್ದಾರೆ. ಇನ್ನು ನಾಯಕರು ೧೪೮ ಎತ್ತುಗಳನ್ನು, ೧೯೪ ಆಕಳುಗಳನ್ನು, ೩೧ ಎಮ್ಮೆಗಳು, ೩೧೭೮ ಕುರಿಗಳನ್ನು, ೪೦೭ ಮೇಕೆಗಳನ್ನು ಒಟ್ಟು ೩,೯೫೮ ದನಕರುಗಳನ್ನು ಸಾಕಿದ್ದಾರೆ. ಒಟ್ಟಾರೆ ಹಟ್ಟಿಯಲಿನ ದನಕರುಗಳನ್ನು ವಿಂಗಡಿಸಿ ಅವುಗಳ ಪ್ರಮಾಣ ನೋಡುವುದಾದರೆ ಹಟ್ಟಿಯಲ್ಲಿ ಒಟ್ಟು ೧೭೨ ಎತ್ತುಗಳು, ೨೧೪ ಆಕಳುಗಳು, ೩೮ ಎಮ್ಮೆಗಳು, ೩೧೯೪ ಕುರಿಗಳು, ೪೫೦ ಮೇಕೆಗಳು ಒಟ್ಟು ೪೦೬೮ ರಾಸುಗಳು ಹಟ್ಟಿಯಲ್ಲಿವೆ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಇನ್ನು ಹಟ್ಟಿಯಲ್ಲಿ ಎಲ್ಲಾ ಸಮುದಾಯದವರು ಸಾಕಿರುವ ದನಕರುಗಳನ್ನು ವಿಂಗಡಿಸಿ ಶೇಕಡಾವಾರು ನೋಡುವುದಾದರೆ ಶೇಕಡ ೪.೨೨೮೧ ರಷ್ಟು ಎತ್ತುಗಳು, ಶೇಕಡ ೫.೨೬೧ ರಷ್ಟು ಆಕಳುಗಳು, ಶೇಕಡ ೦.೯೩೪ ರಷ್ಟು ಎಮ್ಮೆಗಳು, ಶೇಕಡ ೭೮.೫೨ ರಷ್ಟು ಕುರಿಗಳು, ಶೇಕಡ ೧೧.೦೬ ರಷ್ಟು ಮೇಕೆಗಳನ್ನು ಸಾಕಿಕೊಂಡಿದ್ದಾರೆ ಮ್ಯಾಸಬೇಡರೇ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವ ಈ ಹಟ್ಟಿಯಲ್ಲಿ ಯಾರೊಬ್ಬರೂ ಕೋಳಿಯನ್ನು ಸಾಕಿಕೊಂಡಿಲ್ಲ ಕಾರಣ ಕೋಳಿ ಮ್ಯಾಸಬೇಡರ ದೈವಗಳಿಗೆ ಆಗಿಬರಲ್ಲ ಆದ್ದರಿಂದ ಹಟ್ಟಿಯಲ್ಲಿ ಬೇರೆ ಸಮುದಾಯದವರೂ ಸಹ ಕೋಳಿ ಸಾಕಿಕೊಳ್ಳುವುದಿಲ್ಲ. ಒಂದು ಕಾಲಕ್ಕೆ ಪಶುಪಾಲನೆಯನ್ನೇ ತಮ್ಮ ಜೀವನದ ವೃತ್ತಿಯನ್ನಾಗಿ ಹೊಂದಿದ್ದ ಹಟ್ಟಿಯ ಜನರು ಇಂದು ಕೇವಲ ನೆಪಮಾತ್ರಕ್ಕೆ ದನಕರುಗಳನ್ನು ಸಾಕುವಂತಾಗಿದೆ ವ್ಯವಸಾಯವನ್ನೇ ನಂಬಿ ಜೀವಿಸುತ್ತಿದ್ದರೂ ಕೃಷಿಗೆ ಸಹಾಯಕವಾಗುವ ಎತ್ತುಗಳನ್ನು ಸಾಕಿಕೊಂಡಿರುವವರ ಸಂಖ್ಯೆ ಕಡಿಮೆ ಕಂಡುಬರುತ್ತಿದೆ ಶೇಕಡ ೪.೨೨೮೧ ರಷ್ಟು ಮಾತ್ರ ಎತ್ತುಗಳು ಕಂಡುಬರುತ್ತಿವೆ. ಮ್ಯಾಸಬೇಡರು ಪಶುಪಾಲನೆಯ ಹಿನ್ನೆಲೆಯಲ್ಲಿ ಬಂದ ಬುಡಕಟ್ಟು ಆಗಿರುವುದರಿಂದ ಇವರಲ್ಲಿ ಕುರಿ, ಮೇಕೆ ಸಾಕಾಣಿಕೆ ಕಂಡುಬರುತ್ತದೆ. ಬೇಡರಲ್ಲಿ ೩೧೭೮ ಕುರಿಗಳು, ೪೦೭ ಮೇಕೆಗಳು ಇರುವುದನ್ನು ಕಾಣಬಹುದು. ಒಟ್ಟಾರೆ ಹಟ್ಟಿಯವರ ಎಲ್ಲಾ ಕುರಿ ಮೇಕೆಗಳ ಸರಾಸರಿ ನೋಡಿದರೆ ಶೇಕಡ ೭೮.೫೨ ರಷ್ಟು ಕುರಿಗಳು ಶೇಕಡ ೧೧.೦೬ ರಷ್ಟು ಮೇಕೆಗಳು ಇವೆ. ಸಂಪ್ರದಾಯದ ಹೆಸರಲ್ಲಿ ಹಟ್ಟಿಯ ಜನರು ದೇವರ ಹೆಸರಲ್ಲಿ ಎತ್ತು, ಆಕಳು, ಕುರಿಗಳನ್ನು ಬಿಟ್ಟು ಒಂದೆಡೆ ಕಿಲಾರಿಯನ್ನು

ನೇಮಿಸಿ ಅವುಗಳನ್ನು ಪಾಲನೆ ಮಾಡುವುದರಿಂದ ಇಂದಿಗೂ ಸಹ ಇವರಲ್ಲಿ ಪಶುಪಾಲನೆ ಜೀವಂತವಾಗಿ ಉಳಿದುಕೊಂಡು ಬಂದಿದೆ.

**೩.೨.೧ ದನಗಳಿಗೆ ಬರುವ ರೋಗಗಳು ಮತ್ತು ಪಾರಂಪರಿಕ ವೈದ್ಯ**

ಮನುಷ್ಯನಿಗೆ ಬರುವಂತೆ ದನಕರುಗಳಿಗೂ ಅನೇಕ ರೋಗಗಳು ಬರುತ್ತವೆ. ಹವಾಮಾನ ವೈಪರಿತ್ಯ, ನೀರು, ಮೇವು ಮುಂತಾದ ಕಾರಣಗಳಿಂದ ದನಕರುಗಳಿಗೆ ಹಲವು ರೋಗಗಳು ಬರುತ್ತವೆ. ಅಂತಹ ಸಂದರ್ಭದಲ್ಲಿ ಜನಪದರು ಆ ಕಾಯಿಲೆಗಳಿಗೆ ತಮ್ಮಲ್ಲೇ ಔಷಧಿಗಳನ್ನು ತಯಾರಿಸಿಕೊಂಡು ಗುಣಪಡಿಸಿಕೊಳ್ಳುತ್ತಾರೆ. ಪಶುವೈದ್ಯ ಸಾಮಾನ್ಯವಾಗಿ ನಿಸರ್ಗದ ಸಹಜ ಪ್ರೇರಣೆಯಿಂದ ಅನಿವಾರ್ಯವಾಗಿ ರೂಪುಗೊಂಡುದುದಾಗಿದೆ. ಮನುಷ್ಯ ತನ್ನನ್ನು ರಕ್ಷಿಸಿಕೊಳ್ಳುವ ಜೊತೆಗೆ ತನ್ನ ಪರಿಸರವನ್ನು ಸಂರಕ್ಷಿಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿದ ಪರಿಣಾಮವಾಗಿ ಜನಪದ ಪಶುವೈದ್ಯ ಹುಟ್ಟಿಕೊಂಡಿತು. ತನ್ನ ಕ್ಷೇಮದ ಜೊತೆಗೆ ತನ್ನ ಸಾಕು ಪ್ರಾಣಿಗಳ ಆರೋಗ್ಯವೂ ಮುಖ್ಯವೆಂದು ಕೃಷಿಕ ತಿಳಿದಿದ್ದರಿಂದ ಪಶುವೈದ್ಯ ಹುಟ್ಟಿಕೊಂಡಿತು. ಅದರಂತೆಯೇ ಕಂಪಳದೇವರ ಹಟ್ಟಿಯ ಜನಪದರೂ ಸಹ ತಾವು ಸಾಕಿಕೊಂಡಿರುವ ದನಕರುಗಳಿಗೆ ಏನಾದರೂ ಜಡ್ಡು ಜಾಪತ್ರೆ ಬಂದರೆ ತಾವು ಪರಂಪರೆಯಿಂದ ಕಂಡುಕೊಂಡು ಬಂದಂತಹ ಗಿಡಮೂಲಿಕೆಗಳ ಔಷಧಿಗಳನ್ನು ಬಳಸಿ ಕಾಯಿಲೆಗೊಂಡ ದನಕರುಗಳನ್ನು ಗುಣಪಡಿಸುತ್ತಾರೆ. ತಮ್ಮ ಸುತ್ತಮುತ್ತಲ ಪರಿಸರದಲ್ಲಿ ದೊರೆಯುವ ಗಿಡ, ನಾರು, ಬೇರು ಪದಾರ್ಥಗಳಿಂದ ಮದ್ದು(ಔಷಧಿ) ತಯಾರಿಸಿ ದನಗಳಿಗೆ ನೀಡಿ ಅಥವಾ ಹಚ್ಚಿ ಅವುಗಳ ಕಾಯಿಲೆ ವಾಸಿ ಮಾಡುತ್ತಾರೆ. ದನಕರುಗಳಿಗೆ ಸಾಮಾನ್ಯವಾಗಿ ಬರುವ ರೋಗಗಳು ಮತ್ತು ಆ ರೋಗಗಳಗೆ ಹಟ್ಟಿಯ ಜನಪದರು ನೀಡುವ ಪಾರಂಪರಿಕ ಮದ್ದುಗಳು ಯಾವುವು ಮತ್ತು ಅವುಗಳನ್ನು ತಯಾರಿಸುವ ವಿಧಾನ ಕಾಯಿಲೆಗಳನ್ನು ಪತ್ತೆ ಹೆಚ್ಚುವ ತಿಳುವಳಿಕೆ ಮುಂತಾದ ಜ್ಞಾನ ತಂತ್ರಗಳ ಬಗ್ಗೆ ಕೆಳಗಿನಂತೆ ಒಂದೊಂದಾಗಿ ನೋಡೋಣ.

**ಕೆಚ್ಚಲು ಬಾವುರೋಗ**

ಕೆಚ್ಚಲು ಊದಿಕೊಂಡು ದೊಡ್ಡದಾಗಿದ್ದರೆ ಅದಕ್ಕೆ ಕೆಚ್ಚಲು ಬಾವು ರೋಗ ಎನ್ನುತ್ತಾರೆ. ನಾನಾ ಜಾತಿಯ ಸೂಕ್ಷ್ಮಾಣುಗಳಿಂದ ಈ ರೋಗವು ಆಕಳು ಮತ್ತು ಎಮ್ಮೆಗಳಿಗೆ ಬರುತ್ತದೆ. ಮುಖ್ಯವಾಗಿ ಈ ರೋಗವು ಹಾಲನ್ನು ಹಿಂಡುವುದರಿಂದ ಅಂದರೆ ಹಾಲು ಹಿಂಡುವವನ ಕೈಯಿಂದ ಮೊಲೆಗಳು ಮತ್ತು ಮೊಲೆಯ ತೊಟ್ಟಿನ ಮೇಲೆ ಗಾಯಗಳಾಗಿ ವಿಷಕ್ರಿಮಿಗಳು ಆ ಗಾಯಗಳ ಮೂಲಕ ಮೊಲೆಯ ಒಳಗೆ ಹೋಗಿ ಕೆಚ್ಚಲ ಬಾವು ಉಂಟಾಗುತ್ತದೆ.

**ರೋಗದ ಲಕ್ಷಣಗಳು, ಪತ್ತೆ ಹಚ್ಚುವ ಜ್ಞಾನ**

ಈ ರೋಗ ಬಂದಿದ್ದರೆ ಹಸು ಎಮ್ಮೆಗಳ ಕೆಚ್ಚಲು ಬಾತುಕೊಳ್ಳುತ್ತದೆ. ಮತ್ತು ಕೆಚ್ಚಲಿಗೆ ತುಂಬಾ ನೋವಾಗುತ್ತದೆ. ಅವುಗಳ ಹಾಲು ಕೆಟ್ಟಿರುತ್ತದೆ. ಹಾಲಿನಲ್ಲಿ ಸಣ್ಣ ಸಣ್ಣ ರಕ್ತದ ಕಣಗಳು ಕಾಣಿಸಿಕೊಳ್ಳುತ್ತವೆ ಅಥವಾ ಹಾಲು ಅತಿಯಾದ ನೀರಿನಿಂದ ಅಥವಾ ಮೊಸರಿನಂತೆ ಇರಬಹುದು. ಕೆಚ್ಚಲು ಬಾವಿನಿಂದ

ದನಗಳು ಜ್ವರ ಬಂದು ಮೇವು ನೀರು ಬಿಡುತ್ತವೆ. ಈ ಎಲ್ಲಾ ಲಕ್ಷಣಗಳಿಂದ ನಮ್ಮ ಜನಪದರು ಕೆಚ್ಚಲು ಬಾವು ರೋಗವನ್ನು ಪತ್ತೆ ಹಚ್ಚುತ್ತಾರೆ.

**ಪಾರಂಪರಿಕ ಮದ್ದು**

ಈ ಕಾಯಿಲೆಗೆ ತಮ್ಮಲ್ಲೇ ದೊರೆಯುವ ಪದಾರ್ಥಗಳಿಂದ ಮದ್ದು ತಯಾರಿಸಿ ಹಚ್ಚುತ್ತಾರೆ. ಹಸಿ ಅರಿಶಿಣದ ಕೊಂಬನ್ನು ಲಿಂಬು ಹಣ್ಣಿನ ಹುಳಿಯಲ್ಲಿ ತೆಯ್ದು ಮೊಲೆಗಳಿಗೆ ಹಚ್ಚುತ್ತಾರೆ ಅಥವಾ ಉಪ್ಪಿನಲ್ಲಿ ನೆನೆಹಾಕಿದ ಮಾವಿನ ಕಾಯಿಯನ್ನು ರುಬ್ಬಿ ಹಚ್ಚುತ್ತಾರೆ. ಹೀಗೆ ಮಾಡುವುದರಿಂದ ಬಾವು, ನೋವು ಕಡಿಮೆಯಾಗುತ್ತದೆ. ಮತ್ತೊಂದು ವಿಧಾನವೆಂದರೆ ತೊಂಡೆ ಬಳ್ಳಿಯ ರಸವನ್ನು ತೇಯ್ದು ಹಚ್ಚುತ್ತಾರೆ, ಮೊಲೆಗಳಲ್ಲಿ ರಕ್ತ ಬರುತ್ತಿದ್ದರೆ, ಕರಿ ಜೀರಿಗೆ ಮತ್ತು ಮುಟ್ಟಿದರೆ ಮುನಿ ಗಿಡದ ಸೊಪ್ಪನ್ನು ರುಬ್ಬಿ ತಯಾರಿಸಿದ ಒಂದು ಲೀಟರಿನಷ್ಟು ರಸ ಕುಡಿಸುತ್ತಾರೆ. ಇಲ್ಲವೇ ಲೋಳೆರಸವನ್ನು ಸ್ವಲ್ಪ ಸುಣ್ಣದಲ್ಲಿ ತೇಯ್ದು ಕೆಚ್ಚಲಿಗೆ ಹಚ್ಚುತ್ತಾರೆ ಹೀಗೆ ಮಾಡುವುದರಿಂದ ಕೆಚ್ಚಲ ಬಾವು ಕಡಿಮೆಯಾಗುತ್ತದೆ ಹೀಗೆ ಕಡಿಮೆ ಖರ್ಚಿನಲ್ಲಿ ಸರಳ ಮದ್ದು ಮಾಡಿಕೊಂಡು ಗುಣಪಡಿಸುತ್ತಾರೆ.

ಚಪ್ಪೆರೋಗ "ಕ್ಲಾಸ್ರಡಿಯಂ ಚವಾಯ ಎಂಬ ಸೂಕ್ಷ್ಮಾಣುವಿನಿಂದ ಈ ರೋಗವು ಆಕಳು, ಎಮ್ಮೆ, ಕುರಿಗಳಲ್ಲಿ ಬರುತ್ತವೆ"[೧೦]. ಈ ರೋಗವು ಸಾಮಾನ್ಯವಾಗಿ ಪ್ರತಿ ವರ್ಷ ಜೂನ್ ನಿಂದ ನವೆಂಬರ್ ವರೆಗೆ ಕಾಣಿಸಿಕೊಳ್ಳುತ್ತದೆ. ಸೂಕ್ಷಾಣುಗಳಿರುವ(ಕಲುಷಿತ) ನೀರನ್ನು ಸೇವಿಸುವುದರಿಂದ ಚಪ್ಪೆರೋಗ ಹರಡುತ್ತದೆ.

**ರೋಗದ ಲಕ್ಷಣ ಪತ್ತೆ ಹಚ್ಚುವ ಜ್ಞಾನ**

ಚಪ್ಪೆರೋಗದ ಲಕ್ಷಣವೆಂದರೆ ವಿಪರೀತ ಜ್ವರ, ದೊಡ್ಡ ಮಾಂಸಖಂಡಗಳು ಬಾತುಕೊಳ್ಳುವುದು, ಬಾತುಕೊಂಡ ಜಾಗದಲ್ಲಿ ಕೈಯಾಡಿಸಿದರೆ ಪರ್ ಪರ್ ಎನ್ನುವ ಶಬ್ದವನ್ನು ಮಾಡುತ್ತದೆ. ದನಗಳು ಸರಿಯಾಗಿ ಮೇವು ತಿನ್ನುವುದಿಲ್ಲ. ಹಸುಗಳಿಗೆ ಈ ರೋಗ ಬಂದರೆ ಹಾಲು ಕರೆಯುವ ಪ್ರಮಾಣ ಕಡಿಮೆಯಾಗುತ್ತದೆ. ಈ ಎಲ್ಲಾ ಲಕ್ಷಣಗಳನ್ನು ಗುರುತಿಸಿ ರೋಗವನ್ನು ಖಚಿತಪಡಿಸಿಕೊಂಡು ಮದ್ದು ಮಾಡುತ್ತಾರೆ.

**ಪಾರಂಪರಿಕ ಮದ್ದು:** ಕಾಯಿಸಿದ ಕಬ್ಬಿಣದ ಸೆಳೆಯಿಂದ ಬಾವಿನ ಮೇಲೆ ಬರೆ ಹಾಕುತ್ತಾರೆ. ಒಂದು ವೇಳೆ ಅದಕ್ಕೆ ವಾಸಿ ಆಗದಿದ್ದರೆ ಕರ್ಪೂರ ಮತ್ತು ಕೊಬ್ಬರಿ ಎಣ್ಣೆಯನ್ನು ಸ್ವಲ್ಪ ಬೆಚ್ಚಗೆ ಕಾಯಿಸಿ ಬಾವಿಗೆ ಹಚ್ಚುತ್ತಾರೆ. ಮತ್ತೊಂದು ವಿದಾನವೆಂದರೆ ಎರಡು ಮೆಣಸು, ಎರಡು ಬೆಳ್ಳುಳ್ಳಿ ಬೇಳೆಗಳನ್ನು ನೀರಿನಲ್ಲಿ ಅರೆದು ಪ್ರತಿದಿನ ಎರಡು ಬಾರಿ ಒಂದೊಂದು ಗೊಟ್ಟದಂತೆ ಮೂರುದಿನ ಕುಡಿಸಿದರೆ ರೋಗ ವಾಸಿಯಾಗುತ್ತದೆ.

**ಕಾಲುಬಾಯಿ ರೋಗ:** ಸೂಕ್ಷ್ಮಾಣುವಿರುವ ಮೇವು, ನೀರು (ಕಲುಷಿತ ಮೇವು, ನೀರು) ಸೇವಿಸುವುದರಿಂದ ಈ ಕಾಯಿಲೆ ದನಗಳಿಗೆ ಬರುತ್ತದೆ. ಉಸಿರಾಟದ ಮೂಲಕವೂ ಬರುತ್ತದೆ. ಈ ಕಾಯಿಲೆ ಒಮ್ಮೆ ಯಾವುದಾದರೂ ಒಂದು ದನಕ್ಕೆ ಬಂದರೆ ಎಲ್ಲಾ ದನಗಳಿಗೆ ಹರಡುತ್ತದೆ. ವರ್ಷದಲ್ಲಿ ಜನವರಿಯಿಂದ ಮಾರ್ಚನಲ್ಲಿ ಈ ರೋಗ ಬರುತ್ತದೆ.

**ರೋಗದ ಲಕ್ಷಣ ಪತ್ತೆ ಹಚ್ಚುವುದು**

ದನಗಳ ರೋಗಗಳನ್ನು ಪತ್ತೆ ಹಚ್ಚಲು ನಮ್ಮ ಜನಪದರು ಕೆಲವು ಸೂಕ್ಷ್ಮತೆಗಳನ್ನು ಗಮನಿಸುತ್ತಾರೆ. ಈ ಕಾಯಿಲೆ ಬಂದರೆ ದನಗಳಿಗೆ ವಿಪರೀತ ಜ್ವರ ಬರುತ್ತದೆ ಮೇವು ನೀರು ಬಿಡುತ್ತವೆ, ಬಾಯಿಯಲ್ಲಿ ಮತ್ತು ನಾಲಿಗೆಯಲ್ಲಿ ಮೊದಲು ಗುಳ್ಳೆಗಳು ಕಾಣಿಸಿಕೊಂಡು ನಂತರ ಅವು ಒಡೆದು ಹುಣ್ಣುಗಳಾಗುತ್ತವೆ. ಬಾಯಿಯಿಂದ ಒಂದೇ ಸಮನೆ ಜೊಲ್ಲು ಸುರಿಯುತ್ತದೆ. ಕಾಲಿನ ಗೊರಸುಗಳ ಮಧ್ಯೆ ಹುಣ್ಣುಗಳಾಗಿ ಹುಳುಗಳು ಸೇರಿಕೊಂಡು ಕೀವು ಬರುತ್ತದೆ. ಇದರಿಂದ ದನಗಳು ಕುಂಟುತ್ತಾ ನಡೆಯುತ್ತವೆ ಅಥವಾ ಸುಮ್ಮನೆ ಮಲಗಿ ಬಿಡುತ್ತವೆ ಮೊಲೆ ಅಥವಾ ಮೊಲೆಯ ತೊಟ್ಟಿನಲ್ಲಿ ಹುಣ್ಣುಗಳಾಗಿ ಕೆಚ್ಚಲಿಗೆ ಬಾವು ಬರುತ್ತದೆ.

**ಪಾರಂಪರಿಕ ಮದ್ದು**

ಕಾಲುಬಾಯಿ ರೋಗದಿಂದ ದನಗಳ ಬಾಯಿ ಹುಣ್ಣಾಗಿ ಮೇವು ತಿನ್ನಲು ಬಾರದಿರುವುದರಿಂದ ಬಾಳೆಹಣ್ಣು, ಬೆಲ್ಲವನ್ನು ತಿನ್ನಿಸುತ್ತಾರೆ. ಕಾಲು ಗೊರಸಿನಲ್ಲಿನ ಹುಳುಗಳು ಹೊರಬರಲು ದನಗಳನ್ನು ಕೆಸರಿನಲ್ಲಿ ಓಡಾಡಿಸಿ ನಂತರ ಬಿಸಿಲಿನಲ್ಲಿ ಕಾದಿರುವ ಮಣ್ಣಿನಲ್ಲಿ ಓಡಾಡಿಸುತ್ತಾರೆ. ಹೀಗೆ ಮಾಡುವುದರಿಂದ ಮೊದಲು ಕೆಸರಿನ ತಂಪಿಗೆ ಹುಳುಗಳು ಹೊರ ಬರುತ್ತವೆ, ಆಗ ಬಿಸಿ ಮಣ್ಣಿನಲ್ಲಿ ಅವುಗಳನ್ನು ಓಡಾಡಿಸುವುದರಿಂದ ಹುಳುಗಳು ಸಾಯುತ್ತವೆ ಮತ್ತು ನೋವು ಕಡಿಮೆಯಾಗುತ್ತದೆ. ಹೀಗೆ ಮಾಡಿ ತಮ್ಮ ದನಕರುಗಳನ್ನು ಗುಣಪಡಿಸುತ್ತಾರೆ ಬಾಯಿನೋವಿಗೆ ಮೆಂತ್ಯೆ ಸೊಪ್ಪನ್ನು ತಿನ್ನಿಸುತ್ತಾರೆ, ತಾವರೆ ಮರದ ತೊಗಟೆಯನ್ನು ಪುಡಿ ಮಾಡಿ ತಿನ್ನಿಸುತ್ತಾರೆ ಅಲ್ಲದೆ ಇತ್ತೀಚಿಗೆ ಆಧುನಿಕ ಔಷಧೋಪಚಾರಗಳನ್ನು ಸಹ ಮಾಡುತ್ತಿದ್ದಾರೆ.

**ಸೆಲೆರೋಗ**

ದನಗಳಿಗೆ ಬರುವ ಸೆಲೆ ರೋಗದಲ್ಲಿ ಎರಡು ಬಗೆ ೧ ಓಣಸೆಲೆ, ೨ ಊದು ಸೆಲೆ. ಸೆಲೆ ಆಗಿದ್ದರೆ ದನಗಳ ಮೂಗು ಒಣಗುತ್ತದೆ, ನೀರು ಕುಡಿಯುವುದಿಲ್ಲ, ಮೇವು ತಿನ್ನುವುದಿಲ್ಲ, ನೆಮರು ಹಾಕುವುದಿಲ್ಲ, ಸಗಣಿ ಹಾಕುವುದಿಲ್ಲ ಉಚ್ಚೆ ಓಯ್ಯುವುದಿಲ್ಲ, ಹೊಟ್ಟೆ ಊದಿಕೊಳ್ಳುತ್ತದೆ. ಈ ಲಕ್ಷಣಗಳನ್ನು ಗುರುತಿಸಿ ಇದು ಒಣಸೆಲೆಯೋ ಅಥವಾ ಊದು ಸೆಲೆಯೊ ಎಂದು ಗುರುತಿಸಿ ಮದ್ದು ಮಾಡುತ್ತಾರೆ.

ಒಣಸೆಲೆಯಾಗಿದ್ದರೆ ದನಗಳ ಮುಡದ ಭಾಗ(ಮೂಗಿನ ಭಾಗ) ಹಿಡಿದರೆ ಬಗ್ಗುತ್ತದೆ ಇದಕ್ಕೆ ತುಂಬೆಗಿಡದ ಸೊಪ್ಪು, ಏಳು ಮೆಣಸು, ಏಳು ಬೆಳ್ಳುಳ್ಳಿ ಬೇಳೆಗಳನ್ನು ಸಣ್ಣಗೆ ಅರೆದು ಹೊಟ್ಟೆಗೆ ತಿನ್ನಿಸಿ ಮೂಗಿಗೆ ಒಂದಿಷ್ಟು ರಸ ಹಚ್ಚುತ್ತಾರೆ ಆಗ ಒಣಸೆಲೆ ವಾಸಿಯಾಗುತ್ತದೆ.

ಊದು ಸೆಲೆಯಾಗಿದ್ದರೆ ಹೊಟ್ಟೆ ಊದಿಕೊಂಡಿರುತ್ತದೆ. ಆಗ ಹುರುಳಿಕಾಳನ್ನು ಒಲೆಯ ಮೇಲೆ ಕುದಿಸಿ ಅದರ ಜೊತೆ ನಾಲ್ಕು ಮೆಣಸಿನ ಕಾಯಿಯನ್ನು ಕುದಿಸಿ ಅವು ಕುದಿಯುತ್ತಿರುವಾಗಲೇ ತೆಗೆದುಕೊಂಡು ನೀರಿಗೆ ಹಾಕಿ ಸೆಲೆ ಆದ ದನಗಳಿಗೆ ಕುಡಿಸಬೇಕು ಆಗ ಊದು ಹೊಟ್ಟೆ ಇಳಿಯುತ್ತದೆ ದನ ಗುಣವಾಗುತ್ತದೆ. ಸರಳ ವಿಧಾನವೆಂದರೆ ಎರಡು ಹಣ್ಣು ಮೆಣಸಿನಕಾಯಿ ಅರೆದು ದನದ ಎರಡೂ ಕಣ್ಣಿಗೆ ಹಚ್ಚಬೇಕು ಆಗ ಕೂಡಲೇ ಆ ಸೆಲೆಯಾದ ಎತ್ತು ಅಥವಾ ಹಸು ಸಗಣಿ ಹಾಕಿ

ಉಚ್ಚೆ ಹೋಯ್ದು ನಿರಾಳವಾಗುತ್ತವೆ. ಮತ್ತೊಂದು ವಿಧಾನವೆಂದರೆ ಸೆಲೆಯಾದ ದನದ ಮೂಗಿನ ಮೇಲಿನ ನರವನ್ನು ಉಳಿಯಿಂದ ಹೊಡೆದು ಕತ್ತರಿಸುತ್ತಾರೆ ಆಗ ಕೆಟ್ಟ ರಕ್ತ ಹೊರಗೆ ಹೋಗಿ ಸೆಲೆ ವಾಸಿಯಾಗುತ್ತದೆ.

**ಜಂತುರೋಗ**

"ಈ ರೋಗವು ಟಾಕ್ರೋಕೇರ ಮೀಟಲೋರಂ ಎಂಬ ಜಂತು ಹುಳಿವಿನಿಂದ ಎಮ್ಮೆ ಮತ್ತು ಹಸುಗಳ ಕರುಳಲ್ಲಿ ಬಹಳ ಪ್ರಮಾಣದಲ್ಲಿ ಬರುತ್ತದೆ"[೧೧]. ಆಕಳು ಅಥವಾ ಎಮ್ಮೆಗಳಿಗೆ ಮೊದಲು ಬರುವ ಈ ರೋಗ ಅವುಗಳ ಹಾಲು ಕುಡಿಯುವ ಕರುಗಳಿಗೆ ತಗುಲುತ್ತದೆ, ಅಥವಾ ಕರು ಹೊಟ್ಟೆಯಲ್ಲಿದ್ದಾಗಲೇ ಬರುತ್ತದೆ ಇಲ್ಲವೆ ಜಂತಿನ ಮರಿ ಇರುವ ನೀರನ್ನು ಕುಡಿದರೆ ಅಂಥಹ ಮೇವನ್ನು ತಿಂದರೆ ಈ ರೋಗ ಬರುತ್ತದೆ.

**ರೋಗದ ಲಕ್ಷಣ ಗುರುತಿಸುವುದು**

ಜಂತು ರೋಗಕ್ಕೆ ಒಳಗಾದ ಕರುಗಳು ಸರಿಯಾಗಿ ಬೆಳೆಯುವುದಿಲ್ಲ, ಹೊಟ್ಟೆ ದಪ್ಪ ಕಾಲುಗಳು ಸಣ್ಣ, ದೇಹದ ಕೂದಲು ಒರಟು ಆಗಿರುತ್ತವೆ ಮತ್ತು ಹೆಚ್ಚಿಗೆ ಬೆಳೆದಿರುತ್ತವೆ. ಸಗಣಿ ಸರಿಯಾಗಿ ಹಾಕುವುದಿಲ್ಲ, ಗಟ್ಟಿಯಾಗಿ ತಿಣಕಿ ಸಗಣಿ ಹಾಕುತ್ತವೆ, ಕೆಲವೊಮ್ಮೆ ಬೇಧಿಯನ್ನು ಸಹ ಮಾಡಿಕೊಳ್ಳುತ್ತವೆ.

ಪಾರಂಪರಿಕ ಮದ್ದು: ಈ ರೋಗಕ್ಕೆ ತುತ್ತಾಗಿ ಕರುಗಳು ಸಾಯುವುದನ್ನು ನಿಲ್ಲಿಸಲು ಒಂದು ಚಿಟಕಿಯಷ್ಟು ಇಂಗನ್ನು ನೀರಿನಲ್ಲಿ ಕಲಸಿ ಗೊಟ್ಟದಿಂದ ಕರುಗಳಿಗೆ ಕುಡಿಸಬೇಕು, ಮತ್ತು ಸ್ವಲ್ಪ ಔಡಲ ಎಣ್ಣೆಯಲ್ಲಿ ವಿಷಮಂಜರಿ ಪುಡಿ ಹನ್ನೆರಡು ತೊಲಿ ಕೂಡಿಸಿ ಗೊಟ್ಟದಿಂದ ಹಾಕಿದರೆ ಜಂತುಗಳು ಸಾಯುತ್ತವೆ. ಅಥವಾ ಹಾಗಲಕಾಯಿ ರಸ ಕುಡಿಸಬೇಕು, ಇಲ್ಲವೆ ಕಹಿ ಸೌತೆಕಾಯಿ ರಸ ಕುಡಿಸಬಹುದು, ಮತ್ತಿ ಸೊಪ್ಪಿನ ಎಳೆ ಕುಡಿಯನ್ನು ತಿನ್ನಿಸುತ್ತಾರೆ. ಹೀಗೆ ತಮ್ಮಲ್ಲೇ ಲಭ್ಯವಿರುವ ವಸ್ತು ಸಾಮಗ್ರಿಗಳನ್ನು ಬಳಸಿಕೊಂಡು ಔಷಧಿ ಮಾಡಿ ಕರುಗಳಿಗೆ ತಿನ್ನಿಸಿ ಅಥವಾ ಕುಡಿಸಿ ಜಂತುರೋಗವನ್ನು ವಾಸಿಮಾಡುವ ಜ್ಞಾನವನ್ನು ಇವರು ಪರಂಪರೆಯಿಂದ ರೂಡಿಸಿಕೊಂಡು ಬಂದಿದ್ದಾರೆ.

**ಮಂಡಿನೋವು**

ದನಕರುಗಳಿಗೆ ಮಂಡಿನೋವು ಉಂಟಾಗಿ ತೊಂದರೆ ಪಡುತ್ತಿದ್ದರೆ ಅದಕ್ಕೂ ಸಹ ಮದ್ದು ಮಾಡುತ್ತಾರೆ. "ಎರಡು ಹಿಡಿಯಷ್ಟು ಉಪ್ಪನ್ನು ಬಟ್ಟೆಯಲ್ಲಿ ಗಂಟುಕಟ್ಟಿ ಬೆಂಕಿಯಲ್ಲಿ ಕಾಯಿಸಿ ಅದನ್ನು ಮಂಡಿಯ ಭಾಗಕ್ಕೆ ಒತ್ತಿ ಶಾಖ ಕೊಡಬೇಕು. ಶಿವಣಿ ಎಲೆಯ ತೊಗಟೆ ತೆಗೆದು ಶುಂಠಿ ಸೇರಿಸಿ ಜಜ್ಜಿ ಕುಡಿಸುವುದು"[೧೨]. ಮಂಡಿನೋವಿಗೆ ಕಂಪಳದೇವರ ಹಟ್ಟಿಯಲ್ಲಿ ಸಹ ಜನಪದರು ಇದೇ ವಿಧವಾದ ಪದ್ಧತಿಯನ್ನು ಅನುಸರಿಸುತ್ತಾರೆ.

**ಜ್ವರ ಬಂದರೆ**

ದನಕರುಗಳಿಗೆ ಜ್ವರ ಬಂದಿದ್ದರೆ ಇವರು ಗುಣಪಡಿಸಿಕೊಳ್ಳಲು ಕಂಡುಕೊಂಡಿರುವ ಪರ್ಯಾಯವೆಂದರೆ ಸ್ವಲ್ಪ ಬಿಸಿ ನೀರು ಉಪ್ಪು, ಕಾಳು ಮೆಣಸು ಜೀರಿಗೆ, ಅರಿಶಿಣ, ಸೇರಿಸಿ

ಕುಡಿಸಬೇಕು ಅಥವಾ ೩-೪ ತುಂಡು ಒಣ ಅರಿಶಿಣದ ಕೊಂಬು, ನಾಲ್ಕು ಚಮಚ ಅಡುಗೆ ಸೋಡಾ ಐದು ಒಣ ಶುಂಠಿಯನ್ನು ಪುಡಿ ಮಾಡಿ ಉಂಡೆಮಾಡಿ ದಿನಕ್ಕೆ ಒಂದರಂತೆ ಮೂರು ದಿನ ನೀಡಬೇಕು ಹೀಗೆ ಮಾಡುವುದರಿಂದ ಜ್ವರ ಕಡಿಮೆಯಾಗುತ್ತದೆ.

**ಗಾಯವಾಗಿ ಹುಳುವಾಗಿದ್ದರೆ**

ದನಗಳಿಗೆ ಕೊಂಬು ತಗುಲಿ, ಬೇರೆ ಬೇರೆ ಸಂದರ್ಭದಲ್ಲಿ ಏನಾದರೂ ಪೆಟ್ಟು ಬಿದ್ದು ಗಾಯಗಳಾಗಿ ಅವುಗಳಲ್ಲಿ ಹುಳು ಆಗಿದ್ದರೆ ಅವುಗಳನ್ನು ನಿವಾರಿಸಲು ಒಂದು ಹಿಡಿಯಷ್ಟು ಸೀತಾಫಲ ಗಿಡದ ಎಲೆಯನ್ನು ಅರೆದು ಗಾಯಕ್ಕೆ ಹಚ್ಚುತ್ತಾರೆ, ಇಲ್ಲವೆ ತಂಬಾಕು ಮತ್ತು ಸುಣ್ಣದ ನೀರನ್ನು ಸೇರಿಸಿ ಹಚ್ಚಿ ವಾಸಿ ಮಾಡುತ್ತಾರೆ. ಇದನ್ನು ಇವರು ಪರಂಪರೆಯಿಂದ ಕಂಡುಕೊಂಡಿದ್ದಾರೆ.

ಉಣ್ಣೆ ಹೆಚ್ಚಾಗಿದ್ದರೆ ಹಟ್ಟಿಯ ಜನರು ತಾವು ಸಾಕಿರುವ ದನಕರುಗಳಿಗೆ ಉಣ್ಣೆ ಹೆಚ್ಚಾಗಿದ್ದರೆ ಅದಕ್ಕೆ ಸೀತಾಫಲ ಗಿಡದ ಎಲೆಯನ್ನು ಅರೆದು ಮೈಗೆಲ್ಲಾ ಹಚ್ಚುತ್ತಾರೆ, ಹಸಿ ಅಡಕೆಯ ಎಲೆಯನ್ನು ಜಜ್ಜಿ ರಸ ತೆಗೆದು ಹಚ್ಚುವುದರಿಂದ ಉಣ್ಣೆಗಳು ಸಾಯುತ್ತವೆ.

ಬೇಧಿಯಾಗುತ್ತಿದ್ದರೆ ರಾಸುಗಳಿಗೆ ತಿಂದಮೇವು ಸರಿಯಾಗಿ ಜೀರ್ಣವಾಗದೇ ಬೇಧಿಯಾಗುತ್ತಿದ್ದರೆ ಅದಕ್ಕೆ ಹಟ್ಟಿಯ ಜನರು ಕಂಡುಕೊಂಡ ಔಷಧಿ ಎಂದರೆ ನೇರಳೆ ಮರದ ಚೆಕ್ಕೆಯನ್ನು ಕುಟ್ಟಿ ಕಷಾಯ ಮಾಡಿ ಕುಡಿಸುತ್ತಾರೆ. ಇಲ್ಲವೆ ವಿಭೂತಿ ಉಂಡೆಯ ಪುಡಿಯನ್ನು ಮೂರು ದಿನ ಮೂರು ಹೊತ್ತು ಹೊಟ್ಟೆಗೆ ಕುಡಿಸಬೇಕು, ಮತ್ತೊಂದು ವಿಧಾನವೆಂದರೆ ಮಾವಿನ ಮರದ ಚೆಕ್ಕೆಯನ್ನು ತೇಯ್ದು ತಿನ್ನಿಸುತ್ತಾರೆ, ಇಲ್ಲವೇ ಅನ್ನ ಉದ್ದಿನ ಹಿಟ್ಟು, ಹಲಸಿನ ಸೊಪ್ಪುಸೇರಿಸಿ ತಿನ್ನಿಸುತ್ತಾರೆ. ಹೀಗೆ ಮಾಡುವುದರಿಂದ ಬೇಧಿ ವಾಸಿಯಾಗುತ್ತದೆ.

**ಕೆಮ್ಮು ಆಗಿದ್ದರೆ**

ರಾಸುಗಳಿಗೆ ಕೆಮ್ಮು ಆಗಿ ಕೆಮ್ಮುತ್ತಿದ್ದರೆ ಅನ್ನಕ್ಕೆ ಬಿಳಿ ಈರುಳ್ಳಿಯನ್ನು ಬೆಲ್ಲದಲ್ಲಿ ಅದ್ದಿ ಮೂರು ದಿನದವರೆಗೆ ತಿನ್ನಿಸುತ್ತಾರೆ. ಅಥವಾ ಈರುಳ್ಳಿ ಶುಂಠಿ ಜೀರಿಗೆಯನ್ನು ತಿನ್ನಿಸುತ್ತಾರೆ.

ಗರ್ಭ ನಿಲ್ಲಲ್ಲು ಹಸು, ಎಮ್ಮೆಗಳು ಬೇಗನೆ ಬೆದೆಗೆ ಬಾರದಿದ್ದರೆ ಅಥವಾ ಬೆದಿಗೆ ಬಂದು ಹಲವು ಬಾರಿ ಗರ್ಭಧಾರಣೆ ಮಾಡಿಸಿದರೂ ಗರ್ಭ ನಿಲ್ಲದಿದ್ದರೆ. ಕೆಲವು ದಿನಗಳವರೆಗೆ ಪ್ರತಿದಿನ ಒಂದು ಹಿಡಿಯಷ್ಟು ಮದರಂಗಿ (ಮೆಹಂದಿ ಸೊಪ್ಪು) ಸೊಪ್ಪನ್ನು ತಿನ್ನಿಸುತ್ತಾರೆ. ಹೀಗೆ ಮಾಡುವುದರಿಂದ ಗರ್ಭ ನಿಲ್ಲುತ್ತದೆ.

ಬೆದೆಗೆ ಬಾರದಿದ್ದರೆ ಹಸು, ಎಮ್ಮೆಗಳು ಬೇಗ ಬೆದೆಗೆ ಬಾರದಿದ್ದರೆ ಕಹಿ ಸೌತೆಕಾಯಿಯನ್ನು ಏಳು ದಿನ ತಿನ್ನಲು ನೀಡಬೇಕು ಮತ್ತು ಚದರಂಗಿ(ಲಂಟಾನ) ಗಿಡದ ಬೇರನ್ನು ಮಜ್ಜಿಗೆಯಲ್ಲಿ ತೇಯ್ದು ಕುಡಿಸುವುದರಿಂದ ಬೆದೆಗೆ ಬರುತ್ತವೆ. ಬೇವಿನ ಸೊಪ್ಪನ್ನು ತಿನ್ನಿಸುವುದರಿಂದ ಸಹ ಹಸು, ಎಮ್ಮೆಗಳು ಬೆದೆಗೆ ಬರುತ್ತವೆ.

**ಹಾಲು ಹೆಚ್ಚಾಗಲು**

ಕರು ಹಾಕಿದ ಹಸು, ಎಮ್ಮೆಗಳು ಹಾಲು ಕಡಿಮೆ ಕರೆಯುತ್ತಿದ್ದರೆ, ಹಾಲು ಹೆಚ್ಚಾಗಲು ಕೆಲವು ಔಷಧಿ ಮದ್ದುಗಳನ್ನು ಮಾಡಿಕೊಳ್ಳುತ್ತಾರೆ. ಕಾಡು ಮಲ್ಲಿಗೆ ಸೊಪ್ಪನ್ನು ದನಗಳ ಮೇವಿನಲ್ಲಿ ಸೇರಿಸಿ ತಿನ್ನಿಸುತ್ತಾರೆ. ಹಾಗೆ ಮಾಡುವುದರಿಂದ ಹಾಲು ಹೆಚ್ಚುತ್ತದೆ. ಅಥವಾ ಅವು ಕರು ಹಾಕಿದ ದಿನದಿಂದ ೪೦ ದಿನಗಳವರೆಗೆ ಪ್ರತಿದಿನ ಒಂದು ಹಿಡಿಯಷ್ಟು ನೆನೆಸಿದ ನವಧಾನ್ಯಗಳನ್ನು ತಿನ್ನಿಸುತ್ತಾರೆ, ಸಜ್ಜೆಯನ್ನು ನೆನೆಸಿ ತಿನ್ನಿಸುತ್ತಾರೆ. ಹೀಗೆ ಈ ಎಲ್ಲಾ ವಿಧಾನಗಳಿಂದ ಹಾಲು ಹೆಚ್ಚುವಂತೆ ಮಾಡುತ್ತಾರೆ.

ಮಾಸ ಬೀಳದಿದ್ದರೆ ಹಸು–ಎಮ್ಮೆಗಳು ಕರು ಹಾಕಿದ ನಂತರ ಗರ್ಭದಲ್ಲಿರುವ ಮಾಸನ್ನು ವಿಸರ್ಜಿಸಬೇಕು, ಕೆಲವು ದನಗಳು ಬೇಗ ಮಾಸು ಹಾಕುವುದಿಲ್ಲ ಅಂತಹ ಸಂದರ್ಭದಲ್ಲಿ ನಮ್ಮ ಜನಪದರು ಆ ಹಸು, ಎಮ್ಮೆಗೆ ಬಿದಿರಿನ ಚಿಗುರು ಎಲೆಯನ್ನು ಭತ್ತದ ಹುಲ್ಲಿನೊಂದಿಗೆ ಸೇರಿಸಿ ತಿನ್ನಿಸುತ್ತಾರೆ.

**ಕಣ್ಣಿನಲ್ಲಿ ಹೂ ಕುಂತರೆ**

ದನಗಳ ಕಣ್ಣಿನ ಕಪ್ಪು ಗುಡ್ಡೆಯ ಮೇಲೆ ಬಿಳಿ ಬಣ್ಣದ ಗುಲಗಂಜಿ ಗಾತ್ರದ ಹೂವಿನಂಥ ಗೆಡ್ಡೆ ಬೆಳೆಯುತ್ತದೆ. ಇದು ಪೂರ್ತಿ ಕರಿಗುಡ್ಡೆಯನ್ನು ಆವರಿಸಿದರೆ ಆ ಕಣ್ಣು ಕಾಣುವುದಿಲ್ಲ. ಇಂತಹ ರೋಗದ ಲಕ್ಷಣ ಕಂಡ ಕೂಡಲೇ ಜನಪದರು ಕೆಲವು ಔಷಧಿ ಕ್ರಮಗಳನ್ನು ಕೈಗೊಳ್ಳುತ್ತಾರೆ

**ಪಾರಂಪರಿಕ ಮದ್ದು**

ಒಂದು ಲೋಟದಲ್ಲಿ ಉಪ್ಪು ಹಾಕಿಕೊಂಡು ನೀರು ತುಂಬಿ ಆ ಉಪ್ಪಿನ ನೀರನ್ನು ಬಾಯಲ್ಲಿ ಹಾಕಿಕೊಂಡು ಹೂವು ಕುಂತ ಕಣ್ಣಿಗೆ ಚಿರ್ರನೆ ಬಿಡುತ್ತಾರೆ. ನಂತರ ಐದು ನಿಮಿಷ ಬಿಟ್ಟು ಹಸಿರು ಗಿಡದ ಸೊಪ್ಪನ್ನು ಕಲ್ಲಿನಲ್ಲಿ ಅರೆದು ಅಥವಾ ಕೈಯಿಂದ ಉಜ್ಜಿ ಒಂದು ಬಿಳಿ ಬಟ್ಟೆಯಲ್ಲಿ ಹಾಕಿಕೊಂಡು ಕಣ್ಣಿಗೆ ಹಿಂಡಬೇಕು. ಹೀಗೆ ಮಾಡುವುದರಿಂದ ಕಣ್ಣಿನಲ್ಲಿ ಕುಂತ ಬಿಳಿ ಹೂವು ವಾಸಿಯಾಗುತ್ತದೆ. ಜನಪದ ವೈದ್ಯರು ಆ ಹಸಿರು ಗಿಡದ ಹೆಸರನ್ನು ಹೇಳುವುದಿಲ್ಲ, ಆ ಸೊಪ್ಪಿನ ಕೆಲವು ಲಕ್ಷಣಗಳನ್ನು ಮಾತ್ರ ಹೇಳುತ್ತಾರೆ. ಕಿತ್ತರೆ ತೊಟ್ಟಿನಲ್ಲಿ ಹಾಲು ಬರುತ್ತದೆ. ಒಸಕುವಾಗ ಸೋಪಿನಂಥ ನೊರೆ ಬರುತ್ತದೆ ಎನ್ನುತ್ತಾರೆ. ಒಟ್ಟಾರೆ ಇಂತಹ ಅನೇಕ ಗಿಡಗಂಟೆ, ನಾರು ಬೇರು ಪದಾರ್ಥಗಳನ್ನು ಬಳಸಿ ಹಟ್ಟಿಯ ಜನಪದರು ತಮ್ಮ ದನಕರುಗಳಿಗೆ ತಗುಲುವ ಕಾಯಿಲೆಗಳನ್ನು ಗುಣಪಡಿಸಿಕೊಳ್ಳುವ ಪಾರಂಪರಿಕ ವೈದ್ಯ ಪದ್ಧತಿಯನ್ನು ಕೆಲವರು ಉಳಿಸಿಕೊಂಡು ಮುಂದುವರೆಸಿಕೊಂಡು ಬಂದಿದ್ದಾರೆ.

**೩.೨.೨ ದನಗಳ ಸುಳಿ ನೋಡುವುದು**

ಕೃಷಿ ಸಂಸ್ಕೃತಿಯ ಹಟ್ಟಿಯ ಜನಪದರು ತಮ್ಮ ಕೃಷಿ ಬದುಕಿಗೆ ನೆರವಾಗುವ ಮತ್ತು ಹಾಲು ಹೈನಕ್ಕೆ ಬೇಕಾಗುವ ದನಕರುಗಳನ್ನು ಸಾಕುವಾಗ, ಕೊಳ್ಳುವಾಗ ಮತ್ತು ಮಾರುವಾಗ ಅವುಗಳ ಸುಳಿ ನೋಡಿ ಸಾಕುವುದು ಸಾಮಾನ್ಯ ಕಾರಣ ಸುಳಿಗಳಲ್ಲಿ ಕೆಟ್ಟಸುಳಿ, ಒಳ್ಳೆಯ ಸುಳಿಗಳಿರುತ್ತವೆ. ಕೆಟ್ಟ

ಸುಳಿಗಳಿರುವ ದನಕರುಗಳನ್ನು ಸಾಕಿದರೆ ಒಳ್ಳೆಯದಾಗುವುದಿಲ್ಲ ಎಂದು ನಂಬಿರುತ್ತಾರೆ. ಹೀಗೆ ಸುಳಿ ನೋಡಿ ವ್ಯವಹರಿಸುವ ಪದ್ಧತಿಗೆ ಜನರ ಆಡುಮಾತಿನಲ್ಲಿ ಸುಳಿಶಾಸ್ತ್ರ ಎನ್ನುತ್ತಾರೆ. "ಸುಳಿ ಎಂದರೆ ಎತ್ತುಗಳ ಮೈಮೇಲೆ ಇರುವ ಚಕ್ರಾಕಾರವಾಗಿರುವ ಕೂದಲಗಳ ಜಾಗ, ಮೈತುಂಬ ಹಾಗೆ ಚಕ್ರಾಕಾರವಾಗಿರುವ ಗುರುತುಗಳು ಕಾಣುತ್ತಿರುತ್ತವೆ. ಅವು ಯಾವ ಯಾವ ಜಾಗದಲ್ಲಿವೆ. ಎನ್ನುವುದರ ಮೇಲೆ ಅವುಗಳ ಗುಣಲಕ್ಷಣಗಳಿಗನುಗುಣವಾಗಿ ಸುಳಿಯ ಹೆಸರು ಹೇಳುತ್ತಾರೆ"[೧೩]. ಇಂತಹ ಸುಳಿಗಳನ್ನು ಹಟ್ಟಿಯ ಕೆಲ ಅನುಭವಿ ಹಿರಿಯರು ಗುರುತಿಸುತ್ತಾರೆ. ಸುಳಿಗಳಷ್ಟೇ ಅಲ್ಲದೇ ಎತ್ತಿನ ದೇಹದ ಇತರೆ ಅಂಗಗಳನ್ನು ಪರಿಗಣಿಸಿ ಒಳ್ಳೆಯ ಕೆಟ್ಟ ಎಂಬ ಸುಳಿ ಅಥವಾ ಲಕ್ಷಣಗಳನ್ನು ಗುರುತಿಸುತ್ತಾರೆ. ಹಸು, ಎಮ್ಮೆಗಳನ್ನು ಕೊಳ್ಳುವಾಗ ಸುಳಿ ಮುಂತಾದವುಗಳನ್ನು ಅಷ್ಟಾಗಿ ಕಟ್ಟುನಿಟ್ಟಾಗಿ ಪರಿಗಣಿಸುವುದಿಲ್ಲ. 'ಎತ್ತನ್ನು ಮುಂದೆ ನೋಡು, ಹಸು ಎಮ್ಮೆಯನ್ನು ಹಿಂದೆ ನೋಡು' ಎಂಬ ಮಾತು ಇವರಲ್ಲಿ ರೂಢಿಯಲ್ಲಿದೆ ಅಂದರೆ ಎತ್ತುಗಳನ್ನು ಕೊಳ್ಳುವಾಗ ಅದರ ಕೊಡು ಮತ್ತು ಹೆಗಲು ಮುಖ್ಯವಾಗಿ ನೋಡುತ್ತಾರೆ. ಆದರೆ ಹಸು, ಎಮ್ಮೆಗಳನ್ನು ಕೊಳ್ಳುವಾಗ ಹಿಂದೆ ಹೋಗಿ ಅವುಗಳ ಕೆಚ್ಚಲು ನೋಡುತ್ತಾರೆ. ಕೆಚ್ಚಲಿನ ದಪ್ಪ ಗಮನಿಸಿ ಅವುಗಳ ಗುಣ ಸ್ವಭಾವ ಅರಿತು ಬೆಲೆ ನಿರ್ಧರಿಸುತ್ತಾರೆ. ಪ್ರಸ್ತುತ ಈ ಅಧ್ಯಾಯದಲ್ಲಿ ನಾನು ಎತ್ತು ಮತ್ತು ಹಸುಗಳೆರಡರ ಸುಳಿಗಳು ಮತ್ತು ಲಕ್ಷಣಗಳನ್ನು ಒಳ್ಳೆಯ ಸುಳಿಗಳು ಮತ್ತು ಕೆಟ್ಟ ಸುಳಿಗಳೆಂದು ವಿಂಗಡಿಸಿ ಹೇಳಲು ಪ್ರಯತ್ನಿಸುತ್ತೇನೆ.

**ಒಳ್ಳೆಯ ಸುಳಿಗಳು(ಒಳ್ಳೆಯ ಲಕ್ಷಣಗಳು)**

ಕೆಲವೊಂದು ಸುಳಿಯ ಲಕ್ಷಣಗಳನ್ನು ನೋಡಿ ಅಥವಾ ಇತರ ರಚನೆಯನ್ನು ನೋಡಿ ಎತ್ತುಗಳು ಮತ್ತು ಹಸು, ಎಮ್ಮೆಗಳ ಸುಳಿಗಳನ್ನು ಒಳ್ಳೆಯದೆಂದು ನಮ್ಮ ಜನಪದರು ಹೇಳುತ್ತಾರೆ. ಅವರು ಹೇಳುವ ಒಳ್ಳೆಯ ಸುಳಿಗಳ ಹೆಸರುಗಳು ಮತ್ತು ಸ್ವಭಾವ.

* ಮುಕ್ಕಣ್ಣನ ಸುಳಿ ಎರಡು ಕಣ್ಣುಗಳ ನಡುವೆ ಸುಳಿ ಇದ್ದರೆ ಅದನ್ನು ಮುಕ್ಕಣ್ಣನ ಸುಳಿ ಎನ್ನುತ್ತಾರೆ. ಈ ಸುಳಿ ಇರುವ ಎತ್ತು ತುಂಬಾ ರೋಷದಿಂದ ಕೂಡಿರುತ್ತದೆ. ಇದು ಶ್ರಮದಾಯಕ ಕೆಲಸಗಳಿಗೆ ಹಿಂದೆ ಬೀಳದೆ ಮಾಡುತ್ತದೆ.

* ಬಾಸಿಂಗ ಸುಳಿ ಎತ್ತುಗಳ ಕಣ್ಣ ಹುಬ್ಬುಗಳ ಮೇಲಿರುವ ಸುಳಿಯನ್ನು ಬಾಸಿಂಗ್ ಸುಳಿ ಎನ್ನುತ್ತಾರೆ. ಇದು ಒಳ್ಳೆಯ ಸುಳಿ ಎನ್ನುತ್ತಾರೆ.

* ನಾಮದ ಸುಳಿ ಕಣ್ಣುಗಳ ಮಧ್ಯಭಾಗದಿಂದ ಮೇಲಕ್ಕೆ ಸಣ್ಣಗೆ ಚಕ್ರಹರಿದ ಹಾಗೆ ಸುಳಿ ಬಿದ್ದಿದ್ದರೆ ಅದನ್ನು ನಾಮಸುಳಿ ಅಥವಾ 'ಜ್ಯೋತಿಸುಳಿ' ಎನ್ನುತ್ತಾರೆ. ಈ ಸುಳಿ ಇರುವ ಎತ್ತುಗಳು ಮನೆಗೆ ಬಂದರೆ ಮನೆಗೆ ಬೆಳಕು ತರುತ್ತವೆ ಎಂಬ ನಂಬಿಕೆ ಇದೆ. ಅದೃಷ್ಟ ತರುವ ಸುಳಿ ಇದು.

* ನಾಗರ ಸುಳಿ ಎತ್ತಿನ ಗಂಗೆದೊಗಲಲ್ಲಿ ನಾಗರ ಹೆಡೆಯಂತಿದ್ದರೆ, ಅದನ್ನು ನಾಗರ ಸುಳಿ ಎನ್ನುತ್ತೇವೆ, ಈ ಸುಳಿ ಇರುವ ಎತ್ತುಗಳು ಛಲದಿಂದ ದುಡಿಯುತ್ತವೆ ಎಂಬುದು ಜನಪದರ ಮಾತು. ಈ ಮೇಲಿನ ಸುಳಿಗಳಲ್ಲಿ ಯಾವ ಸುಳಿ ಇದ್ದರೂ ಸಹ ಶ್ರೇಷ್ಠ ಎಂದು ಸಾಕಿಕೊಳ್ಳುತ್ತಾರೆ.

* ಎತ್ತಿನ ಹೊಟ್ಟೆ ಜೋಲುಬಿದ್ದು ಅಂಡು ಜೋತಾಡುತ್ತಿರುವ ಎತ್ತು ಭಾರ ಎಳೆಯುವಲ್ಲಿ ಶ್ರೇಷ್ಟ ಎಂದು ತಿಳಿಯುತ್ತಾರೆ.

* ದನಗಳಿಗೆ ಎಡಭಾಗದಲ್ಲಿ ಸುಳಿ ಇದ್ದು ತುಟಿ, ತೊಡೆ ಕೆಂಪಾಗಿಯೂ ಕಿವಿ ನೇರವಾಗಿದ್ದು ಕಾಲು ಗೊರಸು ಕೆಂಪಾಗಿದ್ದರೆ ಒಳ್ಳೆಯ ಲಕ್ಷಣ.

* ದನಗಳ ಕಾಲ ಗೊರಸು ಕಪ್ಪಾಗಿದ್ದರೆ, ಅಥವಾ ಬೆಳ್ಳಗಿದ್ದರೆ ಒಳ್ಳೆಯ ಲಕ್ಷಣ.

ಆಕಳು ಪೂರ್ತಿ ಕಪ್ಪಾಗಿದ್ದರೆ ಬಹಳ ಒಳ್ಳೆಯದು ಎನ್ನುತ್ತಾರೆ.

**ಕೆಟ್ಟ ಸುಳಿಗಳು/ಕೆಟ್ಟ ಲಕ್ಷಣಗಳು**

ನಮ್ಮ ಜನಪದರು ದನಕರುಗಳ ವಿಚಾರದಲ್ಲಿ ಸುಳಿಗಳನ್ನು ನೋಡುವುದು ಮರೆಯುವುದಿಲ್ಲ. ಅದರಲ್ಲೂ ಕೆಟ್ಟ ಸುಳಿಗಳಿರುವ ದನಕರುಗಳ ಬಗ್ಗೆ ತುಂಬಾ ಜಾಗ್ರತೆ ವಹಿಸುತ್ತಾರೆ. ಇದರ ಹಿನ್ನೆಲೆಯಲ್ಲೇ ಜನಪದರಲ್ಲಿ 'ಸುಳಿ ನೋಡಿ ಎತ್ತು ತತ್ತಾ' ಎಂಬ ಮಾತಿದೆ ಸುಳಿನೋಡಿ ಎತ್ತು ತಾ ಗುಣ ನೋಡಿ ಹೆಣ್ಣು ತಾ ಒಳ್ಳೆಯ ಗುಣವಿರುವ ಹೆಣ್ಣು ಮನೆಗೆ ಬಂದರೆ ಒಳ್ಳೆಯದು ಕೆಟ್ಟಸುಳಿ ಇರುವ ಎತ್ತು ಕೆಟ್ಟ ಗುಣವಿರುವ ಹೆಣ್ಣು ಮನೆಗೆ ಬಂದರೆ ಮನೆ ಹಾಳು ಎನ್ನುತ್ತಾರೆ. ಹಟ್ಟಿಯ ಜನಪದರು ದನಗಳ ಕೆಟ್ಟ ಸುಳಿಗಳನ್ನು ಗುರುತಿಸುವ ಬಗೆ ಮತ್ತು ಅವುಗಳ ಹೆಸರುಗಳನ್ನು ನೋಡುವುದಾದರೆ.

* ಬೇಡಿ ಸುಳಿ ಎತ್ತಿನ ಮುಂಗಾಲುಗಳ ಜಂಟಿಯ ಹಿಂಬದಿಯಲ್ಲಿ ಇರುವ ಸುಳಿಯನ್ನು ಬೇಡಿ ಸುಳಿ ಎನ್ನುತ್ತಾರೆ. ಈ ಸುಳಿ ಇರುವ ಎತ್ತನ್ನು ಕೊಂಡು ತಂದರೆ ಆ ಮನೆಯ ಯಜಮಾನನಿಗೆ ತಿಂಗಳೊಪ್ಪತ್ತಿನಲ್ಲೇ ಬೇಡಿ ಬೀಳುತ್ತದೆ ಎನ್ನುತ್ತಾರೆ. ಆದ್ದರಿಂದ ಇದು ಕೆಟ್ಟ ಸುಳಿ ಇಂತಹ ಸುಳಿ ಇರುವ ಎತ್ತನ್ನು ತರುವುದಿಲ್ಲ.

* ಪೊರಕೆ ಸುಳಿ ಬಾಲದ ಬುಡದ ಹತ್ತಿರ ಚಪ್ಪೆಯ ಮೇಲಿರುವ ಸುಳಿಯನ್ನು ಪೊರಕೆ ಸುಳಿ ಎನ್ನುತ್ತಾರೆ. ಅಥವಾ ಹಿಂಜುಳಿ ಎನ್ನುತ್ತಾರೆ ಇಂತಹ ಸುಳಿ ಇರುವ ಎತ್ತು ಮನೆಯಲ್ಲಿದ್ದರೆ ಮನೆಯನ್ನು ಪೊರಕೆಯಿಂದ ಗುಡಿಸಿದಂತೆ.

* ಗೊಟು ಸುಳಿ ಎತ್ತಿನ ಗುದದ್ವಾರದ ಹತ್ತಿರ ಇರುವಂತಹ ಸುಳಿ. ಇದು ಒಳ್ಳೆಯ ಸುಳಿ ಅಲ್ಲ ಎಂದು ಜನಪದರ ಮಾತು.

* ಸಿದಿಗೆ ಸುಳಿ ಈ ಸುಳಿ ಎತ್ತಿನ ನಾಲ್ಕು ಕಾಲುಗಳ ಬುಡದಲ್ಲಿ ಇರುತ್ತದೆ. ಇಂತಹ ಎತ್ತು ಮನೆಗೆ ಬಂದರೆ ಮನೆಯಲ್ಲಿ ಮೇಲಿಂದ ಮೇಲೆ ಸಾವುಗಳು ತಪ್ಪುವುದಿಲ್ಲ. ಇಡಿ ಮನೆಮಂದಿಗೆಲ್ಲಾ ಸಿದಿಗೆ (ಚಟ್ಟ) ಕಟ್ಟಿದಂತೆ ಇಂಥ ಎತ್ತು ಮನೆಗೆ ಬಂದರೆ ಮನೆಯಲ್ಲಿ ಯಾರಾದರೂ ಸಾಯುತ್ತಾರೆ ಎಂಬುದು ಇವರ ನಂಬಿಕೆ. ಇಂತಹ ಸುಳಿ ಇರುವ ಎತ್ತನ್ನು ಯಾರು ವ್ಯವಸಾಯಕ್ಕೆ, ಸಾಕಲು ಕೊಳ್ಳುವುದಿಲ್ಲ. ಕೆಲವರು ಈ ಸುಳಿಯನ್ನು ಕೀಲ ಸುಳಿ ಎಂತಲೂ ಕರೆಯುತ್ತಾರೆ. ಅಥವಾ ಕೀಲು ಕಂಟಕ ಎನ್ನುವುದು ಉಂಟು.

* ನಗಬಡಕ ಸುಳಿ ಎತ್ತಿನ ಹೆಗಲ ಮೇಲಿರುವ ಸುಳಿಯನ್ನು ನಗಬಡಕ ಸುಳಿ ಎಂದು ಹೇಳುತ್ತಾರೆ. ಈ ಸುಳಿ ಇರುವ ಎತ್ತು ಒಳ್ಳೆಯ ಶ್ರಮದಾಯಕ ಎತ್ತು. ಚೆನ್ನಾಗಿ ಕೆಲಸ ಮಾಡುತ್ತದೆ. ಆದರೆ ಇದರ ಜೊತೆ ಇರುವ ಎತ್ತು ಸಾಯುತ್ತದೆ. ಆದ್ದರಿಂದ ಈ ಸುಳಿ ಇರುವ ಎತ್ತು ಅವಲಕ್ಷಣ ಎಂದು ಯಾರೂ ಸಾಕುವುದಿಲ್ಲ.

* ಛತ್ರಿ ಸುಳಿ/ಕಾಸಿ ಸುಳಿ ಎತ್ತಿನ ಭುಜದ ಮೇಲೆ ಮತ್ತು ಹಿಂದೆ ಈ ಸುಳಿ ಇರುತ್ತದೆ. ಈ ಸುಳಿ ಇರುವ ಎತ್ತು ತಂದರೆ ತಂದವರ ಮನೆ ಕಾಕೆ/ಕಾಗೆ ಹೊಕ್ಕಂತೆ ಎಂದು ಹೇಳುತ್ತಾರೆ (ಸೂರಯ್ಯ:೫೫:ಲೋಕೀಕೆರೆ). ಇಂತಹ ಎತ್ತುಗಳನ್ನು ಸಹ ಸಾಕುವುದಿಲ್ಲ.

* ಎತ್ತಿನ ಗಂಗೆದೊಗಲಿನಲ್ಲಿ ನರಗಳು ಕಾಣುತ್ತಿದ್ದರೆ ಅಪಶಕುನವೆಂದು ಹೇಳುತ್ತಾರೆ.

* ಎತ್ತಿನ ಕೊಡು ಒಂದು ಮೇಲೆ ಇನ್ನೊಂದು ಕೆಳಗೆ ಬಾಗಿದ್ದರೆ ಅವಲಕ್ಷಣ.

* ಎತ್ತಿನ ಟೊಂಕ ಡೊಂಕಾಗಿ ಬೆನ್ನಿನ ಎಲುಬು ವಿಚಿತ್ರವಿದ್ದು ಕಣ್ಣುಗಳು ಭಯದಿಂದ ಕೂಡಿರುವಂತಿದ್ದರೆ ಆ ಎತ್ತು ಅವಲಕ್ಷಣ, ಅನಿಷ್ಟ ಎನ್ನುತ್ತಾರೆ.

* ಎತ್ತಿನ ತುಟಿ ಕಪ್ಪಾಗಿದ್ದು ತೇಗುವಂತಿದ್ದರೆ ಅವಲಕ್ಷಣವೆಂಬ ನಂಬಿಕೆ.

* ದನಗಳ ಬಾಲ ಚಿಕ್ಕದಾಗಿದ್ದರೆ ಒಳ್ಳೆಯದಲ್ಲವೆಂದು ಹೇಳಲಾಗುತ್ತದೆ.

ಇನ್ನು ಮುಂತಾದ ಹಲವಾರು ಸುಳಿ ಲಕ್ಷಣಗಳನ್ನು ನೋಡಿ ಹಟ್ಟಿಯ ಜನಪದರು ದನಗಳನ್ನು ಪಾಲನೆ ಪೋಷಣೆ ಮಾಡುತ್ತಾರೆ. ಮತ್ತು ಕೃಷಿಗೆ ಬಳಸುತ್ತಾರೆ ಒಟ್ಟಾರೆ ದನಗಳ ಸುಳಿ ನೋಡದೆ, ಕೊಳ್ಳುವುದು, ಸಾಕುವುದನ್ನು ಇಂದಿಗೂ ಸಹ ಮಾಡುವುದಿಲ್ಲ.

**೩.೨.೩ ದನಕರುಗಳ ಬಗೆಗಿನ ನಂಬಿಕೆ ನಿಷೇಧಗಳು**

ಹಟ್ಟಿಯ ಜನಪದರು ತಾವು ಸಾಕುವ ದನಕರುಗಳಿಗೆ ಸಂಬಂಧಿಸಿದಂತೆ ಕೆಲವು ನಂಬಿಕೆಗಳು ಮತ್ತೆ ಕೆಲವು ನಿಷೇಧಗಳನ್ನು ಹೊಂದಿದ್ದಾರೆ. ಅಂದರೆ ಈ ಹಿಂದೆ ಚರ್ಚಿಸಿದಂತೆ ಸುಳಿಗಳಲ್ಲಿ ಹೇಗೆ ಕೆಟ್ಟದ್ದು, ಒಳ್ಳೆಯದು ಎಂಬ ಲಕ್ಷಣಗಳಿವೆಯೋ ಅದೇ ರೀತಿ ಎತ್ತು, ಹಸು, ಎಮ್ಮೆಗಳ ಸಗಣಿ ಗೋತ ಅವುಗಳು ಬರುವುದು ಹೋಗುವುದು ಮುಂತಾದವುಗಳಿಗೆ ಸಂಬಂಧಿಸಿದಂತೆಯೇ ನಮ್ಮ ಕೃಷಿಕರು ಕೆಲವು ನಂಬಿಕೆಗಳನ್ನು ಬೆಳೆಸಿಕೊಂಡಿದ್ದಾರೆ. ಅವುಗಳಲ್ಲಿ ಕೆಲವು ಶುದ್ಧ ಮೂಲ ನಂಬಿಕೆಗಳಾದರೆ ಕೆಲವು ಉಪಯೋಗಿ ನಂಬಿಕೆಗಳು ಉದಾಹರಣೆಗೆ ಹಟ್ಟಿಯಲ್ಲಿ ಯಾರಾದರೂ ತಮ್ಮ ರಾಸುಗಳನ್ನು ಮಾರಿದರೆ ಅವುಗಳಿಗೆ ಕಟ್ಟಿದ ಕಣ್ಣಿ ಸಮೇತ ಮಾರುವುದಿಲ್ಲ. ಮನೆಯಲ್ಲಿ ದನಕರುಗಳು ಹೆಚ್ಚಬೇಕಾದರೆ ಕಣ್ಣಿಕೊಡಬಾರದು. ಒಂದು ವೇಳೆ ಕೊಳ್ಳುವವರು ಕಣ್ಣಿ ಬೇಕೇ ಬೇಕು ಎಂದು ಹಟ ಹಿಡಿದರೆ ಅದಕ್ಕೆ ಬೇರೆ ಬೆಲೆ ಕಟ್ಟಿ ಕೊಳ್ಳಬೇಕು. ಇಂತಹ ಹಲವು ನಂಬಿಕೆಗಳು ಹಟ್ಟಿಯ ಜನರಲ್ಲಿವೆ.

**ನಂಬಿಕೆಗಳು**

ಹೊಸ ಎತ್ತುಗಳು ಮನೆಗೆ ಬಂದರೆ ಮನೆ ಒಡತಿ ಅವುಗಳಿಗೆ ಕಾಲಿಗೆ ನೀರು ಹಾಕಿ ಓಕುಳಿ ತೆಗೆದು ಒಳಗೆ ಕರೆದುಕೊಳ್ಳುತ್ತಾಳೆ ಇದಕ್ಕೆ ಜನಪದರ ಮಾತಿನಲ್ಲಿ 'ಮನೆ ತುಂಬಿಸಿಕೊಳ್ಳುವುದು'

ಎನ್ನುತ್ತಾರೆ. ಹೊಸದಾಗಿ ಕೊಂಡು ತಂದ ಎತ್ತುಗಳನ್ನು ಮನೆ ತುಂಬಿಸಿಕೊಂಡಾಗ ಅವು ಬಲಗಾಲು ಮುಂದಿಟ್ಟು ಬಂದರೆ ಒಳ್ಳೆಯದು, ಬಂದ ಮೇಲೆ ಒಳಗೆ ಸಗಣಿ ಹಾಕಿ ಉಚ್ಚೆ ಹೊಯ್ದರೆ ಇನ್ನೂ ಒಳ್ಳೆಯದು ಎನ್ನುತ್ತಾರೆ.

ಪಶುಪಾಲಕ ಸಮುದಾಯವಾದ ಮ್ಯಾಸಬೇಡರಿಗೆ ಪಶುಗಳೇ ದೈವ ಸ್ವರೂಪ ಅದರಲ್ಲೂ ಇವರಲ್ಲಿ ದೇವರ ಹೆಸರಿನಲ್ಲಿ ದನಕರುಗಳನ್ನು ಬಿಡುವ ಪದ್ಧತಿ ಇದ್ದು ಅವುಗಳನ್ನು ದೈವವೆಂದು ಆರಾಧಿಸುತ್ತಾರೆ. ಹಬ್ಬ ಆಚರಣೆಗಳಲ್ಲಿ ಅವುಗಳಿಗೆ ಪ್ರಮುಖ ಆದ್ಯತೆ ಕೊಡುತ್ತಾರೆ. ದೇವರ ಎತ್ತುಗಳ ಸಗಣಿಯನ್ನು ನೆಲಕ್ಕೆ ಬೀಳದಂತೆ ಹೆಂಗಸರು ಸೆರಗಿನಲ್ಲಿ ಹಿಡಿದುಕೊಂಡು ಮನೆಗೆ ತಂದು ಪೂಜಿಸುತ್ತಾರೆ. ಹೀಗೆ ಮಾಡುವುದರಿಂದ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇವರದು.

ದೇವರಿಗೆ ಬಿಟ್ಟ ಹಸುಗಳ ಹಾಲನ್ನು ಮಾರಾಟ ಮಾಡುವುದಿಲ್ಲ ಹಾಗೆ ಮಾಡಿದರೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆ ಆದ್ದರಿಂದ ಅವುಗಳನ್ನು ಕಾಯುವ ಕಿಲಾರಿಗಳೇ ಹಾಲನ್ನು ಊಟಕ್ಕೆ ಬಳಸಿಕೊಳ್ಳುತ್ತಾರೆ. ತಮಗೆ ಅಗತ್ಯ ಇರುವಷ್ಟು ಹಾಲು ಕರೆದು ಉಳಿದದ್ದನ್ನು ಕರುಗಳಿಗೆ ಬಿಡುತ್ತಾರೆ.

ಹಬ್ಬ ಆಚರಣೆಗಳಲ್ಲಿ ದೇವರಿಗೆ ದೇವರ ಹಸುಗಳ ಹಾಲು, ಮೊಸರು ಬೆಣ್ಣೆಯನ್ನು ಅರ್ಪಿಸುತ್ತಾರೆ ಹೀಗೆ ಮಾಡುವುದರಿಂದ ಸಮುದಾಯಕ್ಕೆ ಮತ್ತು ದನಕರುಗಳಿಗೆ ಒಳ್ಳೆಯದಾಗುತ್ತದೆ ಎನ್ನುತ್ತಾರೆ.

ವ್ಯವಸಾಯಕ್ಕೆ ಗೊಡ್ಡು ಹಸುವನ್ನು ಹೂಡಿದರೆ ಮುಂದೆ ಅದು ಕರು ಹಾಕುತ್ತದೆ ಎಂಬುದು ಇವರ ನಂಬಿಕೆ

ಸೋಮವಾರದ ದಿನ ಎತ್ತುಗಳನ್ನು ವ್ಯವಸಾಯಕ್ಕೆ ಹೂಡುವುದಿಲ್ಲ ಅಂದು ಬಸವಣ್ಣನ ವಾರ ಆದ್ದರಿಂದ ಅವುಗಳನ್ನು ಪೂಜಿಸಿ ವಿಶ್ರಾಂತಿ ಕೊಡುತ್ತಾರೆ.

**ನಿಷೇಧಗಳು**

ಹಟ್ಟಿಯ ಬೇಡರಲ್ಲಿ ದನಕರುಗಳಿಗೆ ಸಂಬಧಿಸಿದಂತೆ ಇರುವ ಕೆಲವು ನಂಬಿಕೆಗಳಂತೆ ನಿಷೇಧಗಳು ಸಹ ಇವೆ. ಕೆಲವು ಸನ್ನಿವೇಶಗಳನ್ನು ಅಪಶಕುನ ಎಂದು ಹೇಳುತ್ತಾರೆ.

* ವ್ಯವಸಾಯಕ್ಕೆ ಹೂಡಿರುವ ಎತ್ತುಗಳು ನೊಗದ ಸಮೇತ ಮನೆಯೊಳಕ್ಕೆ ಬಂದರೆ ಒಳ್ಳೆಯದಲ್ಲ ಎನ್ನುತ್ತಾರೆ ಆಗ ಆ ನೊಗವನ್ನು ಮುರಿದು ಮನೆಯ ಮಾಲಿಗೆಯ ಮೇಲೆ ಎಸೆಯುತ್ತಾರೆ.

* ಹಸುವನ್ನು ವ್ಯವಸಾಯಕ್ಕೆ ಹೂಡಬಾರದು ಎಂದು ಹೇಳುತ್ತಾರೆ.

* ಕೊಟ್ಟಿಗೆಯಲ್ಲಿ ಸತ್ತ ದನವನ್ನು ಹೊರತರುವಾಗ ಅದರ ಬಾಲ ನೆಲ ತಾಕಿ ಎಳೆಯುವಂತೆ ಎಳೆತರಬಾರದು. ಕಾರಣ ಬಾಲ ನೆಲ ಬಳಿಯುವಂತೆ ಎಳೆದರೆ ಕೊಟ್ಟಿಗೆಯಲ್ಲಿ ಮತ್ತೆ ಮತ್ತೆ ದನಗಳು ಸಾಯುತ್ತವೆ ಎಲ್ಲಾ ದನಗಳನ್ನು ಬಳಿದುಕೊಂಡು ಹೋದಂತೆ ಆಗುತ್ತದೆ ಎನ್ನುತ್ತಾರೆ.

* "ಎತ್ತುಗಳು, ಕರುಗಳ, ಕಣ್ಣಿ ದಾಟಬಾರದು, ಒಳ್ಳೆಯದಲ್ಲ ಎನ್ನುತ್ತಾರೆ, ಯಾಕೆ ಎಂದರೆ ಅವು ಪರಮಾತ್ಮ ಇದ್ದ ಹಾಗೆ ಅನ್ನುತ್ತಾರೆ. ಕಣ್ಣಿ ದಾಟಬಾರದು ಎನ್ನುವ ಈ ನಂಬಿಕೆ ಬುದ್ಧನ ಕಾಲದಿಂದಲೂ ಇದೆ. ಬೌದ್ಧಿಯರು ೧೧೩–೬೧೩ ರಲ್ಲಿ ಕರುವನ್ನು ಕಟ್ಟಿದ ಹಗ್ಗವನ್ನು ದಾಟಬಾರದು ಎನ್ನುತ್ತಾರೆ"[೧೪]. ಜನಪದರು ಈ ರೀತಿ ಹೇಳುವುದರ ಹಿಂದೆ ತಮ್ಮ ಕ್ಷೇಮದ ಉದ್ದೇಶ ವಿದೆ ಹೇಗೆಂದರೆ ಎತ್ತುಗಳ ಕಣ್ಣಿ ದಾಟುವಾಗ ಅವುಗಳ ಕೊಂಬುಗಳು ತಗಲಿ ಅಪಾಯ ಉಂಟಾಗುವ ಸಾಧ್ಯತೆ ಇರುತ್ತದೆ. ಅಥವಾ ಕರುಗಳಾದರೆ ಅವು ತುಂಬಾ ಚೂಟಿ ಇರುವುದರಿಂದ ದಾಟುವಾಗ ತಕ್ಷಣ ಎದ್ದು ದಾಟುವವರು ಬೀಳುವ ಸಾಧ್ಯತೆ ಇರುತ್ತದೆ. ಈ ಎಲ್ಲಾ ಉದ್ದೇಶಗಳಿಂದ ಇಂತಹ ನಂಬಿಕೆ ನಿಷೇಧ ಇವರಲ್ಲಿ ಹುಟ್ಟಿಕೊಂಡಿವೆ ಎಂದು ಹೇಳಬಹುದು. ದನಕರುಗಳಿಗೆ ಸಂಬಂಧಿಸಿದಂತೆ ಇಂತಹ ಅನೇಕ ನಂಬಿಕೆಗಳು ಹಟ್ಟಿಯ ಜನಪದರಲ್ಲಿ ಇಂದಿಗೂ ರೂಢಿಯಲ್ಲಿರುವುದು ಕಂಡು ಬರುತ್ತದೆ.

**೩.೨.೪ ದನಗಳಿಗೆ ಕಟ್ಟುವ ಹಗ್ಗಗಳು ಮತ್ತು ಉಪಕರಣಗಳು**

ಹಟ್ಟಿಯ ಜನರು ತಾವು ಸಾಕಿಕೊಂಡಿರುವ ದನಕರುಗಳನ್ನು ನಿಯಂತ್ರಿಸಲು ಮತ್ತು ಅವುಗಳ ಅಂದ ಚೆಂದಕ್ಕಾಗಿ ಆರೋಗ್ಯಕ್ಕಾಗಿ ಕೊರಳಿಗೆ ಕೆಲವು ಹಗ್ಗಗಳನ್ನು ಕಟ್ಟುತ್ತಾರೆ. ಅಲ್ಲದೆ ಕೆಲವು ಉಪಕರಣಗಳನ್ನು ಸಹ ಬಳಸುತ್ತಾರೆ. ಅವರು ಬಳಸುವ ಹಗ್ಗ–ಉಪಕರಣಗಳಲ್ಲಿ ಹಲವು ಬಗೆಗಳಿದ್ದು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ ಮತ್ತು ಅವುಗಳು ತಮ್ಮದೇ ಆದ ಬೇರೆ ಬೇರೆ ಕೆಲಸಗಳನ್ನು ನಿರ್ವಹಿಸುತ್ತವೆ. ಇವರು ದನಕರುಗಳಿಗೆ ಕಟ್ಟುವ ಹಗ್ಗಗಳು ಮತ್ತು ಅವುಗಳ ಬಳಕೆ ಮತ್ತು ತಯಾರಿಸುವ ಜ್ಞಾನವನ್ನು ಈ ರೀತಿಯಾಗಿ ನೋಡಬಹುದು.

ಕೊರಳ ಹಗ್ಗ/ಕೊರಳ ಅಗಡು ಕತ್ತಾಳೆ ನಾರು, ಸೆಣಬಿನ ನಾರುಗಳಿಂದ ಮಾಡಿದ ಹಗ್ಗವನ್ನು ದನಕರುಗಳ ಕೊರಳಿಗೆ ಕಟ್ಟುತ್ತಾರೆ. ಇದನ್ನು ಕೊರಳ ಹಗ್ಗ, ಕೊರಳ ಅಗಡು ಎನ್ನುತ್ತಾರೆ. ಹುಟ್ಟಿದ ಕರುಗಳಿಗೆ ತಿಂಗಳೊಪ್ಪತ್ತು ಸಣ್ಣ ಕಣ್ಣಿಯಿಂದ ಕಾಲಿಗೆ ಕಟ್ಟುತ್ತಾರೆ. ನಂತರ ಕೊರಳಿಗೆ ಸುತ್ತಿ ಅದು ಬಿಗಿಯದಂತೆ ಒಂದು ಹಗ್ಗದಿಂದ ಕತ್ತಿನ ಸರದ ಹಾಗೆ ಕಟ್ಟುತ್ತಾರೆ. ಈ ಕೊರಳ ಹಗ್ಗಕ್ಕೆ ಗೂಟದಲ್ಲಿನ ಹಗ್ಗದ ಕಣ್ಣಿಯನ್ನು ಸೇರಿಸಿ ದನಗಳನ್ನು ಕಟ್ಟುತ್ತಾರೆ.

**ಮೂಗುದಾಣೆ/ಮೂಗುದಾರ**

ನೂಲಿನಿಂದ ಇಲ್ಲವೆ ಪುಂಡಿ ನಾರಿನಿಂದ ತಯಾರಿಸಿದ ಸಣ್ಣ ತೆಳು ಹಗ್ಗದಿಂದ ಮಾಡಿದ ಇದನ್ನು ಸೊಕ್ಕಿದ ದನಗಳನ್ನು ನಿಯಂತ್ರಿಸಲು ಅವುಗಳ ಮೂಗಿನಲ್ಲಿ ದಬ್ಬಳದ ಮೂಲಕ ರಂಧ್ರಮಾಡಿ ದಾರವನ್ನು ಮೂಗಿನೊಳಗೆ ಸೇರಿಸಿ ಕುತ್ತಿಗೆಗೆ ಕಟ್ಟುತ್ತಾರೆ. ವ್ಯವಸಾಯ ಮಾಡಲು ದನಕರುಗಳನ್ನು ಹಗ್ಗ ಹಚ್ಚಿ ಹಿಡಿದುಕೊಂಡು ಹೋಗಲು ಬರಲು ಮೂಗುದಾರ ಉಪಯುಕ್ತ. ಅವುಗಳಿಗೆ ಇದು ನಿಯಂತ್ರಕವಾಗಿ ಕೆಲಸ ಮಾಡುತ್ತದೆ.

**ಗುದ್ದೆ**

ಪೋಲಿದನಗಳನ್ನು ಅಂದರೆ ಯಜಮಾನನ ಕೈಗೆ ಸಿಗದ ಬೇರೆ ಬೇರೆಯವರ ಹೊಲ–ಗದ್ದೆಗೆ ಹೋಗಿ ಮೇಯುವ ದನಗಳನ್ನು ನಿಯಂತ್ರಿಸಲು, ಸಾಮಾನ್ಯವಾಗಿ ಆಕಳು, ಎಮ್ಮೆಗಳನ್ನು ನಿಯಂತ್ರಿಸಲು

ಗುದ್ದೆಯನ್ನು ಬಳಸುತ್ತಾರೆ. ಗುದ್ದೆಯನ್ನು ಕೆಲವು ಕಡೆ ಲೊಳ್ಳಂಡಿ, ಡೊರಗಾ, ಗುದ್ದಿಗೆ ಎಂದು ಕರೆಯುತ್ತಾರೆ. ಇದನ್ನು ದನಕಾಯುವ ಹುಡುಗರು ಹೆಚ್ಚಾಗಿ ಓಡಾಡುವ ದನವನ್ನು ನಿಯಂತ್ರಿಸಲು ಸಿದ್ದಪಡಿಸಿ ಕುತ್ತಿಗೆಗೆ ಕಟ್ಟುತ್ತಾರೆ. ಒಂದು ಉದ್ದನೆಯ ಕಟ್ಟಿಗೆಗೆ ಹಗ್ಗ ಕಟ್ಟಿ ಆ ಹಗ್ಗವನ್ನು ಕಟ್ಟಿಗೆಗೆ ಮತ್ತು ಕೊರಳಿಗೆ ಕಟ್ಟುವಂತೆ ವಿಶೇಷವಾಗಿ ನಿರ್ಮಿಸುತ್ತಾರೆ. ಹೀಗೆ ಕಟ್ಟಿದಾಗ ಆ ಗುದ್ದೆ ಆ ದನದ ಮುಂದಿನ ಎರಡು ಕಾಲುಗಳ ಮಧ್ಯೆ ಸೇರಿಕೊಂಡು ನೆಲಕ್ಕೆ ಬಡಿಯುತ್ತಿರುತ್ತದೆ. ಆಗ ಅದು ಜೋರಾಗಿ ಓಡಾಡಲು ಬರುವುದಿಲ್ಲ ಕಾರಣ ಆ ಗುದ್ದೆ ಕಾಲುಗಳಿಗೆ ಅಡ್ಡ ಬರುತ್ತದೆ. ಈ ರೀತಿಯ ಪಾರಂಪರಿಕ ತಂತ್ರವನ್ನು ಬಳಸಿ ಹಟ್ಟಿಯ ಜನರು ತಮ್ಮ ಸೊಕ್ಕಿದ ದನಕರುಗಳನ್ನು ನಿಯಂತ್ರಿಸುತ್ತಾರೆ.

**ಕುಕ್ಕೆ**

ಬೆಳೆ ಇರುವ ಹೊಲದಲ್ಲಿ ಅಂತರ ಬೇಸಾಯ ಮಾಡುವಾಗ ಪೈರನ್ನು ಎತ್ತುಗಳು ತಿನ್ನಬಾರದು ಎಂದು ಅವುಗಳ ಬಾಯಿಗೆ ಕಟ್ಟಿರುವ ಮುಖವಾಡದ ರೀತಿಯ ಒಂದು ರೀತಿಯ ಸಾಧನ. ಉಸಿರಾಟಕ್ಕೆ ಅನುಕೂಲವಾಗಿದ್ದು ಮೇವು ತಿನ್ನಲು ಬಾಯಿತೆರೆಯದಂತೆ ವ್ಯವಸ್ಥೆ ಮಾಡಿರುತ್ತಾರೆ. ಇದನ್ನು ವಿಶಿಷ್ಟವಾಗಿ ತಯಾರಿಸುತ್ತಾರೆ, ಕುಕ್ಕೆಯನ್ನು ಹಟ್ಟಿಯಲ್ಲಿರುವ ಕೆಲವು ಹಿರಿಯರು ತಯಾರು ಮಾಡುತ್ತಾರೆ ಸಾಮಾನ್ಯವಾಗಿ ಹಾಸಿನ ನಾರಿನಿಂದ ಇದನ್ನು ತಯಾರಿಸುತ್ತಾರೆ ಹಿಂದೆ ಉಲಿ ಹಣ್ಣಿನ ಬಳ್ಳಿಯಿಂದ ತಯಾರಿಸುತ್ತಿದ್ದರು ಎಂದು ಹೇಳಲಾಗುತ್ತದೆ.

**ಮಿಣಿ**

ಎತ್ತುಗಳನ್ನು ಬಳಸಿ ಕೃಷಿಕೆಲಸ ಮಾಡುವಾಗ ಅಂದರೆ ಮಡಿಕೆ, ಕುಂಟೆ, ಎಡೆಕುಂಟೆ, ಕೂರಿಗೆ ಎಂಡೆಮಾರು ಮುಂತಾದ ಕೆಲಸ ಮಾಡುವಾಗ ಕೃಷಿ ಉಪಕರಣಗಳಿಗೆ ಕಟ್ಟುವ ದಪ್ಪ ಹಗ್ಗ ಇದನ್ನು ಮಿಣಿ ಎಂದು ಕರೆಯುತ್ತಾರೆ. ಮಿಣಿಯು ಎಲ್ಲಾ ಉಪಕರಣಗಳಿಗೆ ಬಿಗಿಯಾಗಿ ಪ್ರಮುಖವಾಗಿ ಬಳಕೆಯಾಗುತ್ತದೆ. ಮಿಣಿಯನ್ನು ಸಹ ಚರ್ಮ, ನಾರು, ನೂಲು ಇತ್ತೀಚೆಗೆ ಪ್ಲಾಸ್ಟಿಕಿನಿಂದಲೂ ಸಹ ತಯಾರಿಸುತ್ತಾರೆ.

**ಗೂಟ**

ಹಿಡಿಗಾತ್ರದ ಮೊಳ ಉದ್ದದ ಕಟ್ಟಿಗೆಯನ್ನು ಒಂದು ಬದಿಯನ್ನು ಚೂಪಾಗಿ ಮಾಡಿ ಅದನ್ನು ನೆಲದಲ್ಲಿ ನೆಟ್ಟು ಮೇಲ್ತುದಿಗೆ ಗಂಟೆಯಾಕಾರ ಮಾಡಿ ಹಗ್ಗ ಕಟ್ಟಲು ಅನೂಕೂಲವಾಗುವಂತೆ ಮಾಡಿರುತ್ತಾರೆ. ಕೆಲವು ಸಲ ಕಬ್ಬಿಣದಿಂದಲೂ ಸಹ ಇದನ್ನು ಮಾಡಿರುತ್ತಾರೆ. ಈ ಗೂಟಕ್ಕೆ ಹಗ್ಗ ಕಟ್ಟಿ ಆ ಹಗ್ಗವನ್ನು ಹಸು, ಎಮ್ಮೆ, ಎತ್ತು ಮುಂತಾದ ದನಕರುಗಳ ಕುತ್ತಿಗೆಗೆ, ಮೂಗುದಾರಕ್ಕೆ ಸೇರಿಸಿ ಕಟ್ಟುತ್ತಾರೆ. ಸೊಕ್ಕಿದ ದನಗಳನ್ನು ಎಡಕ್ಕೊಂದು ಬಲಕ್ಕೊಂದು ಗೂಟ ನೆಟ್ಟು ಕಟ್ಟುತ್ತಾರೆ.

**ಪಟಗಾಣಿ(ಜಂತಿಗೆ)**

ವ್ಯವಸಾಯ ಮಾಡುವಾಗ ಗಾಡಿ ಹೊಡೆಯುವಾಗ ನೊಗ ಹೆಗಲ ಮೇಲಿಟ್ಟು ಕೊರಳ ಪಟ್ಟಿ ಬಿಗಿಯುತ್ತಾರೆ. ಇದನ್ನೇ ಪಟಗಾಣಿ/ಜಂಟಿಗೆ/ಜತ್ತಿಗೆ ಎಂದು ಕರೆಯುತ್ತಾರೆ. ಇದು ನೊಗಕ್ಕೆ ಎತ್ತುಗಳ

ಕುತ್ತಿಗೆಗೆ ಬಿಗಿಯಾಗಿ ಜೋಡಣೆಯಾಗಿ ಕೆಲಸ ಮಾಡುತ್ತದೆ. ಇದನ್ನು ಸಹ ನೂಲು, ನಾರು, ಚರ್ಮ (ತೊಗಲು) ಗಳಿಂದ ವಿಶೇಷವಾಗಿ ತಯಾರಿಸುತ್ತಾರೆ. ಇಂತಹ ಹತ್ತಾರು ಸಣ್ಣ ಪುಟ್ಟ ವಸ್ತುಗಳು ದನಗಳಿಗೆ ಮತ್ತು ಕೃಷಿ ಕೆಲಸಗಳಿಗೆ ಉಪಯುಕ್ತವಾಗಿ ಕೆಲಸ ನಿರ್ವಹಿಸುತ್ತವೆ.

**ಬಾರಕೋಲು(ಬಾರಿಕೋಲು)**

ಒಂದು ಚಿಕ್ಕ ಕೋಲಿಗೆ ನೂಲಿನಿಂದಾಗಲಿ ಇಲ್ಲವೇ ನಾರಿನಿಂದಾಗಲಿ ದಾರ ಹೆಣದು ಕಟ್ಟಿ ಅದರ ಮುಂದೆ ತೊಗಲಿನ ಬಾರು ಕಟ್ಟುತ್ತಾರೆ. ಅಥವಾ ನಾರಿನಿಂದಲೂ ಮಾಡುತ್ತಾರೆ. ಬಾರಕೋಲನ್ನು

(ಬಾರು=ತೊಗಲು,ಚರ್ಮ) ದನಗಳಿಗೆ ಹೊಡೆಯಲು ಬಳಸುತ್ತಾರೆ. ಇದರಿಂದ ಹೊಡೆದರೆ ತುಂಬಾ ಏಟು ಬೀಳುತ್ತದೆ.

**ಕೊಡಣಸು**

ಎತ್ತುಗಳ ಕೋಡಿಗೆ ಟೋಪಿಯ ತರಹ ಹಾಕುವ ಬೆರಳಿನಾಕಾರದ ಟೋಪಿಗಳೇ ಕೋಡಣಸು ಒಂದು ಬದಿ ಅಗಲವಿದ್ದು ಮತ್ತೊಂದು ಬದಿ ಮುಚ್ಚಲ್ಪಟ್ಟಿರುತ್ತದೆ. ಅವುಗಳನ್ನು ಕೊಡುಗಳಿಗೆ ಹಾಕಿ ಸಣ್ಣಮಳೆಯನ್ನು ಬಡಿದು ಬಿಗಿಮಾಡಿರುತ್ತಾರೆ ಇವು ಎತ್ತುಗಳು ಚೆಂದವಾಗಿ ಕಾಣಲು ಮತ್ತು ಪರಸ್ಪರ ಎತ್ತುಗಳು ಇರಿದಾಡುವಾಗ ಗಾಯಗಳಾಗಬಾರದು ಎಂದು ಹಾಕುತ್ತಾರೆ. ಕಂಚಿನ, ಕಬ್ಬಿಣದ ಕೋಡಣಸುಗಳನ್ನು ಹಾಕುತ್ತಾರೆ.

**ಜೂಲು(ಝೂಲ)**

ಜೋಲು ಎಂದರೆ ಎತ್ತು ಆಕಳುಗಳ ಮೇಲೆ ವಿಶೇಷ ಸಂದರ್ಭದಲ್ಲಿ ಮೈಮೇಲೆ ಹೊದಿಸುವ ಆಕರ್ಷಕ ಹೊದಿಕೆ, ಇದನ್ನು ಎತ್ತುಗಳಿಗೆ, ಆಕಳುಗಳಿಗೆ ವಿಶೇಷ ಸಂದರ್ಭದಲ್ಲಿ ಆಕರ್ಷಕವಾಗಿ ಕಾಣಲು ವಿಶೇಷ ರೀತಿಯಿಂದ ಉತ್ತಮ ಬಟ್ಟೆಯಿಂದ ಹೆಣದು ಅಲ್ಲಲ್ಲಿ ಕನ್ನಡಿಗಳನ್ನು ಹಚ್ಚಿ ಸಿದ್ಧಪಡಿಸಿರುತ್ತಾರೆ. ಇದನ್ನು ಮೆರವಣಿಗೆ, ಕಾರಹುಣ್ಣಿಮೆ, ಬಸವ ಜಯಂತಿ, ಮುಂತಾದ ಸಂದರ್ಭದಲ್ಲಿ ಬಳಸುತ್ತಾರೆ.

**ಹಣೆಕಟ್ಟು**

ಇದನ್ನು ಸಹ ವಿಶೇಷವಾಗಿ ಮೆರವಣಿಗೆಯಂತಹ ಸಂದರ್ಭದಲ್ಲಿ ಬಳಸುತ್ತಾರೆ. ಎತ್ತುಗಳ ಸೌಂದರ್ಯಕ್ಕಾಗಿ ಇದನ್ನು ಅವುಗಳ ಹಣೆಗೆ ಕಟ್ಟುತ್ತಾರೆ. ಇದನ್ನು ಸಹ ಹಾಸಿನ ನಾರಿನಿಂದ ಮಾಡಿ ಬಣ್ಣಗಳಿಂದ ಅಲಂಕರಿಸಿರುತ್ತಾರೆ.

**೩.೩ ಕೃಷಿ ಜ್ಞಾನಪರಂಪರೆ**

ಭೂಮಿಯ ಮೇಲಿನ ಕೋಟ್ಯಾಂತರ ಮಾನವರು ಅನುಸರಿಸುತ್ತಿರುವ ಅನೇಕ ವೃತ್ತಿಗಳಲ್ಲಿ ಕೃಷಿಯು ಪ್ರಮುಖವಾದುದು. ಕೃಷಿಯ ಆವಿಷ್ಕಾರದಿಂದಲೇ ಪ್ರಾಚೀನ ಅಲೆಮಾರಿ ಮಾನವ ನೆಲೆ ನಿಲ್ಲಲು

ಸಾಧ್ಯವಾದುದು. ಕಾಡಿನಲ್ಲಿ ಹಣ್ಣು ಹಂಪಲು ಸಂಗ್ರಹಿಸುತ್ತಾ. ಆಹಾರಕ್ಕಾಗಿ ಅವುಗಳನ್ನು ಸೇವಿಸುತ್ತಾ ಅದರ ಜೊತೆಗೆ ಪ್ರಾಣಿ– ಪಕ್ಷಿಗಳನ್ನು ಬೇಟೆಯಾಡುತ್ತಾ ಪ್ರಾಣಿಗಳ ಹುಡುಕಾಟದಲ್ಲಿ ತೊಡಗಿದ್ದ ಮಾನವ ಕಾಲಾನಂತರದಲ್ಲಿ ಬೇಟೆಗಾರಿಕೆಯಿಂದ ಪಶುಪಾಲನೆಗೆ, ಪಶುಪಾಲನೆಯಿಂದ ಕೃಷಿಗೆ ಪ್ರವೇಶ ಪಡೆದ ಎಂದು ಹೇಳಬಹುದು. ಆದರೆ ಪಶುಪಾಲನೆಗೂ ಮೊದಲು ಮಾನವ ಕೃಷಿಯಲ್ಲಿ ತೊಡಗಿದ್ದ ಎಂಬುದೂ ಸಹ ಕೆಲ ವಿದ್ವಾಂಸರ ಅಭಿಪ್ರಾಯವಾಗಿದೆ. "ಅಮೇರಿಕದ ಇಂಡಿಯನ್ನರು ಅವರ ಶೋಧನೆಯಾಗುವ ಶತಮಾನಗಳ ಮುಂಚೆಯೇ ವ್ಯವಸಾಯಗಾರರಾಗಿದ್ದರು ಆದರೆ ಅವರಿಗೆ ಪಶುಪಾಲನೆಯೇ ಗೊತ್ತಿರಲಿಲ್ಲ"[೧೫]. ಆದುದರಿಂದ ಪ್ರಾಚೀನ ಮಾನವ ವ್ಯವಸಾಯಗಾರನಾಗುವ ಮೊದಲು ಪಶುಪಾಲಕನಾಗಿರಲೇ ಬೇಕಾಗಿತ್ತು ಎಂದು ಹೇಳಲು ಸಾಧ್ಯವಿಲ್ಲ. ಆದರೆ ವ್ಯವಸಾಯದ ಪ್ರಗತಿಗೆ, ಆಹಾರದ ಹೆಚ್ಚು ಉತ್ಪಾದನೆಗೆ ಕುದುರೆ, ಒಂಟೆ, ಎತ್ತು, ಎಮ್ಮೆ ಮುಂತಾದ ಪ್ರಾಣಿಗಳು ನಿಜವಾಗಿಯೂ ಸಹಾಯ ಮಾಡಿವೆ, ಮೇಲಿನ ಹೇಳಿಕೆಗಳು ಏನೇ ಇರಲಿ ಕೃಷಿ ಅಥವಾ ಪಶುಪಾಲನೆಯಲ್ಲಿ ಮೊದಲು ಯಾವುದೇ ಆವಿಷ್ಕಾರವಾಗಿರಲಿ ಇಲ್ಲಿ ನಾವು ತಿಳಿಯಬೇಕಾದ ಅಂಶ ಮಾನವನು ಕೃಷಿಯನ್ನು ಕಂಡುಕೊಂಡ ಬಗೆ ಮತ್ತು ಅದನ್ನು ಇಂದಿನವರೆಗೂ ವಿವಿಧ ಬದಲಾವಣೆಗಳೊಂದಿಗೆ ಉಳಿಸಿಕೊಂಡು ಬರುತ್ತಿರುವ ಪಾರಂಪರಿಕ ಜ್ಞಾನದ ಬಗ್ಗೆ ತಿಳಿಯುವುದು ಅವಶ್ಯಕ. ವ್ಯವಸಾಯಕ್ಕೆ ಸಂವಾದಿಯಾದ ಇಂಗ್ಲೀಷ್ ಪದ Agriculture ಎಂದಾಗುತ್ತದೆ. Agriculture ಪದವು ಲ್ಯಾಟಿನ್ ಮೂಲದ್ದು. ಇದನ್ನು ಫ್ರೆಂಚ್ ಭಾಷೆಯಲ್ಲಿ Agricultura ಎಂದು ಕರೆಯಲಾಗುತ್ತದೆ. "ಇದರಲ್ಲಿ ಎರಡು ಭಾಗಗಳಿವೆ. Ager=field (ಭೂಮಿ=ಕ್ಷೇತ್ರ) ಮತ್ತು culture=cultivation (ಉಳುಮೆ, ಗೇಮೆ/ಗೇಯ್ಮೆ) ಅಂದರೆ field cultivation. ಭೂಮಿಯ ಉಳುಮೆ, ಭೂಮಿ ಗೇಯ್ಮೆ, ಭೂ ವ್ಯವಸಾಯ"[೧೬]. ಅಥವಾ ಕೃಷಿ ಎಂದಾಗುತ್ತದೆ. ಇಂಗ್ಲೀಷ್‌ನ Agriclture ಪದದಲ್ಲಿನ culture ಎಂಬುದು ಲ್ಯಾಟಿನ್ ಮೂಲದ cultu ನಿಂದ ಬಂದಿದೆ. Agriculture ಎಂದರೆ ಉಳುಮೆ, ಗೇಯ್ಮೆ, ಕೃಷಿ, ಸಾಗುವಳಿ, ವ್ಯವಸಾಯ ಮುಂತಾದ ಅರ್ಥಗಳನ್ನು ಪಡೆದುಕೊಂಡಿದೆ. ಭೂಮಿಯ ಉಳುಮೆಯು ವ್ಯವಸಾಯ ಎಂದು ಕರೆಸಿಕೊಂಡರೆ ಮಾನವನ ನಡವಳಿಕೆಯ ಉಳುಮೆ ಸಂಸ್ಕೃತಿ (culture) ಎಂದು ಕರೆಸಿಕೊಳ್ಳುತ್ತದೆ. ಈ ರೀತಿಯಾಗಿ ಕೃಷಿ ಅಥವಾ ವ್ಯವಸಾಯ ಎಂಬ ಪದದ ಅರ್ಥವನ್ನು ಬಿಡಿಸಿ ನೋಡಬಹುದು ಆದರೆ ಈ ಕೃಷಿ ಎಂಬುದನ್ನು ಮಾನವನು ಕಂಡುಕೊಂಡ ಬಗೆ ಅದನ್ನು ಮೊಟ್ಟಮೊದಲಿಗೆ ಯಾರು ಕಂಡುಕೊಂಡರು, ಇಂದಿನ ಕೃಷಿಪದ್ಧತಿಗೂ ಪರಂಪರೆಯ ಕೃಷಿಪದ್ಧತಿಗೂ ಏನು ವ್ಯತ್ಯಾಸ ಎಂಬೆಲ್ಲ ಪ್ರಶ್ನೆಗಳನ್ನು ಇಟ್ಟುಕೊಂಡು ನಾವು ಕೃಷಿಯ ಬಗ್ಗೆ ಅಧ್ಯಯನ ಮಾಡಿದರೆ ಕಾಡುಗಳಲ್ಲಿ ಕಾಡು ಮೃಗಗಳಂತಿದ್ದ ಮಾನವನು ಗುಂಪು ಜೀವನಕ್ಕೆ ಬಂದು ವಿವಿಧ ಹಂತಗಳಲ್ಲಿ ವಿಕಾಸ ಹೊಂದಿ ಕೃಷಿಯನ್ನು ಕಂಡುಕೊಂಡುದುದು ತಿಳಿದು ಬರುತ್ತದೆ. ಅದು ಹೇಗೆಂದರೆ ಭೂಮಿಯ ಮೇಲೆ ಮಾನವ ಸೃಷ್ಟಿಯಾದಾಗಿನಿಂದ ಇಲ್ಲಿಯವರೆಗೆ ಅವನ ಜೀವನ ವಿಧಾನದಲ್ಲಿ ಸಾಕಷ್ಟು ಬದಲಾವಣೆ ಸಂಭವಿಸಿದೆ.

ಮಾನವ ಮೊದಲು ಆದಿಮ ಸ್ಥಿತಿಯಲ್ಲಿ ಕಾಡಿನಲ್ಲಿ ಅಲೆಯುತ್ತಿದ್ದಾಗ ಯಾವುದೇ ತರಹದ ಕೃಷಿ ಬಳಕೆ ಅವನಿಗೆ ತಿಳಿದಿರಲಿಲ್ಲ ಅವನು ತನ್ನ ಹಸಿವನ್ನು ತೀರಿಸಿಕೊಳ್ಳಲು ಪ್ರಕೃತಿಯಲ್ಲಿ ನೈಸರ್ಗಿಕವಾಗಿ

ದೊರೆಯುವ ಹಣ್ಣು, ಹಂಪಲು, ಗೆಡ್ಡೆ, ಗೆಣಸು, ಕಾಯಿ ಮುಂತಾದವುಗಳನ್ನು ತಿಂದು ಇವುಗಳ ಜೊತೆಗೆ ಇತರೆ ಪ್ರಾಣಿ ಪಕ್ಷಿಗಳ ಮಾಂಸವನ್ನು ತಿಂದು ಬದುಕುತ್ತಿದ್ದನು. ಮುಂದೆ ಮಾನವ ಜನಸಂಖ್ಯೆ ಬೆಳೆದಂತೆ ಹೆಚ್ಚಿನ ಆಹಾರೋತ್ಪತ್ತಿ ಮಾಡಲು ಕಾಡುಗಳಲ್ಲಿ ನೈಸರ್ಗಿಕ ರೀತಿಯಲ್ಲಿ ಕೃಷಿ ಆರಂಭ ಮಾಡಿದನು. ಮೊದ ಮೊದಲು ಕಾಡಿನಲ್ಲಿ ಸಿಗುವ ಹುಲ್ಲಿನ ಜಾತಿಯ ಬೀಜಗಳನ್ನು ಇತರ ಹಣ್ಣು-ಗೆಡ್ಡೆಗಳನ್ನು ಕೊಡುವ ವೃಕ್ಷಗಳ ಬೀಜಗಳನ್ನು ಉಳುಮೆ ಮಾಡದೇ ನೆಲವನ್ನು ಅಗಿಯದೇ ಕಾಲಿ ಇದ್ದ ಪ್ರದೇಶದಲ್ಲಿ ಸುಮ್ಮನೆ ಬೀಜಗಳನ್ನು ಚೆಲ್ಲುತ್ತಿದ್ದನು. ಹೀಗೆ ಚೆಲ್ಲಿದ ಬೀಜಗಳಿಂದ ಬೆಳೆ ಬೆಳೆದು ಫಲ ಪಡೆಯುತ್ತಿದ್ದನು. ಈ ಕೃಷಿಯನ್ನು ಅಂದಿನ ಅರಣ್ಯವಾಸಿ ಬುಡಕಟ್ಟು ಮಹಿಳೆ ಮೊಟ್ಟ ಮೊದಲ ಬಾರಿಗೆ ಕಂಡುಕೊಂಡಳು ಎಂದು ಹೇಳಲಾಗುತ್ತದೆ. ಗಂಡು ಬೇಟೆಗೆ, ಆಹಾರ ಸಂಗ್ರಹಣೆಗೆ ಹೊರಗಡೆ ಹೋದಾಗ ಗರ್ಭಿಣಿ ಮಹಿಳೆಯನ್ನು ಅಲ್ಲೇ ಒಂದೆಡೆ ಗುಡಿಸಲು ಅಥವಾ ಬಂಡೆಯ ಆಸರೆಯಲ್ಲಿ ಬಿಟ್ಟು ಹೋಗುತ್ತಿದ್ದನು ಇಂತಹ ಸಂದರ್ಭದಲ್ಲಿ ಆ ಮಹಿಳೆ ತಾನು ತಿಂದ ಹಣ್ಣಿನ ಬೀಜ, ಗೆಡ್ಡೆ-ಗೆಣಸುಗಳನ್ನು ತಮ್ಮ ನೆಲೆಯ ಸುತ್ತಮುತ್ತ ಚೆಲ್ಲುತ್ತಿದ್ದಳು ಹೀಗೆ ಚೆಲ್ಲಿದ ಬೀಜಗಳು ಗಿಡವಾಗಿ ಫಲ ಕೊಡುವುದನ್ನು ಕಂಡೊಕೊಂಡ ಮಹಿಳೆ ಆಹಾರಕ್ಕಾಗಿ ಕಾಡು ಅಲೆಯದೆ ತಾವು ಇದ್ದಲ್ಲೇ ಎಲ್ಲಾ ಬಗೆಯ ಹಣ್ಣು-ಹಂಪಲುಗಳನ್ನು ಬೆಳೆಯಬಹುದು ಎಂದು ಅರಿತು ಅಲ್ಲೇ ಬೆಳೆ ಬೆಳೆಯತೊಡಗಿದಳು ಹೀಗೆ ಆದಿಮ ಮಹಿಳೆಯಿಂದ ಸೃಷ್ಟಿಗೊಂಡ ಕೃಷಿಪದ್ಧತಿಯು ಮೊದ ಮೊದಲಿಗೆ ನೆಲವನ್ನು ಅಗಿಯದೇ ಹಾಗೇ ಬೀಜಗಳನ್ನು ನೆಲಕ್ಕೆ ಚೆಲ್ಲಿ ಬೆಳೆ ಪಡೆಯುವುದರೊಂದಿಗೆ ಪ್ರಾರಂಭಗೊಂಡು ಕಾಲಾನಂತರ ಪ್ರಾಣಿಗಳ ಎಲುಬು, ಮರದ ಚೂಪಾದ ರೆಂಬೆ, ಕಳೆಗುದ್ದಲಿಯಿಂದ ವ್ಯವಸಾಯ ಮಾಡುವಂತಾಯಿತು, ನಂತರ ಮುಂದುವರೆದು ನೇಗಿಲು ಬಳಸುವಂತಾಯಿತು. ಮಾನವ ಮೊದಲಿಗೆ ಕಾಡಿನಲ್ಲಿನ ಸ್ವಲ್ಪ ಜಾಗವನ್ನು ಸುಟ್ಟು ಸ್ವಚ್ಛಗೊಳಿಸಿಕೊಂಡು ಕೆಲಕಾಲ ಅಲ್ಲಿ ಕೃಷಿ ಮಾಡಿ ನಂತರ ಬೇರೆ ಕಡೆ ಹೋಗಿ ಕೃಷಿ ಮಾಡುತ್ತಿದ್ದನು. ಈ ಕೃಷಿಪದ್ಧತಿಗೆ ಕುಮರಿ ಬೇಸಾಯ (ಸ್ಥಳಾಂತರ ಬೇಸಾಯ) ಪದ್ಧತಿ ಎನ್ನುತ್ತಿದ್ದರು. ಕಾಲಾನಂತರ ಶಾಶ್ವತವಾಗಿ ಒಂದೆಡೆ ನೆಲೆ ನಿಂತು ವ್ಯವಸಾಯ ಮಾಡುವಂತಾದರು.

ಕೃಷಿ ಎನ್ನುವಂತಹದ್ದು ಯಾವುದೇ ಒಬ್ಬ ವ್ಯಕ್ತಿಯು ಒಂದೇ ಬಾರಿಗೆ ಕಂಡುಕೊಂಡದ್ದಲ್ಲ. ಅದು ಅನೇಕ ತಲೆಮಾರುಗಳಿಂದ ಮುಂದುವರಿದು ಬಂದಿರುವಂತಹದ್ದು ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿರುವ ಕೃಷಿಯ ಜ್ಞಾನವನ್ನು ಪಾರಂಪರಿಕ ಕೃಷಿ ಜ್ಞಾನ ಎನ್ನುತ್ತೇವೆ. ಇದು ತಟ್ಟನೆ. ಯಾವುದೋ ಒಂದು ಕಾಲದಲ್ಲಿ ಹುಟ್ಟಿಕೊಂಡದ್ದಲ್ಲ. ಮಾನವನ ನಿರಂತರ ಪ್ರಯತ್ನವಾಗಿದೆ. ಅನೇಕ ತಲೆಮಾರುಗಳ ನಿರಂತರ ಪ್ರಯೋಗದಿಂದ ಮಾಡಿ ಬಂದದ್ದು "ವಿಜ್ಞಾನ ಹೇಗೆ ಒಂದು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಅನೇಕ ಪ್ರಯೋಗಗಳ ಮೂಲಕ ಪರೀಕ್ಷಿಸಿ ಕಡೆಗೆ ನಂಬುತ್ತದೆಯೋ ಹಾಗೆ, ಆದುದರಿಂದ ಕೃಷಿ ಪಾರಂಪರಿಕ ಜ್ಞಾನ ಎಂಬುದು ವೈಜ್ಞಾನಿಕ ಜ್ಞಾನ"[೧೭]. ತಲೆಮಾರಿನಿಂದ ತಲೆಮಾರಿಗೆ ನಿರಂತರ ಪ್ರಯತ್ನ, ಪ್ರಯೋಗದಿಂದ ಇಂದಿನವರೆಗೂ ನಡೆದುಕೊಂಡು ಬಂದ ಕೃಷಿ

ತನ್ನ ಪಾರಂಪರಿಕ ಪದ್ಧತಿಯನ್ನು ಇನ್ನು ಕೆಲವೆಡೆ ಉಳಿಸಿಕೊಂಡು ಬಂದಿದೆ ಅದರಂತೆಯೇ ಇಂದಿಗೂ ಪಾರಂಪರಿಕ ಕೃಷಿ ವಿಧಾನವನ್ನು ಹೆಚ್ಚಾಗಿ ಬಳಸುತ್ತಾ ಅದರ ಜೊತೆಗೆ ಅಗತ್ಯವಿದ್ದಷ್ಟು ಆಧುನಿಕ ಕೃಷಿ ಪದ್ಧತಿ ಸೇರ್ಪಡೆ ಮಾಡಿಕೊಳ್ಳುತ್ತಾ ತನ್ನ ಮೂಲ ಕೃಷಿ ಪದ್ಧತಿಗೆ ಯಾವುದೇ ಧಕ್ಕೆ ಬಾರದಂತೆ ವ್ಯವಸಾಯ(ಕೃಷಿ) ಮಾಡುತ್ತಿರುವವರು ಅನೇಕರು ಅವುಗಳಲ್ಲಿ ನಾನು ಪ್ರಸ್ತುತ ಕಂಪಳದೇವರ ಹಟ್ಟಿಯ ಜನಪದರು ಅನುಸರಿಸುತ್ತಿರುವ ಪಾರಂಪರಿಕ ಕೃಷಿ ಪದ್ಧತಿಯ ಬಗ್ಗೆ ತಿಳಿಸ ಹೊರಟಿರುವೆ.

ಕಂಪಳದೇವರ ಹಟ್ಟಿಯ ಕೃಷಿಕರು ಅಳವಡಿಸಿಕೊಂಡು ಬಂದಿರುವ ಕೃಷಿ ವಿಧಾನವನ್ನು ಒಂದೊಂದಾಗಿ ನೋಡುವುದಾದರೆ ಮೊದಲು ಅವರು ಹೊಲವನ್ನು ಮಾಗಿಮಾಡುವ ಜ್ಞಾನ ಪರಂಪರೆಯಿಂದ ಬಿತ್ತನೆ, ಕಳೆ, ಕೋಯ್ಲು, ರಾಶಿ, ಗೂಡು ಹಾಕುವ ಮುಂತಾದ ಕಾರ್ಯ ಚಟುವಟಿಕೆಗಳನ್ನು ಗಮನಿಸಿ ಅವುಗಳಲ್ಲಿನ ಅವರ ಪರಿಸರ ಜ್ಞಾನ, ಪಾರಂಪರಿಕ ಜ್ಞಾನ ತಿಳಿಸಲಾಗುವುದು. ಕಂಪಳದೇವರ ಹಟ್ಟಿಯ ಜನಪದರು ಬಹುತೇಕ ಮಳೆಯಾಶ್ರಿತ ಬೆಳೆ ಬೆಳೆಯುತ್ತಾರೆ. ಇಲ್ಲಿನ ರೈತರು ತಮ್ಮ ಹೊಲಗಳಿಗೆ ಬೀಜ ಬಿತ್ತನೆ ಮಾಡುವ ಮೊದಲು ಕೊಟ್ಟಿಗೆ ಗೊಬ್ಬರ ಹೊಲಕ್ಕೆ ಹಾಕಿ ಭೂಮಿಯ ಫಲವತ್ತತೆ ಹೆಚ್ಚುವಂತೆ ಮಾಡಿ ಮಳೆ ಬಿದ್ದ ನಂತರ ಹದ ನೋಡಿ ಬಿತ್ತನೆ ಮಾಡುತ್ತಾರೆ. ಮಳೆ ಆಶ್ರಿತ ಬೇಸಾಯದಲ್ಲಿ ಹದ ಸಿಗುವುದು ೫–೬ ದಿನಗಳು ಮಾತ್ರ ಅದೂ ಕೂಡ ಖಚಿತವಿಲ್ಲ. ಆದ್ದರಿಂದ ಹದ ಸಿಕ್ಕಾಗ ಬಿತ್ತನೆ ಮಾಡುವುದಕ್ಕೆ ಎಲ್ಲಾ ಪೂರ್ವ ಸಿದ್ಧತೆ ಮಾಡಿಕೊಂಡಿರುತ್ತಾರೆ. ಇವರು ಮುಂಗಾರು, ಹಿಂಗಾರು, ಬೇಸಿಗೆ ಕೃಷಿಗಳನ್ನು ಮಾಡುತ್ತಾರೆ. ಮುಂಗಾರು–ಹಿಂಗಾರು ಮಳೆಗಳ ಬಗ್ಗೆ ಚೆನ್ನಾಗಿ ಅರಿತಿರುವ ಹಟ್ಟಿಯ ಕೃಷಿಕರು ಯಾವ ಯಾವ ಮಳೆಗೆ ಯಾವ ಬೆಳೆಯನ್ನು ಬೆಳೆಯಬೇಕೆಂಬುದನ್ನು ಅನುಭವದಿಂದ ಕಂಡುಕೊಂಡಿದ್ದಾರೆ. ಇದನ್ನೇ ನಾವು ಪಾರಂಪರಿಕ ಜ್ಞಾನ ಎನ್ನುತ್ತೇವೆ. ಈ ಪಾರಂಪರಿಕ ಕೃಷಿ ಪದ್ಧತಿಯು ಯಾವ ಕೃಷಿ ವಿಜ್ಞಾನಿಗಳ ಸೃಷ್ಟಿಯಲ್ಲ. ಬದಲಿಗೆ "ತಮ್ಮ ತಿಳುವಳಿಕೆಯಿಂದಲೇ ಮಳೆ ಬೆಳೆಗಳ ಬಗ್ಗೆ ಅಗಾಧ ಮಾಹಿತಿ ನೀಡುವ ಕ್ರಿಮಿ–ಕೀಟಗಳು ಬಿದ್ದಾಗ ಏನು ಮಾಡಬೇಕು ಎಂಬುದನ್ನೆಲ್ಲಾ ಅನುಭವ ಮಾತ್ರದಿಂದಲೇ ತಿಳಿಸಿಕೊಡುವ ರೈತನೂ ವಿಜ್ಞಾನಿಯೇ"[೫]. ಆದರೆ ನಮ್ಮ ಕೃಷಿಕನನ್ನು ಕೃಷಿ ವಿಜ್ಞಾನಿ ಎಂದಾಗಲೀ ಅವನು ಹುಟ್ಟುಹಾಕಿದ ಪಾರಂಪರಿಕ ಕೃಷಿ ಪದ್ಧತಿಯನ್ನು ವಿಜ್ಞಾನವೆಂದಾಗಲೀ ಭಾವಿಸದಿರುವುದು ದುರಂತದ ಸಂಗತಿ ಪರಂಪರೆಯಿಂದಲೂ ವ್ಯವಸಾಯ ಮಾಡಿಕೊಂಡು ಬಂದಿರುವ ಕೃಷಿಕರಿಗೆ ಮಳೆಯ ಲೆಕ್ಕಾಚಾರ ಚೆನ್ನಾಗಿ ತಿಳಿದಿರುತ್ತದೆ. ಕಾರಣ ಯಾವ ಮಳೆಗೆ ಯಾವ ಬೆಳೆ ಬಿತ್ತನೆ ಮಾಡಬೇಕು ಎಂದು ಅರಿತು ಕೃಷಿ ಮಾಡುತ್ತಾರೆ. ಆದರೆ ಸರಿಯಾದ ಸಮಯಕ್ಕೆ ಮಳೆಯಾಗದೇ ರೈತನ ಬಾಳು ಮಳೆಯೊಂದಿಗಿನ ಜೂಜಾಟವಾಗಿದೆ. ಮಳೆಯಾದರೆ ಉತ್ತಮ ಫಲ ಇಲ್ಲದಿದ್ದರೆ ಬರಗಾಲ. ಕಂಪಳದೇವರ ಹಟ್ಟಿಯ ಜನಪದರು ಹೊಂದಿರುವ ಕೃಷಿ ಭೂಮಿಯ ಪ್ರಮಾಣವನ್ನು ಈ ಕೆಳಗಿನಂತೆ ಕೋಷ್ಟಕ ಹಾಕಿ ಹೇಳಲಾಗಿದೆ.

ಕೋಷ್ಟಕ ೩.೨– ಹಟ್ಟಿಯ ಜನರ ಸಮುದಾಯವಾರು ಭೂ ಹಿಡುವಳಿ ಹೊಂದಿರುವವರ ವಿವರ

| ಕ್ರ.ಸಂ. | ಸಮುದಾಯಗಳು | ಕುಟುಂಬಗಳು | ಭೂ ಹಿಡುವಳಿ (ಎಕರೆಗಳಲ್ಲಿ) | | | ಭೂ ಹಿಡುವಳಿ ಶ್ರೇಣಿಗಳು (ಎಕರೆಗಳಲ್ಲಿ) | | | | | |
|---|---|---|---|---|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ೨೫ರ ಮೇಲ್ಪಟ್ಟು | ೧೦.೧–೨೫ | ೫.೧–೧೦ | ೨.೫೧–೫ | ೦.೫–೨.೫೦ | ಭೂರಹಿತ |
| | | | | | | ಎ | ಬಿ | ಸಿ | ಡಿ | ಇ | ಎಫ್ |
| ೧ | ಆದಿ ಕರ್ನಾಟಕ | ೪೩ | ೮೧.೫ | ೨೪ | ೧೦೫.೫ | | ೩ | ೧೪ | ೧೬ | ೧೦ | |
| ೨ | ಲಿಂಗಾಯತರು | ೭ | ೬೮ | ೧೬ | ೮೪ | ೨ | ೨ | ೧ | | ೧ | ೧ |
| ೩ | ನಾಯಕ | ೨೬೩ | ೮೩೩.೫ | ೧೭೨.೫ | ೧೦೦೬ | ೪ | ೯ | ೨೯ | ೯೦ | ೬೪ | ೬೭ |
| | ಒಟ್ಟು | ೩೧೩ | ೯೮೩ | ೨೧೨.೫ | ೧೧೯೫.೫ | ೬ | ೧೧ | ೩೩ | ೧೦೪ | ೮೧ | ೭೮ |

ಕೋಷ್ಟಕ ೩.೨ ರಲ್ಲಿ ಹಟ್ಟಿಯಲ್ಲಿ ಭೂ ಹಿಡುವಳಿಯನ್ನು ಹೊಂದಿರುವವವರ ವಿವರ ಮತ್ತು ಎಷ್ಟೆಷ್ಟು ಎಕೆರೆ ಭೂಮಿ ಹೊಂದಿದ್ದಾರೆ ಎಂಬುದನ್ನು ತಿಳಿಸಲಾಗಿದೆ, ಅದರಂತೆ ಭೂಮಿಯನ್ನು ಹೊಂದಿಲ್ಲದಿರುವವರ ಸಂಖ್ಯೆಯನ್ನು ಸಹಾ ನೋಡಬಹುದಾಗಿದೆ ಜೊತೆಯಲ್ಲಿ ಒಣಭೂಮಿ, ನೀರಾವರಿ ಭೂಮಿಗಳನ್ನು ವಿಂಗಡಿಸಲಾಗಿದೆ ಹಟ್ಟಿಯಲ್ಲಿನ ಜನರಲ್ಲಿ ಭೂಮಿ ಹೊಂದಿರುವವರು ಮತ್ತು ಹೊಂದಿಲ್ಲದಿರುವವರನ್ನು ಸಮುದಾಯವಾರು ವಿಂಗಡಿಸಿ ನೋಡಿದರೆ ಆದಿ ಕರ್ನಾಟಕ(ಮಾದಿಗ) ಸಮುದಾಯದ ೪೩ ಕುಟುಂಬಗಳಲ್ಲಿ ೮೧.೫ ಎಕರೆ ಓಣ ಭೂಮಿಯನ್ನು, ೨೪ ಎಕರೆ ನೀರಾವರಿಯನ್ನು ಒಟ್ಟು ೧೦೫.೫ ಎಕರೆ ಭೂಹಿಡುವಳಿಯನ್ನು ಹೊಂದಿದ್ದಾರೆ. ಲಿಂಗಾಯಿತರ ೭ ಕುಟುಂಬಗಳಲ್ಲಿ ೬೮ ಎಕರೆ ಒಣಭೂಮಿ, ೧೬ ಎಕರೆ ನೀರಾವರಿ ಒಟ್ಟು ೮೪ ಎಕರೆ ಭೂಹಿಡುವಳಿಯನ್ನು ಹೊಂದಿದ್ದಾರೆ. ಇನ್ನು ನಾಯಕರ(ಬೇಡರ) ೨೬೩ ಕುಟುಂಬಗಳಲ್ಲಿ ೮೩೩.೫ ಎಕರೆ ಒಣಭೂಮಿಯನ್ನು, ೧೭೨.೫ ಎಕರೆ ನೀರಾವರಿಯನ್ನು ಒಟ್ಟು ೧೦೦೬ ಎಕರೆ ಭೂಮಿಯನ್ನು ಹೊಂದಿದ್ದಾರೆ ಎಂದು ತಿಳಿದುಬರುತ್ತದೆ. ಒಟ್ಟಾರೆ ಹಟ್ಟಿಯ ಮೂರೂ ಸಮುದಾಯದವರು ೧೧೯೫.೫ ಎಕರೆ ಭೂಹಿಡುವಳಿಯನ್ನು ಹೊಂದಿದ್ದಾರೆ ಅದರಲ್ಲಿ ೯೮೩ ಎಕರೆ ಒಣಭೂಮಿ, ೨೧೨.೫ ಎಕರೆ ನೀರಾವರಿ ಭೂಮಿಯನ್ನು ಹೊಂದಿದ್ದಾರೆ. ಒಟ್ಟಾರೆ ಹಟ್ಟಿಯಲ್ಲಿನ ಮೂರೂ ಸಮುದಾಯದವರು ಹೊಂದಿರುವ ಆಸ್ತಿಯ ಪ್ರಮಾಣವೆಂದರೆ ೨೫ ಎಕರೆ ಮೇಲ್ಪಟ್ಟವರು ೬ ಕುಟುಂಬಗಳು ಮಾತ್ರ, ೧೦.೧–೨೫ ಎಕರೆ ಹೊಂದಿರುವವರು ೧೧ ಕುಟುಂಬಗಳು, ೫.೧–೧೦ ಎಕರೆ ಹೊಂದಿರುವವರು ೩೩ ಕುಟುಂಬಗಳು, ೨.೫೧–೫ ಎಕರೆ ಹೊಂದಿರುವವರು ೧೦೪ ಕುಟುಂಬಗಳು, ೦.೫–೨.೫೦ ಎಕರೆ ಹೊಂದಿರುವವರು ೮೧ ಕುಟುಂಬಗಳು ಮತ್ತು ಭೂರಹಿತರು ೭೮ ಕುಟುಂಬದವರಿದ್ದಾರೆ. ಹಟ್ಟಿಯಲ್ಲಿ ಜನರಲ್ಲಿ ೨೫ ಎಕರೆಗಿಂತ ಮೇಲ್ಪಟ್ಟವರು ಶೇಕಡ ೧.೯೧೬೯೩೩ ರಷ್ಟು ಜನರು ಮಾತ್ರ ಕಂಡುಬರುತ್ತಾರೆ. ಶೇಕಡ ೩.೫೧೪೪ ರಷ್ಟು ಜನ ೧೦.೧ ರಿಂದ ೨೫ ಎಕರೆಗಳಷ್ಟು ಭೂಮಿಯನ್ನು ಹೊಂದಿದ್ದಾರೆ. ಶೇಕಡ ೧೦.೫೪೩ ರಷ್ಟು ಜನ ೫ ರಿಂದ ೧೦ ಎಕರೆಗಳಷ್ಟು ಭೂಮಿಯನ್ನು ಹೊಂದಿದ್ದಾರೆ. ೨.೫ ರಿಂದ ೫ ಎಕರೆಗಳಷ್ಟು ಭೂಮಿಯನ್ನು ಶೇಕಡ ೩೩.೨೨೭ ರಷ್ಟು ಜನ ಹೊಂದಿದ್ದಾರೆ. ೦.೫ ರಿಂದ ೨.೫(ಎರಡುವರೆ ಎಕರೆ) ಎಕರೆ ಭೂಮಿಯನ್ನು ಹೊಂದಿರುವವರು ಶೇಕಡ ೨೫.೮೭೯ ರಷ್ಟು ಜನರಿದ್ದಾರೆ. ಇದರಿಂದ ತಿಳಿದು ಬರುವುದೇನೆಂದರೆ ಹಟ್ಟಿಯ ಬಹುತೇಕ ಜನರು ಕೃಷಿಯನ್ನೇ ಆಶ್ರಯಿಸಿ ಬದುಕುತ್ತಿದ್ದರೂ ಹೆಚ್ಚು ಭೂಮಿಯನ್ನು ಹೊಂದಿಲ್ಲದಿರುವುದು ಮತ್ತು ಒಣ ಭೂಮಿಯನ್ನು ಹೊಂದಿರುವ ಕಾರಣ ಕೃಷಿಯಿಂದ ಜೀವನ ನಿರ್ವಹಣೆ ಕಷ್ಟಸಾಧ್ಯವಾಗಿದೆ. ಆದರೂ ಕೃಷಿಯನ್ನು ಬಿಡದ ಹಟ್ಟಿ ಜನರು ಇಂದಿಗೂ ಸಹ ಪಾರಂಪರಿಕ ಕೃಷಿ ಪದ್ಧತಿಯನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ ಜೊತೆಯಲ್ಲಿ ಇಂದಿನ ತಂತ್ರಜ್ಞಾನವನ್ನೂ ಸಹ ಕೃಷಿಯಲ್ಲಿ ಅಳವಡಿಸಿಕೊಳ್ಳುತ್ತಿದ್ದಾರೆ.

**೩.೩.೧ ಕೃಷಿ ಉಪಕರಣಗಳು(ವ್ಯವಸಾಯ ಸಾಧನಗಳು)**

ಹಟ್ಟಿಯ ಕೃಷಿಕ ಜನಪದರು ತಾವು ಮಾಡುವ ಕೃಷಿ ಕೆಲಸದಲ್ಲಿ ಎತ್ತುಗಳು ಮತ್ತು ತಾವು ಅಷ್ಟೇ ಅಲ್ಲದೆ ಅನೇಕ ಉಪಕರಣಗಳನ್ನು ಬಳಸಿ ವ್ಯವಸಾಯ ಮಾಡುತ್ತಾರೆ. ಅವರು ಬಳಸುವ

ಉಪಕರಣಗಳನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಮತ್ತು ಒಂದೊಂದು ಉಪಕರಣದಲ್ಲಿ ಹತ್ತಾರು ಹೆಸರುಗಳನ್ನು, ಬಗೆಗಳನ್ನು, ಕಾಣಬಹುದು. ಅವರು ಬಳಸುವ ವ್ಯವಸಾಯದ ಉಪಕರಣಗಳು, ಅವುಗಳ ಸ್ವರೂಪ, ಅವುಗಳ ಬಳಕೆ ಮತ್ತು ತಯಾರಿಸುವ ವಿಧಾನಗಳನ್ನು ಒಂದೊಂದಾಗಿ ನೋಡೋಣ.

**ನೇಗಿಲು/ಮಡಿಕೆ**

ಬೇಸಾಯದಲ್ಲಿ ಭೂಮಿಯನ್ನು ಉಳಲು ಬಳಸುವ ಸಾಧನ, ಯುಗಾದಿ ಹಬ್ಬದ ನಂತರ ಮೊದಲು ಕೃಷಿ ಕೆಲಸ ಆರಂಭಿಸುವುದೇ ಈ ನೇಗಿಲಿನಿಂದ ಇದಕ್ಕೆ ಮೊದಲ ಪೂಜೆ, ಮುಂಗಾರು ಮಳೆಯ ಆರಂಭದಲ್ಲಿ ಮೊದಲ ಮಳೆ ಬಿದ್ದಾಗ ಹಟ್ಟಿಯ ಎಲ್ಲಾ ಕೃಷಿಕರು ನೇಗಿಲನ್ನು ಎತ್ತುಗಳ ಹೆಗಲಿಗೆ ಹಾಕಿಕೊಂಡು ಹೊಲಗಳಿಗೆ ಹೋಗಿ ಮೊದಲ ಕೃಷಿ ಪ್ರಾರಂಭಿಸಿ ಆರು ಕಟ್ಟುವುದನ್ನು ಮಾಡುತ್ತಾರೆ. ನೇಗಿಲು ಎಂಬ ಕೇವಲ ಒಂದು ವಸ್ತು ಸಂಸ್ಕೃತಿಯಲ್ಲಿ ನಮ್ಮ ಕನ್ನಡ ಭಾಷೆಯ ಅದೆಷ್ಟೋ ಪದಗಳು ಅಡಗಿವೆ. ಅವುಗಳೆಂದರೆ ನೇಗಿಲಿನಲ್ಲಿ ಈಚು, ಮೇಣಿ, ಜಿಗಣಿ, ಕುಳ, ನೊಗ, ಕಣ್ಣಿ, ಅಗಡು, ಹೂಡಗ್ಗ, ಹಣೆಯಗ್ಗ, ಬಾಯಿಕುಕ್ಕೆ, ಚಕ್ಕಡಿ ಕೀಲು ಬದಿಚಕ್ಕೆ ಮುಂತಾದ ವಸ್ತುಗಳು ಇವೆ. ನೇಗಿಲು ಹೊಡೆಯುವುದನ್ನು ಗಳೇವು ಹೊಡೆಯುವುದು ಎಂದು ಕರೆಯುತ್ತಾರೆ. ನೇಗಿಲ ದಿಂಡನ್ನು ಜಾಲಿ, ಬೇವು, ಹುಣಸೆ, ಹೊಂಗೆ, ಬೇಲ ಮುಂತಾದ ಮರಗಳ ಕೊರಡಿನಿಂದ ಮಾಡಿರುತ್ತಾರೆ.

**ಕುಂಟೆ**

ಮಡಿಕೆ ಹೊಡೆದ ಹೊಲವನ್ನು ಹರಗುವುದಕ್ಕೆ ಬಳಸುವ ಸಾಧನವನ್ನು ಕುಂಟೆ ಎನ್ನುವರು. ಇದಕ್ಕೆ ಉದ್ದವಾದ ಎರಡು ಈಸುಗಳನ್ನು ಸೇರಿಸಿ ನೊಗಕ್ಕೆ ಕಟ್ಟುತ್ತಾರೆ. ಮತ್ತೆರಡು ತಾಳುಗಳಿದ್ದು ಅದಕ್ಕೆ ಕಬ್ಬಿಣದ ಕುಡ ಸೇರಿಸಿ ಹೊಲದಲ್ಲಿನ ಹುಲ್ಲನ್ನು ಹರಗುತ್ತಾರೆ. ಕುಂಟೆಯಲ್ಲಿ ಬಳಕೆಯಾಗುವ ಇತರ ವಸ್ತು ಉಪಕರಣಗಳೆಂದರೆ ಎರಡು ಈಸು, ಮೀಣಿ, ಮೀಣಿಗೋಲು, ತಾಳು ಅಥವಾ ಕುಡ ಮುಂತಾದವು ಇರುತ್ತವೆ. ಕುಂಟೆಯಲ್ಲಿ ಹಲವು ವಿಧಗಳಿವೆ ಹೆಗ್ಗುಂಟೆ, ಎಡೆಕುಂಟೆ, ಎರಕುಂಟೆ, ಎರಡು ತಾಳಿನ ಕುಂಟೆ, ನಾಲ್ಕುತಾಳಿನ ಕುಂಟೆ, ಆರುತಾಳಿನ ಕುಂಟೆ, ಹೀಗೆ ಅವುಗಳ ಬಳಕೆ ಮತ್ತು ಗಾತ್ರಕ್ಕೆ ತಕ್ಕಂತೆ ಕುಂಟೆಗಳಿದ್ದು ಅವುಗಳನ್ನು ಒಂದೊಂದು ಹೆಸರಿನಲ್ಲಿ ಕರೆಯುತ್ತಾರೆ.

**ಎಡೆಕುಂಟೆ**

ಬೆಳೆಯ ಸಾಲುಗಳು ಮಧ್ಯದಲ್ಲಿನ ಕಳೆಯನ್ನು ತೆಗೆಯಲು ಬಳಸುವ ಚಿಕ್ಕ ಕುಂಟೆ ಒಂದೂವರೆ ಗೇಣು ಉದ್ದವಿರುತ್ತದೆ. ಅಂತರ ಬೇಸಾಯದ ಸಾಧನ ಇದು ಕುಂಟೆಯನ್ನೇ ಹೋಲುತ್ತದೆ, ಅದರಂತೆ ಎರಡು ಈಶು, ಎರಡು ತಾಳು ಕುಳ, ಒಂದು ಕುಡ ಎಲ್ಲಾ ಕುಂಟೆಯ ರೀತಿಯೇ ಇರುತ್ತದೆ. ಆದರೆ ಚಿಕ್ಕದಾಗಿರುತ್ತದೆ. ಇದನ್ನು ಎತ್ತುಗಳನ್ನು ಹೂಡಿರುವ ನೊಗಕ್ಕೆ ಹೂಡಿ ಅಂತರ ಬೇಸಾಯ ಮಾಡುತ್ತಾರೆ.

**ಕೂರಿಗೆ**

ಬೀಜವನ್ನು ಬಿತ್ತಲು ಬಳಸುವ ಸಾಧನ ಇದಾಗಿದೆ ಇದರಲ್ಲಿ ಎರಡು ಈಶು, ಮೇಣಿ, ಕೂರಿಗೆ ಬಟ್ಟಲು, ಕೂರಿಗೆ ಕಡ್ಡಿ, ಹಗ್ಗ ಮುಂತಾದ ಸಾಮಗ್ರಿಗಳಿವೆ. ಕೂರಿಗೆಯಲ್ಲಿ ಮೂರು ವಿಧ ೧.

ಮೂರು ತಾಳಿನಕೂರಿಗೆ (ಮೂರುಸಾಲಿನ ಕೂರಿಗೆ) ೨. ನಾಲ್ಕು ತಾಳಿನ ಕೂರಿಗೆ, ೩. ಎರಡು ಸಾಲಿನ ಕೂರಿಗೆ. ಹೂರಿಗೆಯ "ಒಂಭತ್ತು ಅಡಿ ಉದ್ದದ ಎರಡು ಈಚುಗಳಿಗೆ ಮೂರುವರೆ ಗೇಣಿನ ಉದ್ದದ ಒಂದು ಮಣೆ, ತಳಭಾಗಕ್ಕೆ ಜೋಡಿಸುವ ಬಿದಿರುಲಾಳ (ಗೊಟ್ಟ) ಈ ಲಾಳಗಳನ್ನು ಮಣೆಯ ನಾಲ್ಕು ತೂತುಗಳಿಗೆ ಜೋಡಿಸಿ ಭದ್ರಪಡಿಸಿ, ಲಾಳಗಳಿಗೆ ಅಥವಾ ಸೆಡ್ಡೆಗಳಿಗೆ ಸಣ್ಣ ಹುರಿಯಿಂದ ಕೂರಿಗೆ ಬಟ್ಟಲನ್ನು ಜೋಡಿಸುತ್ತಾರೆ"[೯೯]. ಈ ರೀತಿಯಾಗಿ ಸಿದ್ದಪಡಿಸಿದ ಕೂರಿಗೆಯಿಂದ ಕಾಳನ್ನು ಬಿತ್ತನೆ ಮಾಡುತ್ತಾರೆ. ಕೂರಿಗೆ ತುಂಡನ್ನು (ದಿಂಡನ್ನು) ಜಾಲಿ ಮರದಿಂದ ಮಾಡಿರುತ್ತಾರೆ.

**ನೊಗ**

ಉಳುಮೆ ಮಾಡಲು, ಕುಂಟೆ, ಕೂರಿಗೆ, ಬಂಡಿಗೂ ಬೇಕಾಗುವ ಅಗತ್ಯ ಸಾಧನ. ಇದನ್ನು ಮರದಿಂದ ತಯಾರಿಸಿರುತ್ತಾರೆ. ಆರು ಅಡಿ ಉದ್ದವಿರುತ್ತದೆ. ಎತ್ತುಗಳ ಕೊರಳಿಗೆ ಜೋಡಿಸಲು ಅನುಕೂಲವಾಗುವಂತೆ ಎರಡು ಬದಿಯಲ್ಲಿ ಸಣ್ಣ ತೂತುಗಳನ್ನು ಮಾಡಲಾಗಿರುತ್ತದೆ. ಈ ತೂತುಗಳಲ್ಲಿ ಅಗಡು ಎಂಬ ಸಣ್ಣ ಗೂಟದ ಸಹಾಯದಿಂದ ಹಗ್ಗವನ್ನು ಸೇರಿಸಿ ಎತ್ತಿನ ಕೊರಳಿಗೆ ಬಿಗಿದು ವ್ಯವಸಾಯ ಮಾಡುತ್ತಾರೆ. ಇವುಗಳನ್ನು ಸ್ವತಃ ಇವರೇ ತಯಾರಿಸಿಕೊಳ್ಳುತ್ತಾರೆ.

**ಸೆಡ್ಡೆ**

ಸೆಡ್ಡೆ ಎಂದರೆ ಬೀಜ ಬಿತ್ತಲು ಬಳಸುವ ಬಿದಿರಿನ, ಅಥವಾ ಕಬ್ಬಿಣದ ಸಾಧನ. ಸೆಡ್ಡೆಯನ್ನು ಬಿದಿರಿನಿಂದ ೩-೪ ಅಡಿ ಉದ್ದದ ಕೊಳವೆ ಆಕಾರದಲ್ಲಿ ಮಾಡಿ ಒಂದು ಬದಿ ಚೂಪಾಗಿ ಮಾಡಿ ಮೇಲುಗಡೆ ಬಟ್ಟಲಾಕಾರದಲ್ಲಿ ಮಾಡಿರುತ್ತಾರೆ. ಇದರ ಮಧ್ಯಕ್ಕೆ ಅಥವಾ ಬುಡಕ್ಕೆ ದಾರ ಕಟ್ಟಿ ನೇಗಿಲಿನ ಅಥವಾ ಕೂರಿಗೆಯ ಮೇಣಿಗೆ ಹಗ್ಗ ಕಟ್ಟಿ ಹಿಂದೆ ಬಿತ್ತುವವರು ಒಬ್ಬೊಬ್ಬರು ಒಂದೊಂದು ಸಡ್ಡೆಯನ್ನು ಹಿಡಿದುಕೊಂಡು ಉಟುರಿನಲ್ಲಿನ ಕಾಳನ್ನು ಬಿತ್ತುತ್ತಾ ಕೂರಿಗೆಯ ಹಿಂದೆ ನಡೆಯುತ್ತಾರೆ.

ಹೆಂಡೆಮಾರು

ವ್ಯವಸಾಯ ಮಾಡಿದ ಅಂದರೆ ಮಡಿಕೆ, ಕುಂಟೆ ಹೋಡೆದ ಹೊಲದಲ್ಲಿ ಹೆಂಟೆಗಳು ಇದ್ದು ಅದನ್ನು ನುರಿ ಮಾಡಿ ಹೊಲವನ್ನು ಸಮ ಮಾಡಲು ಬಳಸುವ ಒಂದು ವಿಧದ ದೊಡ್ಡ ಕೊರಡೇ ಹೆಂಡೆ ಮಾರು. ಇದನ್ನು ಈಚಲು ಮರದ ದಬ್ಬೆಯಿಂದ ಮಾಡಿರುತ್ತಾರೆ. ಇದು ಒಂಭತ್ತು ಅಡಿ ಉದ್ದವಿದ್ದು ಎರಡು ತುದಿಗಳಲ್ಲಿ ಎರೆಡೆರಡು ರಂದ್ರಗಳಿದ್ದು ಅವುಗಳಿಗೆ ಹಗ್ಗ ಸೇರಿಸಿ ನೊಗಕ್ಕೆ ಕಟ್ಟಿ ಎತ್ತುಗಳಿಂದ ಎಳೆಯುತ್ತಾರೆ. ಇದು ಇಂದು ನಿನ್ನೆಯ ತಿಳುವಳಿಕೆಯಲ್ಲ.

**ಗಾಡಿ/ಚಕ್ಕಡಿ**

ಹೊಲಗಳಿಗೆ ಬೀಜಗೊಬ್ಬರ ಸಾಗಿಸಲು, ಮತ್ತು ಹೊಲಗಳಿಂದ ಬೆಳೆದ ಧಾನ್ಯ, ಮೇವನ್ನು ಕಣಕ್ಕೆ ತರಲು ಬಳಸುವ ಸಾರಿಗೆ ಸಾಧನ. ಎತ್ತುಗಳ ಸಹಾಯದಿಂದ ಗಾಡಿಯನ್ನು ನಡೆಸಲಾಗುತ್ತದೆ. ಇದರಲ್ಲಿನ ಪ್ರಮುಖ ಭಾಗಗಳೆಂದರೆ ಎರಡು ಚಕ್ರ, ಕಣಗಗಳು(ಹನ್ನೆರಡು ಇರುತ್ತವೆ), ಕಬ್ಬಿಣದ

ಪಟ್ಟಿ ಗುಂಬ, ಗುಂಬಕಟ್ಟು, ಉಳುಬಳೆ, ಒಳಬಳೆ, ಕಬ್ಬಿಣದ ಅಚ್ಚು, ಕಡೆಯಾಣಿ ಅಥವಾ ಕಡೆಗೀಲು, ಈಚು, ಮೋಕು, ಗೊಂಬೆಮರ, ನೊಗತಡೆ, ನೊಗ, ಕೀಲುಗೋಟು, ಕಡೆಗೂಟ, ಕಣ್ಣಿ ಹಗ್ಗ, ಮೊಕಿನ ಹಗ್ಗ, ಅಚ್ಚಿನಮೊಳೆ, ಇತ್ಯಾದಿ ಭಾಗಗಳಿವೆ. ಗಾಡಿಗಳನ್ನು ಈ ಮೇಲೆ ಹೇಳಿದಂತೆ ಹೊಲಕ್ಕೆ ಗೊಬ್ಬರ ಹೇರಲು, ಬಿತ್ತುವ ಬೀಜ ಒಯ್ಯಲು, ಹೊಲಗಳಿಂದ ಮೇವು ಕಣಕ್ಕೆ ತರಲು ಬಳಸಲಾಗುತ್ತದೆ. ಇದು ಕೃಷಿಕನಿಗೆ ಎತ್ತಿನಷ್ಟೇ ಅಗತ್ಯ ಸಾಧನವಾಗಿದೆ.

**ಬಾಚಿ**

ವ್ಯವಸಾಯ ಮಾಡುವಾಗ ಈಚು, ನೊಗ, ಮೇಳಿ, ಏನಾದರೂ ಮುರಿದರೆ ಅವನ್ನು ಕೆತ್ತಿ ಸಿದ್ದಮಾಡಲು ಉಪಯೋಗಿಸುವ ಹರಿತವಾದ ಕಬ್ಬಿಣದ ಸಾಧನ. ಇದು ಕೊಡಲಿ ಆಕಾರದಲ್ಲಿರುತ್ತದೆ ಆದರೆ ಮುಂದೆ ಸ್ವಲ್ಪ ಅಗಲ ಮತ್ತು ಚೂಪು ಇದ್ದು ಹಿಂದೆ ಮರದ ಹಿಡಿ ಹಾಕಲು ರಂಧ್ರವಿರುತ್ತದೆ. ಇದರಿಂದ ಮರವನ್ನು ಕೆತ್ತುತ್ತಾರೆ, ಬಾಚಿಯಲ್ಲಿ ಕೈಬಾಚಿ ಮತ್ತು ದೊಡ್ಡ ಬಾಚಿ ಎಂಬೆರಡು ಪ್ರಕಾರಗಳಿವೆ.

**೩.೩.೨ ಬಿತ್ತನೆ ಬೀಜದ ಆಯ್ಕೆ ಮತ್ತು ಸಂರಕ್ಷಣೆ**

ಇವರು ಹೆಚ್ಚಾಗಿ ಶೇಂಗಾ ಬೆಳೆಯುತ್ತಾರೆ. ಮತ್ತು ಅದರ ಮಧ್ಯದಲ್ಲಿ ಅಕ್ಕಡಿ ಕಾಳುಗಳಾದ ತೊಗರಿ, ಅಲಸಂದೆ, ಹೆಸರು, ಸಜ್ಜೆ, ಹುರುಳಿ, ಮುಂತಾದವುಗಳನ್ನು ಬೆಳೆಯುತ್ತಾರೆ. ಹೀಗೆ ಪ್ರತಿವರ್ಷ ಬೆಳೆ ಬೆಳೆದಾಗ ಕಣದಲ್ಲಿ ಒಕ್ಕಣೆ ಮಾಡಿ ಗಾಳಿಗೆ ತೂರಿಕೊಳ್ಳುತ್ತಾರೆ. ಶೇಂಗಾ(ಕಡಲೆಕಾಯಿ) ಮತ್ತು ಇತರೆ ಬೀಜಗಳಾದ ತೊಗರಿ, ಅಲಸಂದೆ, ಹೆಸರು ಮುಂತಾದ ಬೀಜಗಳನ್ನು ಗಾಳಿಗೆ ತೂರಿ ಗಟ್ಟಿ ಬೀಜಗಳನ್ನು ಮುಂದಿನ ಬಿತ್ತನೆಗೆ ಎಷ್ಟು ಬೇಕೋ ಅಷ್ಟನ್ನು ಆಡೇವು(ಮಣ್ಣಿನಿಂದ ಮಾಡಿರುವ ದೊಡ್ಡದಾದ ಸೋರೆ), ಚೀಲಗಳಲ್ಲಿ ಸಂಗ್ರಹಿಸುತ್ತಾರೆ. ಉಳಿದ ಧಾನ್ಯಗಳನ್ನು ನಿತ್ಯದ ಬಳಕೆಗೆ ಮತ್ತು ಮಾರಾಟಕ್ಕೆ ಬಳಸುತ್ತಾರೆ. ಹೀಗೆ ಸಂಗ್ರಹಿಸಿದ ಬಿತ್ತನೆ ಬೀಜಗಳನ್ನು ಅಥವಾ ದಿನಬಳಕೆಯ ಧಾನ್ಯಗಳಿಗೆ ಹುಳು ಬೀಳಬಾರದು ಎಂದು ಬೀಜಗಳಲ್ಲಿ ಮೆಣಸಿನ ಕಾಯಿಯ ಬೀಜಗಳನ್ನು ಬೆರಸಿ ಸಂಗ್ರಹಿಸುತ್ತಾರೆ. ಮೆಣಸಿನ ಕಾಯಿಯ ಬೀಜ ಖಾರವಿರುವುದರಿಂದ ಅವುಗಳನ್ನು ಬಿತ್ತನೆ ಮಾಡುವ ಬೀಜದಲ್ಲಿ ಸೇರಿಸುವುದರಿಂದ ಹುಳುಗಳು ಬಾಧಿಸುವುದಿಲ್ಲ. ಎಂಬುದು ಅವರ ತಿಳುವಳಿಕೆ ಮತ್ತು ವೈಜ್ಞಾನಿಕ ಜ್ಞಾನವೂ ಹೌದು. ಅಲ್ಲದೆ ಕೆಲವರು ಬಿತ್ತನೆ ಬೀಜ, ಧಾನ್ಯಗಳಲ್ಲಿ ಬೇವಿನ ಎಲೆಗಳನ್ನು ಸಹ ಬೆರೆಸಿ ಸಂಗ್ರಹಿಸುತ್ತಾರೆ. ಬೇವು ಕಹಿ ಇರುವುದರಿಂದ ಅವುಗಳ ಎಲೆ ಬೆರೆಸಿದ ಧಾನ್ಯಕ್ಕೆ ಹುಳು ಬೀಳುವುದಿಲ್ಲ. ಇನ್ನು ಕೆಲವರು ಅರಿಶಿಣವನ್ನು ಸಹ ಬೆರೆಸುತ್ತಾರೆ. ಹೀಗೆ ಮಾಡುವುದರಿಂದ ಆ ಬೀಜಗಳಿಗೆ ಹುಳು ಬೀಳುವುದಿಲ್ಲ.

**ಮಡಕೆಕಾಳುಗಳು/ಅಕ್ಕಡಿ ಕಾಳುಗಳು**

ಅಕ್ಕಡಿ ಕಾಳುಗಳನ್ನು(ಸಾರಿನ ಕಾಳುಗಳು) ಬಟ್ಟೆಯಲ್ಲಿ ಕಟ್ಟಿ ಸಂಗ್ರಹಿಸುತ್ತಾರೆ. ಇಲ್ಲವೆ ಮಡಕೆಗಳಲ್ಲಿ ಹಾಕಿ ಇಡುತ್ತಾರೆ. ಶೇಂಗಾ, ಜೋಳ, ರಾಗಿ ಮುಂತಾದ ಆಹಾರ ಧಾನ್ಯಗಳನ್ನು ವಾಡೆವುಗಳಲ್ಲಿ,

ಚೀಲಗಳಲ್ಲಿ ಸಂಗ್ರಹಿಸುತ್ತಾರೆ. ಹಿಂದಿನ ಕಾಲದಲ್ಲಿ ಜೋಳ ರಾಗಿಗಳನ್ನು ಹಗೇವುಗಳಲ್ಲಿ ಸಂಗ್ರಹಿಸಲಾಗುತ್ತಿತ್ತು. ಆದರೆ ಇಂದು ಹಗೇವುಗಳು ಕಣ್ಮರೆಯಾಗಿವೆ. ಹಟ್ಟಿಯವರು ವಾಸಿಸುತ್ತಿದ್ದುದು ಚಿಕ್ಕ ಚಿಕ್ಕ ಗುಡಿಸಲುಗಳು ಆದ್ದರಿಂದ ತಾವು ಬೆಳೆದ ಹೆಚ್ಚು ಧಾನ್ಯಗಳನ್ನು೨-೩ ವರ್ಷಗಳಿಗೆ ಆಗುವಷ್ಟನ್ನು ತಮ್ಮ ಚಿಕ್ಕ ಗುಡಿಸಲುಗಳಲ್ಲಿ ಸಂಗ್ರಹಿಸಲು ಆಗುತ್ತಿರಲಿಲ್ಲ. ಹಾಗಾಗಿ ಹಗೇವುಗಳಲ್ಲಿ ಸಂಗ್ರಹಿಸುತ್ತಿದ್ದರು.

**ಹಗೇವು**

೨-೫ ವರ್ಷಗಳ ಕಾಲ ಧಾನ್ಯಗಳು ಕೆಡದಂತೆ ಸಂಗ್ರಹಿಸಲು ನಮ್ಮ ಹಿರಿಯರು ಬಳಸುತ್ತಿದ್ದ ವಿಧಾನಗಳಲ್ಲಿ ಹಗೇವುಗಳಲ್ಲಿ ಸಂಗ್ರಹಿಸುವ ವಿಧಾನವೂ ಒಂದು. ಹಗೇವನ್ನು ಸಿದ್ದಪಡಿಸುವುದು ಒಂದು ವಿಶೇಷ ಪರಿಣಿತಿ ಎಂದೇ ಹೇಳಬಹುದು. ಹಟ್ಟಿಯ ಹಿರಿಯರು ಇಂತಹ ವಿಶೇಷ ಪಾರಂಪರಿಕ ಜ್ಞಾನವನ್ನು ಹೊಂದಿದ್ದರು ಎಂದು ಹೇಳಬಹುದು. ಹಟ್ಟಿಯ ಹೊರಭಾಗದಲ್ಲಿ ಅಥವಾ ದೇವಸ್ಥಾನದ ಮುಂದುಗಡೆಯ ಬಯಲಿನಲ್ಲಿ ಒಬ್ಬ ಮನುಷ್ಯ ಇಳಿಯಬಹುದಾದಷ್ಟು ಅಗಲವಾದ ಗುಂಡಿಯನ್ನು ತೋಡಿ ಗುಂಡಿಯ ಒಳಗಡೆ ವಿಶಾಲವಾಗಿ ಬಾವಿಯ ಆಕಾರವಾಗಿ ೬-೭ ಅಡಿ ಆಳ ಮತ್ತು ೩-೪ ಅಡಿ ಅಗಲವಾಗಿ ತೋಡಿರುತ್ತಾರೆ. ಆದರೆ ಅದರ ಒಳಗೆ ಇಳಿಯಲು ಮಾತ್ರ ಸಣ್ಣ ರಂಧ್ರ ಒಬ್ಬ ಮನುಷ್ಯ ಮಾತ್ರ ಇಳಿಯುವಷ್ಟು ಬಾಯಿ ಮಾಡಿರುತ್ತಾರೆ. ಹೀಗೆ ತೊಡಿದ ಕಿಂಡಿಯ ಒಳಗೆ ಚೆನ್ನಾಗಿ ನೀರು ಸಗಣಿ ಕಲಸಿ ನೆಲಕ್ಕೆ(ತಳಕ್ಕೆ) ಮತ್ತು ಸುತ್ತಲಿನ ಗೋಡೆಗೆ ಮೆತ್ತಿ ೨-೩ ದಿನ ಚೆನ್ನಾಗಿ ಒಣಗಿಸಿ ಹಗೇವು ಸಿದ್ಧ ಮಾಡಿರುತ್ತಾರೆ. ತಾವು ಬೆಳೆದ ಧಾನ್ಯಗಳನ್ನು ಕೆಡದಂತೆ ಸಂಗ್ರಹಿಸಲು ಆ ಹಗೇವಿನಲ್ಲಿ ಮೊದಲು ತಳಕ್ಕೆ ಮತ್ತು ಸುತ್ತಲಿನ ಗೋಡೆಗೆ ಜೋಳದ ಅಥವಾ ಸಜ್ಜೆಯ ಸಪ್ಪೆಯಿಂದ(ದಂಟಿನಿಂದ) ಸುತ್ತುವುದು ನಂತರ ಅದರಲ್ಲಿ ಕಾಳು ಹಾಕಿ ಮೇಲಿನ ರಂಧ್ರಕ್ಕೆ ಒಂದು ಚಪ್ಪಡಿಬಂಡೆಯನ್ನು ಮುಚ್ಚಿ ಅದರ ಮೇಲೆ ಕೆಮ್ಮಣ್ಣು ಕಲಸಿ ಮೆತ್ತಿ, ಅದರ ಮೇಲೆ ಮಣ್ಣು ಹಾಕಿ ಸಾಮಾನ್ಯ ನೆಲದ ಮಟ್ಟಕ್ಕೆ ಮಾಡಿರುತ್ತಾರೆ ಅದರಲ್ಲಿ ಗಾಳಿ, ಬೆಳಕು, ನೀರು, ಹೋಗದಂತೆ ಮಾಡಿರುತ್ತಾರೆ.

ನೆಲದಲ್ಲಿ ಕೆಮ್ಮಣ್ಣಿನಿಂದ ಮೆತ್ತಿ ಸಿದ್ಧಮಾಡಿ ಸಗಣಿ ರಾಡಿ ಹಾಕಿ ಸಾರಿಸಿ ಅದರ ಮೇಲೆ ಜೋಳದ ದಂಟನ್ನು ಹಾಕಿರುವುದರಿಂದ ಕಾಳು ೨-೩ ವರ್ಷಗಳ ಕಾಲ ಕೆಡದಂತೆ ಇರುತ್ತವೆ. ಇಂತಹ ಜ್ಞಾನವನ್ನು ಹೊಂದಿರುವ ಜನರು ಇತ್ತೀಚಿನ ದಿನಗಳಲ್ಲಿ ಹಗೇವನ್ನು(ಹಗೇವು) ಬಳಸುತ್ತಿಲ್ಲ ಮತ್ತು ಅಷ್ಟೊಂದು ಧಾನ್ಯಗಳನ್ನು ಸಹ ಬೆಳೆಯುತ್ತಿಲ್ಲ ಕಾರಣ ಇಂದಿನ ಕೃಷಿಕರು ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಮುಂದಾಗಿದ್ದಾರೆ. ಹಿಂದಿನವರು ಆಹಾರ ಧಾನ್ಯಗಳನ್ನು ಬೆಳೆದು ಹಗೇವುಗಳಲ್ಲಿ ಸಂಗ್ರಹಿಸುತ್ತಿದ್ದರು ಒಂದು ವೇಳೆ ಮಳೆ ಕೈಕೊಟ್ಟು ಬರಗಾಲ ಬಂದರೆ ಅಂತಹ ಸಂದರ್ಭದಲ್ಲಿ ಹಗೇವನ್ನು ತೆರೆದು ಅದರಲ್ಲಿನ ಧಾನ್ಯಗಳನ್ನು ಬಳಸುತ್ತಿದ್ದರು ಎಂತಹ ಬರಗಾಲದ ಸ್ಥಿತಿಯಲ್ಲೂ ತಮ್ಮ ಆಹಾರವನ್ನು ಪಡೆಯುವಂತಹ ಪಾರಂಪರಿಕ ಜ್ಞಾನ ಅವರಲ್ಲಿತ್ತು ಆದರೆ ಇಂದು ಹಗೇವು ಕಣ್ಮರೆಯಾಗಿವೆ. ಅವುಗಳ ಸ್ಥಾನದಲ್ಲಿ ಗೋಣಿ ಚೀಲಗಳು ಬಂದಿವೆ.

**ವಾಡೆ**

ರೈತರು ತಾವು ಬೆಳೆದ ಧಾನ್ಯವನ್ನು ವರ್ಷಾನುಗಟ್ಟಲೆ ಸಂರಕ್ಷಣೆ ಮಾಡಲು ಬಳಸುತ್ತಿದ್ದ ಮಣ್ಣಿನ ಉಪಕರಣ ವಾಡೆ. ಈ ವಾಡೆಗಳು ೩–೭ ಅಡಿ ಉದ್ದವಾಗಿಯೂ, ಒಬ್ಬ ಮನುಷ್ಯ ತಬ್ಬಿಕೊಳ್ಳುವಷ್ಟು ಗಾತ್ರವಾಗಿಯೂ ಇರುತ್ತದೆ. ಇದನ್ನು ಕುಂಬಾರರೇ ತಯಾರಿಸುತ್ತಾರೆ. ವಾಡೆಯನ್ನು ತಯಾರಿಸುವಾಗ ವಾಡೆಯ ಮೇಲ್ಭಾಗದಲ್ಲಿ ಬಾಯಿ ಮಾಡಿರುತ್ತಾರೆ. ಅದರಲ್ಲಿ ಧಾನ್ಯಗಳನ್ನು ಸುರುವಲು ಮಾಡಿರುತ್ತಾರೆ. ಅದು ಅರ್ಧ ಚಂದ್ರಾಕಾರವಾಗಿ ಎರಡೂ ಕಡೆ ಭಾಗಿರುತ್ತದೆ. ಅದೇ ರೀತಿಯಾಗಿ ವಾಡೆಯ ಕೆಳಗಡೆ ಸಣ್ಣ ರಂಧ್ರ ಮಾಡಿರುತ್ತಾರೆ. ಅದರಲ್ಲಿ ತಮಗೆ ಅಗತ್ಯ ಬಂದಾಗ ಧಾನ್ಯವನ್ನು ತೆಗೆದುಕೊಳ್ಳುತ್ತಾರೆ. ರಂಧ್ರಕ್ಕೆ ತೆಂಗಿನ ಚಿಪ್ಪು ಮೊದಲು ವಾಡೆಯಲ್ಲಿ ಸೇರಿಸಿ ಆ ಬದಿಗೆ ದಾರ ಕಟ್ಟಿರುತ್ತಾರೆ. ಆ ದಾರವನ್ನು ಹೊರಗೆ ಎಳೆದರೆ ಚಿಪ್ಪು ಆ ರಂಧ್ರಕ್ಕೆ ಅಡ್ಡಲಾಗಿ ಮುಚ್ಚಿಕೊಳ್ಳುತ್ತದೆ. ಆಗ ಸಗಣಿಯಿಂದ ಮುಚ್ಚುತ್ತಾರೆ ಮತ್ತೆ ಅಗತ್ಯ ಬಂದಾಗ ಸಗಣಿಯನ್ನು ತೆಗೆದು ಚಿಪ್ಪನ್ನು ಒಳಗೆ ತಳ್ಳಿದರೆ ಕಾಳು ಸೋರುತ್ತದೆ. ಮೇಲಿನ ಬಾಯಿಗೂ ಸಹ ಅದರ ಮೇಲೆ ಸಣ್ಣ ಅಗಲವಾದ ಬಂಡೆ ಮುಚ್ಚಿ ಸಗಣಿಯಿಂದ ಮೆತ್ತಿರುತ್ತಾರೆ. ಮಣ್ಣಿನಿಂದ ವಾಡೆಗಳನ್ನು ಮಾಡಿರುವುದರಿಂದ ಧಾನ್ಯಗಳು ಕೆಡುವುದಿಲ್ಲ. ಹುಳುಗಳು ಸೇರುವುದಿಲ್ಲ. ಎಂದು ಇಂತಹ ಜ್ಞಾನವನ್ನು ಜನಪದರು ತಮ್ಮ ಅನುಭವದಿಂದ ಕಂಡುಕೊಂಡಿದ್ದಾರೆ. ಇತ್ತೀಚೆಗೆ ಹಟ್ಟಿಯಲ್ಲಿ ಕೆಲವೇ ಕೆಲವರ ಮನೆಗಳಲ್ಲಿ ಈ ವಾಡೆಗಳನ್ನು ನೋಡಬಹುದಾಗಿದೆ.

**ಮಡಕೆಸಾಲು**

ಜೋಳ, ರಾಗಿ, ಸಜ್ಜೆ, ಇಂತಹ ಹೆಚ್ಚು ಬೆಳೆದ ಧಾನ್ಯಗಳನ್ನು ವಾಡೆಯಲ್ಲಿ ಸಂಗ್ರಹಿಸಿದರೆ ಅಕ್ಕಡಿ ಕಾಳುಗಳಾದ ಹುರುಳಿ, ಹೆಸರು, ನವಣೆ, ತೊಗರಿ, ಅಲಸಂದಿ ಮುಂತಾದ ಸಾರಿನ ಕಾಳುಗಳನ್ನು ರೈತರು ತಮ್ಮ ಅಡುಗೆ ಮನೆಗಳಲ್ಲಿ ಮಡಕೆಗಳಲ್ಲಿ ಸಂರಕ್ಷಿಸಿಕೊಳ್ಳುತ್ತಾರೆ. "ಮಡಕೆಗಳು ಕೆಲವೊಂದು ನಾಲ್ಕು ಅಡಿ ಇದ್ದರೆ. ಇನ್ನೂ ಕೆಲವು ಎರಡು ಅಥವಾ ಮೂರು ಅಡಿ ಇರುತ್ತವೆ"[೨೦]. ಈ ಮಡಕೆಗಳನ್ನು ಹಟ್ಟಿಯಲ್ಲಿ ರೈತರು ತಮ್ಮ ಅಡುಗೆ ಮನೆಗಳಲ್ಲಿ ಸಾಲು ಸಾಲಾಗಿ ಜೋಡಿಸಿಕೊಂಡಿದ್ದಾರೆ. ದಿನನಿತ್ಯ ಅಗತ್ಯಕ್ಕೆ ಬಳಕೆಯಾಗುವ ಹೆಸರು, ಉದ್ದು, ಕಡಲೆ, ಮುಂತಾದ ದ್ವಿದಳ ಧಾನ್ಯಗಳು ಮತ್ತು ಹಿಟ್ಟು, ನುಚ್ಚನ್ನು ಮಡಕೆಗಳಲ್ಲಿ ಇಟ್ಟುಕೊಂಡಿರುತ್ತಾರೆ. ಮಡಕೆಗಳನ್ನು ಮಣ್ಣಿನಿಂದ ಮಾಡಿದ್ದರಿಂದ ಧಾನ್ಯಗಳು ಕೆಡುವುದಿಲ್ಲ ಎಂಬುದು ಜನಪದರ ದೇಶಿಯ ಜ್ಞಾನವಾಗಿದೆ. ಹಟ್ಟಿಯ ಹಿರಿಯರು ತಮ್ಮ ಬಳಕೆಯ ಮತ್ತು ಬಿತ್ತುವ ಕಾಳುಗಳನ್ನು ಹುಳ ಬಾಧೆಯಿಂದ ಹಲವು ವರ್ಷಗಳ ಕಾಲ ಸಂರಕ್ಷಿಸಿಕೊಳ್ಳಲು ಧಾನ್ಯಗಳಿಗೆ ಬೇವಿನ ಎಲೆಯನ್ನು ಬೆರೆಸಿ ಹಗೇವು, ಫಣತ, ಮಡಕೆಗಳಲ್ಲಿ ಸಂಗ್ರಹಿಸುತ್ತಿದ್ದರು. ಆದರೆ ಇಂದಿನ ದಿನಮಾನಗಳಲ್ಲಿ ಹಗೇವು ಫಣತ ಕಣ್ಮರೆಯಾಗಿ ವಾಡೆ, ಮಡಕೆಗಳು ಬೆರಳೆಣಿಕೆಯಷ್ಟು ಮಾತ್ರ ಬಳಕೆಯಲ್ಲಿ ಕಂಡು ಬರುತ್ತಿವೆ ಅವೂ ಸಹ ಅವನತಿಯತ್ತ ಸಾಗುತ್ತಿವೆ. ಇಂದಿನ ಕೃಷಿಕರು ಗೋಣಿಚೀಲ, ಗೊಬ್ಬರ ಚೀಲಗಳಲ್ಲಿ ಧಾನ್ಯಗಳಿಗೆ ಕ್ರಿಮಿನಾಶಕ, ಪೌಡರನ್ನು ಬೆರೆಸಿ ಸಂಗ್ರಹಿಸುತ್ತಿದ್ದಾರೆ ಆದರೆ ಈ ರೀತಿಯಾಗಿ ಸಂಗ್ರಹಿಸುವ ಪದ್ಧತಿಯಿಂದ ಮತ್ತು ಅಂತಹ ಧಾನ್ಯ ಸೇವಿಸುವುದರಿಂದ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತದೆ.

### ೩.೩.೩ ಬೀಜ ಬಿತ್ತನೆ ಮಾಡುವುದು

ಈ ಹಿಂದೆಯೇ ಹೇಳಿರುವಂತೆ ರೈತರು ಬಿತ್ತನೆಗೆ ಬೇಕಾದ ಬೀಜಗಳನ್ನು ತಾವೇ ಸಂಗ್ರಸಿಕೊಂಡಿರುತ್ತಾರೆ. ಏಕೆಂದರೆ ಮಳೆ ಬಿದ್ದ ತಕ್ಷಣ ಬಿತ್ತಲು ಆ ಸಂದರ್ಭದಲ್ಲಿ ಬಿತ್ತನೆ ಬೀಜವಿಲ್ಲದೆ ಅವರಿವರ ಮನೆಗೆ ಹೋಗಿ ಬೀಜಕ್ಕಾಗಿ ಯಾಚಿಸುವುದು ಅವಮಾನವೆಂದು ಭಾವಿಸುತ್ತಾರೆ. ಹಾಗಾಗಿ ಬಿತ್ತುವ ಬೀಜವನ್ನು ಜತನದಿಂದ ಸಂಗ್ರಹಿಸುವ ಪರಿಪಾಠ ಕಂಪಳದೇವರ ಹಟ್ಟಿಯ ಜನಪದರಲ್ಲಿ ಇಂದಿಗೂ ನಡೆದು ಬಂದಿದೆ. ಬೀಜ ಸಂಗ್ರಹಿಸುವಾಗ ಧಾನ್ಯವನ್ನು ಗಾಳಿಗೆ ತೂರಿ ಅದರಲ್ಲಿನ ದೃಢವಾದ ಕಾಳುಗಳನ್ನು ಬಿತ್ತನೆಗೆ ಬಳಸಲು ಸಂಗ್ರಹಿಸುತ್ತಾರೆ. ಯಾವುದೇ ಬೆಳೆ ಬಿತ್ತನೆಗೆ ಮೊದಲು ಭೂಮಿಯನ್ನು ಹದಗೊಳಿಸುತ್ತಾರೆ. ಹೊಲದಲ್ಲಿರುವ ಅನಗತ್ಯ ಗಿಡಗಂಟೆಗಳನ್ನು ಬೇರು ಸಹಿತ ಕಿತ್ತು ಸುಟ್ಟು, ಕಲ್ಲು, ಕಸಕಡ್ಡಿಗಳನ್ನು(ಕಾಸಿಗೆ) ಆರಿಸಿ ತೆಗೆದು ಮಳೆ ಬಿದ್ದಾಗ ಮಾಗಿ ಮಾಡುತ್ತಾರೆ. ಮಾಗಿ ಮಾಡುವುದು ಎಂದರೆ ಬಿತ್ತನೆಗೂ ಮೊದಲೇ ಹೊಲವನ್ನು ಮಡಿಕೆ, ಕುಂಟೆಗಳಿಂದ ಅಡ್ಡಡ್ಡ ಉದ್ದುದ್ದ ಉಳುಮೆ ಮಾಡಿ ಕಳೆಯನ್ನು ಕಳೆದು ಬಿಸಿಲಿಗೆ ಭೂಮಿಯನ್ನು ಕಾಯುವಂತೆ ಮಾಡಿರುತ್ತಾರೆ. ಇದನ್ನು ಮಾಗಿ ಮಾಡುವುದು ಎನ್ನುತ್ತಾರೆ ಹೀಗೆ ಸಜ್ಜುಗೊಂಡಿದ್ದ ಹೊಲಗಳಿಗೆ ಮುಂಗಾರು ಪ್ರಾರಂಭವಾದಾಗ ಬಿತ್ತನೆ ಮಾಡುತ್ತಾರೆ. ಮೊದಲಿಗೆ ಮನೆಯ ಹೆಣ್ಣು ಮಗಳು ಮೂರು ಬೊಗಸೆ ಬೀಜ ಬಿತ್ತನೆ ಮಾಡುತ್ತಾಳೆ. ಇಲ್ಲವೆ ಮನೆಯ ಹಿರಿ ಮಗ ಅಥವಾ ಕಿರಿಮಗ ದೇವಸ್ಥಾನಕ್ಕೆ ಬಿತ್ತನೆ ಬೀಜವನ್ನು ಸ್ವಲ್ಪ ಕೊಂಡೊಯ್ದು ಪೂಜೆ ಮಾಡಿಕೊಂಡು ದೇವರ ಮುಂದೆ ಮೂರು ಗುಂಪೆ/ಗುಂಪು ಬೀಜ ಇಟ್ಟು ಅವುಗಳಲ್ಲಿ ಮೂರು ಮೂರು ಬೀಜಗಳನ್ನು ಅಲ್ಲೇ ಬಿಟ್ಟು ಉಳಿದವನ್ನು ತಂದು ಬಿತ್ತನೆ ಬೀಜದಲ್ಲಿ ಬೆರೆಸುತ್ತಾನೆ. ಹೊಲದಲ್ಲಿ ಹಿರಿಮಗ ಅಥವಾ ಕಿರಿಮಗ ಇಲ್ಲವೆ ಮನೆಯ ಹೆಣ್ಣು ಮಗಳು ಕೂರಿಗೆಗೆ, ಎತ್ತುಗಳಿಗೆ ಪೂಜೆ ಮಾಡಿ ಕೈ ಮುಗಿದು ಈ ಮಾದರಿಯಲ್ಲಿ ಯಾರಾದರೊಬ್ಬರು ಮೊದಲು ಬಿತ್ತನೆಯ ಶಾಸ್ತ್ರ ಮಾಡುತ್ತಾರೆ. ನಂತರ ಬಿತ್ತಲು ಬಂದಿರುವವರ ಮಡಿಲಿಗೆ ಬೀಜವನ್ನು ಹಾಕಿ ಬಿತ್ತಲು ಶುರು ಮಾಡುತ್ತಾರೆ.

#### ಅಕ್ಕಡಿ ಮತ್ತು ಮೇರೆ ಬಿತ್ತುವುದು

ಅಕ್ಕಡಿ ಬಿತ್ತುವುದನ್ನು ಅಂತರ ಬೇಸಾಯ ಪದ್ಧತಿ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಅಕ್ಕಡಿ ಪದ್ಧತಿಯಲ್ಲಿ ಒಂದು ಮುಖ್ಯ ಬೆಳೆಯೊಂದಿಗೆ ಎರಡರಿಂದ ಮೂರು ಬೆಳೆಯನ್ನು ಬೆಳೆಯುತ್ತಾರೆ. ಶೇಂಗಾ/ನೆಲಗಡಲೆಯನ್ನು ಮುಖ್ಯ ಬೆಳೆಯಾಗಿ ಬಿತ್ತಿದರೆ ಪ್ರತಿ ಎಂಟು ಸಾಲಿನ ನಂತರ ಒಂದು ಸಾಲು ಸಜ್ಜೆ, ನವಣೆ, ಹುರುಳಿ, ಅವರೆ, ತೊಗರಿ, ಅಲಸಂದಿ ಮುಂತಾದ ಯಾವುದಾದರೂ ೨–೩ ಬಗೆಯ ಅಕ್ಕಡಿ ಕಾಳುಗಳನ್ನು ಬಿತ್ತುವ ರೂಢಿ ಇವರಲ್ಲಿದೆ. ಅಕ್ಕಡಿ ಬೇಸಾಯ ರೈತರ ಮೂಲ ಕೃಷಿ ವಿಧಾನ. ನಾಲ್ಕಾರು ಬೆಳೆಗಳು ಒಂದೇ ಹೊಲದಲ್ಲಿ ಬೆಳೆಯುವುದರಿಂದ ಮುಖ್ಯ ಬೆಳೆಯ ಬೇರಿನೊಂದಿಗೆ ಅಕ್ಕಡಿ(ಮಿಶ್ರಬೆಳೆ) ಬೆಳೆಯ ಬೇರುಗಳು ಬೆಸೆದುಕೊಂಡು ಬೆಳೆಯುತ್ತವೆ. ಇಲ್ಲಿ ಒಂದು ಬೆಳೆ ಮತ್ತೊಂದು ಬೆಳೆಗೆ ಪೂರಕವಾಗಿದ್ದು ಅವುಗಳ ತಾಯಿ ಬೇರು ಆಳಕ್ಕೆ ಇಳಿದು ಭೂಮಿಗೆ

ಹೆಚ್ಚಿನ ಪ್ರಮಾಣದಲ್ಲಿ ಸಾರಜನಕವನ್ನು ನೀಡಿ ಫಲವತ್ತತೆಯನ್ನು ಹೆಚ್ಚಿಸುತ್ತದೆ. ಹಟ್ಟಿಯ ಜನಪದರು ತಾವು ಬಿತ್ತನೆ ಮಾಡುವಾಗ ಮೊದಲಿಗೆ ತಮ್ಮ ನಿತ್ಯದ ಆಹಾರವನ್ನು ನೆನಪು ಮಾಡಿಕೊಂಡು ತಮ್ಮ ಆಹಾರ ಯಾವುದೋ ಅದನ್ನು ಹೆಚ್ಚಿಗೆ ಬೆಳೆಯುತ್ತಾರೆ. ವರ್ಷಪೂರ್ತಿ ಮನೆಮಂದಿಗೆಲ್ಲಾ ಊಟಕ್ಕೆ ಸಾಕಾಗುವಷ್ಟು ಸಾರಿನ ಕಾಳುಗಳನ್ನು ಅಕ್ಕಡಿಯಲ್ಲಿ ಬೆಳೆದರೆ ಮುದ್ದೆ ರೊಟ್ಟಿ, ಊಟಕ್ಕೆ ರಾಗಿ, ಜೋಳ, ಸಜ್ಜೆಯನ್ನು ಮುಖ್ಯ ಬೆಳೆಯಾಗಿ ಬೆಳೆಯುತ್ತಾರೆ. ಈ ರೀತಿಯಲ್ಲಿ ಅಕ್ಕಡಿ ಪದ್ಧತಿಯಲ್ಲಿ ಬೆಳೆದ ಬೆಳೆಗಳ ಬೀಜ ತಾಕತ್ತಿನಿಂದ ಕೂಡಿರುತ್ತದೆ. ಮತ್ತು ಇಳುವರಿಯೂ ಉತ್ತಮವಾಗಿ ಬರುತ್ತದೆ. ಅಕ್ಕಡಿ ಪದ್ಧತಿಯಿಂದ ಬೆಳೆಗಳಿಗೆ ಅಟಕಾಯಿಸಿಕೊಳ್ಳುವ ಕೀಟಗಳ ಬಾಧೆ ನಿಯಂತ್ರಣವಾಗುತ್ತದೆ. ಯಾವುದೇ ಕ್ರಿಮಿನಾಶಕ ಬಳಸದೇ ವಿಷರಹಿತವಾದ ಹೊಲಗಳಿಗೆ ಹಕ್ಕಿಗಳು ಬರುತ್ತ, ಇವು ಬೆಳೆಗಳನ್ನು ಹಾಳು ಮಾಡದೆ ಅಲ್ಲಿ ಇರುವಂತಹ ಕೀಟಗಳನ್ನು ತಿಂದು ಹಾಕುತ್ತವೆ. ಇದು ಪ್ರಕೃತಿ ಸಹಜವಾಗಿ ಚಾಲ್ತಿಯಲ್ಲಿರುವ ಕೀಟ ನಿಯಂತ್ರಣ ವಿಧಾನ. ಅಕ್ಕಡಿ ಹಾಕಿ ಬೆಳೆಯುವುದರಿಂದ ಕೃಷಿಕರಿಗೆ ಸಾಕಷ್ಟು ಉಪಯೋಗವಿದೆ. ಯಾಕೆಂದರೆ ಒಂದು ವೇಳೆ ಮುಖ್ಯ ಬೆಳೆ ವಿಫಲವಾದರೂ ಅಂತರ ಬೆಳೆ/ ಅಕ್ಕಡಿ ಬೆಳೆಯಿಂದ ಆದಾಯ ದೊರೆಯುತ್ತದೆ. ಅಷ್ಟೇ ಅಲ್ಲ ಒಂದು ಕುಟುಂಬದ ಆಹಾರದ ನಿರ್ವಹಣೆಗೆ ಬೇಕಾದ ಅಷ್ಟೂ ಪದಾರ್ಥಗಳು ಒಂದೇ ಕಡೆ ಲಭಿಸುತ್ತವೆ.

### ಮ್ಯಾರೆ ಬಿತ್ತುವುದು

ಹಟ್ಟಿಯ ಕೃಷಿಕರು ಬಿತ್ತನೆ ಮಾಡುವಾಗ ಹೊಲಕ್ಕೆ ಅಕ್ಕಡಿಗೆ ಮತ್ತು ಮ್ಯಾರೆಗೆ ಸಜ್ಜೆ, ಸೂರ್ಯಕಾಂತಿ, ನವಣೆ, ಹುರುಳಿ ಮುಂತಾದ ಬೆಳೆಗಳನ್ನು ಬಿತ್ತುತ್ತಾರೆ. ಮ್ಯಾರೆ ಬಿತ್ತುವ ಉದ್ದೇಶವೂ ಸಹ ಅಕ್ಕಡಿಯಂತೆ ಸಾರಿನ ಕಾಳುಗಳನ್ನು ಪಡೆಯುವುದಾಗಿದೆ. ಅಲ್ಲದೆ ಮುಖ್ಯ ಬೆಳೆಯ ರಕ್ಷಣೆಗೆ ಮ್ಯಾರೆ ಬಿತ್ತುವುದಾಗಿದೆ. ಉದಾಹರಣೆಗೆ ಕೃಷಿಕರು ತಮ್ಮ ಹೊಲಗಳ ಬದುವುಗಳಲ್ಲಿ ದನ ಕರುಗಳನ್ನು ಹಿಡಿದುಕೊಂಡು ಮೇಯಿಸುತ್ತಿರುತ್ತಾರೆ. ಅಥವಾ ಗೋಮಾಳಗಳಲ್ಲಿ ಬಿಟ್ಟು ಮೇಯಿಸುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿ ದನಗಳು ಹೊಲದಲ್ಲಿನ ಫಸಲನ್ನು ತಿನ್ನಲು ಕಣ್ಣುತಪ್ಪಿಸಿ ಹೋಗುತ್ತವೆ ಆಗ ಮೊದಲಿಗೆ ಹೊಲದ ಮ್ಯಾರೆಗಳ ಬೆಳೆಯನ್ನು ತಿನ್ನುತ್ತವೆ ಅಷ್ಟರಲ್ಲಿ ಹೊಲದ ಮಾಲೀಕ ಅಥವಾ ದನಗಳ ಮಾಲೀಕ ನೋಡಿಕೊಂಡು ದನಗಳನ್ನು ಹೊಡೆಯುತ್ತಾನೆ ಅಥವಾ ಹಿಡಿದುಕೊಂಡು ಮೇಯಿಸುತ್ತಾನೆ. ಈ ರೀತಿಯಾಗಿ ಮುಖ್ಯ ಬೆಳೆಯ ರಕ್ಷಣೆಗಾಗಿ ನಮ್ಮ ಕೃಷಿಕರು ಹೊಲದ ಮೇರೆಗೆ ಬೇರೆ ಬೆಳೆ ಬೆಳೆಯುತ್ತಾರೆ. ಮೇರೆಗಳಲ್ಲಿನ ಬೆಳೆಯನ್ನು ದನಕರುಗಳು ತಿಂದು ಉಳಿದಿದ್ದನ್ನು ತಾವು ಕೋಯ್ದುಕೊಳ್ಳುತ್ತಾರೆ. ಸಾಮಾನ್ಯವಾಗಿ ಮೇರೆಗಳಿಗೆ ದನ ಕರುಗಳು ತಿನ್ನದ ಬೆಳೆಯಾದ ಔಡಲವನ್ನು ಬಿತ್ತುತ್ತಾರೆ. ಸೂರ್ಯಕಾಂತಿಯನ್ನು ಬಿತ್ತುತ್ತಾರೆ. ಅಷ್ಟೇ ಅಲ್ಲದೇ ತಮಗೆ ಬೇಕಾದ ಬೇರೆ ಅಕ್ಕಡಿ ಕಾಳುಗಳನ್ನು ಸಹ ಮೇರೆಗೆ ಬಿತ್ತುತ್ತಾರೆ.

### ೩.೩.೪ ಕಳೆ ನಿಯಂತ್ರಣ

ಇವರು ತಮ್ಮ ಪಾರಂಪರಿಕ ತಿಳುವಳಿಕೆಯನ್ನು ಬಳಸಿ ಹೊಲಗದ್ದೆಗಳಲ್ಲಿನ ಕಳೆಯನ್ನು ನಿಯಂತ್ರಿಸುತ್ತಾರೆ. ಮುಂಗಾರಿನಲ್ಲಿ ಹೊಲದಲ್ಲಿ ಬೀಜ ಬಿತ್ತನೆ ಮಾಡುವ ಮುಂಚೆಯೇ ಕೊಟ್ಟಿಗೆ

ಗೊಬ್ಬರವನ್ನು ಹೊಲಕ್ಕೆ ಹಾಕುತ್ತಾರೆ. ಹೀಗೆ ಕೊಟ್ಟಿಗೆ ಗೊಬ್ಬರ ಚೆಲ್ಲುವುದರಿಂದ ಭೂಮಿಯ ಫಲವತ್ತತೆ ಹೆಚ್ಚುತ್ತದೆ. ಜೊತೆಗೆ ಮುಂಗಾರು ಮಳೆ ಬಿದ್ದ ತಕ್ಷಣ ಗೊಬ್ಬರದಲ್ಲಿರುವ ಮತ್ತು ಹೊಲದಲ್ಲಿರುವ ಕಳೆ ಬೀಜಗಳು ಹುಟ್ಟಿಕೊಳ್ಳುತ್ತವೆ. ಹೀಗೆ ಕಳೆ ಹುಟ್ಟಿಕೊಂಡಾಗ ಬಿತ್ತನೆಯ ಮುಂಚೆಯೇ ಆ ಹೊಲಗಳನ್ನು ಮಡಿಕೆ, ಕುಂಟೆ, ಹೊಡೆದು ಬೇಸಾಯ ಮಾಡುವ ಮೂಲಕ ಹೆಚ್ಚಿನ ಪ್ರಮಾಣದ ಕಳೆಯನ್ನು ನಿಯಂತ್ರಿಸಿಕೊಳ್ಳುತ್ತಾರೆ. ನಂತರ ಬಿತ್ತನೆ ಮಾಡಿ ಬೆಳೆ ಹುಟ್ಟಿದ ಮೇಲೆ ಬೆಳೆಯ ಮಧ್ಯದಲ್ಲಿ ಒಳಬೇಸಾಯ/ಅಂತರ ಬೇಸಾಯ(ಎಡೆಕುಂಟೆ) ಮಾಡುವುದರ ಮೂಲಕ ಕಳೆಯನ್ನು ನಿಯಂತ್ರಿಸುತ್ತಾರೆ. ಯಾವುದೇ ಕಳೆನಾಶಕಗಳಂತಹ ರಾಸಾಯನಿಕಗಳನ್ನು ಬಳಸದೇ ಕಳೆಯನ್ನು ಕಿತ್ತು ನಾಶ ಮಾಡುವ ತಂತ್ರಜ್ಞಾನ ಇವರಲ್ಲಿದೆ. ಹೀಗೆ ಬೆಳೆಗಳಲ್ಲಿನ ಕಳೆಯನ್ನು ನಾಶ ಮಾಡಿ ಹೊಲವನ್ನು ಸ್ವಚ್ಛವಾಗಿಡುವುದರಿಂದ ಫಸಲಿಗೆ ಯಾವುದೇ ರೋಗ ಬಾಧಿಸದೇ ಉತ್ತಮ ಫಲ ಪಡೆಯಬಹುದು. ಈ ರೀತಿಯಾದ ಪಾರಂಪರಿಕ ಪದ್ಧತಿಯನ್ನು ಹಟ್ಟಿಯ ಜನ ಇಂದಿಗೂ ರೂಢಿಸಿಕೊಂಡು ಬಂದಿದ್ದಾರೆ.

**ಕಳೆ ತೆಗೆಯುವುದು**

ಬಿತ್ತನೆ ಆದ ಮೇಲೆ ಬೆಳೆಗಳು ಮೊಳತು ತಿಂಗಳು ತುಂಬುವುದರೊಳಗಾಗಿ ಬೆಳೆ ಸಾಲುಗಳಲ್ಲಿ ಮಧ್ಯೆ ಸಾಲುಗಳ ಅಂತರದಲ್ಲಿ ಬೆಳೆದಿರುವ ಕಳೆಯನ್ನು ತೆಗೆದು ಸ್ವಚ್ಛಮಾಡುತ್ತಾರೆ ಇಲ್ಲವಾದರೆ ಫಸಲು ಸರಿಯಾಗಿ ಬೆಳೆಯುವುದಿಲ್ಲ. ಶೇಂಗಾ, ಜೋಳ, ರಾಗಿ, ಇತ್ಯಾದಿ ಯಾವುದೇ ಬೆಳೆಯಾದರೂ ಕಳೆ ತೆಗೆಯುವ ಮೊದಲು ಸಾಲುಗಳ ಮಧ್ಯದಲ್ಲಿ ಅಂತರ ಬೇಸಾಯವನ್ನು ಮೊದಲು ಮಾಡುತ್ತಾರೆ(ಎಡೆಕುಂಟೆ) ನಂತರ ಮನೆಯವರ ಜೊತೆ ಕೂಲಿಯವರು ಸೇರಿಕೊಂಡು ಕಳೆ ತೆಗೆಯುತ್ತಾರೆ. ಎಡೆಕುಂಟೆಯನ್ನು ಹಾಕುವುದು/ಹೊಡೆಯುವುದು ಗಂಡಸರ ಕೆಲಸವಾದರೆ ಸಾಲುಗಳಲ್ಲಿನ ಕಳೆಯನ್ನು ಕುರ್ಚಿಗೆ ಅಥವಾ ಗುದ್ದಲಿಗಳಿಂದ ತೆಗೆಯುವುದು ಹೆಂಗಸರ ಕೆಲಸವಾಗಿರುತ್ತದೆ. ಸಾಲುಗಳಲ್ಲಿ ಬೆಳೆಯ ಜೊತೆಯಲ್ಲಿ ಬೆಳೆದಿರುವ ಹುಲ್ಲನ್ನು ಕುರ್ಚಿಗೆ ಅಥವಾ ಕಳೆಗುದ್ದಲಿಯಿಂದ ತೆಗೆಯುವುದರಿಂದ ಬೆಳೆಗೆ ಆಗುವ ಉಪಯೋಗವೆಂದರೆ ಮುಖ್ಯ ಬೆಳೆಯ ಬೇರುಗಳ ಅಡಿಯಲ್ಲಿ ಭೂಮಿ ಸಡಿಲವಾಗಿ ಬೇರಿಗೆ ಬಿಸಿಲು ಗಾಳಿ ತಗುಲಿ ಬೆಳೆ ಸಮೃದ್ಧವಾಗಿ ಬೆಳೆಯುತ್ತದೆ. ಮತ್ತು ಭೂಮಿಯ ಫಲವತ್ತತೆ ಹೆಚ್ಚಿ ಮುಖ್ಯ ಬೆಳೆಗೆ ದೊರೆಯುತ್ತದೆ. ಇಲ್ಲವಾದರೆ ಕಳೆಯ ಹುಲ್ಲೇ ಭೂಮಿಯ ಫಲವತ್ತತೆಯನ್ನು ಹೀರಿ ಬೆಳೆಯನ್ನು ನಾಶ ಮಾಡಿ ಬೀಡುತ್ತದೆ. ಹಾಗಾಗಿ ಹಟ್ಟಿಯ ಕೃಷಿಕರು ಬಿತ್ತನೆ ಮಾಡಿದ ತಿಂಗಳೊಳಗಾಗಿ ೧-೨ ಬಾರಿ ಕಳೆಯನ್ನು ತೆಗೆದು ಹೊಲವನ್ನು ಶುಭ್ರವಾಗಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಕಳೆನಾಶವಾಗುವಂತಹ ರಾಸಾಯನಿಕ ಔಷಧಿಗಳು ಬಂದಿವೆ. ಕೆಲವರು ನೀರಾವರಿ ಹೊಲಗಳಿಗೆ ನೀರುಳ್ಳಿ ಬೆಳೆ ಮೆಕ್ಕೆಜೋಳ, ಬೆಳೆಗಳಲ್ಲಿ ಕಳೆ ನಾಶಕ ಬಳಸುತ್ತಿದ್ದರೂ ಕಡಿಮೆ ಎಂದೇ ಹೇಳಬಹುದು ಮಳೆ ಆಶ್ರಿತ ಬೆಳೆಗಳಿಗೆ ಕಳೆನಾಶಕ ಬಳಸುತ್ತಿಲ್ಲ.

**ಹೊಲದಲ್ಲಿ ಕಳೆಕೀಳಲು ಬಳಸುವ ಸಾಧನ**

ಹಟ್ಟಿಯ ಕೃಷಿಕರು ತಾವು ಬೆಳೆದ ಬೆಳೆಯಲ್ಲಿನ ಬೇಡದ ಸಸ್ಯಗಳನ್ನು(ಕಳೆಯನ್ನು) ತೆಗೆಯಲು ಅಂತರಬೇಸಾಯ ಮಾಡುತ್ತಾರೆ. ಸಾಲುಗಳ ಮಧ್ಯೆ ಇರುವ ಕಳೆಯನ್ನು ತೆಗೆಯಲು ಎಡೆಕುಂಟೆ

ಹೊಡೆದರೆ ಸಾಲುಗಳಲ್ಲಿ ಅಂದರೆ ಬೆಳೆಯಲ್ಲಿ ಇರುವ ಕಳೆಯನ್ನು ತೆಗೆಯಲು ಕೆಲವು ಉಪಕರಣಗಳನ್ನು ಬಳಸಿ ಕಳೆ ತೆಗೆಯುತ್ತಾರೆ. ಇವರು ಬಳಸುವ ಕಳೆ ತೆಗೆಯುವ ಸಾಧನಗಳೆಂದರೆ,

ಕುರುಚಿಗೆ(ಕುರ್ಚಿಗೆ) ಕಳೆ ಕೀಳಲು ಬಳಸುವ ಕಬ್ಬಿಣದ ಸಾಧನ ಬಿದಿರಿನ ಹಿಡಿ ಹಾಕಿ ಇಂಗ್ಲೀಷ್‌ನ ಎಲ್(L) ಆಕಾರದಲ್ಲಿ ಮಾಡಿದ ಚೂಪಾದ ಸಾಧನ.

ಕಳೆಗುದ್ಲಿ ಕಳೆ ಕೀಳಲು ಬಳಸುವ ಮತ್ತೊಂದು ಸಾಧನ ಇದಕ್ಕೆ ಮರದ ಹಿಡಿ ಹಾಕಿರುತ್ತಾರೆ ಚಿಕ್ಕದಾದ ಎಲೆಯಾಕಾರದ ಕಬ್ಬಿಣದ ಸಾಧನ ಇದಾಗಿದೆ.

ಕುಡುಗೋಲು ಕಬ್ಬಿಣ ಅಥವಾ ಉಕ್ಕಿನಿಂದ ಮಾಡಿರುವ ಅರ್ಧ ಚಂದ್ರಾಕಾರದಲ್ಲಿರುವ ಆಯುಧ. ಇದಕ್ಕೆ ಮರದ ಹಿಡಿ ಹಾಕಿರುತ್ತಾರೆ. ಪೈರು, ಬೆಳೆ ಕಟಾವು ಮಾಡಲು ಬಳಸುವ ಒಂದು ಸಾಧನ, ಹುಲ್ಲನ್ನು ಕೊಯ್ಯಲು ಸಹ ಕುಡುಗೋಲನ್ನು ಬಳಸುತ್ತಾರೆ.

**೩.೩.೫ ಮುಯ್ಯು ಪದ್ಧತಿ/ಮುಯ್ಯಿ ಪದ್ಧತಿ**

ಸಾಮಾನ್ಯವಾಗಿ ಮುಯ್ಯಿ ಎಂದರೆ ಪ್ರತಿಕಾರ ಎಂದು ಹೇಳುತ್ತಾರೆ. ಹಳ್ಳಿಗಳಲ್ಲಿ ಮುಯ್ಯಿ ಎಂದರೆ ಮದುವೆ ಋತುಮತಿ ಮುಂತಾದ ಸಮಾರಂಭಗಳಲ್ಲಿ ವಧು-ವರರಿಗೆ ಸಂಬಂಧಿಕರು ನೀಡುವ ಉಡುಗೊರೆ, ಕಾಣಿಕೆಯನ್ನು ಮುಯ್ಯಿ ಎನ್ನುತ್ತಾರೆ. ಮುಯ್ಯಿ ಎನ್ನುವ ಪದಕ್ಕೆ ಈ ಎರಡೂ ಅರ್ಥಗಳು ಸರಿ. ಆದರೂ ಇಲ್ಲಿ ಜನಪದರ ಕೃಷಿ ಬದುಕಿನಲ್ಲಿ ಮುಯ್ಯಿ ಎಂದರೆ ಬೇರೆಯೇ ಅರ್ಥ ಪಡೆಯುತ್ತದೆ.

ಹೆಚ್ಚು ಜಮೀನು ಇದ್ದು ಮನೆಯಲ್ಲಿ ಕಡಿಮೆ ಜನ ಇದ್ದರೆ ತಮ್ಮ ಅಷ್ಟೊಂದು ಜಮೀನಿನ ಕೃಷಿ ಕೆಲಸವನ್ನು ತಮ್ಮ ಮನೆಯ ಸದಸ್ಯರಷ್ಟೇ ಮಾಡಲು ಸಾಧ್ಯವಿರುವುದಿಲ್ಲ, ಕೂಲಿಯವರೂ ಸಹ ಸಿಗುತ್ತಿಲ್ಲ ಇಂತಹ ಸಂದರ್ಭದಲ್ಲಿ ಎರಡು ಮನೆಯವರು ಅಥವಾ ಬೇರೆ ಬೇರೆ ಮನೆಯವರು ಸೇರಿ ಮೊದಲು ಯಾರಾದರೂ ಒಬ್ಬರ ಹೊಲದಲ್ಲಿ ಕೆಲಸ ಮಾಡುತ್ತಾರೆ. ಅದಕ್ಕೆ ಪ್ರತಿಯಾಗಿ ಆ ಹೊಲದವರು ಅವರಿಗೆ ಕೂಲಿ ಕೊಡುವುದಿಲ್ಲ ಬದಲಾಗಿ ಅವರ ಕೆಲಸ ಮುಗಿದ ಮೇಲೆ ಇವರು ಅವರ ಹೊಲಕ್ಕೆ ಕೆಲಸಕ್ಕೆ ಹೋಗುತ್ತಾರೆ. ಆ ಮನೆಯವರು ಎಷ್ಟು ಜನ, ಎಷ್ಟು ದಿನ ಇವರ ಕೆಲಸಕ್ಕೆ ಬಂದಿರುತ್ತಾರೋ ಇವರು ಅಷ್ಟು ದಿನ ಅಷ್ಟು ಜನ/ಆಳು ಕೆಲಸ ಮಾಡಿ ಸಮ ಮಾಡುತ್ತಾರೆ. ಒಂದು ವೇಳೆ ಅವರ ಆಳುಗಳು ಇನ್ನೂ ಉಳಿದರೆ ಅದರ ಲೆಕ್ಕ ಹಾಕಿ ಕೂಲಿ ಕೊಡುತ್ತಾರೆ. ಇದನ್ನು ಮುಯ್ಯಿ ಪದ್ಧತಿ ಎನ್ನುತ್ತೇವೆ. ಇದು ಶ್ರಮದಾಯಕ ಕೃಷಿ ಕುಟುಂಬಗಳಿಗೆ ಉಪಯುಕ್ತ ಮತ್ತು ಇಂದಿಗೂ ಹಟ್ಟಿಯಲ್ಲಿ ಈ ಮುಯ್ಯಿ ಪದ್ಧತಿ ರೂಢಿಯಲ್ಲಿದೆ.

ಮುಯ್ಯಿ ಎನ್ನುವುದನ್ನು ಕೃಷಿಕೆಲಸದಲ್ಲಿ ಈ ರೀತಿಯಾಗಿ ನೋಡಿದರೆ, ಸಾಮಾಜಿಕ ವ್ಯವಸ್ಥೆಯಲ್ಲಿ ಹಟ್ಟಿಯ ಯಾರಾದರೂ ಮನೆಯಲ್ಲಿ ಮದುವೆ ಆದರೆ ಅಥವಾ ಅವರ ಮನೆಯ ಹೆಣ್ಣು ಮಗಳು ಋತುಮತಿಯಾಗಿದ್ದರೆ ಅವಳಿಗೆ ಆರತಿ ಮಾಡುವ ಶಾಸ್ತ್ರ ಮಾಡಿದರೆ ಊರವರೆಲ್ಲಾ, ಬಂಧುಗಳೆಲ್ಲಾ ಬಂದು ಕಾರ್ಯಕ್ರಮದಲ್ಲಿ ಭಾಗವಹಿಸಿ ವಧು-ವರರಿಗೆ ಅಥವಾ ಋತುಮತಿ ಹೆಣ್ಣುಮಗಳಿಗೆ ಆಯರು/

ಮುಯ್ಯಿ/ಕಾಣಿಕೆ ನೀಡಿ ಹೋಗುತ್ತಾರೆ, ಈ ಕಾಣಿಕೆ ಹಣವಾಗಿರಬಹುದು, ಬಂಗಾರ, ಬೆಳ್ಳಿ, ಪಾತ್ರೆ, ಬಟ್ಟೆ ಇತ್ಯಾದಿ ಆಗಿರಬಹುದು ತಮ್ಮ ಶಕ್ತಿಗೆ ಅನುಸಾರವಾಗಿ ಮುಯ್ಯಿ ಮಾಡುತ್ತಾರೆ. ಈ ಮುಯ್ಯಿ ಪದ್ಧತಿಯ ಹಿಂದಿನ ಉದ್ದೇಶವನ್ನು ಈ ರೀತಿಯಾಗಿ ಗ್ರಹಿಸಬಹುದು, ಅದು ಏನೆಂದರೆ ಹಿಂದಿನ ಕಾಲದಲ್ಲಿ ಬಡತನದ ಸ್ಥಿತಿಯಲ್ಲಿ ಬದುಕುತ್ತಿದ್ದ ಜನರು ತಮ್ಮ ಮನೆಗಳಲ್ಲಿ ಮದುವೆ ಇತ್ಯಾದಿ ಕಾರ್ಯಗಳನ್ನು ಮಾಡಿ ಊರವರಿಗೆಲ್ಲಾ ಊಟ ಹಾಕಿಸಿ ಬಂಧುಗಳನ್ನು ಕರೆಸಿ ತುಂಬಾ ಖರ್ಚು ಮಾಡಿಕೊಂಡಿರುತ್ತಾರೆ, ಅಂತಹ ಸಂದರ್ಭದಲ್ಲಿ ಬಂಧುಗಳು ಮತ್ತು ಊರಿನವರು ಆ ಒಂದು ಕುಟುಂಬಕ್ಕೆ ಆಗುವ ಆರ್ಥಿಕ ಹೊರೆಯನ್ನು ತಗ್ಗಿಸುವ ಸಲುವಾಗಿ ತಮ್ಮ ಶಕ್ತ್ಯಾನುಸಾರ ಮುಯ್ಯಿ ಕೊಡುತ್ತಾರೆ. ಇದು ಒಂದು ರೀತಿಯಲ್ಲಿ ಇಡಿ ಸಂಬಂಧಿಕರು, ಊರಿನವರು ಸೇರಿ ಹಣ ಸಂಗ್ರಹಿಸಿ ಆ ಒಂದು ಮನೆಯ ಕಾರ್ಯಮಾಡಿದ ರೀತಿಯಲ್ಲಿ ಇರುತ್ತದೆ. ಈ ಮುಯ್ಯಿ ಪದ್ಧತಿಯು ಇಂದಿಗೂ ಹಟ್ಟಿಯಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ ಈ ಪದ್ಧತಿಯಿಂದ ಸಾಮಾಜಿಕ ಸಂಬಂಧ ಗಟ್ಟಿಗೊಳ್ಳುತ್ತದೆ. ಇದೊಂದು ಉತ್ತಮ ಅಲಿಖಿತ ಸಂವಿಧಾನದಂತೆ ನಡೆದುಕೊಂಡು ಬರುತ್ತಿದೆ.

**ಕಡ/ಕೈಗಡ ಪದ್ಧತಿ**

ಇದು ಒಂದು ರೀತಿಯಲ್ಲಿ ವ್ಯವಹಾರದಲ್ಲಿನ ಹಣದ ಸಾಲದ ಹೋಲಿಕೆ ಯಾಗಿರುತ್ತದೆ, ಆದರೆ ಇದನ್ನು ಸಾಲ ಎಂದು ಕರೆದರೆ ಸರಿ ಹೊಂದುವುದಿಲ್ಲ ಜನಪದರ ಮಾತಿನಲ್ಲಿ ಕೈಗಡ ಎಂದು ಬಳಸುತ್ತಿರುವುದೇ ಸೂಕ್ತ. ಕೈಗಡ ಎಂದರೆ ಹಟ್ಟಿಯಲ್ಲಿ ಯಾರಾದರೂ ಮನೆಯಲ್ಲಿ ಏನಾದರೂ ಉಪ್ಪೋ, ಎಣ್ಣೆಯೋ, ಹಿಟ್ಟೋ, ಕಾಳೋ ಇತ್ಯಾದಿಗಳು ಕೊರತೆ ಬಂದಾಗ ಪಕ್ಕದ ಮನೆಯವರಿಂದ ಅದನ್ನು ಪಡೆಯುತ್ತಾರೆ. ಹೀಗೆ ಪಡೆದು ಮತ್ತೆ ಮರಳಿ ಹಿಂದಿರುಗಿಸುವ ಪದ್ಧತಿಗೆ ಕೈಗಡ ಎಂದು ಕರೆಯುತ್ತಾರೆ. ಒಂದು ವೇಳೆ ಇದನ್ನು ಹಿಂದಿರುಗಿಸದೇ ಇರಬಹುದು ಅದರ ಪರವಾಗಿ ಆ ಮನೆಯವರಿಗೆ ಬೇರೆ ಏನಾದರೂ ಅಗತ್ಯತೆ ಬಿದ್ದಾಗ ಅದನ್ನು ಇವರು ತಮ್ಮ ಮನೆಯಿಂದ ಒದಗಿಸಿದರೆ ಸಾಕು. ಇಂತಹ ಪದ್ಧತಿಯೇ ಕೈಕಡ ಪದ್ದತಿ. ಕೆಲವೊಂದು ಸಂದರ್ಭದಲ್ಲಿ ಹಣವನ್ನು ಹಸ ಕೈಗಡವಾಗಿ ಪಡೆದು ಹಿಂದಿರುಗಿಸುವುದನ್ನು ಕಾಣಬಹುದು. ಮಹಿಳೆಯರು ಉಪ್ಪು, ಎಣ್ಣೆ, ಹಿಟ್ಟು, ಮೆಣಸಿನಕಾಯಿ, ಸಾರಿನ ಕಾಳುಗಳನ್ನು ಕಡ ಪಡೆಯುತ್ತಾರೆ. ಕಡ ಪದ್ಧತಿ, ಮುಯ್ಯಿ ಪದ್ಧತಿ ಕೂಡ ಬೇಸಾಯ ಪದ್ಧತಿಯಿಂದ ಹಟ್ಟಿಯ ಜನರಲ್ಲಿ ಪರಸ್ಪರ ಸಾಮಾಜಿಕ ಸಂಬಂಧ ಗಟ್ಟಿಗೊಳ್ಳಲು ಸಹಾಯಕವಾಗಿವೆ. ಯಾವುದೇ ಹಣಕಾಸಿನ ವ್ಯವಹಾರಕ್ಕೆ ತಲೆಕೆಡಿಸಿಕೊಳ್ಳದೆ ಅಗತ್ಯ ಪದಾರ್ಥಗಳನ್ನು ಕೊಡುವ ಮತ್ತು ಪಡೆಯುವ ಮುಯ್ಯಿ ಪದ್ಧತಿಯಿಂದ ಜನಪದರ ಆರ್ಥಿಕ ಹೊರೆ ತಗ್ಗುತ್ತದೆ. ಪ್ರತಿಯೊಂದಕ್ಕೂ ಹಣ ಬೇಕೆಂಬುದನ್ನು ಬಿಟ್ಟು ಈ ರೀತಿಯ ಕಡ ಪದ್ಧತಿಯಿಂದ ನೆಮ್ಮದಿಯಾಗಿ ಜೀವಿಸುತ್ತಾರೆ.

**೩.೩.೬ ಬೆಳೆಗಳ ರೋಗ ನಿಯಂತ್ರಿಸುವ ಪಾರಂಪರಿಕ ಜ್ಞಾನ**

ಹಟ್ಟಿಯ ಕೃಷಿಕರು ತಾವು ಬೆಳೆದ ಬೆಳೆಗಳಿಗೆ ತಗುಲುವ ರೋಗಗಳಿಗೆ ಸ್ಥಳೀಯವಾಗಿ ಲಭ್ಯವಿರುವ ಕಡಿಮೆ ವೆಚ್ಚದ ವಸ್ತು ಪದಾರ್ಥಗಳನ್ನು ಬಳಸಿಕೊಂಡು ಬೀಜಗಳನ್ನು, ಧಾನ್ಯಗಳನ್ನು ಮತ್ತು ಬೆಳೆಗಳ

ರೋಗಗಳನ್ನು ನಿಯಂತ್ರಣ ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಬೆಳೆಗಳ ರೋಗ ನಿವಾರಣೆಗೆ ಬಗೆ ಬಗೆಯ ಔಷಧಗಳು ಬಂದಿವೆ ಆದರೆ ಈ ಹಿಂದೆ ನಮ್ಮ ಕೃಷಿಕರು ಬಳಸುತ್ತಿದ್ದ ಸ್ಥಳೀಯ ಪ್ರಾಕೃತಿಕ ಮದ್ದುಗಳಷ್ಟು ಇವು ಉಪಯುಕ್ತವಲ್ಲ ಕಾರಣ ನಮ್ಮ ಜನಪದರು ಪರಂಪರೆಯಿಂದ ಬಳಸುತ್ತಾ ಬಂದಿರುವ ಮದ್ದು ಅಥವಾ ಔಷಧಿಗಳು ಯಾವುದೇ ಅಡ್ಡಪರಿಣಾಮವಿಲ್ಲದೆ ಬೆಳೆಯ ರೋಗವನ್ನು ನಿಯಂತ್ರಿಸುತ್ತವೆ. ಆದರೆ ಈಗಿನ ಔಷಧಗಳನ್ನು ಬಳಸಿದ ಬೆಳೆಯ ಧಾನ್ಯಗಳನ್ನು ಸೇವಿಸುವುದರಿಂದ ಮನುಷ್ಯ ಅನೇಕ ರೋಗಗಳಿಗೆ ತುತ್ತಾಗುತ್ತಿದ್ದಾನೆ. ಆದರೆ ಹಟ್ಟಿಯಲ್ಲಿ ಬಹುತೇಕ ಕೃಷಿಕರು ಇಂದಿಗೂ ಸಹ ತಮ್ಮ ಕೃಷಿ ಚಟುವಟಕೆಗಳಲ್ಲಿ ಪಾರಂಪರಿಕ ಕೃಷಿ ವಿಧಾನವನ್ನು ಬಳಸಿಕೊಂಡು ಬರುತ್ತಿದ್ದಾರೆ. ಇವರು ತಾವು ಬೆಳೆದ ಫಸಲಿಗೆ ತಗುಲುವ ರೋಗಗಳನ್ನು ನಿಯಂತ್ರಿಸಲು ಅನೇಕ ತಂತ್ರಗಳನ್ನು ಬಳಸುತ್ತಾರೆ. ಬಿತ್ತನೆ ಬೀಜವನ್ನು ಸಂಗ್ರಹಿಸುವ ಹಂತದಿಂದಲೂ ಫಸಲಿನ ಕಟಾವಿನವರೆಗೆ ಅನೇಕ ತಂತ್ರಗಳನ್ನು ಉಪಯೋಗಿಸಿ ರೋಗಬಾಧೆಯನ್ನು ನಿಯಂತ್ರಿಸುತ್ತಾರೆ. ಇವರು ಬೆಳೆಗಳ ರೋಗ ನಿಯಂತ್ರಣಕ್ಕೆ ಬಳಸುವ ಪಾರಂಪರಿಕ ತಂತ್ರಗಳನ್ನು ಇಲ್ಲಿ ನೋಡೋಣ.

**ಚರಗ ಚೆಲ್ಲುವುದು:** ಬೆಳೆಗೆ ಅಂಟುವ ಕ್ರಿಮಿ, ಕೀಟ, ರೋಗ ನಿವಾರಣಾರ್ಥವಾಗಿ ಚರಗ ಚೆಲ್ಲುವ ಆಚರಣೆ ಹಟ್ಟಿಯ ವ್ಯವಸಾಯಗಾರರಲ್ಲಿ ರೂಢಿಯಲ್ಲಿದೆ. ಇವರು ತಮ್ಮ ಬೆಳೆಗಳಿಗೆ ಅಮವಾಸ್ಯೆಗೊಮ್ಮೆ, ಹುಣ್ಣಿಮೆಗೊಮ್ಮೆ ಚರಗ ಚೆಲ್ಲುತ್ತಾರೆ. ಮುದ್ದೆ, ಅನ್ನ ಇಂತಹ ಯಾವುದಾದರೂ ಅಡುಗೆಯನ್ನು ಮಾಡಿ ಅದನ್ನು ನೀರಿನಲ್ಲಿ ತೆಳ್ಳಗೆ ಕಲಸಿಕೊಂಡು ಮುಸುರೆಯ ತರಹ (ಕಲಗಟ್ಟು) ಮಾಡಿಕೊಂಡು ಹೊಲದ ಸುತ್ತ ಮತ್ತು ಹೊಲದಲ್ಲಿ ಚೆಲ್ಲಾತ್ತಾರೆ. ಹಾಗೆ ಚರಗ ಚೆಲ್ಲುವಾಗ ಚೆಲ್ಲುವವರು "ಹೋಲಿಗ್ಯ–ಹೋಲಿಗ್ಯ ಎಂದು ಉಚ್ಚರಿಸುತ್ತಾರೆ. ಹೊಲಿಗ್ಯ ಎಂಬ ಕೂಗು ಎಲ್ಲಿಯವರೆಗೆ ಕೇಳಿಸುತ್ತದೆಯೋ ಅಷ್ಟು ವ್ಯಾಪ್ತಿಯ ಬೆಳೆಗೆ ಒಳ್ಳೆಯದಾಗುತ್ತದೆ ಎಂದು ನಂಬಿಕೆ"[೨೧]. ಹೀಗೆ ಮಾಡುವುದರಿಂದ ಬೆಳೆಗಳಿಗೆ ಕೀಟಗಳು ಬಿದ್ದಿದ್ದರೆ ನಿವಾರಣೆ ಮಾಡಿದಂತಾಗುತ್ತದೆ. ಚರಗ ಚೆಲ್ಲುವ ಈ ಆಚರಣೆಯಿಂದ ಆಗುವ ಉಪಯೋಗವೆಂದರೆ. ಚರಗದಲ್ಲಿರುವ ಅನ್ನದ ಅಗುಳು, ಮುದ್ದೆಯ ಚೂರು, ನುಚ್ಚು ಮುಂತಾದ ಆಹಾರದ ಪದಾರ್ಥಗಳನ್ನು ತಿನ್ನಲು ಬರುವ ಹಕ್ಕಿಗಳು ಅಲ್ಲಿರುವ ಆಹಾರವನ್ನು ತಿಂದು ಮುಗಿಸಿದ ಮೇಲೂ ಅಲ್ಲಿಯೇ ಫಸಲಿನ ಮೇಲೆ ಇರುವ ಹುಳುಗಳನ್ನು ತಿಂದುಹಾಕುತ್ತವೆ ಈ ರೀತಿಯಾದಂತಹ ಚರಗ ಚೆಲ್ಲುವ ಪದ್ದತಿಯು ಕೀಟ ನಿವಾರಣೆ ಮಾಡುವ ಸರಳ ವಿಧಾನವೂ ಆಗಿದೆ. ಹಟ್ಟಿಯ ಕೃಷಿಕರು ತಾವು ಬೆಳೆಯುವ ಬೆಳೆಗಳಾದ ಔಡಲಗಿಡಗಳಿಗೆ, ಹೆಸರು, ಗಿಡಗಳಿಗೆ, ಶೇಂಗಾ ಹೊಲಕ್ಕೆ ಜೋಳ, ರಾಗಿ ಮುಂತಾದ ಬೆಳೆಗಳಿಗೆ ಹತ್ತಿದ ಹುಳಗಳನ್ನು ಚರಗ ಚೆಲ್ಲಿ ಪಕ್ಷಿಗಳನ್ನು ಆಕರ್ಷಿಸಿ ನಿವಾರಣೆ ಮಾಡಿಕೊಳ್ಳುತ್ತಾರೆ ಚರಗ ಚಲ್ಲುವ ಪದ್ಧತಿಯನ್ನು ಇಂದಿಗೂ ರೂಢಿಸಿಕೊಂಡು ಬರುತ್ತಿದ್ದಾರೆ.

**೩.೩.೭ ಮಳೆಗಳು ಮತ್ತು ಅವುಗಳ ಬಗೆಗಿನ ನಂಬಿಕೆಗಳು**

ಯುಗಾದಿಯ ನಂತರ ಏಪ್ರಿಲ್ ತಿಂಗಳಿನಿಂದ ಮಳೆಗಳು ಪ್ರಾರಂಭವಾಗುತ್ತವೆ. ಅಲ್ಲಿಂದ ನಾಲ್ಕು ತಿಂಗಳನ್ನು ಮಳೆಗಾಲ ಮುಂಗಾರು ಮತ್ತು ಹಿಂಗಾರು ಮಳೆಗಳೆಂದು ವಿಂಗಡಿಸುವುದುಂಟು ಮುಂಗಾರು

ಮತ್ತು ಹಿಂಗಾರು ಮಳೆಗಳ ಗುಣ ವಿಶೇಷತೆ ಬಗ್ಗೆ ಹಟ್ಟಿಯ ಜನಪದರ ಮಾತಿನಲ್ಲಿ ತಿಳಿಯುವುದಾದರೆ ಅವರು ಆ ಮಳೆಗಳನ್ನು ನಂಬಿರುವ ಮತ್ತು ಮಳೆಗಳ ಮೇಲೆ ಕಟ್ಟಿರುವ ಗಾದೆ ಮಾತುಗಳಿಂದ ತಿಳಿಯಬಹುದಾಗಿದೆ.

**ಮುಂಗಾರು ಮಳೆಗಳು**

ಮುಂಗಾರು ಎಂಬುದು ಮಳೆಗಳಿಗೆ ಸಂಬಂಧಿಸಿದ ಹೆಸರಾಗಿದೆ. ಈರ್=ಎಂದರೆ ನೀರು ಈರ್‌ಗಾರರು ಎಂದರೆ ಜಲಗಾರರು ಅಂತೆಯೇ ಆರ್, ಎಂದರೂ ಸಹ ಜಲ ಅಥವಾ ನೀರೇ ಆಗುತ್ತದೆ. ಆದ್ದರಿಂದ ಆರ್, ಆರು ಎಂಬುದು ನೀರು, ಮಳೆಗಳಿಗೆ ಸಂಬಂಧಿಸಿದ ಹೆಸರಾಗಿದೆ. ಮುಂಗಾರು ಅಂದರೆ ಮೊದಲ ಮಳೆ ಎಂದಾಗುತ್ತದೆ. ಮಳೆಗಳು ಮತ್ತು ಅವುಗಳ ಗುಣ ವಿಶೇಷತೆ ಏನು ಎಂದು ನೋಡುವುದಾದರೆ ಮಳೆಗಳ ಕುರಿತ ಕೃಷಿಕರ ಅಭಿಪ್ರಾಯ ಅಗತ್ಯ

**ಅಶ್ವಿನಿ ಮಳೆ(ಏಪ್ರಿಲ್)**

ಏಪ್ರಿಲ್ ತಿಂಗಳಿನಿಂದ ಮಳೆಗಾಲ ಆರಂಭವಾಗುತ್ತವೆ. ಮಳೆಗಾಲದಲ್ಲಿ ಬರುವ ಮೊದಲ ಮಳೆಯೇ ಅಶ್ವಿನಿ ಮಳೆ ಅಶ್ವಿನಿ ಮಳೆಯ ಕುರಿತಾಗಿ ಜನಪದರ ಅಭಿಪ್ರಾಯವೆಂದರೆ ಈ ಮಳೆ ಬಾರದಿದ್ದರೆ ಒಳ್ಳೆಯದು ಎನ್ನುತ್ತಾರೆ. ಒಂದು ವೇಳೆ ಬಂದರೆ ಮುಂದಿನ ಮೂರು ಮಳೆಗಳು ಬರುವುದಿಲ್ಲ. ಎಂಬ ನಂಬಿಕೆ ಹಟ್ಟಿಯ ಜನರಲ್ಲಿದೆ. ಹಾಗಾಗಿ ಅಶ್ವಿನಿ ಮಳೆ ಬಿದ್ದರೆ ಆ ವರ್ಷ ಬರಗಾಲ ಎಂದು ತಿಳಿಯುತ್ತಾರೆ. ಈ ಮಳೆಯ ಕುರಿತಾಗಿ ಅಶ್ವಿನಿ ಮಳೆಯಾದರೆ ಶಿಶುವಿಗೆ ನೀರಿಲ್ಲ ಎಂಬ ಮಾತು ಇದೆ.

ಭರಣಿ ಮಳೆ(ಏಪ್ರಿಲ್-ಮೇ): ಭರಣಿ ಮಳೆಯನ್ನು ಶುಭಕರವಾದುದು ಎಂದು ಹೇಳುತ್ತಾರೆ. "ಭರಣಿ ಬಾಯಿ ತುಂಬಾ ಬಂಗಾರ ಎಂಬ ಹೇಳಿಕೆ ಇದೆ"[೨೨]. ಈ ಮಳೆಗೆ ಬಿತ್ತಿದ ಬೆಳೆಗಳು ಉತ್ತಮ ಫಲ ನೀಡುತ್ತವೆ ಎಂಬುದು ಇವರ ಅನುಭವದ ಮಾತು ಆದ್ದರಿಂದ ಈ ಗಾದೆ ಹುಟ್ಟಿಕೊಂಡಿದೆ ಎನ್ನಬಹುದು.

**ರೋಹಿಣಿ ಮಳೆ(ಮೇ-ಜೂನ್)**

ಅಶ್ವಿನಿ ಮಳೆಯ ನಂತರ ಬರುವ ಈ ಮಳೆ ಸುರಿಯುವುದರಿಂದ ಬೇಸಿಗೆಯ ಬಿಸಿಲಿನಿಂದ ಕಾದ ನೆಲ ತಂಪಾಗುತ್ತದೆ. ಆಗ ರೈತರು ಬೀಜ ಬಿತ್ತನೆ ಮಾಡಿದರೆ ಬೀಜ ಹುಸಿಯಾಗದೆ ಮೊಳಕೆ ಬರುತ್ತದೆ. 'ರೋಹಿಣಿ ಮಳೆಗೆ ಓಣೆಲ್ಲಾ ಕಾಳು' ಎಂಬ ಮಾತಿದೆ. ಇದು ಮುಂಗಾರು ಮಳೆಗಳಲ್ಲೇ ಅತಿ ಪ್ರಮುಖವಾದ ಮಳೆಯಾಗಿದೆ. ಈ ಮಳೆಯು ಮೇ ತಿಂಗಳಲ್ಲಿ ಪ್ರಾರಂಭವಾಗಿ ಜೂನ್ ತಿಂಗಳ ಮೊದಲವಾರದವರೆಗೆ ಇರುತ್ತದೆ. ಈ ಮಳೆ ಬರುವ ವೇಳೆಯಲ್ಲಿ ಮುಂಗಾರಿ ಪೈರುಗಳು ಮೊಳಕಾಲು ಉದ್ದ ಬೆಳೆದಿರುತ್ತವೆ. ಕಳೆ ಎಡೆಕುಂಟೆ ಎಲ್ಲಾ ಮಾಡಿ ಮುಗಿಸಿರುತ್ತಾರೆ. ಅದರಲ್ಲೂ ಜೋಳದ ಬೆಳೆಗೆ ಇದು ಉತ್ತಮ ಮಳೆ ರೋಹಿಣಿ ಮಳೆಗೆ ಜೋಳ ಬಿತ್ತಿದರೆ ಓಣಿ ತುಂಬೆಲ್ಲಾ

ಜೋಳ ಎಂದು ಇಲ್ಲಿನ ಜನಪದರು ಹೇಳುತ್ತಾರೆ. ಅಲ್ಲದೆ ಈ ಭಾಗದಲ್ಲಿ ಜೋಳ, ರಾಗಿ ಮುಖ್ಯ ಆಹಾರ ಧಾನ್ಯವಾಗಿರುವುದರಿಂದ ಜೋಳವನ್ನು ಎಲ್ಲರೂ ಸಹ ಸ್ವಲ್ಪವಾದರೂ ಬಿತ್ತಿ ಬೆಳೆಯುತ್ತಾರೆ.

**ಕೃತಿಕಾ ಮಳೆ(ಮೇ)**

ಮೂರನೆಯ ಮಳೆಯಾದ ಕೃತಿಕಾ ಮಳೆಯು ಬರುವುದರಿಂದ ಈ ಭಾಗದಲ್ಲಿ ಹೆಚ್ಚಾಗಿ ಬೆಳೆಯುವ ಶೇಂಗಾ ಬೆಳೆ ಸಮೃದ್ಧವಾಗಿ ಬೆಳೆಯುತ್ತದೆ. ಮತ್ತು ಇದು ಬಿರುಸಿನಿಂದ ಬರುವುದರಿಂದ ಪೈರುಗಳಲ್ಲಿನ ರೋಗರುಜಿನಗಳು ಕಡಿಮೆಯಾಗುತ್ತವೆ. ಈ ಮಳೆ ಆಗುವುದು ತೀರಾ ಕಡಿಮೆ.

**ಮೃಗಶಿರ ಮತ್ತು ಆರಿದ್ರ ಮಳೆ(ಜೂನ್-ಜುಲೈ)**

ಒಂದೇ ತಿಂಗಳಿನಲ್ಲಿ ಬಂದು ಹೋಗುವ ಈ ಮಳೆಗಳನ್ನು ಜೋಡು ಮಳೆಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಮೃಗಶಿರ ಮಳೆಯಾದರೆ ಆರಿದ್ರ ಆಗುವುದಿಲ್ಲ ಒಂದು ಮಳೆಯಾದರೆ ಮತ್ತೊಂದು ಆಗುವುದಿಲ್ಲ ಕೆಲವೊಮ್ಮೆ ಮಾತ್ರ ಎರಡೂ ಮಳೆಗಳಾಗುತ್ತವೆ. ಈ ಮಳೆಗಳ ಕುರಿತಾದ ಹೇಳಿಕೆ ಹೀಗಿವೆ, 'ಮಿರಗ ಮಿಂಚಬಾರದು ಆರಿದ್ರಾ ಗುಡುಗಬಾರದು' ಅಂದರೆ ಮೃಗಶಿರ ಮಳೆಯಾಗುವಾಗ ಮಿಂಚಿದರೆ ಮುಂದಿನ ಮೂರು ಮಳೆಗಳಾಗುವುದಿಲ್ಲ ಎಂದು ನಂಬುತ್ತಾರೆ ಅದರಂತೆಯೇ ಆರಿದ್ರ ಮಳೆಯಲ್ಲಿ ಗುಡುಗಿದರೆ ಮುಂದಿನ ಮೂರು ಮಳೆಗಳಾಗುವುದಿಲ್ಲ ಎನ್ನುತ್ತಾರೆ. ಅದಕ್ಕೇ ಇರಬೇಕು ರೈತರ ಬಾಳು ಮಳೆಯೊಂದಿಗಿನ ಜೂಜಾಟ ಎನ್ನುವುದು."ಆರಿದ್ರ ಮಳೆಯನ್ನು ಮನೆಯ ಹಿರಿಸೊಸೆಗೆ ಹೋಲಿಸುತ್ತಾರೆ. ಅಂದರೆ ಈ ಮಳೆಯ ಗುಣ ಸ್ವಭಾವವನ್ನು ಗುರುತಿಸಿ 'ಆರಿದ್ರ ಮಳೆ ಆದಾಂಗ ಹಿರಿಸೊಸೆ ನಡದ್ಹಾಂಗ' ಅಂದರೆ ಮಳೆಗಳಲ್ಲಿಯೇ ಇದು ಹಿರಿದಾದ ಮಳೆ ಎಂಬ ನಂಬಿಕೆ ನಮ್ಮ ಜನರಲ್ಲಿದೆ. ತೀರಾ ಹಮ್ಮುಬಿಮ್ಮಿನ ಮಳೆಯಾದ್ದರಿಂದ ಇದನ್ನು ಮನೆಯ ಹಿರಿಸೊಸೆಗೆ ಹೋಲಿಸುವುದು ಸಮಂಜಸವೆನಿಸುತ್ತದೆ"[೨೩]. ನಮ್ಮ ಜನಪದರು ಮಳೆಗಳ ಗುಣ ಸ್ವಭಾವವನ್ನು ತಮ್ಮ ಮನೆಯ ಸದಸ್ಯರಿಗೆ ಹೋಲಿಕೆ ಮಾಡಿ ಮಾತನಾಡುತ್ತಾರೆ. ವಿಶೇಷ ಅಂದರೆ ಮಳೆಗಳೂ ಸಹ ತಮ್ಮ ಕುಟುಂಬದ ಸದಸ್ಯರಿದ್ದಂತೆ ಎಂದು ಕೃಷಿಕರು ಭಾವಿಸುತ್ತಾರೆ. ಈ ಮೃಗಶಿರ ಮಳೆ ಕೆಲವೊಮ್ಮೆ ಸುರಿಯಲು ಪ್ರಾರಂಭಿಸಿದರೆ ಹಗಲೂ ರಾತ್ರಿ ಸುರಿಯುತ್ತದೆ. ಇಂಥ ಮಳೆಯಲ್ಲಿ ದನಕರುಗಳು ಸಾಟು/ ಚಾಟು(ಗಿಡಮರ, ಗೋಡೆಯ ಬದಿ) ನಲ್ಲಿ ಮೆಲುಕು ಹಾಕುತ್ತಾ ನಿಂತುಕೊಳ್ಳುತ್ತವೆ.

**ಪುನರ್ವಸು ಮತ್ತು ಪುಷ್ಯ ಮಳೆಗಳು-(ಜುಲೈ-ಅಗಷ್ಟ್)**

ಪುನರ್ವಸು ಮತ್ತು ಪುಷ್ಯ ಮಳೆಗಳನ್ನು ಗ್ರಾಮೀಣ ಕೃಷಿಕರು ತಮ್ಮ ಆಡು ಮಾತಿನಲ್ಲಿ ಹಿರಿಯ ಪುಷ್ಯ (ಹಿರೆಪುಸೆ=ಪುನರ್ವಸು), ಚಿಕ್ಕುಪ್ಯ(ಚಿಕ್ಕಪುಸೆ) ಎಂದು ಕರೆಯುತ್ತಾರೆ. ಈ ಮಳೆಗಳು ಆಷಾಢ ಮತ್ತು ಶ್ರಾವಣ ಮಾಸದಲ್ಲಿ ಬರುತ್ತವೆ. ಇವೆರಡು ಮಳೆಗಳು ಆಗುವುದು ಕಡಿಮೆ, ಮೋಡಗಳಾಗಿ ಗಾಳಿಗೆ ಹೊರಟು ಹೋಗುತ್ತವೆ. ಇದನ್ನು ನೋಡಿ ಜನಪದರು ಮೋಡಕಟ್ಟುತ್ತದೆ, ಎನ್ನುತ್ತಾರೆ, ಅಂದರೆ ಮುಂದಿನ ಮಳೆಗಳಾಗಲು ಮೋಡಗಳು ಸಂಗ್ರಹವಾಗುತ್ತವೆ ಎಂದು ನಂಬುತ್ತಾರೆ.

**ಆಶ್ಲೇಷ ಮಳೆ/ಅಶ್ಲೆ ಮಳೆ-(ಅಗಸ್ಟ್)**

ಆಶ್ಲೇಷ ಮಳೆಯನ್ನು ಜನಪದರ ಮಾತಿನಲ್ಲಿ ಅಸ್ಲೆಮಳೆ/ಅಶ್ಲೆಮಳೆ ಎಂದು ಕರೆಯುತ್ತಾರೆ. ಇದು ಕಡಿಮೆ ಆಗುತ್ತದೆ. ಹಿರೆಪುಸೆ, ಚಿಕ್ಕಪುಸೆ ಮಳೆಗಳು ಆಗದೇ ಇದ್ದರೆ ಇದು ಸುರಿಯುತ್ತದೆ. ಅದೂ ಸಹ ಜೋರು ಮಳೆಯಾಗದೆ ಜಿನಿ ಜಿನಿ ಹನಿ ಹತ್ತಿಕೊಳ್ಳುವುದರಿಂದ ಗ್ರಾಮೀಣ ಕೃಷಿಕರು ಒಂದು ಮಾತು ಹೇಳುತ್ತಾರೆ. 'ಅಸ್ಲೆಮಳೆ ಹಸನಾಗಿ ಹೇಲಾಕೆ ಬಿಡಲ್ಲಾ' ಅಂದರೆ ಆ ರೀತಿಯಾಗಿ ಒಂದೇ ಸಮನೆ ಸಣ್ಣಗೆ ಮಳೆ ಬರುತ್ತಿರುತ್ತದೆ. ಇದು ಮಳೆ ಸುರಿಸುವ ರೀತಿಯನ್ನು ಜನಪದರು ನೀರು ಚಿಮುಕಿಸುತ್ತದೆ, ಮುಖ ತೊಳೆಯುತ್ತದೆ ಎಂದು ವರ್ಣಿಸುತ್ತಾರೆ.

**ಮಗಿ ಮಳೆ/ಮಘಮಳೆ(ಅಗಸ್ಟ್-ಸಪ್ಟಂಬರ್)**

ಅಶ್ಲೆ ಮಳೆಯ ನಂತರ ಬರುವ ಮಳೆಯೇ ಮಗಿಮಳೆ ಇದು ಎರಡು ರೀತಿಯ ಗುಣವುಳ್ಳ ಮಳೆ ಈ ಮಳೆ ಬಂದರೆ ತೀರಾ ಜೋರಾಗಿ ಬರುತ್ತದೆ, ಇಲ್ಲವೆ ಸುಮ್ಮನೆ ಮಂಜಿನಂತೆ ಬಂದು ಹೋಗುತ್ತದೆ. ಮಳೆಯ ಈ ಗುಣವನ್ನು ನೋಡಿಯೇ ಕೃಷಿಕರು ಇದಕ್ಕೆ 'ಆದರೆ ಮಗಿ ಆಗದಿದ್ದರೆ ಹೊಗಿ' ಎಂದು ಹೇಳುತ್ತಾರೆ. ಮಗಿ ಮಳೆ ಏನಾದರೂ ಜೋರಾಗಿ ಆದರೆ ಮಗಿಯಿಂದ(ಸೋರೆಯಿಂದ) ನೀರು ಚೆಲ್ಲಿದಂತೆ ತುಂಬಾ ಜೋರಾಗಿ ಬರುತ್ತದೆ. ಇಲ್ಲದಿದ್ದರೆ ಮಂಜಿನಂತೆ ಬರುತ್ತದೆ. "ಈ ಮಳೆಯು ಸುರಿಯುವುದರಿಂದ ಭೂಮಿಯ ನಂಜು ಹೋಗುತ್ತದೆ. ಆದರೆ ಜನರಿಗೆ ಇಲ್ಲವೆ ಪ್ರಾಣಿಗಳಿಗೆ ಬೆಕ್ಕು, ನಾಯಿ, ಇಲಿಗಳು ಕಚ್ಚಿದರೆ ನಂಜು ಏರಿ ಗಾಯ ಬೇಗನೆ ಮಾಯುವುದಿಲ್ಲ"[೨]. ಮಗಿಮಳೆ ಸರಿಯಾಗಿ ಆದರೆ 'ಮಗಿತುಂಬಾ ಹೊನ್ನು' ಎನ್ನುತ್ತಾರೆ. ಈ ಮಳೆಯ ಸಂದರ್ಭದಲ್ಲಿ ಹೊಲಗಳಲ್ಲಿನ ಬೆಳೆಯನ್ನು ದನಕರುಗಳು ತಿಂದರೆ ಅದರಲ್ಲೂ ಜೋಳವನ್ನು ತಿಂದರೆ ಸಾಯುತ್ತವೆ.

**ಹುಬ್ಬೆ ಮಳೆ**

ಹುಬ್ಬೆ ಮಳೆಯು ಮುಂಗಾರಿ ಮಳೆಗಳಲ್ಲಿ ಕೊನೆಯ ಮಳೆಯಾಗಿದೆ. ಈ ಮಳೆಯೂ ಸಹ ಎರಡು ರೀತಿಯಲ್ಲಿ ಸುರಿಯುತ್ತದೆ. ತುಂಬಾ ಬಿರುಸಿನಿಂದ ಸುರಿಯುತ್ತವೆ. ಇಲ್ಲವೇ ಗುಬ್ಬಿಯ ಬೊಚ್ಚು ತೊಯದಪ್ಪು ಕಡಿಮೆ ಪ್ರಮಾಣದಲ್ಲಿ ಸುರಿಯುತ್ತದೆ. ಈ ಮಳೆಯು ಹೆಚ್ಚಾಗಿ ರಾತ್ರಿ ವೇಳೆಯಲ್ಲಿ ಸುರಿಯುತ್ತದೆ. ಮಳೆ ಬರುವಾಗ ಮೋಡಗಳು ಹುಬ್ಬಿ ಹುಬ್ಬಿ ಕೊಂಡು ಬರುವುದರಿಂದ ಹುಬ್ಬೆಮಳೆ ಎನ್ನುತ್ತಾರೆ.

**ಹಿಂಗಾರು ಮಳೆಗಳು**

'ಮಘ ಪಂಚಕ ಮಳೆಗಳಾದ ಮಾಘಾ ಉತ್ತರ, ಹಸ್ತ, ಚಿತ್ತ, ಮತ್ತು ಸ್ವಾತಿ ಈ ಐದು ಮಳೆಗಳ ಅವಧಿಗೆ ಹಿಂಗಾರು ಎಂದು ಕರೆಯುತ್ತಾರೆ'. ಹಿಂಗಾರು ಮಳೆಗಳೆಂದರೆ ಮುಂಗಾರು ಮಳೆಗಳ ನಂತರ ಬೀಳುವ ೫-೬ ಮಳೆಗಳನ್ನು ಹಿಂಗಾರು ಮಳೆಗಳೆಂದು ಕರೆಯುತ್ತಾರೆ. ಅವುಗಳೆಂದರೆ,

**ಉತ್ತರಿ ಮಳೆ**

ಹಿಂಗಾರು ಮಳೆಗಳಲ್ಲಿ ಮೊದಲು ಬರುವ ಮಳೆ ಉತ್ತರಿ ಮಳೆ. ಉತ್ತರಿ ಮತ್ತು ಹಸ್ತ ಮಳೆಗಳನ್ನು ಜೋಡು ಮಳೆಗಳೆಂದು ಕರೆಯುತ್ತಾರೆ. ಈ ಮಳೆಗಳು ಬಯಲು ಸೀಮೆಯ ರೈತರಿಗೆ ಭಾಷೆಯನ್ನು

ಕೊಟ್ಟಿದೆ ಎನ್ನುತ್ತಾರೆ. ಇವುಗಳಲ್ಲಿ ಒಂದು ಆಗದಿದ್ದರೆ ಮತ್ತೊಂದು ತಪ್ಪದೇ ಆದೇ ಆಗುತ್ತದೆ. ಒಮ್ಮೊಮ್ಮೆ ಎರಡೂ ಆಗುತ್ತವೆ. ಉತ್ತರಿ ಮಳೆಯ ಹನಿಗೆ ಬಿತ್ತಿದ್ದೆಲ್ಲವೂ ಫಲಕೊಡುತ್ತದೆ. ಕೃಷಿಕರಲ್ಲಿ ಈ ಮಳೆಯ ಕುರಿತು ರೂಢಿಯಲ್ಲಿರುವ ಮಾತೆಂದರೆ "ಆದ್ರೆ ಉತ್ತರಿ: ಆಗದಿದ್ರೆ ಸತ್ರಿ"ಎಂಬ ಮಾತಿನಿಂದಲೇ ಈ ಮಳೆಯ ಗುಣ ತಿಳಿಯುತ್ತದೆ.

**ಹಸ್ತ ಮಳೆ**

ಉತ್ತರಿ ಮಳೆಯ ಜೊತೆಯಲ್ಲೇ ಈ ಮಳೆ ಬರುತ್ತದೆ. ಉತ್ತರೆ ಮಳೆ ಬಾರದಿದ್ದರೆ ಇದು ಖಂಡಿತಾ ಬರುತ್ತದೆ. ಒಂದು ವೇಳೆ ಈ ಮಳೆಯೂ ಆಗಲಿಲ್ಲವೆಂದರೆ ಆ ವರ್ಷ ರೈತರಿಗೆ ಬರಗಾಲವೇ ಗತಿ ಆದ್ದರಿಂದಲೇ ಹಳ್ಳಿಗರು ಈ ಮಳೆಯ ಕುರಿತು "ಆದರೆ ಹಸ್ತ ಆಗದಿದ್ರೆ ಹಲ್ಲು ಕಿಸ್ತ" ಎಂದು ಹೇಳುತ್ತಾರೆ. ಆದರೂ ಉತ್ತರಿ ಮತ್ತು ಹಸ್ತಮಳೆಗಳು ಎರಡೂ ಆಗುತ್ತವೆ. ಇಲ್ಲವೆಂದರೆ ಒಂದಾದರೂ ಮಳೆ ಬಂದೇ ಬರುತ್ತದೆ. ಆದ್ದರಿಂದ ಈ ಮಳೆಗಳನ್ನು ಬಯಲು ಸೀಮೆಯ ರೈತರಿಗೆ ಭಾಷೆ ಕೊಟ್ಟ ಮಳೆಗಳೆಂದು ಹೇಳುತ್ತಾರೆ.

**ಚಿತ್ತ ಮಳೆ**

ಈ ಮಳೆಯನ್ನು ಆಡು ಮಾತಿನಲ್ಲಿ ಕುಲ್ಡುಚಿತ್ತೆ/ಕುರುಡು ಚಿತ್ತೆ ಮಳೆ ಎಂದು ಕರೆಯುತ್ತಾರೆ. ಇದು ಸುರಿಯಲು ಪ್ರಾರಂಭವಾದರೆ ಎಡೆ ಬಿಡದೆ ಸುರಿಯುತ್ತದೆ. ಇಲ್ಲದಿದ್ದರೆ ಬರುವುದೇ ಇಲ್ಲ. ಎತ್ತಬೇಕೊ ಅತ್ತ ಸುರಿಯುತ್ತದೆ. ಕೆಲವೊಂದು ಕಡೆ ನಿರಂತರ ಎಡಬಿಡದೆ ಸುರಿದರೆ ಅದರ ಪಕ್ಕದಲ್ಲೇ ಅಥವಾ ಪಕ್ಕದ ಹೊಲದಲ್ಲೇ ಎನೂ ಮಳೆಯಾಗದೇ ಇರುತ್ತದೆ. ಆದ್ದರಿಂದ ಈ ಮಳೆಗೆ ಕುಲ್ಡುಚಿತ್ತೆ ಮಳೆ ಎನ್ನುತ್ತಾರೆ. ಆದ್ದರಿಂದ "ಹಸ್ತ ಹದಿ ಮಳೆಯಾದರೆ ಚಿತ್ತ ಬೆದಿಮಳೆ" ಎಂದು ಕರೆಯುತ್ತಾರೆ. ಬೆದಿ ಎಂದರೆ ಚಂಚಲ ಎಂದು ಇಲ್ಲಿ ಅರ್ಥೈಸಿಕೊಂಡು ನೋಡಿದರೆ ಈ ಚಿತ್ತಿಮಳೆಯ ಗುಣಕ್ಕೆ ಸರಿಹೊಂದುತ್ತದೆ.

**ಸ್ವಾತಿ ಮಳೆ**

ಸ್ವಾತಿಮಳೆಗೆ ಹಿಂಗಾರು ಬೆಳೆಗಳು ಬಹಳ ಹುಲುಸಾಗಿ ಬೆಳೆಯುತ್ತವೆ. ಸ್ವಾತಿ ಮಳೆಯ ವಿಶೇಷತೆಯೆಂದರೆ ಬರಗಾಲ ಬಿದ್ದ ವರ್ಷ ಈ ಮಳೆ ತಪ್ಪದೇ ಆಗುತ್ತದೆ. ಇದು ಜಡಿಮಳೆಯಾಗಿ ಬರುತ್ತದೆ. ಒಂದೇ ಸಮನೆ ಜಡಿಮಳೆ ಬರುತ್ತಿರುತ್ತದೆ. ಹೀಗೆ ಸುರಿಯುವುದರಿಂದ ಚಾಪೆಯ ಕೆಳಗಿರುವ ಬೀಜಗಳು ಸಹ ಮೊಳಕೆ ಬರುತ್ತವೆ. ಹಿಂಗಾರು ಮಳೆಗಳಲ್ಲಿ ಇದೇ ಕಡೆಯ ಮಳೆ ಎನ್ನಬಹುದು ಆದ್ದರಿಂದಲೇ 'ಸ್ವಾತಿ ಮಳೆ ಹೋದ ಮೇಲೆ ಯಾತರ ಮಳೆ' ಎಂಬ ಮಾತಿದೆ ಅಂದರೆ ಸ್ವಾತಿ ಮಳೆ ಮುಗಿದರೆ ಅಲ್ಲಿಗೆ ಮಳೆಗಾಲ ಮುಗಿದಂತೆ ಆದರೂ ಸ್ವಾತಿ ಮಳೆಯ ನಂತರ ವಿಶಾಖ ಮತ್ತು ಅನುರಾಧ ಮಳೆಗಳು ಇರುತ್ತವೆ. ಇವು ಸುಗ್ಗಿಯ ಸಮಯದಲ್ಲಿ ಸುರಿದು ಕೈಗೆ ಬಂದ ಫಸಲನ್ನು ಹಾಳು ಮಾಡುವುದರಿಂದ ಈ ಮಳೆಗಳಿಗೆ ಕೆಡಕಿನ ಮಳೆಗಳು ಎಂದು ಕರೆಯುತ್ತಾರೆ.

### ೩.೩.೮ ಮಳೆ ಬರುವ ಮತ್ತು ಬಾರದಿರುವುದನ್ನು ಅರಿಯುವ ಜ್ಞಾನ

ನಮ್ಮ ಜನಪದರು ಪ್ರಕೃತಿಯಲ್ಲಿನ ಬದಲಾವಣೆ, ಪ್ರಾಣಿ–ಪಕ್ಷಿ, ಕ್ರಿಮಿ–ಕೀಟಗಳ ಚಲನ ವಲನ, ಗಿಡ–ಮರ ಬಳ್ಳಿಗಳಲ್ಲಿನ ಬದಲಾವಣೆ, ಬೆಳವಣಿಗೆಯನ್ನು ನೋಡಿ ಮಳೆ ಬರುವ ಮತ್ತು ಮಳೆ ಬಾರದಿರುವ ಸೂಚನೆಯನ್ನು ಅರಿಯುವ ಪಾರಂಪರಿಕ ಜ್ಞಾನವನ್ನು ಹೊಂದಿದ್ದಾರೆ. ಇಂತಹ ನೂರಾರು ಸಂಗತಿಗಳನ್ನು ತಮ್ಮ ಅನುಭವದಿಂದ ತಿಳಿದು ತಲೆಮಾರಿನಿಂದ ತಲೆಮಾರಿಗೆ ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಇವರ ಅನುಭವಗಳೇ ಗಾದೆ ಮಾತುಗಳಾಗಿವೆ. ಉದಾಹರಣೆಗೆ ಗ್ರಾಮೀಣ ಕೃಷಿಕರಲ್ಲಿ 'ಹುಣಸೆ ಹುಸಿ ಬಾರದು ಮಾವು ಕಾಯಬಾರದು' ಎಂಬ ಮಾತಿದೆ. ಇದರ ಅರ್ಥ ಯಾವ ವರ್ಷ ಹುಣಸೆ ಮರಗಳಲ್ಲಿ ಫಲ ಕಡಿಮೆಯಾಗಿ ಮಾವು ಹೆಚ್ಚು ಫಲಬಿಟ್ಟಿರುತ್ತದೋ ಆ ವರ್ಷ ಮಳೆ ಕಡಿಮೆ ಎಂದು ನಂಬುತ್ತಾರೆ. ಇಂತಹ ಅನೇಕ ಸಂಗತಿಗಳನ್ನು ಪ್ರಾಣಿ, ಪಕ್ಷಿ, ಗಿಡ, ಮರಗಳಿಂದ ತಿಳಿದುಕೊಂಡಿದ್ದಾರೆ. ಹೊಲ–ಗದ್ದೆಗಳಲ್ಲಿ ಕೆಲಸ ಮಾಡುತ್ತಿರುವಾಗ ಅಲ್ಲಿನ ಪ್ರಾಣಿ ಪಕ್ಷಿ ಅಥವಾ ತಾವು ಸಾಕಿದ ನಾಯಿ, ದನಕರುಗಳ ಚಲನ–ವಲನಗಳ ವರ್ತನೆಗಳಿಂದ ಪ್ರಕೃತಿಯಲ್ಲಿನ ಬದಲಾವಣೆ ಮಳೆಯ ಸೂಚನೆ ಅರಿಯುವ ಜ್ಞಾನ ನಮ್ಮ ಜನಪದರದ್ದು.

**ಮಳೆ ಬರುವ ಸೂಚನೆ ಅರಿಯುವ ಪಾರಂಪರಿಕ ಜ್ಞಾನ**

ಮೊದಲೇ ಹೇಳಿದಂತೆ ಹಟ್ಟಿಯ ಕೃಷಿಕರು ತಮ್ಮ ಸುತ್ತಲಿನ ಪ್ರಾಣಿ, ಪಕ್ಷಿ, ಗಿಡ, ಮರ ಬಳ್ಳಿಗಳನ್ನು ನೋಡಿ ಅವುಗಳಲ್ಲಿನ ಬೆಳವಣಿಗೆ, ಬದಲಾವಣೆ, ವರ್ತನೆಗಳನ್ನೆಲ್ಲಾ ನೋಡಿ ಮಳೆ ಬರುವ ಸೂಚನೆಯನ್ನು ತಿಳಿಯುವಂತಹ ನಿಪುಣರಾಗಿದ್ದಾರೆ.

* ಹೊಲಗದ್ದೆಗಳಲ್ಲಿ ಮೇಯುತ್ತಿರುವ ದನ, ಕರು, ಕುರಿಗಳು ಮೇಯುವುದನ್ನು ನಿಲ್ಲಿಸಿ ಒಂದೆಡೆ ಕೂಡಿಕೊಂಡರೆ ಮಳೆ ಬರುತ್ತದೆ ಎಂದು ಹೇಳುತ್ತಾರೆ. ದನ–ಕರುಗಳು ಒಂದೇ ದಿಕ್ಕಿಗೆ ತಲೆ ಎತ್ತಿ ನಿಂತುಕೊಂಡು ಬಾಯಿಯನ್ನು ಸ್ವಲ್ಪ ತೆರೆದು ಮೂಗಿನ ಹೊರಳೆ ಅಗಲಿಸಿ ಗಾಳಿಯನ್ನು ಜೋರಾಗಿ ಎಳೆದುಕೊಳ್ಳುತ್ತಿದ್ದರೆ ಮಳೆಯಾಗುತ್ತದೆ ಎಂಬ ಸೂಚನೆ, ಆ ದನ ಕರುಗಳು ಯಾವ ದಿಕ್ಕಿಗೆ ಮುಖ ಮಾಡಿರುತ್ತವೋ ಅಲ್ಲೇ ಹತ್ತಿರದಲ್ಲಿ ಆಗಲೇ ಮಳೆ ಬೀಳುತ್ತಿರುತ್ತದೆ. ಸ್ವಲ್ಪ ಹೊತ್ತಿನಲ್ಲೇ ಇಲ್ಲಿಯೂ ಮಳೆ ಬರುವ ಸೂಚನೆ ಆ ದನಕರುಗಳು ನೀಡುತ್ತವೆ.

* ನಿಶ್ಚಿತ ಪ್ರಮಾಣದಲ್ಲಿ ಹಾಲು ಕರೆಯುತ್ತಿರುವ ಹಸು ಎಮ್ಮೆಗಳು ಇದ್ದಕ್ಕಿದ್ದಂತೆ ಕಡಿಮೆ ಹಾಲು ಕರೆದರೆ ಮುಂದಿನ ೨–೩ ದಿನಗಳಲ್ಲಿ ಮಳೆ ಬರುತ್ತದೆ. ಎಂಬ ಸೂಚನೆ.

* ನಾಯಿಗಳು ಇದ್ದಕ್ಕಿಂದ್ದಂತೆ ಆಕಾಶದತ್ತ ಮುಖಮಾಡಿ ಕೂಗುವ ಧ್ವನಿಯಲ್ಲಿ ಬೊಗಳತೊಡಗಿದರೆ ಆ ದಿನ ಮಳೆ ಬರುತ್ತದೆ ಎನ್ನುತ್ತಾರೆ.

* ಗುಬ್ಬಿಗಳು ಮಣ್ಣಿನಲ್ಲಿ ಹೊರಳಾಡುತ್ತಾ ಮೈಮೇಲೆಲ್ಲಾ ಮಣ್ಣು ಹಾಕಿಕೊಳ್ಳುತ್ತಿದ್ದರೆ ಮಳೆಯಾಗುತ್ತದೆ.

* ಇರುವೆಗಳು ಸಾಲುಸಾಲಾಗಿ ತಮ್ಮ ತತ್ತಿಗಳ ಸಮೇತ (ತತ್ತಿ=ಮೊಟ್ಟೆ) ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುತ್ತಿದ್ದರೆ ೨–೩ ದಿನಗಳಲ್ಲಿ ಮಳೆ ಬರುತ್ತದೆ.

* ಉಗನಿ ಬಳ್ಳಿ ಚೆನ್ನಾಗಿ ಬೆಳೆದ ವರ್ಷ ಒಳ್ಳೆಯ ಮಳೆ. ಈ ಬಳ್ಳಿ ಹೊಲಗದ್ದೆಗಳಲ್ಲಿ ಮುಳ್ಳು ಬೇಲಿಗಳಲ್ಲಿ ಬೆಳೆದಿರುತ್ತದೆ. ಇದನ್ನು ಕಿತ್ತು ಕಟ್ಟಿಗೆ ಹೊರೆ, ಹುಲ್ಲಿನ ಹೊರೆಗಳಿಗೆ ಕಟ್ಟು-ಕಟ್ಟಿ ಹೊತ್ತು ತರುತ್ತಾರೆ.

* ಕಪ್ಪೆಗಳು ಬಾವಿಯಲ್ಲಿ ಅಥವಾ ಕೆರೆಗಳಲ್ಲಿ ಇಲ್ಲವೆ ಒಣ ಭೂಮಿಯ ಕಲ್ಲಿನ ಕೆಳಗಿಂದ ವಟರುಗುಟ್ಟುತ್ತಿದ್ದರೆ ಮಳೆ ಬರುವ ಸಂಭವ ಇದೆ ಎಂದು ತಿಳಿಯುತ್ತಾರೆ.

* ಸಣ್ಣಗೆ ಹರಿಯುತ್ತಿರುವ ಹಳ್ಳದ ನೀರು ಇದ್ದಕ್ಕಿಂದ್ದಂತೆ ಭೂಮಿಯೊಳಗೆ ಇಂಗಿ ಹೋದರೆ ಮಳೆ ಬರುತ್ತದೆ ಎಂದು ನಂಬಿಕೆ.

* ಎಂಜಲು ಉಗುಳಿದಂತೆ ಕಾಣುವ ನುರುಗು ಹುಳು ರಾಗಿ ಹೊಲದಲ್ಲಿ ಹೆಚ್ಚಾಗಿ ಇದ್ದರೆ ವಾರದೊಳಗೆ ಮಳೆ ಗ್ಯಾರಂಟಿ.

* ಹುಣಸೆ ಹೆಚ್ಚು ಫಲ ಬಿಟ್ಟು ಮಾವು ಕಡಿಮೆ ಫಲ ಬಿಟ್ಟವರ್ಷ ಉತ್ತಮ ಮಳೆಗಾಲ ಎಂದು ಅನುಭವದಿಂದ ಹೇಳುತ್ತಾರೆ.

* "ಮುತ್ತುಗದ ಮರ ಜಗತ್ತಿನಲ್ಲಿರುವ ಮರ-ಮುಟ್ಟುಗಳಲ್ಲಿ ಅತ್ಯಂತ ಹಿರಿಯದು ಎನ್ನುವ ನಂಬಿಕೆ ನಮ್ಮ ರೈತರಲ್ಲಿದೆ ಅದಕ್ಕೆ ಅವರು ನೀಡುವ ಕಾರಣ ಅದರ ಹೆಸರೇ ಮುದುಕದ ಮರವೆಂಬುದು"[೨೫]. ಈ ಮುತ್ತುಗದ ಮರ ಚೆನ್ನಾಗಿ ಹೂ ಬಿಟ್ಟು ಕಾಯಿ ಬಿಟ್ಟಿದ್ದರೆ ಆ ವರ್ಷ ಮುಂಗಾರು ಮತ್ತು ಹಿಂಗಾರು ಎರಡೂ ಸಹ ಚೆನ್ನಾಗಿ ಆಗುತ್ತವೆ, ಎನ್ನುತ್ತಾರೆ ಮುತ್ತುಗದ ಕಾಯಿಯಲ್ಲಿರುವ ರೂಪಾಯಿ ಅಗಲದ ಬೀಜ ಕಾಯಿಯ ತೊಟ್ಟಿನ ಭಾಗದಲ್ಲಿದ್ದರೆ ಹಿಂಗಾರು ಉತ್ತಮ, ತುದಿಯ ಭಾಗದಲ್ಲಿದ್ದರೆ ಮುಂಗಾರು ಉತ್ತಮ ಮತ್ತು ಸರಿಯಾಗಿ ಕಾಯಿಯ ಮಧ್ಯಭಾಗದಲ್ಲಿದ್ದರೆ ಮುಂಗಾರು, ಹಿಂಗಾರು ಎರಡೂ ಉತ್ತಮ ಎಂಬುದು ರೈತರ ನಂಬಿಕೆ.

* ಸೂರ್ಯ, ಚಂದ್ರರ ಸುತ್ತ ಉಂಗುರಾಕಾರದಲ್ಲಿ ಗೂಡು ಕಟ್ಟಿದ್ದರೆ ಆ ಗೂಡು ಅವುಗಳ ಹತ್ತಿರ ಇದ್ದರೆ ಬೇಗ ಮಳೆ ಬರುತ್ತದೆ ಎನ್ನುತ್ತಾರೆ.

* ಜಲ ಮೂಲೆ (ಈಶಾನ್ಯ) ಮತ್ತು ವರುಣ ಮೂಲೆ (ನೈರುತ್ಯ) ಏಕ ಕಾಲದಲ್ಲಿ ಮಿಂಚಿದರೆ ಮಳೆ ಬರುತ್ತದೆ.

* ನೆಲಹತ್ತಿಗಾಳಿ ಬೀಸಿದರೆ ಮಳೆ ಬರುತ್ತದೆ.

* ಉಗ್ರವಾದ ಗಮ್ಮ, ಬಿಸಿಲು ಇದ್ದು ಕೂಡಲೇ ಕಡಿಮೆಯಾದರೆ ಮಳೆ ಬರುತ್ತದೆ.

* ಮಳೆಗಾಲದಲ್ಲಿ, ಚಳಿಗಾಲದಲ್ಲಿ ಇಬ್ಬನಿ ಸುರಿದರೆ ಆ ಇಬ್ಬನಿಗೆ ಅಂಟುವಿಕೆ ಇಲ್ಲದಿದ್ದರೆ ಮಳೆ ಬರುತ್ತದೆ ಎನ್ನುತ್ತಾರೆ.

* ಮಧ್ಯರಾತ್ರಿ ಕೊಂಬೆಗಾಳಿ ಮತ್ತೆ ಮತ್ತೆ ಬೀಸಿದರೆ ೨-೩ ದಿನಗಳಲ್ಲಿ ಮಳೆ ಬರುತ್ತದೆ. ಕೊಂಬೆಗಾಳಿ ಎಂದರೆ ಮರದ ಕೊಂಬೆಗಳು ಮಾತ್ರ ಇದ್ದಕ್ಕಿದ್ದಂತೆ ಗಿರ್ರನೆ ಅಲ್ಲಾಡಿಸುವುದು.

* ಬಿಳಿ ಚಿಟ್ಟೆ(ಮಳೆ ಚಿಟ್ಟೆಗಳು) ಉತ್ತರದಿಂದ ದಕ್ಷಿಣಕ್ಕೆ ಹೋದರೆ ಭಾರೀ ಮಳೆ ಬರುವ ಸೂಚನೆ ಅರಿಯುತ್ತಾರೆ.

* ಮಳೆ ಚಿಟ್ಟೆಗಳು ಯಾವ ಕಡೆಯಿಂದ ಬರುತ್ತವೋ ಆ ಕಡೆ ಮಳೆಯಾಗುತ್ತದೆ. ಮತ್ತು ಆ ಕಡೆಯಿಂದ ಮಳೆ ಬರುತ್ತದೆ ಈ ರೀತಿಯಾಗಿ ನಮ್ಮ ಜನಪದರು ಪ್ರಕೃತಿ, ಗಿಡ, ಮರ, ಬಳ್ಳಿ, ನಕ್ಷತ್ರಗಳನ್ನು ನೋಡಿ ಮಳೆ ಬರುವ ಸೂಚನೆಯನ್ನು ಅರಿಯುವ ಜ್ಞಾನ ಹೊಂದಿದ್ದಾರೆ.

**ಮಳೆ ಬಾರದಿರುವ ಸೂಚನೆ ಅರಿಯುವ ಪಾರಂಪರಿಕ ಜ್ಞಾನ**

ಹಟ್ಟಿಯ ಜನಪದರು ಗಿಡ, ಮರ, ಬಳ್ಳಿ, ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರ, ನಕ್ಷತ್ರಗಳನ್ನು ನೋಡಿ ಅವುಗಳ ಚಲನ–ವಲನ ಬದಲಾವಣೆಗಳಿಂದ ಮಳೆ ಬರುವುದನ್ನು ಹೇಗೆ ತಿಳಿಯುವರೋ ಅದೇ ರೀತಿ ಅವುಗಳನ್ನು ನೋಡಿ ಮಳೆ ಬಾರದಿರುವುದನ್ನು ಸಹ ತಿಳಿಯುವುದನ್ನು ಅನುಭವದಿಂದ ಕಂಡುಕೊಂಡಿದ್ದಾರೆ. ಅಂತಹ ಅನುಭವ ಜ್ಞಾನವೆಂದರೆ.

* ಮಳೆಗಾಲದಲ್ಲಿ ರಾತ್ರಿ ಹೊತ್ತು ಆಕಾಶದಲ್ಲಿ ಚುಕ್ಕಿ ಮೂಡಿದರೆ ಮಳೆ ಬರುವ ಸಾಧ್ಯತೆ ಕಡಿಮೆ ಎಂದು ತಿಳಿಯುತ್ತಾರೆ.

* ಹುಣಸೆ ಮರಗಳು ಕಡಿಮೆ ಫಲ ನೀಡಿ ಮಾವು ಹೆಚ್ಚು ಫಲ ನೀಡಿದರೆ ಆ ವರ್ಷ ಮಳೆ ಕಡಿಮೆ ಅಥವಾ ಬರಗಾಲ ಎಂದು ನಿರ್ಧರಿಸುತ್ತಾರೆ.

* "ಹುಲ್ಲಿನ ಮೇಲೆ ಎಂಜಲು ಉಗಿದಂತೆ ಕಾಣುವ ನುರುಗು ಹುಳು ಹುಲ್ಲಿನಲ್ಲಿ ಜಾಸ್ತಿ ಇದ್ದರೆ ಮಳೆ ಬರುವುದು ವಿಳಂಬವಾಗುತ್ತದೆ"[೨೬]. ಈ ರೀತಿಯಾಗಿ ಹುಲ್ಲಿನ ಮೇಲಿನ ಎಂಜಲಿನ ರೂಪದಲ್ಲಿರುವುದನ್ನು ಬುರುಗು ಎನ್ನುತ್ತಾರೆ ಅದನ್ನು ಬುರುಗು ಹುಳು ಎಂದು ಕರೆಯುತ್ತಾರೆ.

* ಕಡ್ಡಿ ಜೇನಿನ ತುಪ್ಪ ಗಟ್ಟಿಯಾಗಿದ್ದರೆ ಮಳೆ ಬರುವುದು ಇನ್ನು ತಡ, ವಿಳಂಬ ಎಂದು ತಿಳಿಯುತ್ತಾರೆ.

* ಕಾಮನ ಬಿಲ್ಲು ಮೂಡಿದರೆ ಮಳೆ ಬರುವುದಿಲ್ಲ

* ಅಗ್ನಿ ಮೂಲೆಯಲ್ಲಿ ಮಿಂಚಿದರೆ ಮಳೆ ಬರುವುದಿಲ್ಲ ಎಂದು ತಿಳಿಯುತ್ತಾರೆ.

* ಸೂರ್ಯ ಚಂದ್ರರ ಸುತ್ತ ಗೂಡು ಕಟ್ಟಿದ್ದರೆ ಆ ಗೂಡು ಅವುಗಳಿಂದ ದೂರದಲ್ಲಿದ್ದರೆ ಮಳೆ ತಡವಾಗಿ ಬರುತ್ತದೆ ಎನ್ನುತ್ತಾರೆ. "ಮುತ್ತಗ ಕಾಯಿಯಲ್ಲಿ ಮೂರು ಬೀಜಗಳಿದ್ದರೆ ಆ ವರ್ಷ ಸಂಪೂರ್ಣ ಮಳೆಯ ಪ್ರಮಾಣ ತುಸು ಕಡಿಮೆ, ಒಂದೇ ಬೀಜವಿದ್ದರೆ ಮಳೆಯ ಪ್ರಮಾಣ ತೀರಾ ಕಡಿಮೆ"[೨೭]. ಈ ರೀತಿಯಾಗಿ ಮುತ್ತುಗದ ಮರ ಹುಣುಸೆ ಮರ, ಉಗನಿ ಬಳ್ಳಿ, ಇತರ ಕೆಲವು ಪ್ರಾಣಿ, ಪಕ್ಷಿಗಳ ವರ್ತನೆಯಲ್ಲಿನ ಬದಲಾವಣೆ, ಬೆಳವಣಿಗೆಗಳಿಂದ ಮಳೆ ಬಾರದಿರುವ ಸೂಚನೆಯನ್ನು ನಮ್ಮ ಹಟ್ಟಿಯ ಜನಪದರು ಮಾತ್ರವಲ್ಲದೇ ಎಲ್ಲಾ ಕೃಷಿಕರೂ, ಪಶುಪಾಲಕರು ಅರಿಯುವ ಪಾರಂಪರಿಕ ಜ್ಞಾನ ಹೊಂದಿದ್ದಾರೆ. ಈ ರೀತಿಯಾದ ಪ್ರಾಕೃತಿಕ ಜ್ಞಾನ ನಮ್ಮ ಹಟ್ಟಿಯ ಜನಪದರಲ್ಲಿದೆ. ಪ್ರಕೃತಿಯ

ಬಗೆಗಿನ ಇವರ ನಂಬಿಕೆಗಳು ಕೇವಲ ಮೂಢನಂಬಿಕೆಗಳಲ್ಲ ಪರಂಪರೆಯಿಂದಲೂ ಅನುಭವಕ್ಕೆ ಬಂದ ಸಂಗತಿಗಳನ್ನು ನಂಬಿ ಇಂದಿಗೂ ಅವುಗಳ ಆಧಾರದ ಮೇಲೆ ಮಳೆಗಳ ಆಗುಹೋಗುಗಳನ್ನು ನಿರ್ಧರಿಸುವ ಪಾರಂಪರಿಕ ಜ್ಞಾನ ಕಂಪಳದೇವರ ಹಟ್ಟಿಯ ಜನರದ್ದಾಗಿದೆ.

**೩.೩.೯ ಮಳೆಗಾಗಿ ಆಚರಿಸುವ ಆಚರಣೆಗಳು**

ಪ್ರಪಂಚದ ಜನಸಂಖ್ಯೆಯಲ್ಲಿ ಬಹುಪಾಲು ಜನರು ಕೃಷಿಕರಾಗಿದ್ದಾರೆ. ಅದರಲ್ಲೂ ಮಳೆಯನ್ನು ಆಶ್ರಯಿಸಿ ವ್ಯವಸಾಯ ಮಾಡುವವರಾಗಿದ್ದಾರೆ ಎಂಬ ಮಾತು ಎಷ್ಟು ಸತ್ಯವೋ ಮಳೆಗಾಗಿ ಅವರು ಹಪಾಹಪಿಸುತ್ತಿರುವುದೂ ಅಷ್ಟೇ ಸತ್ಯ. ವ್ಯವಸಾಯಗಾರರು, ಪಶುಪಾಲಕರು ಎಲ್ಲರೂ ಮಳೆಯನ್ನು ನಂಬಿ ಬದುಕುತ್ತಿರುವವರು ರೈತನಿಗೆ ಮಳೆಯಾಗದೆ ಸರಿಯಾಗಿ ಬೆಳೆ ಬಾರದಿದ್ದರೆ ಇಡೀ ದೇಶವೇ ಸಂಕಷ್ಟ ಎದುರಿಸಬೇಕಾಗುತ್ತದೆ. ಈ ರೀತಿಯಾಗಿ ಮಳೆಯನ್ನು ನಂಬಿ ಕೃಷಿ ಮಾಡುತ್ತಿರುವ ಹಟ್ಟಿಯ ಜನರು ಮಳೆ ಬಾರದಿರುವ ಸಂದರ್ಭದಲ್ಲಿ ಮಳೆರಾಯನನ್ನು ಭೂಮಿಗೆ ಕರೆಸುವ ಹಲವು ಆಚರಣೆಗಳನ್ನು ಮಾಡುತ್ತಾರೆ. ಅವುಗಳೆಂದರೆ ಕತ್ತೆಗಳಿಗೆ ಮದುವೆ ಮಾಡುವುದು, ಬನ್ನಿಮರವನ್ನು ವಯಸ್ಸಿನ ಹುಡುಗರಿಂದ ಬೆತ್ತಲೆ ಸುತ್ತಿಸುವುದು, ಗುಲುಕಮ್ಮನನ್ನು ಮಾಡುವುದು. ಗಣೆ ಊದುವುದು ಮುಂತಾದ ಆಚರಣೆಗಳನ್ನು ಮಳೆಗಾಗಿ ಹಟ್ಟಿಯಲ್ಲಿ ಆಚರಿಸುತ್ತಾರೆ ಅದರಲ್ಲಿ ಪ್ರಮುಖವಾಗಿ ಮತ್ತು ಪ್ರತಿವರ್ಷ ತಪ್ಪದೇ ಆಚರಿಸುವ ಆಚರಣೆ ಎಂದರೆ ಗಣೆ ಊದುವ ಆಚರಣೆ.

**ಗಣೆ ಊದುವುದು**

ಹಟ್ಟಿಯಲ್ಲಿ ಪ್ರತಿವರ್ಷ ಅಗಸ್ಟ್ ತಿಂಗಳ ಮೂರನೇ ಶನಿವಾರ ಅಂದರೆ ಮೂರನೇ ಶ್ರಾವಣ ಶನಿವಾರ ಕಂಪಳದೇವರ ಗುಡಿಯ ಮುಂದೆ ಹಟ್ಟಿಯ ಹಿರಿಯರೆಲ್ಲಾ ಸೇರಿ ಗಣೆ ಊದುತ್ತಾರೆ ಗಣೆ ಎಂದರೆ ಬಿದಿರಿನ ದೊಡ್ಡ ಕೊಳವೆ (ಕೊಳಲು). ಇವುಗಳನ್ನು ಊದುತ್ತಾ ತಮ್ಮ ದೈವ ಕಂಪಳರಂಗಸ್ವಾಮಿ ಮತ್ತು ಅವರ ಸಾಂಸ್ಕೃತಿಕ ನಾಯಕರಾದ ಕೂರಲೇ ಮಲ್ಲಯ್ಯ, ಪಾಪನಾಯಕ, ಗಾದ್ರಿಪಾಲನಾಯಕ ಭಾಳಾರ ಪಟ್ಟಮ್ಮ ಮುಂತಾದವರ ಕುರಿತಾಗಿ ಇಡೀ ರಾತ್ರಿ ಹಾಡುತ್ತಾರೆ. ಕಾರಣ ಮಳೆ ಬರಲಿ ಎಂದು. ಗಣೆ ಊದುವುದರಿಂದ ಮಳೆ ಬರುತ್ತದೆ ಎಂಬುದು ಇವರ ನಂಬಿಕೆಯಾಗಿದೆ. ಹಿರಿಯರು ಇದು ತಾವು ಕಂಡುಕೊಂಡ ಸತ್ಯ ಎಂದೂ ಸಹ ಹೇಳುತ್ತಾರೆ. ಈ ಹಿಂದೆ ಹಟ್ಟಿಯ ಹೊರಗಡೆ ದೇವರ ಪೌಳಿಯ ಮುಂದೆ ಬಯಲಿನಲ್ಲಿ ಗಣೆ ಊದುವವರು ಮತ್ತು ಹಾಡುವವರು ಅಲ್ಲದೆ ಹಟ್ಟಿಯ ಕೆಲವು ಜನರು ಸೇರಿ ಆದಿನ ರಾತ್ರಿ ಗಣೆ ಊದುತ್ತಿದ್ದರು ಗಣೆ ಊದುವವರು ಮತ್ತು ಹಾಡುವವರು ವೃತ್ತಾಕಾರವಾಗಿ ಸಣ್ಣ ಸಣ್ಣ ಕಲ್ಲುಗಳನ್ನು ಇಟ್ಟುಕೊಂಡು ಅವುಗಳ ಮೇಲೆ ಕುಳಿತುಕೊಂಡು ಗಣೆ ಊದುತ್ತಿದ್ದರಂತೆ ಆಗ ಭಾರೀ ಮಳೆ ಸುರಿಯುತ್ತಿತ್ತಂತೆ ಆ ಮಳೆಯಲ್ಲೇ ರಾತ್ರಿಯಲ್ಲಿ ಕಂಬಳಿ ಹೊದ್ದುಕೊಂಡು ಕೆಳಗಡೆ ಕಲ್ಲುಗುಂಡು ಇಟ್ಟುಕೊಂಡು ಕುಳಿತು ಬೆಳಗಿನಜಾವದವರೆಗೆ ಗಣೆ ಊದುತ್ತಿದ್ದರಂತೆ ಇತ್ತೀಚಿಗೆ ಕಂಪಳರಂಗಸ್ವಾಮಿಯ ಹೊಸ ಗುಡಿ ನಿರ್ಮಾಣವಾಗಿದ್ದು ಅದರ ಮುಂದೆ ತಗಡು ಹಾಕಿದ ಸೂರು ಮಾಡಲಾಗಿದೆ ಈ ಸೂರಿನ ಕೆಳಗೆ ಗಣೆ ಊದುತ್ತಾರೆ.

**ಗಣೆಯ ಅರ್ಥ**

ಗಣೆ ಎಂದರೆ ದೊಡ್ಡ ಅಥವಾ ಸಾಧಾರಣವಾದ ಒಂದು ಬಡಗಿಯ, ಕೋಲಿನ ಅಳತೆಯ ಬಿದಿರಿಗೆ ಮಧ್ಯ ಸಣ್ಣ ಸಣ್ಣ ಕಂಡಿಕೊರೆದಿರುತ್ತಾರೆ. ಅದರ ಎರಡೂ ತುದಿಗಳು ಮುಚ್ಚಲ್ಪಟ್ಟಿರುತ್ತವೆ. ಕೊನೆಯ ಸಣ್ಣ ಕಂಡಿಯಲ್ಲಿ ಕೊಳಲಿನ ಹಾಗೆ ಊದುತ್ತಾರೆ. ಇದನ್ನೇ ಗಣೆ ಎನ್ನುತ್ತಾರೆ. ಈ ಗಣೆಗಳು ಕರ್ನಾಟಕದಲ್ಲಿ ಪಶುಪಾಲನ ಸಮುದಾಯಗಳಾದ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಮಾತ್ರ ಕಂಡು ಬರುತ್ತವೆ.

ಹಿನ್ನೆಲೆ: ಈ ಸಮುದಾಯದವರನ್ನು ಗಣೆಗಳು ನಿಮಗೆ ಹೇಗೆ ಸಿಕ್ಕವು ಎಂದು ಕೇಳಿದರೆ ಅವರು ಹೇಳುವ ಕಥೆ ಹೀಗಿದೆ, ಸುಮಾರು ವರ್ಷಗಳ ಹಿಂದೆ ಜಗಳೂರು ಪಾಪನಾಯಕ ಮತ್ತು ಕಿಲಾರಿಗಳು ತಮ್ಮ ದೇವರ ಎತ್ತುಗಳನ್ನು ಮೇಯಿಸುತ್ತಾ ಅಲೆಯುತ್ತಿರುವಾಗ ಸೊಂಡೂರಿನ ಕುಮಾರಸ್ವಾಮಿ ಬೆಟ್ಟದಲ್ಲಿ ರಾಮನ ಮಡುವು, ಭೀಮನ ಮಡುವು ಎಂಬ ಎರಡು ಹಳ್ಳಗಳ ಮಧ್ಯೆ ಇರುವ ಬೆಟ್ಟದಲ್ಲಿ ಗೂಡುಕಟ್ಟಿಕೊಂಡು ಇರುವಾಗ ಅಲ್ಲಿ ಇದ್ದ ಪಟುಮುರಾತಿ ಎಂಬ ಬಿದಿರನ್ನು ಗುಂಗಾಡಿಗಳು ಕಂಡಿಕೊರೆದು ರಾತ್ರಿಹೊತ್ತು ಗಾಳಿ ಬೀಸಿದಾಗ ಆ ಬಿದಿರು ಸದ್ದು ಮಾಡುತ್ತಿತ್ತು. ಅದನ್ನು ಕಂಡ ಪಾಪನಾಯಕ, ಕಿಲಾರಿಗಳು ಆಶ್ಚರ್ಯರಾಗಿ ಅದನ್ನು ಪೂಜಿಸಿ ಕಡಿದುಕೊಂಡು ಬಂದರತೆಂದು ಹೇಳುತ್ತಾರೆ ಮತ್ತು ಆ ಗಣೆಗಳನ್ನು ಅಂದಿನಿಂದ ಇಂದಿನವರೆಗೆ ಪ್ರತಿ ವರ್ಷ ಶ್ರಾವಣದಲ್ಲಿ ಊದುತ್ತಾರೆ. ಮುಂದುವರೆದು ಹೇಳುವುದಾದರೆ ಹಳೆಯದಾದ ಕೆಲವು ಗಣೆಗಳನ್ನು ಹಂಪಿಯ ಹೊಳೆಯಲ್ಲಿ ಬಿಟ್ಟುಬಂದೆವು ಕೆಲವು ಹೊಳೆಯಲ್ಲಿ ಹೋಗದೇ ಮರಳಿ ಬಂದಿದ್ದರಿಂದ ಅವನ್ನು ನಮ್ಮ ಬಳಿ ಇಂದಿಗೂ ಉಳಿಸಿಕೊಂಡು ಊದುತ್ತಾ ಬಂದಿದ್ದೇವೆ ಎನ್ನುತ್ತಾರೆ. ದೇವರ ಹಟ್ಟಿಯಲ್ಲಿ ೮ ಜನ ಗಣೆ ಊದುವ ಜನರಿದ್ದಾರೆ ಮತ್ತು ಆರು ಜನ ಗಣೆಹಾಡು ಹಾಡುತ್ತಾರೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಂಗ್ರಹಿಸಿದ ಗಣೆಹಾಡು, ಕೋಲಾಟದ ಹಾಡು ಮತ್ತು ಭಜನೆ ಹಾಡುಗಳನ್ನು ಈ ಕೆಳಗಿನಂತೆ ತಿಳಿಸುತ್ತಿದ್ದೇನೆ, ಗಣೆ ಹಾಡು ಎಂದರೆ ಬೇರೆ ಏನು ಅಲ್ಲ ಪಾಪನಾಯಕ, ಕಂಪಳರಂಗಸ್ವಾಮಿಯನ್ನು ಮತ್ತು ಮ್ಯಾಸಬೇಡ ಬುಡಕಟ್ಟಿನ ಸಾಂಸ್ಕೃತಿ ನಾಯಕಿ ನಾಯಕರ ಕುರಿತಾದ ಹಾಡುಗಳೇ ಆಗಿರುತ್ತವೆ.

**ಕಂಪಳರಂಗಸ್ವಾಮಿ ಪದ**

ಎಂಡಾಗಾಲಾನು ಬಂಡಾಮೀದಾ ತಪಸುಂಡಾಡೆ...,.
ಎಡೇಡೇನೇ ಪದ್ನಾಗ್ಲುನಾಡ್ಲು ಸ್ವಾಮಿ.
ತಾಲಾತೇನೇ ಕಿಂದಿಕಿಸೇಸಿ ಕಾಡ್ಲನ್ನು ಪೈಕಿಸೇಸೀ...
ಪಾರೂವತೀ ದೇವಮ್ಮಾನೇ ಪಲ್ಲಾಜಲ್ಲಲು ಸ್ವಾಮಿ
ಈ ತ್ರಪಸೂಲೂ ನೀವ್ಯೆನಾನೇ ಯಾಲಾ ಸೇಸ್ತವು ಸ್ವಾಮೀ...

ತಾಲಾತಾ ಕಿಂದಿಕಿಸೇಸಿ ಕಾಡ್ಲಾನ್ನು ಪೈಕಿಸೇಸಿ
ಪಾರೂವಾತಿ ದೇವಮ್ಮಾನೇ ಪಲ್ಲಾಜಡ್ಲುಲು ಸ್ವಾಮಿ...

ಪಾರೂವಾತಿ ದೇವಮ್ಮಾನೇ ಪಲ್ಲಾಜಡ್ಲುಲು ಸ್ವಾಮಿ...
ಈ ತ್ರಪಸೂಲೂ ನೀವ್ವೈನಾನೇ ಯಾಲಾ ಸೇಸ್ತವು ಸ್ವಾಮೀ...

ಮಾಯಾ ತ್ರಪಸುಲಾ ನೀವ್ವೈನಾನೇ ಸೇಸುತಾನೇ ಸ್ವಾಮಿ
ತಲ್ಲಾ ಜಲ್ಲುಲು ಸ್ವಾಮ್ಮೈನಾನೇ ಪಾರೂವತೀ ದೇವಮ್ಮ
ನಂದಿವಾನಮು ಮರಿಪಿಕ್ಕಿನೇ ದೇಶಮು ಸಂಚಾರ ಮಾಡೇ ...
ಪಾರೂವತೀ ದೇವಮ್ಮನೇ ಪಲ್ಲಾ ಜಲ್ಲುಲು ಸ್ವಾಮೀ...

ದ್ವಾರಾವತಿ ಪಟ್ನಮುನಾನಾ ಸೂಸ್ಯಾಡೇನೇ ಸ್ವಾಮಿ...
ದೊರಕೂತೂರುಂಡಾದೇನೇ ಭಾಗ್ಯದಾ ಲಸುಮವ್ವೇ..
ಪಟ್ಟನೇ ಮಂಚಮಮೀದಾ ತೂಗಾತಿದೆ ಲಸುಮವ್ವೇ...
ತೂಗಾನೇ ಮಂಚಮಮೀದಾ ತೂಗಾತಿದೆ ಲಸುಮವ್ವೇ...

ದ್ವಾರಾವತೀ ಪಟ್ನಮುನಾನಾ ಸೂಸ್ಯಾಡೇನೇ ಸ್ವಾಮಿ...
ಗುಲುಗಂಜೀನೇ ವರುಣಾನೇನೆ ಗುಲುಗಂಜಲು ತೂಕಾಲು
ತೂಕಾಲೇನಾ ಹೆಣ್ಣುಗೊಡಾ ವಲ್ಲಾನೇನೇ ಸ್ವಾಮಿ...
ಅರಕಾ ಭರಕಾ ಸಲ್ಲಾಡುಲೇನೇ ಪೆಟ್ಟೆಕನ್ನಡೆ ಸ್ವಾಮಿ.

ಮುರುಕಾದೇನೇ ಭುವನಾಸಿನೇ ಸೇತಿನಕಿ ಪೆಟ್ಟೆಡೇ...
ಬಂಗಾರೇನೇ ಭುವನಾಸಿನೇ ಹೆಗಲಾಕಿ ಪೆಟ್ಟಾಡೇ...
ಪ್ಯಾಟೈನಾನೇ ರುಮಾಲಾನೇ ಸುತ್ತಾಡೆನೇ ಸ್ವಾಮಿ...
ಅರುಕಾ ಭರಕಾ ಸಲ್ಲಾಡುಲೇನೇ ಪೆಟ್ಟೆಕನ್ನಡೇ ಸ್ವಾಮಿ...

ಜೋಳಿಗೇನೇ ಹೆಗಲಾ ಎಸಿಕೆನಿ ಪೋಯಾಡೆನೆ ಸ್ವಾಮಿ
ದ್ವಾರಾವತಿ ಪಟ್ನಮುಕನೇ ದೊರಕೂತುರಿಂಟೀಕಿ
ತೂಗೂ ಮಂಚಮುಮೀದ್ಯೆಯನೇ ತೂಗೂತಿನೇ ಲಸುಮವ್ವೆ
ಪಟ್ಟಾಲನೇ ಮಂಚಮಮೀದಾ ಪಗಡೇನೇ ಆಡೇ...

ದ್ವಾರಾವತೀ ಕೂತುರುನೇ ದೊರೆಕೂತುರುಂಡಾದಿ
ಭಾಗ್ಯಾದೇನೇ ಲಸುಮವ್ವನೇ ಧಮ್ಮವ್ವನೇ ನೀಡೇ ...
ಏಡುಗೂರೂ ಗೌಡೆಲಾಡ್ಲೂತಾ ವಂಶಿದಿ ಲಸುಮವ್ವೇ...

ದ್ವಾರಾವತೀ ಊರ್ಪಾಕಲಕಿ ವಚ್ಚಾಡೇ ದಾಸರಯ್ಯೇ...
ಜಾಗಟನ್ನೇ ಅಡುಸುತಾಡೇ ಗೋವಿಂದಲು ಪಟ್ಟುತ್ತಾಡೇ.(ಚಪ್ಪುತಾಡೇ)
ನೂಟಾಒಕ್ಕು ನಾಮಧಾರಣ ಸೇಸ್ಯಾಡೇನೇ ಸ್ವಾಮಿ...
ಔಡಯ್ಯೆನಾನೆ ಗೌಡಾರಾಲುತಾ ವಂಶಾದಿ ಆ ಯವ್ವೆ ...

ಯಾವಾ ಊರೂ ದಾಸರಯ್ಯ ಯಾವ ಭೂಮಿ ನೀದೀ...
ನಾಗಿರಿಕೈನಾ ನೀವೈನಾನೇ ಯಾಲಾನೇ ವಸ್ತುವೇ...
ಪಲ್ಲಾ ಜಿಡ್ಲು ಸ್ವಾಮಿವಾರೂ ಪಾರೂವತಿ ದೇವಮ್ಮ
ತ್ರಪಸೂಲೈನೆ ಸೆಪುತಾವೇ ಆವೈದೈನಾನೇ ನೀಡೇ ...

ಗುಲಗುಂಜನೇ ವರುಣಾನೇನೆ ಗುಲಗಂಜಲು ತೂಕಮು
ಹೆಣ್ಣು ಆವುಲು ನಾವೆಂಟನೆ ವಚ್ಚಾನೇಗಮ್ಮವ್ವೇ...
ರೇಪುಟೇನೇ ದಿನಮುನಾನಾ ಪೆದೋಬುಳೇಶ್ವರಡು.
ದ್ವಾರೂವತಿ ಕೂತುರುತೋನೇ ಲಗ್ನಾಮು ಅವುತಾಡೇ. ...

ಸಿರಿಪಲ್ಲೇನೇ ಒಕ್ಕಾಲೇನೇ ಗೊನೆಬಾಳೆ ಪಂಡೂಲು
ತಿರುಮಲ್ಲೇಟ ಆಕುಲೇನೇ ಸಿರಿಪಲ್ಲಿವಕ್ಕತೀ...
ರೇಪುಟೇನೇ ದಿಮುನಾನಾ ಅವಲಂಟಾನೇಡು
ಸ್ವಾಮೈನಾನೇ ಲಗ್ನಾಮೇನೆ ಐಯ್ಯಾಡೇನೇ ಸ್ವಾಮಿ...

ಆಶಾರನ ಪಾಲುನೇಯೇ ಈಶಾರಕಿ ಪೋಸ್ಯಾಡೆ
ಈಶಾರನ ಪಲುನೇಯೇ ಆಶಾರಕೆ ಪೋಸ್ಯಾರೆ ...
ಆಮೂರ್ಥಲೂ ತಾಗೇನೇನೇ ಸಂತೋಷಮುಮಿದ ಮಲಗಿ
ಕಾರಯ್ಯನೇ ನೀವ್ವನಾನೇ ಪಾಲ್ಲಾಜಲ್ಲುಲು ಸ್ವಾಮಿ...

ಏಡುಗುರೂ ಗೌಡೆರಾಡ್ಲು ಗುಲಗುಂಜಲು ವರುಣಾಲೂ ...
ಗುಗ್ಗೈಸುಲೋನೇ ಕಸವುಲೇನೇ ಉಂಡಾನೇನೆರೈಯ್ಯೇ...
ಏಡುಗೂರೂ ಗೌಡೆರಾಡ್ಲು ನೀರೈನಾನೇ ನೇಡು...
ನಾ ಸುತ್ತಾ ಮುತ್ತಾ ಮೀರೈನಾನೇ ಪೀಪೂಲೇಯಿಲುಮಿ...

ತಾನೈನಾನೇ ನಾ ಸ್ವಾಮಿನೇ ಪಲ್ಲಾ ಜಲ್ಲುಲು ಸ್ವಾಮೀ..
ಮೀರೈನಾನೇ ನೇಡೈನಾವೇ ಸೂಡಾವಲ್ಲೇನ್ನಾಡೇ..
ನಾ ಸುತ್ತಾ ಮುತ್ತಾ ನೀರೈನಾನೇ ಪೀಪುಲೇ ಎಲ್ಲೇ..
ನಾ ಸುತ್ತಾ ಮುತ್ತಾನಂತಾ ಮೀರೂ ಸೂಡಾವಲ್ಲೇ ಸ್ವಾಮೀ...

ಭಾಗ್ಯಾದೇನೇ ಲಸುಮವ್ವನೇ ತೂಗಾಮಂಚಮಿದಾ..
ತೂಗಾದೇನೇ ಗಾರಯ್ಯನೇ ನೇಡೈನಾನೇ ಸ್ವಾಮಿ...

**ವಿಶ್ಲೇಷಣೆ**

ಕಂಪಳರಂಗಸ್ವಾಮಿ ದ್ವಾರಾವತಿ ಪಟ್ಟಣದ ದೊರೆಯ ಮಗಳಾದ ಸುರ ಸುಂದರಿಯಾದ ಭಾಗ್ಯದ ಲಸುಮವ್ವಳನ್ನು ವರಿಸಲು ದಾಸಯ್ಯನ ವೇಷಧರಿಸಿ ಅವಳ ಮನೆಗೆ ಭಿಕ್ಷೆಗೆ ಹೋಗುವ ಸನ್ನಿವೇಶ.

ರಂಗಸ್ವಾಮಿ ಗುಲುಗುಂಜಿ ಬಣ್ಣದ ಮತ್ತು ಗುಲುಗುಂಜಿ ತೂಕದ ಹೆಣ್ಣನ್ನೇ ಮದುವೆಯಾಗುವುದಾಗಿ ಪ್ರತಿಜ್ಞೆ ಮಾಡಿರುತ್ತಾನೆ. ಭಾಗ್ಯದ ಲಸುಮವ್ವ ಆ ವರ್ಣ ಮತ್ತು ತೂಕ ಹೊಂದಿರುತ್ತಾಳೆ, ಹಾಗಾಗಿ ಅವಳನ್ನು ವರಿಸಲು ಅರುಕು ಚೆಲ್ಲಾಣ ರುಮಾಲು ಧರಿಸಿ ಶಂಖ ಊದುತ್ತಾ ಜಾಗಟೆ ಭಾರಿಸುತ್ತಾ ಗೋವಿಂದಾ ಎಂದು ಲಸುಮವ್ವಳ ಮನೆಗೆ ಭಿಕ್ಷೆಗೆ ಬರುತ್ತಾನೆ. ಆಗ ಲಸುಮವ್ವ ಗೌಡರ ಏಳುಜನ ಹೆಂಡತಿಯರನ್ನು ಕಳಿಸಿ ಅವನನ್ನು ವಿಚಾರಿಸಲು ಹೇಳುತ್ತಾನೆ. ಆ ಏಳು ಜನ ಅವನನ್ನು ವಿಚಾರಿಸಲು ಕಂಪಳರಂಗನು ನಾನು ತಿರುಪತಿ ಗಿರಿಯವನು ನನ್ನಲ್ಲಿ ಏಳು ಪಲ್ಲ ಕಾಳು ಇವೆ, ನನಗೆ ಕಾಳು ಬೇಕಾಗಿಲ್ಲ ನನಗೆ ಬೇಕಾಗಿರುವುದು ಗುಲುಗಂಜಿ ವರ್ಣದ ಹೆಣ್ಣು ಎಂದು ಹೇಳಿ ನಾನು ಅವಳನ್ನು ಮದುವೆಯಾಗಲು ಬಂದಿದ್ದೇನೆ ಎನ್ನುತ್ತಾನೆ. ಹಾಗೆಯೇ ಲಸುಮವ್ವಳನ್ನು ವರಿಸುತ್ತಾನೆ.

**ಕೂರಲೇ ಮಲ್ಲಯ್ಯನ ಪದ**

ಘಟ್ಟುಕಾಲಾಲೂ ಗಾರಯ್ಯನೇ ಕೂರೆಲೇ ಮಲ್ಲಯ್ಯೇ ...
ಅಡವಿಮೀದಾ ಸೂಸತೆನೇ ಅಡ್ಡ ಗಡ್ಡೇ ನೇದೇ...
ಬಡವಿನಮಲೆ ಗಾರಯ್ಯನೇ ಕೂರಲೇ ಮಲ್ಲಯ್ಯೇ...

ಮಿತ್ತೇಗಾರೇ ವಚ್ಚಿನ್ನಾದೇ ಕಷ್ಟಮಾನೇ ಸೂಡೀ...
ಕೂರೆಲೆನೇ ಮಲ್ಲಯ್ಯನೇ ಉಂಡಾಡೇನೇರಯ್ಯೋ...
ಅಡವಿಮಿದಾ ಸೋಸಿತೇನೇ ಅಡ್ಡ ಗಡ್ಡೇಲೇದೆ...
ಅಡವಿಮಿದಾ ಸೂಸಿತೇನೇ ಕೂಗೂಕೂತಿನೇನೇ...

ಮಿತ್ತೀಗಾರೇ ಕಷ್ಟಮ್ಮೆನಾ ಸೂಡಾವಲ್ಲೇ... ಸ್ವಾಮಿ
ಬುಟ್ಟಾನ ಕೊಡುಕೂ ಪವರಾಗಿನೂ ಮನೆ
ತದ್ದು ಪಡರಾಗಿನೇ ಸ್ವಾಮಿನೇನೆ
ಎನ್ನಮನೆ ವನಸಿದನೆ ಮಿತ್ತಿಗಾರಯ್ಯ ಸ್ವಾಮಿ
ಕೂರೆಲೇನೇ ಮಲ್ಲಯ್ಯನೇ ಉಂಡಾಡೇನೇರಯ್ಯೋ...
ಏಡೇಡೇನೇ ಪದ್ನಾಲ್ಗು ನಾಡ್ಲು ತ್ರಪಸೂಲು ತ್ಯಾಡೇಡೇ
ಓಕು ಪಕ್ಕನೇ ಪೆದುಲೆಂಟದೇ ಒಕು ಪಕ್ಕ ಉಂಡಾದಿ
ಅಡವಿಮಿದಾ ಸೂಸಿತೇನೇ ಅಡ್ಡಗಡ್ಡೆ ಲೇದೇ...
ಅಡವಿಮಿದಾ ಸೂಸಿತೇನೇ ಕೂಗೂಕೂನೇ ನೇದೇ...
ಮಿತ್ತಿಗಾರೀಕೇ ವಚ್ಚಿನ್ನಾದಿ ಕಷ್ಟಮ್ಮೆನಾರೈಯೆ...
ಕೂರಿಲೇನೇ ಮಲ್ಲಯ್ಯನೇ ಬಾಳಾವರಿ ಪಾಟ್ಟಮ್ಮ
ಪಾಲವ್ವನೇ ಕೂತುರೇ ಓಚ್ಚಾದಿ ...
ವಾರವ್ವನೇ ವಾರಯ್ಯನೇ ಉಂಡಾರೇನೇಯ್ಯ ...

ದಡ್ಡಿನ್ನಾನೇ ಧಫಮಡಿಸನೇ
ಧಡ್ಡಿನೆನೆ..ಬ್ಯಾರೇ..
ಮಕಮಕನೇನೇ ಕಾಪುಕಂಪಳಮು
ಎನಕೆನಕೆ ಮೇ ಪೋಯೆ ...

ಕ್ಯಾಸವ್ವ ಪಲ್ಲೀ......ಕಾವುಲಿಕೆನೇ ..
ಪೋವಲ್ಲೇನೇರಯ್ಯೆ...
ಗೋದಿಮಕಾಳೂ ಅಂಧನಾನೂ ಇವರಾನೇ ಬಾರದೇ
ಪಡಿರಾಗಿನೇ ಮಾನಿಕೇನೇ...ಮುಕ್ಕೆರೆನೇ ಸ್ವಾಮಿ

ಅಡವಿಮೀದಾ ಸೋಸಿತೀನೆ ಅಡ್ಡಾಗಡ್ಡೇನೇದೆ...
ಮಿತ್ತಿಗಾರೈಕಿ ವಚ್ಚಿನ್ನಾದಿ ಕಷ್ಟಮನೇರಯ್ಯೇ...
ಕ್ಯಾಸವ್ವಪಲ್ಲಿ ಕಾವುಲೇನೆ ಪೋವಲ್ಲಂಟೆರಯ್ಯೇ...

ನಾಕಿರಾಲೇ ಓಬವ್ವಾನೇ ..... ಭೂಮಿಕೋರೀ ವಚ್ಚೇ..
ದಡ್ಡಿನೇನೇ ನಾಕಿಡೆನೇ ವಚ್ಚಾಡೇನೇರಯ್ಯೇ ...
ಕೊರಿಲೇನೇ ಮಲ್ಲಯ್ಯನೇ ಉಂಡಾಡೇಲೇರಯ್ಯೇ...

ಬದುವಂಪುಲೇ ಕ್ಯಾಸಾಲಾಡನೇ ಹಳಪುತ್ಯಾಸದಡೇ.
ದಂಡಯ್ಯನೇ ಮೀರಯ್ಯನೇ ನೀರಾವರಿನೇನಡೆ, ಮೀಕಾವುಲಿಕೆನೇರಯ್ಯೇ...
ಗೂಡಯ್ಯನಾನೇ ಸೆಸೆಡೆನೇ ಗಾರಯ್ಯಾಡೇ.....ಸ್ವಾಮಿ

ವಿಶ್ಲೇಷಣೆ ಈ ಸಂದುನಲ್ಲಿ ಕೂರೇ ಮಲ್ಲನಾಯಕನ ಹುಟ್ಟು ಮತ್ತು ಅವನ ಪಶುಪಾಲನಾ ವೃತ್ತಿಯನ್ನು ತಿಳಿಸಿ ನಂತರ ಅವನ ಸಾಕುದನಗಳಿಗೆ ಮೇವು ನೀರು ಇಲ್ಲದೆ ಬರ ಬಂದಾಗ(ದೇವರ ಎತ್ತುಗಳನ್ನು ಬೇಡರು ಮಿತ್ತಿಗಾರು/ಮುತ್ತೈಗಳು ಎನ್ನುತಾರೆ.) ಅವುಗಳಿಗೆ ಮೇವು ನೀರು ಅರಸಿ ಹೋಗುವಾಗ ಪಡರಾಗಿ ಮಾನು (ಪಡರಾಗಿ ಮರ) ಎಂಬ ಒಂದು ಜಾತಿಯ ಮರ ಆ ಮರದಲ್ಲಿ ಗೋಧಿಕಾಳಿನ ರೂಪದ ಕಾಳು ಯಾವ ದಿಕ್ಕಿಗೆ ಮುಖ ಮಾಡಿಕೊಂಡಿರುತ್ತವೆಯೋ ಆ ದಿಕ್ಕಿಗೆ ಮೇವು ನೀರು ಸಿಗುತ್ತದೆ ಎಂದು ಹೇಳುತ್ತಾರೆ. ಕೊರೇ ಮಲ್ಲಯ್ಯ ಆ ಪಡರಾಗಿ ಮರದ ಗೋಧಿಕಾಳನ್ನು ನೋಡಿ ತಮ್ಮ ಮುತ್ತೈಗಳು(ಎತ್ತುಗಳನ್ನು) ಹೊಡೆದುಕೊಂಡು ಹೋಗುತ್ತಾನೆ.

ಮಾರಮ್ಮನನ್ನು ಗಡಿ ದಾಟಿಸುವುದು

ಬಿತ್ತನೆ ಕಾರ್ಯವೆಲ್ಲಾ ಮುಗಿದ ಮೇಲೆ ಹೊಲಗಳಲ್ಲಿ ಕಳೆ, ಎಡೆಕುಂಟೆ, (ಅಂತರ ಬೇಸಾಯ) ಹೊಡೆದು ಮುಗಿಸಿದ ಸಂದರ್ಭದಲ್ಲಿ ಸಕಾಲದಲ್ಲಿ ಮಳೆ ಬಾರದಿದ್ದರೆ ಅಥವಾ ಸುತ್ತ ಮುತ್ತಲ ಹಳ್ಳಿಗಳಲ್ಲಿ ಮಳೆ ಬಂದು ತಮ್ಮ ಗ್ರಾಮಕ್ಕೆ ಮಾತ್ರ ಮಳೆ ಬಾರದಿದ್ದಾಗ ನಮ್ಮೂರಿಗೆ ಕೇಡಾಗಿದೆ

ಎಂದು ಭಾವಿಸಿ ಮಾರಮ್ಮನ ಗಡಿ ದಾಟಿಸುವ ಆಚರಣೆ ಮಾಡುತ್ತಾರೆ. ಗಡಿ ಮಾರಮ್ಮ ಎಂಬ ಹೆಸರಿನ ಬೊಂಬೆಯೊಂದನ್ನು ತಯಾರಿಸಿ ಹಟ್ಟಿಯವರೆಲ್ಲಾ ಸೇರಿ ಅದಕ್ಕೆ ಪೂಜೆ ಮಾಡಿ ತಮ್ಮ ಹಟ್ಟಿಯ ಗಡಿಯವರೆಗೂ ಕೊಂಡೊಯ್ದು ಗಡಿಯನ್ನು ದಾಟಿಸಿ ಪಕ್ಕದ ಗ್ರಾಮದ ಗಡಿಯೊಳಕ್ಕೆ ಇಟ್ಟು ಬರುತ್ತಾರೆ. ಸಾಮಾನ್ಯವಾಗಿ ಪೂರ್ವದ ದಿಕ್ಕಿನ ಊರುಗಳ ಗಡಿಗೆ ಸಾಗಿಸುತ್ತಾರೆ. ಹೀಗೆ ಮಾಡುವುದರಿಂದ ತಮ್ಮೂರಿಗೆ ಮಳೆ ಬರುತ್ತದೆ ಎಂಬ ನಂಬಿಕೆ ಇದೆ. ಕಾಕತಾಳೀಯ ಎಂಬಂತೆ ಎಷ್ಟೋ ಬಾರಿ ಹೀಗೆ ಮಾಡಿದ ನಂತರ ಮಳೆ ಬಂದಿರುವುದನ್ನು ಹಟ್ಟಿಯ ಹಿರಿಯ ಓಬಳೇಶಪ್ಪ ನೆನಪಿಸಿಕೊಂಡು ಹೇಳುತ್ತಾರೆ. ಈ ಗಡಿ ಮಾರಮ್ಮನನ್ನು ಗಡಿ ದಾಟಿಸಲು ಮಾರಮ್ಮನ ಬೊಂಬೆಯ ಜೊತೆಗೆ ಚಿಕ್ಕ ಗಾಡಿಯೊಂದನ್ನು ಸಹ ಮಾಡಿರುತ್ತಾರೆ. ಒಬ್ಬರು ಎಳೆದುಕೊಂಡು ಹೋಗುವಷ್ಟು ಇರುವ ಗಾಡಿಯಲ್ಲಿ ಗಡಿ ಮಾರಮ್ಮನನ್ನು ಇರಿಸಿ ಜೊತೆಗೆ ಮನೆಯಲ್ಲಿನ ಹಳೆಯದಾದ ಅನಿಷ್ಟ ವಸ್ತುಗಳೆಂದು ಪರಿಗಣಿಸುವ ಮೊರ, ಮೊಂಡು ಪೊರಕೆ, ಬುಟ್ಟಿ, ಇತ್ಯಾದಿ ವಸ್ತುಗಳನ್ನು ಗಡಿ ಮಾರಮ್ಮನ ಜೊತೆ ಇಟ್ಟುಕೊಂಡು ರಾತ್ರಿಹೊತ್ತು ಮೆರವಣಿಗೆಯ ಮೂಲಕ ಊರಗಡಿ ದಾಟಿಸಿ ಬರುತ್ತಾರೆ.

**ಗುಲಕವ್ವನ ಆಚರಣೆ**

ಕೃಷಿಕರು ತಮ್ಮ ಬಿತ್ತನೆ ಮುಗಿಸಿ ಮಳೆಗಾಲದಲ್ಲಿ ಬೆಳೆಗಳಲ್ಲಿನ ಕಳೆಯನ್ನೆಲ್ಲಾ ತೆಗೆದು ಸ್ವಚ್ಛಗೊಳಿಸಿ ಉತ್ತಮ ಫಸಲಿಗಾಗಿ ಕಾಯುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿ ಮಳೆ ಕೈಕೊಟ್ಟರೆ. ಬೆಳೆಗಳೆಲ್ಲಾ ಓಣಗಹತ್ತಿ ಹೊಲವೆಲ್ಲಾ ಬರಿದಾಗಿ ಕಾಣಿಸುತ್ತಿರುತ್ತವೆ. ಅದನ್ನು ನೋಡಿ ಸಂಕಟಪಟ್ಟುಕೊಂಡ ಜನರು ಮಳೆರಾಯನನ್ನು ಪ್ರಾರ್ಥಿಸಿ ಮಳೆ ಸುರಿಸುವಂತೆ ಮಾಡಲು ಈ ಗುಲಕವ್ವ ಎಂಬ ಮೂರ್ತಿ ಆರಾಧನೆ ಮಾಡುತ್ತಾರೆ. ಇದನ್ನು ಆಚರಿಸುವ ವಿಧಾನವೆಂದರೆ,

ಹಟ್ಟಿಯ ಮಾದಿಗ ಸಮುದಾಯದ ಪುಟ್ಟ ಮಕ್ಕಳು ಬೆತ್ತಲೆಯಾಗಿ ತಲೆಯ ಮೇಲೆ ಮಣ್ಣಿನ ಹೆಂಚು ಹೊತ್ತು ಆ ಹೆಂಚಿನ ಮೇಲೆ ಹುತ್ತದ ಮಣ್ಣಿನಿಂದ ಅಥವಾ ಎರೆಮಣ್ಣಿನಿಂದ ಮಾಡಲಾದ ಗುಲುಕವ್ವನ ಮೂರ್ತಿ ಇಟ್ಟುಕೊಂಡು ಮನೆ ಮನೆಗೆ ಬರುತ್ತಾರೆ. ಗುಲುಕವ್ವನ ಮೂರ್ತಿಯ ತಲೆಯ ಮೇಲೆ ಗರಿಕೆಯನ್ನು ಸಿಕ್ಕಿಸಿರುತ್ತಾರೆ. ಇದನ್ನು ಹೊತ್ತು ಬರುವವರು ಎಳೆ ವಯಸ್ಸಿನ ಹೆಣ್ಣು ಅಥವಾ ಗಂಡು ಮಕ್ಕಳು ಆಗಿರುತ್ತಾರೆ. ಗುಲುಕವ್ವನನ್ನು ಹೊತ್ತು ತಂದಿರುವ ಬಾಲಕ ಅಥವಾ ಬಾಲಕಿಯ ಜೊತೆಯಲ್ಲಿ ಒಬ್ಬ ಹಿರಿಯ ಮಹಿಳೆ ಮತ್ತು ಅನೇಕ ಚಿಕ್ಕ ಚಿಕ್ಕ ಮಕ್ಕಳು ಮನೆಯ ಬಾಗಿಲಿಗೆ ಬಂದು ಹಾಡು ಹಾಡುತ್ತಾರೆ.

ಗುಲುಕವ್ವ ಗುಲುಕವ್ವ ಎಲ್ಲಾಡಿ ಬಂದೆ
ಕೆಸರಿದ್ದುತಾಗೇ ಕೊಸರಾಡಿ ಬಂದೆ
ನೀರಿದ್ದುತಾಗೆ ಈಜಾಡಿ ಬಂದೆ

ಆಡೊ ಮಕ್ಕಳ್ನ ಅಡವಿಗೆ ಕಳುಹಿಸಿದೆ
ಉಂಬೋ ಮಕ್ಕಳನ್ನ ಊರೇ ಬಿಡಿಸಿದೆ
ಗಂಡಾನ ತಲೆಗೆ ಎಣ್ಣಿಲ್ಲ, ಬೆಣ್ಣಿಲ್ಲಾ
ಗುಲುಕವ್ವ ಗುಲುಕವ್ವ ಎಲ್ಲಾಡಿ ಬಂದೆ
ಕೆಸರಿದ್ದು ತಾಗೇ ಕೊಸರಾಡಿ ಬಂದೆ
ನೀರಿದ್ದುತಾಗೆ ಈಜಾಡಿ ಬಂದೆ

ಕಾರಾ ಮಳೆಯೇ, ಕಪಾಟ ಮಳೆಯೇ
ಸುರಿ ಮಳೆಯೇ ಸುರಿ ಮಳೆಯೇ
ಬಣ್ಣ ಕೊಡ್ತಿನಿ ಬಾರೇ ಮಳೆಯೇ
ಸುಣ್ಣ ಕೊಡ್ತೀನಿ ಸುರಿಯೇ ಮಳೆಯೇ.

ಎಂದು ರಾಗವಾಗಿ ಹಾಡು ಹೇಳುತ್ತಾ ಗುಲುಕವ್ವನನ್ನು ತಂದವರು ಹಿಂದೆ ಮಳೆ ಸಮೃದ್ಧವಾಗಿ ಆಗಿ ಕೆರೆ, ಹಳ್ಳ ಬಾವಿಗಳೆಲ್ಲಾ ತುಂಬಿ ಹರಿಯುತ್ತಿದ್ದು ಅವುಗಳಲ್ಲಿ ಹಳ್ಳಿಯ ಮಕ್ಕಳು ಈಜಾಡಿ ಬರುತ್ತಿದ್ದರು. ಆದರೆ ಈಗ ಮಳೆಬಾರದೆ ಕೆರೆ, ಹಳ್ಳ, ಬಾವಿಗಳೆಲ್ಲಾ ಬತ್ತಿಹೋಗಿ ಬರಿ ಕೆಸರೆ ತುಂಬಿದೆ ಅದರಲ್ಲಿ ನಮ್ಮ ಮಕ್ಕಳು ಹೊರಳಾಡುವಂತಾಗಿದೆ. ದನಕರುಗಳಿಗೆ ನೀರಿಲ್ಲದೆ. ಸಾಯುವಂತಾಗಿದೆ. ಇಂತಹ ಬರಗಾಲ ಬಿದ್ದಿರುವುದರಿಂದ ಮನೆಯಲ್ಲಿ ಆಟವಾಡುತ್ತಿದ್ದ ಮಕ್ಕಳನ್ನು ಕೆಲಸಕ್ಕೆ ಕಾಡಿಗೆ ಕಳುಹಿಸುವ ಸ್ಥಿತಿ ಬಂದಿದೆ. ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರರೆ ಅನ್ನವಿಲ್ಲದೇ ಮಕ್ಕಳು ಸಾಯುತ್ತಿವೆ(ಕಾಪಾಡಲು ಆಗುತ್ತಿಲ್ಲ) ಎಂದು ವಿಶ್ಲೇಷಿಸಬಹುದು ಮತ್ತು ಉಂಬೋ ಮಕ್ಕಳನ್ನು ಊರು ಬಿಡಿಸಿ ನಗರಗಳಿಗೆ ದುಡಿಯಲು ಹಚ್ಚುವಂತಹ ಸ್ಥಿತಿ ನಮಗೆ ಬಂದಿದೆ. ಇಂಥಾ ಶೋಚನೀಯವಾದ ಸ್ಥಿತಿ ಮಳೆ ಬಾರದ ಕಾರಣ ನಮ್ಮ ಜನರಿಗೆ ಬಂದಿದೆ ಎಂದು ಮಳೆರಾಯನಿಗೆ ತಮ್ಮ ಕಷ್ಟವನ್ನು ನಿವೇದನೆ ಮಾಡಿಕೊಂಡು ಮಳೆ ಸುರಿಸು ಎಂದು ಬೇಡುವ ಆಚರಣೆ ಇದಾಗಿದೆ. ಗುಲುಕವ್ವನನ್ನು ಹೊತ್ತವರು ಮನೆಯ ಬಾಗಿಲಿಗೆ ಬಂದಾಗ ಆ ಮನೆಯಲ್ಲಿದ್ದ ಯಜಮಾನಿ ಬೇಗನೇ ಬಂದೇ ಎಂದು ಕೂಗುತ್ತಾ ಕೈಯಲ್ಲಿ ನೀರು ತುಂಬಿದ ತಂಬಿಗೆ ಹಿಡಿದು ಬಂದು ಗುಲುಕವ್ವನ ಮೇಲೆ ನೀರು ಸುರಿಯುತ್ತಾಳೆ. ತಣ್ಣಿರು ಮೈ ಮೇಲೆ ಬಿದ್ದೊಡನೆ ಗುಲುಕವ್ವನನ್ನು ಹೊತ್ತಿರುವ ಮಗು ನಡುಗುತ್ತಿರುತ್ತದೆ. ಆದರೂ ತಡೆದುಕೊಂಡು ನಡುಗುತ್ತಾ ನಿಂತಿರುತ್ತದೆ. ಹೀಗೆ ಪ್ರತಿ ಮನೆಯವರೂ ಗುಲುಕವ್ವಗೆ ನೀರು ಹಾಕಿ ಪ್ರಾರ್ಥಿಸುತ್ತಾರೆ. ನೀರು ಸುರಿಯುವುದು ಮುಗಿದ ಮೇಲೆ ಮನೆಯವರೆಲ್ಲಾ ಜೋಳ, ರಾಗಿ, ರೊಟ್ಟಿ, ತಂದು ನೀಡುತ್ತಾರೆ. ಅದನ್ನು ಸ್ವೀಕರಿಸಿದ ಗುಲುಕವ್ವನ ತಂಡದವರು ಒಂದೆಡೆ ಸಂಗ್ರಹಿಸುತ್ತಾರೆ.

ವಿಶೇಷವೆಂದರೆ ಗುಲುಕವ್ವ ಮನೆ ಬಾಗಿಲಿಗೆ ಬಂದಾಗ ಮನೆಯವರು 'ಬಂದೇ' ಎಂದು ಹೇಳಿದರೆ ಮಳೆ ತಡವಾಗಿ ಬರುತ್ತದೆ. ಎಂದೂ, 'ಮುಂದೆ ನಡಿ' ಎಂದು ಹೇಳಿದಲ್ಲಿ ಮಳೆ ಬರುವುದಿಲ್ಲವೆಂದು

ಅವರು ನಂಬುತ್ತಾರೆ. ಮನೆ ಮನೆಗೆ ಬಂದ ಗುಲುಕವ್ವನಿಗೆ ಮನೆಯ ಒಳಗಿಂದ ಬರುವ ಧ್ವನಿಯೇ ಮಳೆಯ ಶಕುನ. ಹೀಗೆ ಗುಲುಕವ್ವನನ್ನು ಮಾಡಿದವರು ಊರಿನ ಎಲ್ಲಾ ಮನೆ ಮನೆ ಬಾಗಿಲಿಗೆ ಹೋಗಿ ನೀರು ಹಾಕಿಸಿಕೊಂಡು ಜೋಳ, ರಾಗಿ, ಸಂಗ್ರಹಿಸಿಕೊಂಡು ಬಂದಿರುತ್ತಾರೆ. ನಂತರ ಅದನ್ನು ಹಿಟ್ಟು ಮಾಡಿ ಅಡುಗೆ ಮಾಡಿ ಕೊನೆಯ ದಿನ ಎಲ್ಲರೂ ಸೇರಿ ಗುಲುಕವ್ವನನ್ನು ಪೂಜೆ ಮಾಡಿ ಊರಿನ ಎಲ್ಲಾ ಮಕ್ಕಳು ಮತ್ತು ಕೆಲವು ಹಿರಿಯರು ಗುಲುಕವ್ವನಿಗೆ ಹಳ್ಳದಲ್ಲೋ ಅಥವಾ ಕೆರೆಯಲ್ಲೋ, ಇಲ್ಲವೆ ಬಾವಿಯಲ್ಲೋ ಬಿಟ್ಟು ಬಿಡುತ್ತಾರೆ. ಈ ರೀತಿಯಾಗಿ ಮಳೆಗಾಗಿ ಆಚರಿಸುವ ಆಚರಣೆಗಳಲ್ಲಿ ಇಂದಿಗೂ ಪ್ರಚಲಿತವಿರುವ ಈ ಗುಲುಕವ್ವನ ಆಚರಣೆಯೂ ಸಹ ಒಂದಾಗಿದೆ.

### ೩.೩.೧೦ ಕಣ

ಗ್ರಾಮೀಣ ಜನರಲ್ಲಿ ಕಣ ವಿಶೇಷವಾದ ಸ್ಥಾನ ಪಡೆದಿದೆ. ಇವರ ಕೃಷಿ ಕೆಲಸದಲ್ಲಿ ಹೊಲ, ದನ, ಕರುಗಳಷ್ಟೇ ಕಣಕ್ಕೂ ಪ್ರಾಧಾನ್ಯತೆ ಇದೆ. ಕಣ ಎಂದರೆ ಧಾನ್ಯವನ್ನು ಒಕ್ಕುವ ಸ್ಥಳ. ಕಣವನ್ನು ರೈತರು ದೇವರ ಮನೆಯೆಂದೇ ಕರೆಯುತ್ತಾರೆ. ಕಣದಲ್ಲಿ ಓಡಾಡುವಾಗ, ಕೆಲಸ ಮಾಡುವಾಗ ಚಪ್ಪಲಿ ಹಾಕಿಕೊಳ್ಳುವುದಿಲ್ಲ. ಚಪ್ಪಲಿಯನ್ನು ಕಣದ ಒಂದು ಮೂಲೆ ಅಥವಾ ಹೊರಗಡೆ ಬಿಟ್ಟಿರುತ್ತಾರೆ. ಸುಗ್ಗಿಯ ಕಾಲದಲ್ಲಿ ಅಂದರೆ ಶೇಂಗಾ ಕಿತ್ತು ಅವನ್ನು ಒಣಗಿಸಿ ಕಣಗಳಲ್ಲಿ ಬಣವೆ ಹಾಕಿಕೊಂಡ ಸಮಯದಲ್ಲಿ ತಿಂಗಳೊಪ್ಪತ್ತು ಹಟ್ಟಿಯ ಜನರು ಮನೆಯಲ್ಲಿ ಸಿಗುವುದಕ್ಕಿಂತಲೂ ಕಣಗಳಲ್ಲಿ ಸಿಗುವುದೇ ಹೆಚ್ಚು ಇವರಿಗೆ ಸುಗ್ಗಿಯ ಕಾಲದಲ್ಲಿ ಕಣಗಳೇ ಮನೆಗಳು. ಕಣಗಳು ಸಾಮಾನ್ಯವಾಗಿ ಹಟ್ಟಿಯ ಸುತ್ತ ಅಥವಾ ಮನೆಯ ಸಮೀಪದಲ್ಲಿಯೇ ಇರುತ್ತವೆ. ಕಣವನ್ನು ಮಾಡಲು ನಿರ್ದಿಷ್ಟ ಸ್ಥಳವನ್ನು ಗುರುತಿಸಿ ಅಲ್ಲಿ ಹುಲ್ಲು ಕೆತ್ತಿ ಹಸನು ಮಾಡುತ್ತಾರೆ. ಇದಕ್ಕೆ ಗುರುವಾರ (ಬೇಸ್ತವಾರ) ಒಳ್ಳೆಯ ದಿನ ಎಂಬ ನಂಬಿಕೆ ಇವರಲ್ಲಿದೆ. ಗಂಡುಮಕ್ಕಳು ಚಲಕೆಯಿಂದ ಹುಲ್ಲು ಕೆತ್ತಿ ಚೆನ್ನಾಗಿ ನೀರು ಚಿಮುಕಿಸಿ ರೂಣಿ ಗುಂಡು ಹೊಡೆಯುತ್ತಾರೆ. ಆಗ ಕಣದ ಜಾಗ ಗಟ್ಟಿಯಾಗಿ ಹಸನಾಗುತ್ತದೆ. ನಂತರ ಕಣದ ಮಧ್ಯದಲ್ಲಿ ಮೇಟಿ ಕಂಬ ನೆಡುತ್ತಾರೆ. ಇತ್ತೀಚೆಗೆ ಮೇಟಿ ಕಂಬವನ್ನು ನೆಡುವುದನ್ನು ಬಿಟ್ಟಿದ್ದಾರೆ. ಕಾರಣ ಧಾನ್ಯ ತುಳಿಸುವ, ಗುಂಡು ಹೊಡೆಯುವ ಕೆಲಸಕ್ಕೆ ಬದಲಾಗಿ ಯಂತ್ರಗಳ ಮೂಲಕ ಧಾನ್ಯಗಳನ್ನು ಬೇರ್ಪಡಿಸಿಕೊಳ್ಳುತ್ತಿದ್ದಾರೆ. ಹಿಂದೆ ಮೇಟಿ ಕಂಬವನ್ನು ನೆಡುವ ಸಂದರ್ಭದಲ್ಲಿ ಪೂಜೆ ಸಲ್ಲಿಸುತ್ತಿದ್ದರು. ಈಗ ಕಣವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಪೂಜೆ ಸಲ್ಲಿಸುತ್ತಾರೆ. ಮೇಟಿ ಕಂಬ ಭದ್ರವಾಗಿರಲೆಂದು ಬ್ಯಾಟೆ ಗಿಡದ ಕೊಂಬೆಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಕಣವನ್ನು ಸಿದ್ಧಪಡಿಸಿದ ಎರಡು ದಿನಗಳ ನಂತರ ಕಣಕ್ಕೆ ಸಗಣಿ ರಾಡಿಯನ್ನು ಹಾಕುತ್ತಾರೆ. ಒಕ್ಕಣೆ ಮಾಡುವ ಪ್ರತಿಬಾರಿಯೂ ಕಣಕ್ಕೆ ಸಗಣಿ ರಾಡಿಯನ್ನು ಹಾಕುತ್ತಾರೆ. ಹಟ್ಟಿಯಲ್ಲಿ ಪ್ರತಿಯೊಂದು ಮನೆಯವರೂ ಸಹ ಕಣವನ್ನು ಹೊಂದಿದ್ದಾರೆ. ಬೆಳೆಯನ್ನು ಒಕ್ಕಣೆ/ಒಕ್ಕಲು ಮಾಡಲು ಮಾತ್ರವಲ್ಲದೆ ದನಕರುಗಳನ್ನು ಕಟ್ಟಿಹಾಕಿಕೊಳ್ಳಲು ಮೇವು ಸಂಗ್ರಹಿಸಿ ಇಟ್ಟುಕೊಳ್ಳಲು (ಬಣವೆ ಹಾಕಿಕೊಳ್ಳಲು) ಇವರಿಗೆ ಕಣ ಬೇಕೇ ಬೇಕು.

## ಕಣದ ಬಗೆಗಿನ ನಂಬಿಕೆಗಳು

ಈಗಾಗಲೇ ಹೇಳಿದಂತೆ ಕಣ ರೈತರಿಗೆ ಅತ್ಯಂತ ಪವಿತ್ರವಾದುದು. ಆದುದರಿಂದ ಕಣದಲ್ಲಿ ಚಪ್ಪಲಿ ಹಾಕಿಕೊಂಡು ಬರುವಂತಿಲ್ಲ. ಕಣವನ್ನು ತಮ್ಮ ಮನೆಯ ಪಡಸಾಲೆಯಷ್ಟೇ ಸ್ವಚ್ಛವಾಗಿಟ್ಟಿರುತ್ತಾರೆ. ತಾವು ಕಣದಲ್ಲಿ ಕೆಲಸಮಾಡುವಾಗ ಕೆಲವು ನಿಯಮಗಳನ್ನು ಅನುಸರಿಸುತ್ತಾರೆ ಅವುಗಳೆಂದರೆ,

* ಕಣದಲ್ಲಿ ಕೆಲಸ ಮಾಡುವಾಗ ಎಲೆ-ಅಡಿಕೆ ಹಾಕುವಂತಿಲ್ಲ.

* ರಾಶಿ ತೂರುವಾಗ ಮಾತನಾಡುವಂತಿಲ್ಲ.

* ಚಪ್ಪಲಿ ಹಾಕಿಕೊಂಡು ಕಣದಲ್ಲಿ ಓಡಾಡುವಂತಿಲ್ಲ.

ಬಹುಶಃ ಕಣವು ನಾವು ತಿನ್ನುವ ಅನ್ನವನ್ನು/ಕಾಳನ್ನು ಒಕ್ಕುವ ಸ್ಥಳವಾದ್ದರಿಂದ ಅಲ್ಲಿ ಚಪ್ಪಲಿ ಹಾಕಿಕೊಂಡು ಓಡಾಡಿದರೆ, ಎಲೆ-ಅಡಿಕೆ ಹಾಕಿ ಉಗಿದರೆ ಕಾಳು ಕಡಿ ಗಲಿಜಾಗುತ್ತದೆ ಎಂಬ ನಂಬಿಕೆ, ಇನ್ನು ರಾಶಿ ತೂರುವಾಗ ಮಾತನಾಡಿದರೆ ಬಾಯೊಳಗೆ ಧೂಳು ಹೋಗಿ ಉಸಿರಾಟಕ್ಕೆ ತೊಂದರೆಯಾಗುತ್ತದೆಂದು ಇಂತಹ ನಿಯಮ ಮಾಡಿಕೊಂಡಿರಬಹುದು.

## ಬದಲಿ ಹೆಸರು ಕರೆಯುವುದು

ಕಣದಲ್ಲಿ ಒಕ್ಕಣೆ ಕಾರ್ಯಕ್ಕೆ ಬಳಸುವ ವಸ್ತುಗಳನ್ನು ಅವುಗಳ ನಿಜ ಹೆಸರಿನಿಂದ ಕರೆಯದೇ ಬೇರೆ ಹೆಸರಿನಿಂದ ಕರೆಯುತ್ತಾರೆ. ಉದಾ: ಹುಲ್ಲು ತುಳಿಸುವ ರೂಣು ಗುಂಡಿಗೆ-ರಥ ಎಂದು, ರಾಗಿ ತೂರುವ ಉದ್ದಿಗೆಗೆ=ಕುದುರೆ ಎಂದೂ, ಪೊರಕೆಗೆ-ಬುದ್ಧಿವಂತ ಎಂದು, ಮೊರಕ್ಕೆ-ಕೊಂಗ, ಬೂದಿಗೆ-ವಿಭೂತಿ, ರಾಗಿಗೆ-ಕೃಷ್ಣಸ್ವಾಮಿ, ಮೆರೆಕೋಲಿಗೆ-ಮೆರೆಬಸವ, ಕುಡುಗೋಲಿಗೆ-ಬಸವಣ್ಣ, ಕಸ ಗುಡಿಸುವುದಕ್ಕೆ-ಬೆಳಗು, ಎತ್ತುಗಳಿಗೆ-ಬಸವ, ಕತ್ತೆಗಳಿಗೆ-ಮುತ್ತಿನಶೆಟ್ಟಿ, ಊಟಕ್ಕೆ-ಕವಳ, ಹೀಗೆ ಒಂದೊಂದಕ್ಕೆ ಒಂದೊಂದು ಬದಲಿ ಹೆಸರಿಟ್ಟು ಕರೆಯುತ್ತಾರೆ. ಕಾರಣ ಅವರೇ ಹೇಳುವಂತೆ ಅವುಗಳ ನಿಜ ಹೆಸರು ಕರೆದರೆ ರಾಶಿ ಕಡಿಮೆಯಾಗುತ್ತದೆ. ಅಥವಾ ರಾಶಿ, ಕೃಷಿ, ಉಪಕರಣಗಳು ಕಲ್ಲಾಗಿ ಹೋಗುತ್ತವೆ ಎಂದು ಹೇಳುತ್ತಾರೆ. ಮತ್ತು ಅದಕ್ಕೆ ಸಂಬಂಧಿಸಿದಂತೆ ಇವರಲ್ಲಿ ರೂಢಿಯಲ್ಲಿರುವ ಕಥೆಯೊಂದು ಹೀಗಿದೆ.

ಹಿಂದಿನ ಕಾಲದಲ್ಲಿ ಒಬ್ಬ ಮಹಿಳೆ ಕಣದಲ್ಲಿದ್ದ ದೊಡ್ಡ ರಾಗಿಯ ರಾಶಿಯನ್ನು ಕಂಡು ಐಯ್ಯೋ ಶಿವನೇ ಇಷ್ಟೊಂದು ರಾಗಿಯನ್ನು ಬಿಸಿ ಹಿಟ್ಟು, ಮಾಡಿ ಮುದ್ದೆ ಕಟ್ಟುವುದು ನನ್ನಿಂದ ಸಾಧ್ಯವೇ? ಎಂದು ಗೋಣಗಿದಳಂತೆ ಆ ತಕ್ಷಣವೇ ಕಣದಲ್ಲಿದ್ದ ರಾಗಿಯ ರಾಶಿ ಮತ್ತು ಅಲ್ಲಿನ ವಸ್ತುಗಳೆಲ್ಲಾ ಕಲ್ಲಾದವಂತೆ ಅಂದಿನಿಂದ ಕಣಗಳಲ್ಲಿನ ವಸ್ತುಗಳ ನಿಜ ಹೆಸರು ಕರೆಯುವುದನ್ನು ನಿಲ್ಲಿಸಲಾಯಿತು ಎನ್ನುತ್ತಾರೆ. (ಪಾಲಮ್ಮ ಗಂಡ ಪಾಪಯ್ಯ) ಯಾರಾದರೂ ಬಾಯಿತಪ್ಪಿ ಕಣದಲ್ಲಿನ ವಸ್ತುಗಳ ನಿಜ ಹೆಸರು ಹೇಳಿದರೆ ತಕ್ಷಣ 'ಬಿಡ್ತು' ಎಂದು ಹೇಳುತ್ತಾರೆ. ಬಿಡ್ತು ಎಂದರೆ ಅವು ನಿಜ ಸ್ಥಿತಿಯಲ್ಲೇ ಇರುತ್ತವೆ ಕಲ್ಲಾಗುವುದಿಲ್ಲ ಎಂಬುದು ನಂಬಿಕೆ.

### ಕಣದಲ್ಲಿ ಬಳಸುವ ಸಾಧನಗಳು

ಕಣದಲ್ಲಿ ಮೇವನ್ನು, ಧಾನ್ಯಗಳನ್ನು ಸಂಗ್ರಹಿಸಿಡಲಾಗುತ್ತದೆ, ಮತ್ತು ಅವುಗಳನ್ನು ಅಲ್ಲೇ ಬೇರ್ಪಡಿಸಿ ಸ್ವಚ್ಛಗೊಳಿಸಿಕೊಂಡು ಬರಲಾಗುತ್ತದೆ. ಕಣದಲ್ಲಿ ಕಾಳು ಕಡಿಗಳನ್ನು ಬೇರ್ಪಡಿಸಲು ಹಸನುಮಾಡಲು, ಬಡಿಯಲು, ಅಳೆಯಲು, ಚೀಲದಲ್ಲಿ ತುಂಬಲು ಮುಂತಾದ ಕಾರ್ಯಗಳಿಗೆ ಅನೇಕ ವಸ್ತುಗಳನ್ನು ಬಳಸಲಾಗುತ್ತದೆ. ಮತ್ತು ಅವುಗಳನ್ನು ಒಂದೊಂದು ಹೆಸರುಗಳಿಂದ ಕರೆಯಲಾಗುತ್ತದೆ.

ಮೇಟಿ ಗೂಟ ಕಣದಲ್ಲಿ ಹುಲ್ಲು ತುಳಿಸುವುದಕ್ಕಾಗಿ ಕಣದ ಮಧ್ಯೆ ನೆಡುವ ಮರದ ಸಾಧನ. ಇದಕ್ಕೆ ಎತ್ತುಗಳನ್ನು ಕಟ್ಟಿ ಸೂತ್ತಲೂ ಹರಡಿರುವ ತೆನೆ ಅಥವಾ ಹುಲ್ಲನ್ನು ದನಗಳಿಂದ/ಎತ್ತುಗಳಿಂದ ತುಳಿಸುತ್ತಾರೆ. ಆಗ ಎತ್ತುಗಳು ಅತ್ತ-ಇತ್ತ ಹರಿದಾಡದಂತೆ ಒಂದೇ ಕಡೆ ಸುತ್ತುವಂತೆ ಮಾಡಲು ಈ ಮೇಟಿಗೂಟ ನೇರವಾಗುತ್ತದೆ. ಮೇಟಿಗೂಟಕ್ಕೆ ಬ್ಯಾಟಿ ಮರದ ರೆಂಬೆಯನ್ನು ಬಳಸುತ್ತಾರೆ.

### ರೋಣುಗುಂಡು/ರೋಣಿ ಕಲ್ಲು

ಮೇಲೆ ಹೇಳಿದಂತೆ ಹುಲ್ಲನ್ನು, ತೆನೆಯನ್ನು ಎತ್ತುಗಳಿಂದ ತುಳಿಸಲಾಗುತ್ತದೆ. ಅದರಂತೆಯೇ ಬೇಗನೇ ಕಾಳು ಕಡಿ ಬೇರೆಯಾಗಲು ರೋಣುಗುಂಡನ್ನು ಬಳಸಲಾಗುತ್ತದೆ. ಇದು ಕಲ್ಲಿನ ಉರುಳುಗುಂಡಾಗಿರುತ್ತದೆ. ಎರಡು ಕಡೆ ಸಣ್ಣ ರಂದ್ರಗಳನ್ನು ಮಾಡಿ ಎರಡು ಅಚ್ಚು, ಪಾರಿ ಅಡ್ಡಮರ, ಒಂದು, ಈಚು ಮುಂತಾದವು ಇರುತ್ತವೆ. ಇದರಿಂದ ತೆನೆಗಳ ಮೇಲೆ, ಹುಲ್ಲಿನ ಮೇಲೆ ಈ ರೋಣುಗುಂಡನ್ನು ಎತ್ತುಗಳ ಸಹಾಯದಿಂದ ಸುತ್ತಿಸುವುದರಿಂದ ಕಾಳುಗಳು ಬೇಗನೆ ತೆನೆಯಿಂದ ಬೇರ್ಪಡುತ್ತವೆ.

ಮೊರ ಕಾಳು ಕಡ್ಡಿಯನ್ನು ತೂರಲು, ತುಂಬಲು ಬಳಸುವ ಬಿದಿರಿನ ಸಾಧನ. ಇದಕ್ಕೆ ಸಗಣಿ, ಗಂಜಲವನ್ನು ಬಳಿದು ಮಾಡಿರುತ್ತಾರೆ.

### ಜರಡಿ

ಕಡ್ಡಿ ಕಸಗಳನ್ನು ಕಾಳಿನಿಂದ ಬೇರ್ಪಡಿಸಲು ಬಳಸುವ ಸಾಧನ, ತಗಡಿನಿಂದ ಮಾಡಲಾಗಿರುತ್ತದೆ. ಸುತ್ತಲೂ ತಗಡಿನಕಟ್ಟು ಮಧ್ಯದಲ್ಲಿ ಕಂಡಿಗಳನ್ನು ಮಾಡಲಾಗಿರುತ್ತದೆ. ಅದರಲ್ಲಿ ಕಾಳು ಹಾಕಿ ಅಲ್ಲಾಡಿಸಿದರೆ ಕಾಳು ಮಾತ್ರ ಕೆಳಗೆ ಹೋಗಿ ಕಸ ಕಡ್ಡಿ ಮೇಲೆ ಉಳಿಯುತ್ತದೆ. ಜರಡಿಯಲ್ಲಿ ಹಲವು ಬಗೆ ದೊಡ್ಡ ಜರಡಿ, ಸಣ್ಣ ಜರಡಿ, ಮೂಗು ಜರಡಿ, ಕೆಲವೊಂದು ಜರಡಿಯಲ್ಲಿ ಕಾಳುಗಳಲ್ಲಿ ಜಟ್ಟು-ಗಟ್ಟಿಯನ್ನು ಬೇರೆ ಮಾಡಲಾಗುತ್ತದೆ. ಮೂಗು ಜರಡಿಯನ್ನು ಬಿದಿರಿನಿಂದ ಮಾಡಿರುತ್ತಾರೆ.

### ಬರಲು ಅಥವಾ ಪೊರಕೆ

ಕಣದಲ್ಲಿ ಕಾಳು ಕಸವನ್ನು ಬೇರ್ಪಡಿಸಲು ಬಳಸುವ ಸಾಧನ. ತೆಂಗಿನ ಕಡ್ಡಿಗಳಿಂದ ಅಥವಾ ತೊಗರಿ ಕಡ್ಡಿ ಇಲ್ಲವೆ ಬಂದರಕೆ ಬರಲಿನಿಂದ (ಬಂದರಿಕೆ ಸೊಪ್ಪಿನಿಂದ) ಮಾಡಿರುತ್ತಾರೆ. ಎಲ್ಲಾ

ಕಣಗಳಲ್ಲಿ ಬರಲುಗಳು ಇದ್ದೇ ಇರುತ್ತವೆ. ದನಗಳ ಸಗಣಿಯನ್ನು ಬಳಿಯಲು ಬಂದರಿಕೆ ಬರಲನ್ನು ಬಳಸುತ್ತಾರೆ.

**ಮೇರೆಗೋಲು**

ಹುಲ್ಲನ್ನು ಒಟ್ಟಲು ಬಳಸುವ ಬಿದಿರಿನ ಗಟ್ಟಿಯಾದ ಕೋಲಿನ ಸಾಧನ ಬಿದಿರಿನ ೬-೭ ಅಡಿ ಉದ್ದದ ತೆಳುವಾದ ಕೊಕ್ಕೆಯಿರುವ ಕೋಲು.

**ಕುದುರೆಮಣೆ**

ಕಾಳು, ಉಬ್ಬಲು ತೂರುವಾಗ ಎತ್ತರವಾದ ಜಾಗದಲ್ಲಿ ನಿಂತು ತೂರಿದರೆ ಗಾಳಿಗೆ ಚೆನ್ನಾಗಿ ಕಾಳು ಕಡಿ ಬೇರ್ಪಡುತ್ತವೆ. ಕಾಳುಕಡಿ ತೂರಲು ಬಳಸುವ ಎತ್ತರದ ಸಾಧನವೇ ಕುದುರೆ ಮಣೆ. ಮರದ ಅಗಲವಾದ ಹಲಗೆಗೆ ನಾಲ್ಕು ಮರದ ಕಾಲುಗಳನ್ನು ಲಗತ್ತಿಸಿ ಅದರ ಮೇಲೆ ಪುಟ್ಟಿಯಲ್ಲಿ ಕಾಳು, ಉಬ್ಬಲು ಇಟ್ಟುಕೊಂಡು ಮರದಲ್ಲಿ ತುಂಬಿಕೊಂಡು ಎತ್ತರದಿಂದ ತೂರುವಂತೆ ಮಾಡಿರುತ್ತಾರೆ.

**ಗೂಡು ಹಾಕುವುದು**

ಈ ಹಿಂದೆ ಹಟ್ಟಿಯ ಜನರು ಜೋಳ, ರಾಗಿ, ಸಜ್ಜೆಯನ್ನು ಹೆಚ್ಚಾಗಿ ಬೆಳೆಯುತ್ತಿದ್ದರು ಅವುಗಳನ್ನು ತೆನೆ ಸಮೇತ ಕಟಾವು ಮಾಡುತ್ತಿದ್ದರು ಕಾರಣ ಕೂಲಿ ಆಳುಗಳ ಸಮಸ್ಯೆ ಮತ್ತು ಮಳೆಯ ಕಾಡಾಟ ನವಂಬರ್-ಡಿಸೆಂಬರ್ ತಿಂಗಳಿನಲ್ಲಿ ಕೊಯ್ಲೆ ಮಾಡಿ ಒಣಗಿಸಿ ಗಾಡಿ ಕಟ್ಟಿ ಕಣದಲ್ಲಿ ತಂದು ಗೂಡು ಹಾಕುತ್ತಿದ್ದರು. ಇಲ್ಲವೇ ಅಲ್ಲೇ ಹೊಲದಲ್ಲಿ ಗೂಡು ಹಾಕುತ್ತಿದ್ದರು. ಜೋಳ, ಸಜ್ಜೆ, ರಾಗಿಯ ತೆನೆಗಳು ಒಂದೆಡೆ ಕೂಡಿಸಿ ಗೋಪುರಾಕೃತಿಯಲ್ಲಿ ಜೋಡಿಸಿ ಗೂಡು ಹಾಕುತ್ತಾರೆ. ಇವರ ಜ್ಞಾನ ಎಂಥಹದು ಎಂದು ಈ ಗೂಡು ಹಾಕುವ ವಿಧಾನದಿಂದ ತಿಳಿಯಬಹುದು. ಹೊಲದಲ್ಲಿಯೇ ಬಯಲಿನಲ್ಲಿ ದೊಡ್ಡ ದೊಡ್ಡ ಗೂಡು ಹಾಕಿ ಬಂದರೂ ದನಕರುಗಳ ಬಾಯಿಗೆ ಸುಲಭವಾಗಿ ಸಿಗದಂತೆ ಬಿಗಿಯಾಗಿ ಸಿವುಡುಗಳನ್ನು ಹೊಂದಿಸಿರುತ್ತಾರೆ(ಸಿವುಡು=ಜೋಳ, ರಾಗಿ, ಸಜ್ಜೆಯ ಕಟ್ಟು) ಮತ್ತು ಎಂಥಹ ಮಳೆ ಬಂದರೂ ಮೇವು ಮತ್ತು ಅದರಲ್ಲಿನ ತೆನೆಗಳು ನೆನೆಯದಂತೆ ಗೂಡು ಹಾಕಿರುತ್ತಾರೆ. ತಮಗೆ ಬೇಸಿಗೆಯಲ್ಲಿ ಬಿಡುವಾದಾಗ ಗೂಡನ್ನು ಕಿತ್ತು ಕಣಕ್ಕೆ ಗಾಡಿಯಲ್ಲಿ ಹೇರಿಕೊಂಡು ಬಂದು ಅಥವಾ ಅಲ್ಲೇ ತಾಟುಪಾಲು ಹಾಕಿಕೊಂಡು ಮಹಿಳೆಯರು ತೆನೆಗಳನ್ನು ದಂಟಿನಿಂದ ಕುಡುಗೋಲು ಸಹಾಯದಿಂದ ಬೇರ್ಪಡಿಸಿದರೆ ಪುರುಷರು ದಂಟನ್ನು(ಮೇವನ್ನು) ಒಂದೆಡೆ ಒಟ್ಟಿ ಬಣವೆ ಹಾಕುತ್ತಾರೆ. ಹೀಗೆ ಒಟ್ಟಿರುವ ಮೇವಿನ ಬಣವೆಯನ್ನು ಸಹ ಮಳೆಗೆ ನೆನೆಯದಂತೆ ಹಾಕಿರುತ್ತಾರೆ. ಮುಂದಿನ ವರ್ಷದ ಫಲ ಬಂದು ಮೇವು ಕಣಕ್ಕೆ ಬರುವವರೆಗೆ ಈ ಮೇವಿನ ಬಣವೆಯನ್ನು ಸ್ವಲ್ಪ ಸ್ವಲ್ಪ ಕಿತ್ತು ದನಕರುಗಳನ್ನು ಮೇಯಿಸುತ್ತಿರುತ್ತಾರೆ. ಬಣವೆ ಹಾಕುವಾಗ, ಗೂಡು ಹಾಕುವಾಗ ಮತ್ತು ಗೂಡು ಕೀಳುವಾಗ ಪೂಜೆಯನ್ನು ಸಲ್ಲಿಸುತ್ತಾರೆ. ಫಲ ಕೊಟ್ಟ ಭೂತಾಯಿಯನ್ನು ಸ್ಮರಿಸುತ್ತಾರೆ.

**ರಾಶಿ ಮಾಡುವುದು**

ತಮಗೆ ಫಲ ನೀಡಿದ ಮಣ್ಣು/ಭೂಮಿ, ಗಾಳಿ, ನೀರು, ಪಶು, ಪಕ್ಷಿ ಮೊದಲಾದ ಜೀವಸಂಕುಲಗಳಿಗೆ ಗೌರವ ಸಲ್ಲಿಸುವ ವಿಶಿಷ್ಟ ಆಚರಣೆ ಈ ರಾಶಿ ಪೂಜೆ ರೈತ ತಾನು ಬೇಸಾಯ ಮಾಡಲು

ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಜೀವಿಗಳಿಗೂ ಮತ್ತು ವಸ್ತುಗಳಿಗೂ ಗೌರವ ಸಲ್ಲಿಸುವ ರಾಶಿಪೂಜೆ ಹಟ್ಟಿಯಲ್ಲಿ ಇಂದಿಗೂ ರೂಢಿಯಲ್ಲಿದೆ. ಮುಂಗಾರು ಮತ್ತು ಹಿಂಗಾರಿನಲ್ಲಿ ಬೆಳೆದ ಬೆಳೆಯನ್ನು ರೈತರು ತಮ್ಮ ಕಣಗಳಲ್ಲಿ ರಾಶಿ ಹಾಕಿ ಅದಕ್ಕೆ ಕಣಗಿಲೆ ಹೂವು, ಬನ್ನಿ ಪತ್ರೆ, ತುಂಬೆ ಹೂವು, ಮಾವಿನ ಎಲೆ, ಚೆಂಡು ಹೂವು, ಲಕ್ಕಿ ಪತ್ರೆ, ಜೋಳದ ದಂಟು, ಬಾಳೆ ಎಲೆ, ಮುಂತಾದವನ್ನು ಹಾಕಿ ರಾಶಿಯನ್ನು ಅಲಂಕರಿಸುತ್ತಾರೆ. ಅಲ್ಲದೆ ಕೃಷಿ ಉಪಕರಣಗಳಾದ ಮೊರ, ಸೇರು, ಜರಡಿ, ಪುಟ್ಟಿ ಮುಂತಾದವುಗಳನ್ನು ಸಹ ರಾಶಿಯ ಜೊತೆಗೆ ಪೂಜಿಸುತ್ತಾರೆ, ಪೂಜೆಯ ನಂತರ ಊರವರನ್ನು ಕರೆದು ಪ್ರಸಾದ ಹಂಚುತ್ತಾರೆ. ಅಥವಾ ಊಟಕ್ಕೆ ಹಾಕುತ್ತಾರೆ. ರಾಶಿ ಪೂಜೆಯಿಂದ ಫಲ ನೀಡಿದ ಭೂಮಿತಾಯಿಗೆ ಋಣ ತೀರಿಸಿದಂತೆ ಎಂದು ಭಾವಿಸುತ್ತಾರೆ.

**ಅಕ್ಕಲು ಬಿಡುವುದು**

ಹೊಲಗದ್ದೆಗಳಲ್ಲಿನ ಫಸಲನ್ನೆಲ್ಲ ಕಟಾವು ಮಾಡಿ ಕಣಗಳಿಗೆ ತಂದು ಅಕ್ಕಡಿಗಳನ್ನೆಲ್ಲಾ ಕೊಯ್ಲೆ ಮಾಡಿದಾಗ ಹೊಲ ಖಾಲಿಯಾಗುತ್ತದೆ. ಅಲ್ಲಿಯವರೆಗೆ ದನಕರುಗಳಿಗೆ ಹೊಲದಲ್ಲಿ ಮೇಯಲು ನಿಷೇಧವಿದ್ದು ಬೆಳೆ ಕೊಯಿದಾದ ಮೇಲೆ ಹೊಲ ಖಾಲಿಯಾದ ಮೇಲೆ ಅಲ್ಲಿ ದನಕರುಗಳಿಗೆ ಮೇಯಲು ಮುಕ್ತ ಅವಕಾಶ ಮಾಡಿಕೊಡಲಾಗುತ್ತದೆ. ಅಂತಹ ಹೊಲಕ್ಕೆ ಅಕ್ಕಲು ಅಥವಾ ಅಕ್ಕಲು ಹೊಲ ಎಂದು ಕರೆಯುತ್ತಾರೆ. ದನಕರುಗಳು ಹೊಲದಲ್ಲಿನ ಅಳಿದುಳಿದಿರುವ ಬೆಳೆಯನ್ನು ಮೇಯುತ್ತವೆ. ಆ ಸಂದರ್ಭದಲ್ಲಿ ಹೊಲಗಳ ಉಸ್ತುವಾರಿಗೆ ಯಾರೂ ಇರುವುದಿಲ್ಲ ಹೊಲದ ಮಾಲೀಕರೇ ದನಕರು, ಕುರಿ ಮರಿಗಳನ್ನು ಮೇಯಲು ಅವಕಾಶ ಮಾಡಿಕೊಡುತ್ತಾರೆ. ಹೊಲದಲ್ಲಿ ಉಳಿದ ಶೇಂಗಾ, ಜೋಳದ ದಂಟು, ಗರಿ ಇತ್ಯಾದಿಯನ್ನು ದನಕರುಗಳು ಅಕ್ಕಲು ಹೊಲದಲ್ಲಿ ಮೇಯುತ್ತವೆ.

**೩.೪ ಪಾರಂಪರಿಕ ಆಹಾರ ಪದ್ಧತಿ**

ಪ್ರತಿಯೊಂದು ಜೀವಿಯು ಜೀವಿಸಲು ಮೂಲಭೂತ ಅವಶ್ಯಕತೆಗಳಾದ ಗಾಳಿ, ನೀರು, ಆಹಾರ ಅತ್ಯವಶ್ಯಕ. ಗಾಳಿ, ನೀರು ಜೀವಿಗಳಿಗೆ ನೈಸರ್ಗಿಕವಾಗಿ ದೊರೆತರೆ ಆಹಾರವನ್ನು ಜೀವಿಯು ತನ್ನ ಪ್ರಯತ್ನದಿಂದ ಪಡೆದು ಸೇವಿಸುವಂಥದ್ದಾಗಿದೆ. ಆಹಾರವೆಂದರೆ ಬಗೆಬಗೆಯ ತಿಂಡಿ ತಿನಿಸುಗಳು ಮಾತ್ರವಲ್ಲ. ಮಾನವನ ಆಹಾರಪದ್ಧತಿಯ ಪರಂಪರೆಯನ್ನು ನೋಡಿದರೆ ಹಿಂದೆ ಒಂದು ಕಾಲಕ್ಕೆ ಕಾಡಿನಲ್ಲಿ ಅಲೆಯುತ್ತಿದ್ದ ಮಾನವನು ತನ್ನ ಹಸಿವನ್ನು ಇಂಗಿಸಿಕೊಳ್ಳಲು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು, ಇಲ್ಲವೇ ಕಾಡಿನಲ್ಲಿನ ಹಣ್ಣು ಹಂಪಲು, ಗೆಡ್ಡೆ ಗೆಣಸುಗಳನ್ನು ಹಸಿಯಾಗಿಯೇ ಸೇವಿಸುತ್ತಿದ್ದನು ಮಾನವ ಬೆಂಕಿಯ ಬಳಕೆಯನ್ನು ಕಂಡುಕೊಂಡ ಮೇಲೆ ಮಾಂಸವನ್ನು, ಗೆಡ್ಡೆ ಗೆಣಸುಗಳನ್ನು ಸುಟ್ಟು ಇಲ್ಲವೇ ಬೇಯಿಸಿಕೊಂಡು ತಿನ್ನುವುದನ್ನು ಪ್ರಾರಂಭಿಸಿದನು. ಮನುಷ್ಯ ತಾನು ನೆಲೆನಿಂತ ಪರಿಸರದಲ್ಲಿ ನೈಸರ್ಗಿಕವಾಗಿ ದೊರೆಯುವ ಆಹಾರ ಪದಾರ್ಥಗಳನ್ನೇ ಸೇವಿಸುತ್ತಾ ಅವನ್ನೇ ತನ್ನ ಆಹಾರ ಪದ್ಧತಿಯಾಗಿ ರೂಢಿಸಿಕೊಂಡನು. ಹೀಗೆ ಮೂಲತಃ ಕಾಡುವಾಸಿಗಳಾಗಿ ಅಲೆಮಾರಿ ಜೀವನದಿಂದ ನೆಲೆನಿಂತು ಹಟ್ಟಿಯಲ್ಲಿ ನೆಲೆಸಿರುವ ಬೇಡರು ತಮ್ಮದೇ ಆದ ಸಂಸ್ಕೃತಿ, ಆಹಾರ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ.

**ಆಹಾರ ಸಂಗ್ರಹಣೆ ಮತ್ತು ಸಂಸ್ಕರಣೆಯ ವಿಧಾನ**

ಮೂಲತಃ ಕಾಡುವಾಸಿಗಳಾಗಿದ್ದ ಇವರು ಆದಿಕಾಲದಿಂದಲೂ ಕಾಡಿನಲ್ಲಿ ವಾಸಿಸುತ್ತಾ ಕಾಡಿನ ಪ್ರಾಣಿ–ಪಕ್ಷಿಗಳನ್ನು ಬೇಟೆಯಾಡುತ್ತಾ ಅವುಗಳ ಮಾಂಸ ಹಾಗೂ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ಅವುಗಳನ್ನು ಸೇವಿಸುತ್ತಾ ತನ್ನ ಆಹಾರ ಪದ್ಧತಿಯಾಗಿ ರೂಢಿಸಿಕೊಂಡರು. ಇವರು ಪರಂಪರೆಯಿಂದಲೂ ತಮಗೆ ಹೆಚ್ಚಾಗಿ ದೊರೆತ ಮಾಂಸ ಅಥವಾ ಬೇರೆ ಆಹಾರ ಪದಾರ್ಥಗಳನ್ನು ಸಂಸ್ಕರಿಸಿ ಬಳಸುತ್ತಿರುವ ಜ್ಞಾನ ಇಂದಿನ ಆಧುನಿಕ ತಂತ್ರಜ್ಞಾನವನ್ನೂ ನಾಚಿಸುವಂತಹದ್ದು.

ಮಾಂಸವನ್ನು ಸಂಸ್ಕರಿಸುವ ಪಾರಂಪರಿಕ ಜ್ಞಾನ: ಮಾಂಸಾಹಾರ ಅತ್ಯಂತ ಪ್ರಾಚೀನ ಆಹಾರ ಪದ್ಧತಿಯಾಗಿದೆ ಎಂಬುದನ್ನು "ಪ್ರಾಚೀನ ಕನ್ನಡ ಸಾಹಿತ್ಯಗಳಲ್ಲಿ ಬರುವ ಉಲ್ಲೇಖಗಳಿಂದ ಮನಗಾಣಬಹುದು ಪಂಪನಲ್ಲಿ ಚಾಕಣ ಎಂದು ಮಾಂಸದ ಹುರಿದ ಅಡುಗೆಯನ್ನು ಹೆಸರಿಸಿದೆ"[೨೮]. ಅಂದರೆ ಮಾಂಸಾಹಾರವು ಸಾವಿರಾರು ವರ್ಷಗಳಿಂದ ಉಳಿದು ಬಂದ ಆಹಾರ ಪದ್ಧತಿಯಾಗಿದೆ ಪ್ರಾಚೀನ ಕಾಲದಿಂದಲೂ ಮಾಂಸಾಹಾರಿಗಳಾದ ಬೇಡರು ಕಾಡು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ಹಂಚಿಕೊಂಡು ಸೇವಿಸುತ್ತಿದ್ದರು. ಕೆಲವೊಂದು ವೇಳೆ ದೊಡ್ಡ ದೊಡ್ಡ ಪ್ರಾಣಿಗಳನ್ನು ಬೇಟೆಯಾಡಿದಾಗ ಅದರ ಮಾಂಸ ಎಲ್ಲರೂ ಸೇವಿಸಿ ಉಳಿದ ಮಾಂಸವನ್ನು ಬಿಸಾಡದೇ ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ಅರಿಶಿಣ ಬೆರೆಸಿ ಚೆನ್ನಾಗಿ ಬಿಸಿಲಿನಲ್ಲಿ ಒಣಗಿಸಿ ಬಿಳಿ ಬಟ್ಟೆಯಲ್ಲಿ ಸಂಗ್ರಹಿಸಿ ಕಟ್ಟಿ ಇಡುತ್ತಿದ್ದರು. ಹಟ್ಟಿಯ ಬೇಡರು ಈಗಲೂ ಸಹ ಮಾಂಸವನ್ನು ಹೀಗೆಯೇ ಸಂಗ್ರಹಿಸಿ ಸಂಸ್ಕರಿಸುತ್ತಾರೆ. ಹೀಗೆ ಒಣಗಿಸಿದ ಮಾಂಸವನ್ನು ತಮಗೆ ಅಗತ್ಯ ಬಂದಾಗ ಬೇಯಿಸಿಕೊಂಡು ಇಲ್ಲವೇ ಸುಟ್ಟುಕೊಂಡು ತಿನ್ನುತ್ತಾರೆ. ಇಂತಹ ಒಣಗಿದ ಮಾಂಸವನ್ನು ಇವರು 'ಮುರಿಗೆ'(ಕರಬಾಡು) ಎನ್ನುತ್ತಾರೆ. ಇದರ ಸಾರನ್ನು ಮುರಿಗೆ ಸಾರು ಎನ್ನುತ್ತಾರೆ. ಬುಡಕಟ್ಟುಗಳ ಇಂತಹ ಜ್ಞಾನವನ್ನು ಬಳಸಿಕೊಂಡೇ ಇಂದಿನ ಡ್ರೈ ಫುಡ್, ಕೆ ಎಫ್ ಸಿ ಚಿಕನ್ ನಂತಹ ಪ್ಯಾಕೆಟ್ ಫುಡ್‌ಗಳು ಬಳಕೆಗೆ ಬಂದಿರುವುದು ಎನ್ನಬಹುದು.

ಸಣಬೆ ಸೊಪ್ಪು ಮಳೆಗಾಲದಲ್ಲಿ ನೆಲಗಡೆಲೆ ಬೆಳೆಯಲ್ಲಿ ಒಂದೋ ಅಥವಾ ಎರಡೋ ಸಾಲು ಸಣಬೆ ಸೊಪ್ಪನ್ನು ಬೆಳೆಯುತ್ತಾರೆ. ಈ ಸೊಪ್ಪನ್ನು ಇವರು ಅಲಸಂದೆ ಅಥವಾ ನೆಲಗಡಲೆ ಕಾಳಿನೊಂದಿಗೆ ಬೇಯಿಸಿ ಅದರ ಬೆಂದ ನೀರಿನಲ್ಲಿ ಮೆಣಸಿನಕಾಯಿ, ಉಪ್ಪು, ಬೆಳ್ಳುಳ್ಳಿ ಕಿವುಚಿ ಸಾರಿನ ರೀತಿ ಮಾಡುತ್ತಾರೆ ಈ ಸಾರನ್ನು ಜನಪದರ ಮಾತಿನಲ್ಲಿ 'ಉದುಕ' ಎನ್ನುತ್ತಾರೆ. ಉದುಕದ ಜೊತೆ ಜೋಳದ ಅಥವಾ ರಾಗಿಯ ಮುದ್ದೆಯನ್ನು ಊಟಮಾಡುತ್ತಾರೆ. ಈ ಸೊಪ್ಪು ಮಳೆಗಾಲದಲ್ಲಿ ಮಾತ್ರ ದೊರೆಯುವುದರಿಂದ ಇದನ್ನು ಸಂಗ್ರಹಿಸಿ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಬಟ್ಟೆಯಲ್ಲಿ ಕಟ್ಟಿ ಇಟ್ಟಿರುತ್ತಾರೆ. ಇದನ್ನು ತಮಗೆ ಬೇಕಾದಾಗ ಅಡುಗೆ ಮಾಡಿಕೊಂಡು ಸೇವಿಸುತ್ತಾರೆ. ಸಣಬೆಸೊಪ್ಪು ಇವರಿಗೆ ತುಂಬಾ ಇಷ್ಟ.

**ಗೀಬದ ಹಾಲು**

ಹಸು ಅಥವಾ ಎಮ್ಮೆ ಕರುಹಾಕಿದರೆ ಅದರ ಗೀಬದ ಹಾಲನ್ನು ಗಿಣ್ಣು(ಗಿಣ್ಣ) ಮಾಡಿಕೊಂಡು ಸೇವಿಸುತ್ತಾರೆ. ಗಿಣ್ಣು ಮಾಡುವ ಕ್ರಮವೆಂದರೆ ಗೀಬದ ಹಾಲಿಗೆ ಬೆಲ್ಲದ ಪುಡಿ, ಏಲಕ್ಕಿ ಪುಡಿ ಸೇರಿಸಿ ಒಂದು ಪಾತ್ರೆಯಲ್ಲಿ ಅರ್ಧದಷ್ಟು ನೀರನ್ನು ಹಾಕಿ ಅದರಲ್ಲಿ ಮೂರು ಸಣ್ಣಕಲ್ಲುಗಳನ್ನು ಇಟ್ಟು ಆ ಕಲ್ಲುಗಳ ಮೇಲೆ ಗೀಬದ ಹಾಲನ್ನು ಹಾಕಿದ ಸಣ್ಣ ಪಾತ್ರೆಯನ್ನು ಇಟ್ಟು ಮುಚ್ಚಳ ಮುಚ್ಚಿ ಹಾವಿಯಲ್ಲಿ ಬೇಯಿಸಿದರೆ ಗಿಣ್ಣವಾಗುತ್ತದೆ. ಈ ಹಾಲನ್ನು ಸಂಸ್ಕರಿಸುವ ವಿಧಾನವೆಂದರೆ ಗೀಬದ ಹಾಲಿನಲ್ಲಿ ಬಿಳಿ ಬಟ್ಟೆಯನ್ನು ಅದ್ದಿ ಪ್ರತಿದಿನ ಒಣಗಿಸುತ್ತಾರೆ. ತಮಗೆ ಬೇಕಾದಾಗ ಆ ಬಟ್ಟೆಯನ್ನು ಹಾಲಿನಲ್ಲಿ ಅದ್ದಿ ಅದರಿಂದ ಗಿಣ್ಣು ಮಾಡಿಕೊಂಡು ತಿನ್ನುತ್ತಾರೆ. ಗಿಣ್ಣು ಮಕ್ಕಳಿಗೆ ತುಂಬಾ ಇಷ್ಟವಾದ ಸಿಹಿ ತಿನಿಸಾಗಿದೆ.

**ಬುಡುಮೇಕಾಯಿ**

ಕಾಡಿನಲ್ಲಿ, ಹೊಲಗದ್ದೆಗಳಲ್ಲಿ ಸಿಗುವ ಒಂದು ಬಗೆಯ ಸೌತೇಕಾಯಿ ಜಾತಿಯ ಕಾಯಿ ಎನ್ನಬಹುದು. ಇದು ಸ್ವಲ್ಪ ವಿಷವಿರುತ್ತದೆ, ಹಟ್ಟಿಯ ಜನರು ಈ ಕಾಯಿಯನ್ನು ಬಳ್ಳಿಯಿಂದ ಬಿಡಿಸಿಕೊಂಡು ತಂದು ಸಣ್ಣ ಸಣ್ಣ ಹೋಳುಗಳಾಗಿ ಹೆಚ್ಚಿ ಉಪ್ಪು ನೀರಿನಲ್ಲಿ ನೆನಸಿ ಬಿಸಿಲಿಗೆ ಒಣಗಿಸಿ ಬಟ್ಟೆಯಲ್ಲಿ ಕಟ್ಟಿ ಇಡುತ್ತಾರೆ. ಹಬ್ಬ ಹರಿದಿನಗಳಲ್ಲಿ ಸಿಹಿ ಊಟದ ಜೊತೆ ಇವನ್ನು ಎಣ್ಣೆಯಲ್ಲಿ ಕರಿದು ಅಥವಾ ಹಾಗೆಯೇ ಉರಿದು ಉಪ್ಪಿನಕಾಯಿಯ ರೀತಿ ನೆಂಚಿಕೆಗೆ ಬಳಸುತ್ತಾರೆ.

**ಅಕ್ಕಡಿ ಕಾಳುಗಳು/ಸಾರಿನ ಕಾಳುಗಳು**

ತಮ್ಮ ಹೊಲಗಳಲ್ಲಿ ಬೆಳೆದ ಸಾರಿನ ಕಾಳುಗಳಾದ ತೊಗರಿ, ಹಲಸಂದೆ, ಮಡಿಕೆಕಾಳು ಇತ್ಯಾದಿ ಕಾಳುಗಳನ್ನು ೨–೩ ವರ್ಷಗಳ ಕಾಲ ಬಳಸಲು ಆ ಕಾಳುಗಳಿಗೆ ಹುಳು ಬೀಳದಿರಲೆಂದು ಇವರು ಕಾಳುಗಳಿಗೆ ಕೆಮ್ಮಣ್ಣು ಕಲಸಿ ಒಣಗಿಸಿ ಅಡಕಲಿಸೋರೆಯಲ್ಲಿ ಹಾಕಿ ಸಂಗ್ರಹಿಸುತ್ತಾರೆ. ಇಂತಹ ಕಾಳುಗಳನ್ನು ಅಗತ್ಯವಾದಾಗಲೆಲ್ಲಾ ಬಳಸುತ್ತಾರೆ, ಮತ್ತು ಮುಂದಿನ ಬೆಳೆಗೆ ಇವೇ ಕಾಳನ್ನು ಬಿತ್ತನೆ ಮಾಡಲು ಬಳಸುತ್ತಾರೆ. ಇಂದಿಗೂ ಸಹ ಬೇಡರು ಇದೇ ರೀತಿಯಾಗಿ ಅಕ್ಕಡಿ ಕಾಳುಗಳನ್ನು ಸಂಸ್ಕರಿಸುವ ವಿಧಾನ ಕಂಡು ಬರುತ್ತದೆ.

**ಮಜ್ಜಿಗೆ ಮೆಣಸಿನಕಾಯಿ**

ಮಜ್ಜಿಗೆ ಮೆಣಸಿನ ಕಾಯಿಯನ್ನು ಬೇಡರು ತಮ್ಮ ಹಬ್ಬದ ಊಟದಲ್ಲಿ ನೆಂಚಿಕೆಯಾಗಿ ತುಂಬಾ ಇಷ್ಟಪಟ್ಟು ಸೇವಿಸುತ್ತಾರೆ. ಮೆಣಸಿನಕಾಯಿಯನ್ನು ಸೀಳಿ ಮಜ್ಜಿಗೆಯಲ್ಲಿ ರಾತ್ರಿಯೆಲ್ಲಾ ನೆನೆಹಾಕಿ ಹಗಲು ಹೊತ್ತು ಬಿಸಿಲಿಗೆ ಒಣಗಿಸುತ್ತಾರೆ. ಇದೇ ರೀತಿ ೫–೬ ದಿನ ಮಾಡಿ ನಂತರ ಅವನ್ನು ಡಬ್ಬಿಯಲ್ಲಿ ಶೇಖರಿಸುತ್ತಾರೆ, ಹಬ್ಬದ ಸಂದರ್ಭದಲ್ಲಿ ಇವನ್ನು ಎಣ್ಣೆಯಲ್ಲಿ ಕರಿದು ನೆಂಚಿಕೆಯಾಗಿ ಊಟಕ್ಕೆ ಬಳಸುತ್ತಾರೆ. ಹೀಗೆ ಅನೇಕ ಆಹಾರ ಪದಾರ್ಥಗಳನ್ನು ಸಂಗ್ರಹಿಸಿ ಸಂಸ್ಕರಿಸುವ ಇವರ

ಜ್ಞಾನವು ಆಧುನಿಕ ತಂತ್ರಜ್ಞಾನಕ್ಕೆ ಮಾದರಿಯಾಗಿದೆ ಎನ್ನಬಹುದು. ಹೀಗೆ ಕೆಲವೇ ಋತುಮಾನದಲ್ಲಿ ದೊರೆಯುವ ಅನೇಕ ಆಹಾರ ಪದಾರ್ಥಗಳನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ಬಳಸಲು ಇವರು ಸಂಸ್ಕರಿಸಿ ಇಟ್ಟುಕೊಳ್ಳುವುದನ್ನು ನೋಡಬಹುದು. ಅಲ್ಲದೆ ಇವರಲ್ಲಿ ಆಹಾರಕ್ಕೆ ಸಂಬಂಧಿಸಿದಂತೆ ಕೆಲವು ನಂಬಿಕೆಗಳಿವೆ.

**ಊಟಕ್ಕೆ ಸಂಬಂಧಿಸಿದ ನಂಬಿಕೆಗಳು**

ಇವರು ಊಟ ಮಾಡುವಾಗ ತಲೆಗೆ ಟೋಪಿ ಅಥವಾ ಟವಲ್ ಇಲ್ಲವೆ ರುಮಾಲು ಧರಿಸಬಾರದು ಎನ್ನುತ್ತಾರೆ. ಊಟಕ್ಕೆ ಮೊದಲು ಒಂದು ತುತ್ತು ತಟ್ಟೆಯಿಂದ ಹೊರಗೆ ಇಟ್ಟು ಊಟವಾದ ಬಳಿಕ ಅದನ್ನು ತಮ್ಮ ಸಾಕು ದನಗಳಿಗೆ ಹಾಕುತ್ತಾರೆ. ತಮ್ಮ ಕೃಷಿ ಕೆಲಸಕ್ಕೆ ನೆರವಾದ ರಾಸುಗಳಿಗೆ ತಾವು ಸೇವಿಸುವ ಆಹಾರದ ಸ್ವಲ್ಪ ಪಾಲನ್ನು ಅರ್ಪಿಸುವ ಕೃತಜ್ಞತಾ ಭಾವನೆಯನ್ನು ಈ ರೂಢಿಯಲ್ಲಿ ಗಮನಿಸಬಹುದು. ಬೇಡರ ಹಿರಿಯರು ಹೇಳುವಂತೆ ಹಿಂದೆ ಇವರು ಕುಕ್ಕುರುಗಾಲಿನಲ್ಲಿ ಕುಳಿತು ಊಟಮಾಡುತ್ತಿದ್ದರು. ಈಗ ಈ ಪದ್ಧತಿಯಲ್ಲಿ ಬದಲಾವಣೆಯಾಗಿದೆ. ಹಿಂದಿನವರು ಕುಕ್ಕುರುಗಾಲಿನಲ್ಲಿ ಕುಳಿತು ಊಟಮಾಡುತ್ತಿದ್ದುದರ ವೈಜ್ಞಾನಿಕ ಉಪಯೋಗವೆಂದರೆ ಜೀರ್ಣಕ್ರಿಯೆ ಚೆನ್ನಾಗಿ ಆಗುತ್ತದೆ ಅಲ್ಲದೆ ಹೊಟ್ಟೆ (ಬೊಜ್ಜು) ಬರುವುದಿಲ್ಲ ಹೀಗೆ ಕುಕ್ಕುರುಗಾಲಿನಲ್ಲಿ ಕುಳಿತು ಊಟ ಮಾಡುವುದನ್ನು ಇಂದು ಇವರ ಹಬ್ಬ ಆಚರಣೆಗಳಲ್ಲಿ ಸಾಮೂಹಿಕ ಭೋಜನ ಮಾಡುವಾಗ ಮಾತ್ರ ಗಮನಿಸಬಹುದು. ಇವರಲ್ಲಿ ರಾತ್ರಿ ಹೊತ್ತು ಊಟವಾದ ಬಳಿಕ ಒಂದು ಅಗುಳನ್ನಾದರೂ ಅಥವಾ ಸ್ವಲ್ಪ ಮುದ್ದೆಯನ್ನಾದರೂ ಪಾತ್ರೆಯಲ್ಲಿ ಉಳಿಸಬೇಕು ಇಲ್ಲವಾದರೆ ಲಕ್ಷ್ಮಿ ಬರಿದಾದ ಪಾತ್ರೆಯನ್ನು ನೋಡಿ ಹೊರಟುಹೋಗುತ್ತಾಳೆ ಎಂಬುದು ಇವರ ನಂಬಿಕೆ. ಈ ಹಿಂದೆ ಯಾವುದೇ ವಾಹನದ ವ್ಯವಸ್ಥೆ, ದೂರವಾಣಿಯ ಸೌಲಭ್ಯವಿಲ್ಲದ ಕಾಲದಲ್ಲಿ ದಿಢೀರನೆ ರಾತ್ರಿ ಹೊತ್ತು ಯಾರಾದರೂ ಬಂಧುಗಳು ಮನೆಗೆ ಬಂದರೆ ಅವರಿಗೆ ಊಟಕ್ಕೆ ಇರಲಿ ಎಂಬ ಆಶಯದಿಂದ ಈ ಪದ್ಧತಿ ರೂಢಿಸಿಕೊಂಡಿರಬಹುದು. ಆದರೆ ಈ ಪದ್ಧತಿ ಇಂದಿಗೂ ಇವರಲ್ಲಿ ರೂಢಿಯಲ್ಲಿದೆ.

ಈ ಮೇಲೆ ತಿಳಿಸಿದ ಆಹಾರ ಕ್ರಮಗಳಲ್ಲದೆ ಹಟ್ಟಿಯ ಬೇಡರು ಸೇವಿಸುವ ಆಹಾರವನ್ನು ಸಸ್ಯಾಹಾರ ಮತ್ತು ಮಾಂಸಾಹಾರಗಳೆಂದು ಪ್ರಮುಖವಾಗಿ ಎರಡು ಬಗೆಗಳಲ್ಲಿ ನೋಡಬಹುದು.

**೧. ಸಸ್ಯಾಹಾರ**

ಹಟ್ಟಿಯ ಎಲ್ಲಾ ಜನಪದರು ಸಸ್ಯಾಹಾರಕ್ಕೆ ಬಹಳ ಮಹತ್ವ ಕೊಡುತ್ತಾರೆ. ಅವರು ಸೇವಿಸುವ ಆಹಾರ ಧಾನ್ಯಗಳು ರಾಗಿ, ಜೋಳ, ಸಜ್ಜೆ, ನವಣೆ, ಅಕ್ಕಿ, ನೆಲಗಡಲೆ, ಎಳ್ಳು, ತೊಗರಿ, ಅಲಸಂದಿ, ಹೆಸರು, ನವಣೆ, ಅವರೆ ಮೊದಲಾದ ಆಹಾರ ಧಾನ್ಯಗಳನ್ನು ಬಳಸುತ್ತಾರೆ. ಮೆಣಸಿನಕಾಯಿ, ಬದನೇಕಾಯಿ, ಹೀರೇಕಾಯಿ, ಬೆಂಡೇಕಾಯಿ, ಕುಂಬಳಕಾಯಿ, ಬುಡುಮೆಕಾಯಿ, ಈರುಳ್ಳಿ, ಜವಳೀಕಾಯಿ, ನುಗ್ಗೇಕಾಯಿ, ಸೋರೇಕಾಯಿ, ಮೊದಲಾದ ತರಕಾರಿಗಳನ್ನು ಬಳಸುತ್ತಾರೆ. ಅತಿ ಹೆಚ್ಚು ಪೋಷಕಾಂಶಗಳನ್ನು ಒದಗಿಸುವುದರಲ್ಲಿ ಸೊಪ್ಪಿಗೆ ಸರಿಸಾಟಿಯಾದ ತರಕಾರಿ ಇನ್ನೊಂದಿಲ್ಲ

ಎನ್ನಬಹುದು. ಆಯಾ ಋತುಮಾನದಲ್ಲಿ ಪ್ರಕೃತಿಯಲ್ಲಿ ನೈಸರ್ಗಿಕವಾಗಿ ದೊರೆಯುವ ಸೊಪ್ಪುಗಳು ಇವರಿಗೆ ಅಧಿಕ ಪೋಷಕಾಂಶಗಳನ್ನು ಒದಗಿಸುವಂತಹವುಗಳಾದ್ದರಿಂದ ಇವರು ಹೆಚ್ಚಾಗಿ ಕಾಡುಸೊಪ್ಪುಗಳನ್ನು ಸೇವಿಸುತ್ತಾರೆ.

ಇವರು ಸೇವಿಸುವ ಸೊಪ್ಪುಗಳೆಂದರೆ ಕಾಡುಸೊಪ್ಪುಗಳಾದ ಆಲೇಸೊಪ್ಪು, ಮುಂಗಾರಿ ಬಳ್ಳಿಸೊಪ್ಪು, ಹಂಸೆಸೊಪ್ಪು, ಗೊರಜಗನಸೊಪ್ಪು, ಸಣಬೆಸೊಪ್ಪು, ರಾಜಗಿರಿಸೊಪ್ಪು, ಉಣಸೇ ಚಿಗುರಿನ ಸೊಪ್ಪು, ಕೋಲನ್ನೆ ಸೊಪ್ಪು, ಸೀಗೇಸೊಪ್ಪು ಮುಂತಾದ ಸೊಪ್ಪುಗಳನ್ನು ಆಹಾರಕ್ಕೆ ಬಳಸುತ್ತಾರೆ. ಇವರು ಪುರಾತನ ಕಾಲದಿಂದಲೂ ಕಾಡುಸೊಪ್ಪುಗಳನ್ನು ಸೇವಿಸುತ್ತಾ ಬಂದಿರುವುದನ್ನು ಇವರ ಪುರಾಣ ಕಥೆಗಳಿಂದ ತಿಳಿದು ಬರುತ್ತದೆ. ಬೇಡರ ಪುರಾಣ ಕಥೆಗಳಲ್ಲಿ ಒಂದಾದ ಸಾಂಸ್ಕೃತಿಕ ನಾಯಕ ಕೊಳಗಲಿ ಬೊಮ್ಮನ ಕಥೆಯ ಒಂದು ಸನ್ನಿವೇಶದಲ್ಲಿ ಕೊಳಗಲಿ ಬೊಮ್ಮನ ತಂಗಿ ಕರಿಸೀರೆ ಉಟ್ಟು ಸೀಗೇ ಸೊಪ್ಪು ತರಲು ಕಾಡಿಗೆ ಹೋದಾಗ ಅದೇ ಕಾಡಿಗೆ ಬೇಟೆಗೆ ಬಂದಿದ್ದ ಅವಳ ಅಣ್ಣ ಸೊಪ್ಪು ಕೀಳುತ್ತಿದ್ದ ಅವಳನ್ನು ನೋಡದೆಯೇ ಶಬ್ದಕೇಳಿ ಕಪ್ಪು ಬಟ್ಟೆನೋಡಿ ಯಾವುದೋ ಕಾಡುಪ್ರಾಣಿಯೆಂದು ಬಾವಿಸಿ ಬಾಣ ಹೊಡೆದು ಸಾಯಿಸುತ್ತಾನೆ. ಇಂತಹ ಪುರಾಣ ಕಥೆಗಳಲ್ಲಿಯೇ ಈ ಕಾಡು ಸೊಪ್ಪುಗಳು, ಕಾಡುಪ್ರಾಣಿಯ ಬೇಟೆಯ ಬಗ್ಗೆ ಪ್ರಸ್ತಾಪಿಸಿರುವುದರಿಂದ ಕಾಡುಸೊಪ್ಪುಗಳು ಮತ್ತು ಮಾಂಸಾಹಾರ ಈ ಮ್ಯಾಸಬೇಡರಿಗೆ ಎಷ್ಟು ಪಾರಂಪರಿಕ ಆಹಾರ ಎಂಬುದು ತಿಳಿದುಬರುತ್ತದೆ.

**೨. ಮಾಂಸಾಹಾರ**

ಮೂಲತಃ ಮಾಂಸಾಹಾರಿಗಳಾದ ಬೇಡರು ಹಿಂದೆ ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ತಿನ್ನುತ್ತಿದ್ದರು, ಇಂದು ಅರಣ್ಯನೀತಿ ಕಾಯಿದೆಯಿಂದ ಇವರ ಬೇಟೆಪರಂಪರೆ ಕೇವಲ ಆಚರಣೆಯಲ್ಲಿ ಉಳಿದಿದೆ. ಇವರು ಕುರಿ, ಮೇಕೆ, ಮೊಲ, ಜಿಂಕೆ, ಉಡ, ಎಡಿ, ಅಡವಿ ಇಲಿ, ಪಕ್ಷಿಗಳಾದ ಕೌಜುಗ, ಪಾರಿವಾಳ, ಗೊರವಂಕ, ಬೆಳವ ಮೊದಲಾದ ಪ್ರಾಣಿಪಕ್ಷಿಗಳನ್ನು ತಿನ್ನುತ್ತಾರೆ, ಆದರೆ ಕೋಳಿಮಾಂಸ ಇವರು ಸೇವಿಸುವುದಿಲ್ಲ. ಪಾರ್ಶ್ವ ರೋಗಕ್ಕೆ ಇವರು ಪಾರಿವಾಳದ ಮಾಂಸವನ್ನು ಸೇವಿಸುತ್ತಾರೆ. ಅಲ್ಲದೆ ಅದರ ರಕ್ತವನ್ನು ಲಕ್ವ ಹೊಡೆದ ಕೈ ಕಾಲುಗಳಿಗೆ ಹಚ್ಚುತ್ತಾರೆ. ಇವರು ತಮ್ಮ ಮನೆಯ ಹೊರಗೆ ಪ್ರತ್ಯೇಕವಾದ ಸ್ಥಳದಲ್ಲಿ ಮಾತ್ರ ಮಾಂಸದ ಅಡುಗೆ ಮಾಡುತ್ತಾರೆ ಅಡುಗೆ ಮಾಡಲು ಪ್ರತ್ಯೇಕ ತಟ್ಟೆ, ಪಾತ್ರೆ, ಚೊಂಬು ಇಟ್ಟಿರುತ್ತಾರೆ. ಇದು ಕಂಪಳದೇವರ ಹಟ್ಟಿಯಲ್ಲಿ ಮಾತ್ರವಲ್ಲದೆ ಚಿತ್ರದುರ್ಗ ಜಿಲ್ಲೆಯ ಎಲ್ಲಾ ಬೇಡರ ಹಟ್ಟಿಗಳಲ್ಲಿ ಕಂಡುಬರುವ ಪದ್ಧತಿಯಾಗಿದೆ. ಇವರ ಪಾರಂಪರಿಕ ಆಹಾರ ಪದ್ಧತಿಯನ್ನು ದಿನನಿತ್ಯದ ಆಹಾರ ಪದ್ಧತಿ, ಹಬ್ಬಗಳು ಮತ್ತು ಆಹಾರ ಪದ್ಧತಿ, ವಿಶೇಷ ಸಂದರ್ಭದಲ್ಲಿನ ಆಹಾರಗಳು ಎಂದು ವಿಂಗಡಿಸಿ ನೋಡಬಹುದು.

**ದಿನನಿತ್ಯದ ಆಹಾರಪದ್ಧತಿ**

'ಮುದ್ದೆಯಂತಹ ಊಟವಿಲ್ಲ ಸಿದ್ದಪ್ಪನಂಥ ದೇವರಿಲ್ಲ' ಎಂಬ ಗಾದೆ ಮಾತು ಹಟ್ಟಿಯ ಜನರಲ್ಲಿ ಬಹಳ ಪ್ರಚಲಿತವಿದೆ, ಈ ಪ್ರದೇಶದಲ್ಲಿ ರಾಗಿಯನ್ನು ಹೆಚ್ಚಾಗಿ ಬೆಳೆಯುತ್ತಿರುವುದರಿಂದ ರಾಗಿ

ಮುದ್ದೆ ಮತ್ತು ಹುರುಳಿಕಾಳಿನ ಸಾರು ಅಥವಾ ಚಟ್ನಿ ಇವರ ನಿತ್ಯದ ಆಹಾರ ಪದ್ಧತಿಯಾಗಿದೆ. ಈ ಹಿಂದೆ ನಮ್ಮ ಜನಪದರು ಮುದ್ದೆ, ರೊಟ್ಟಿ, ಕಡುಬುಗಳನ್ನು ಮಾಡಿಕೊಂಡು ಊಟಮಾಡುತ್ತಿದ್ದರು. ರೊಟ್ಟಿಮಾಡಲು ರಾಗಿ, ಜೋಳ ಅಥವಾ ಸಜ್ಜೆಯನ್ನು ಬೀಸುವ ಕಲ್ಲಿನಲ್ಲಿ ಬೀಸಿ ಆ ಹಿಟ್ಟನ್ನು ಜಗಿಮಾಡಿಕೊಂಡು ರೊಟ್ಟಿಮಾಡುತ್ತಿದ್ದರು. ಮುದ್ದೆಮಾಡಲು ತಮಗೆ ಬೇಕಾದಷ್ಟು ನೀರನ್ನು ಪಾತ್ರೆಯಲ್ಲಿ ಕಾಯಿಸಿ ಕಾದ ನೀರಿನಲ್ಲಿ ಹಿಟ್ಟನ್ನು ಹಾಕಿ ಮುದ್ದೆಕೋಲಿನಿಂದ ತಿರುವಿ ಹದಮಾಡಿ ನಂತರ ಮುದ್ದೆಯನ್ನು ಉಂಡೆ ಕಟ್ಟುತ್ತಾರೆ. ಇತ್ತೀಚೆಗೆ ಆಧುನಿಕತೆಗೆ ಒಳಗಾದ ಹಟ್ಟಿಯಲ್ಲಿ ಬೀಸುವ ಕಲ್ಲಿನ ಸ್ಥಾನದಲ್ಲಿ ಹಿಟ್ಟಿನ ಗಿರಣಿಗಳು ಬಂದು ಕೂತಿವೆ. ಇವರು ದಿನನಿತ್ಯ ಆಹಾರಕ್ಕೆ ಬಳಸುವ ಧಾನ್ಯಗಳೆಂದರೆ ಜೋಳ, ರಾಗಿ, ಸಜ್ಜೆ, ನವಣೆ, ಗುರಾಳು, ತೊಗರಿ, ಅಲಸಂದೆ, ಹೆಸರುಕಾಳು, ಮಡಕೆಕಾಳು, ಹುರುಳಿಕಾಳು ಮುಂತಾದ ಧಾನ್ಯಗಳನ್ನು ನಿತ್ಯದ ಆಹಾರಕ್ಕೆ ಬಳಸುತ್ತಾರೆ. ಅಲ್ಲದೆ ಹಾಲು, ಮೊಸರು, ತುಪ್ಪ, ಮಜ್ಜಿಗೆಯನ್ನು ಊಟದಲ್ಲಿ ಹೆಚ್ಚು ಉಪಯೋಗಿಸುತ್ತಾರೆ.

**ಹಬ್ಬಗಳು ಮತ್ತು ಆಹಾರಪದ್ಧತಿ**

ಹಟ್ಟಿಯ ಜನಪದರು ಆಚರಿಸುವ ಹಬ್ಬಗಳಿಗೂ ಋತುಮಾನಗಳಿಗೂ ಸಂಬಂಧವಿರುವುದರಿಂದ ಇವರು ಹಬ್ಬಗಳಲ್ಲಿ ಮಾಡುವ ಅಡುಗೆಗಳು ಆಯಾ ಋತುಮಾನಕ್ಕೆ ಹೊಂದಿಕೊಂಡಿರುತ್ತವೆ. ದಿನನಿತ್ಯ ಮುದ್ದೆ, ಸಾರು, ಅನ್ನ, ರೊಟ್ಟಿ, ಚಟ್ನಿಯನ್ನೇ ತಿನ್ನುವ ಇವರು ಹಬ್ಬ ಹರಿದಿನಗಳಲ್ಲಿ ವಿಶೇಷ ಅಡುಗೆ ಮಾಡಿಕೊಂಡು ಊಟ ಮಾಡುತ್ತಾರೆ. ಬೇಡರು ಬೇರೆ ಬೇರೆ ಆಹಾರಸೇವನೆಯ ಮಹತ್ವವನ್ನು ಅರಿತವರಾಗಿದ್ದಾರೆ. ಇಂತಹ ಆಹಾರದ ಜ್ಞಾನವಿರುವ ಬೇಡರು ತಾವು ಆಚರಿಸುವ ಹಬ್ಬಗಳು ಮತ್ತು ಆ ಹಬ್ಬಗಳಲ್ಲಿ ಅವರು ಮಾಡುವ ಅಡುಗೆಗಳೂ ಸಹ ಬೇರೆ ಬೇರೆಯಾಗಿರುತ್ತವೆ. ಅಂತಹ ಆಹಾರಗಳು ಕೇವಲ ಬಾಯಿಸವಿಗೆ ಮಾತ್ರವಲ್ಲದೆ ತಮ್ಮ ಆರೋಗ್ಯಕ್ಕೂ ಸಹ ಪೂರಕವಾಗಿವೆ.

**ಯುಗಾದಿ ಹಬ್ಬದಲ್ಲಿನ ಆಹಾರ**

ಯುಗಾದಿಯು ಗ್ರಾಮೀಣ ರೈತರಿಗೆ ಅದರಲ್ಲೂ ಹಟ್ಟಿಯ ಮ್ಯಾಸಬೇಡರಿಗೆ ಬಹುದೊಡ್ಡ ಹಬ್ಬವಾಗಿದೆ. ಯುಗಾದಿ ಎಂದರೆ ಯುಗದ ಆದಿ, ಅಂದರೆ ವರ್ಷದ ಆರಂಭ ಎನ್ನಬಹುದು. ಗ್ರಾಮೀಣ ಕೃಷಿಕರು ತಮ್ಮ ಕೃಷಿ ಕೆಲಸವನ್ನು ಆರಂಭಿಸುವುದೇ ಈ ಹಬ್ಬದ ದಿನದಿಂದ. ಯುಗಾದಿ ಹಬ್ಬದಲ್ಲಿ ಇವರು ತಮ್ಮ ಪಾರಂಪರಿಕ ಆಹಾರ ಪದ್ಧತಿಯಾದ ಮಾಂಸಾಹಾರವನ್ನು ಪ್ರಾಚೀನ ಕಾಲದ ರೀತಿಯಲ್ಲಿಯೇ ಹಟ್ಟಿಯ ಎಲ್ಲಾ ಜನರು ಸೇರಿ ಬೇಟೆಗೆ ಹೋಗಿ ಹಂದಿ ಅಥವಾ ಬೇರೆ ಕಾಡುಪ್ರಾಣಿಗಳನ್ನು ಬೇಟೆಯಾಡಿ ಆ ಬೇಟೆಯನ್ನು ಎಲ್ಲರೂ ಹಂಚಿಕೊಂಡು ಅಡುಗೆಮಾಡಿ ಸೇವಿಸುತ್ತಾರೆ. ಈ ಹಬ್ಬದ ಮೊದಲ ದಿನವಾದ ಅಮವಾಸ್ಯೆಯ ದಿನ ಹಟ್ಟಿಯ ಎಲ್ಲಾ ಮನೆಗಳಲ್ಲೂ ಗೋಧಿ ಅಥವಾ ಅಕ್ಕಿಯ ದೋಸೆಯನ್ನು ಮಾಡಲಾಗುತ್ತದೆ, ಎರಡನೆಯ ದಿನ ಪಾಡ್ಯದಂದು ಬೇವು-ಬೆಲ್ಲ ಸೇವಿಸಿ ಅಂದು ಕರಿಗಡುಬು, ಅನ್ನ, ಸಾರು, ಅಪ್ಪಳ, ಸಂಡಿಗೆ ಮಜ್ಜಿಗೆ ಮೆಣಸಿನಕಾಯಿ ಅಡುಗೆ ಮಾಡಿ ಊಟಮಾಡುತ್ತಾರೆ. ಯುಗಾದಿಯ ಕೊನೆಯ ದಿನದಂದು ಕರಿ ಮಾಡುತ್ತಾರೆ. ಅಂದು ಮನೆಯಲ್ಲಿ ಸಾಕಿರುವ ಕುರಿ, ಮೇಕೆಯನ್ನು ಕೊಯ್ದು ಮಾಂಸದ ಅಡುಗೆ ಮಾಡಿ ಊಟಮಾಡುತ್ತಾರೆ.

### ನಾಗರ ಪಂಚಮಿ ಹಬ್ಬದ ಆಹಾರ

ನಾಗಾರಾಧಕರಾದ ಇವರಿಗೆ ನಾಗರ ಪಂಚಮಿಯು ಪ್ರಮುಖ ಹಬ್ಬವಾಗಿದೆ. ಬೇಡರ ಎಲ್ಲಾ ದೈವಗಳು ನಾಗರ ಹೆಡೆಯ ಮೂರ್ತಿಗಳೇ ಆಗಿದ್ದು ಹಿಂದಿನಿಂದಲೂ ಆ ಬೆಳ್ಳಿಯ ನಾಗರ ಹೆಡೆಗಳನ್ನೇ ಆರಾಧಿಸಿಕೊಂಡು ಬರುತ್ತಿದ್ದಾರೆ. ಮಳೆಗಾಲದಲ್ಲಿ ಮಾಡುವ ಈ ಹಬ್ಬದಲ್ಲಿ (ಆಗಸ್ಟ್) ಬೇಡರ ವಿಶೇಷ ಆಹಾರವೆಂದರೆ ಕಡ್ಲೆಉಂಡೆ, ಎಳ್ಳು ಚಿಗಳೆ, ಸಜ್ಜೆ ಮೊಳಕೆ ಇವುಗಳನ್ನು ಮಾಡುವ ವಿಧಾನವೆಂದರೆ ಎಳ್ಳು ಬೆಲ್ಲವನ್ನು ಸೇರಿಸಿ ಹೊರಳಲ್ಲಿ ಚೆನ್ನಾಗಿ ಕುಟ್ಟಿ ನಂತರ ಅದನ್ನು ಸಣ್ಣ ಸಣ್ಣ ಉಂಡೆಯಾಗಿ ಕಟ್ಟಿ ಎಳ್ಳುಚಿಗಳೆ ಮಾಡುತ್ತಾರೆ. ಹಬ್ಬಕ್ಕೆ ಎರಡು ದಿನ ಮುಂಚಿತವಾಗಿಯೇ ಸಜ್ಜೆಯನ್ನು ನೀರಿನಲ್ಲಿ ನೆನೆಸಿ ಒಂದು ಬಟ್ಟೆಯಲ್ಲಿ ಕಟ್ಟಿರುತ್ತಾರೆ. ಆ ಸಜ್ಜೆ ಹಬ್ಬದ ದಿನ ಮೊಳಕೆ ಬಂದಿರುತ್ತದೆ. ಸಜ್ಜೆ ಮೊಳಕೆ ಮತ್ತು ಎಳ್ಳುಚಿಗಳೆಯನ್ನು ಪಂಚಮಿ ಹಬ್ಬದಲ್ಲಿ ಮಾತ್ರ ವಿಶೇಷವಾಗಿ ತಿನ್ನುತ್ತಾರೆ. ಈ ಹಬ್ಬದಲ್ಲಿ ಮಾತ್ರ ಎಳ್ಳುಚಿಗಳೆ, ಸಜ್ಜೆಮಳಕೆ ತಿನ್ನುತ್ತಾರೆ. ಇವು ಜಿಗಿಯ ಅಂಶವಿರುವ ಆಹಾರವಾದ್ದರಿಂದ ರೈತಾಪಿ ಜನರಿಗೆ ಕೊಯ್ಲೆ ಕೆಲಸ ಮಾಡಲು ಸೊಂಟ ಗಟ್ಟಿಗೊಳ್ಳಲು ಸಜ್ಜೆ ಉಪಯುಕ್ತ ಆಹಾರವಾಗಿದೆ.

### ಕಾರಾಹುಣ್ಣಿಮೆಯಲ್ಲಿನ ಆಹಾರ

ಕಾರಹುಣ್ಣಿಮೆ ಹಬ್ಬವು ರಾಸುಗಳಿಗೆ ಸಂಬಂಧಿಸಿದ ಹಬ್ಬವಾದ್ದರಿಂದ ಎತ್ತುಗಳನ್ನು ಸಿಂಗರಿಸಿ ಪೂಜಿಸಿ ಅವಕ್ಕೆ ಪೌಷ್ಟಿಕ ಆಹಾರವಾದ ಹುರುಳಿ ನುಚ್ಚು, ಗುಗ್ಗರಿಯನ್ನು ತಿನ್ನಿಸಿ ತಾವು ಕರಿಗಡುಬು ಅನ್ನ, ಸಾರು ಊಟ ಮಾಡುತ್ತಾರೆ. ಈ ಹಬ್ಬದಲ್ಲಿ ತಾವೂ ಸಹ ಗುಗ್ಗರಿಯನ್ನು ಸೇವಿಸುತ್ತಾರೆ.

### ಗುಗ್ಗರಿ ಹಬ್ಬದಲ್ಲಿನ ಆಹಾರ

ಈ ಹಬ್ಬವೂ ಸಹ ಎತ್ತುಗಳಿಗೆ ಸಂಬಂಧಿಸಿದ ಹಬ್ಬವಾಗಿದ್ದು ಗುಗ್ಗರಿ ಹಬ್ಬದಲ್ಲಿ ಆ ವರ್ಷ ಬೆಳೆದ ಹುರುಳಿ ಅಥವಾ ಬೇರೆ ಗುಗ್ಗರಿ ಕಾಳುಗಳನ್ನು ಒಂದೆಡೆ ಸಂಗ್ರಹಿಸಿ ಬೇಯಿಸಿ ಎತ್ತುಗಳಿಗೆ, ದೇವರಿಗೆ ಗುಗ್ಗರಿ ಎಡೆ ಇಟ್ಟು ಎತ್ತುಗಳು ತಿಂದ ನಂತರ ತಾವೂ ಸೇವಿಸುತ್ತಾರೆ. ರಾಸುಗಳಿಗೆ ಹೆಚ್ಚಿನ ಪೌಷ್ಟಿಕಾಂಶ ನೀಡಿ ಶಕ್ತಿಯನ್ನು ಒದಗಿಸುವ ಹುರುಳಿಯನ್ನು ಈ ಹಿಂದೆ ದನಕರುಗಳಿಗಾಗಿಯೇ ಬೆಳೆಯುತ್ತಿದ್ದರು ಎನ್ನಬಹುದು. ಅಲ್ಲದೆ ತಮ್ಮ ಕೃಷಿ ಬದುಕಿಗೆ ನೆರವಾದ ರಾಸುಗಳಿಗೆ ತಾವು ಬೆಳೆದ ಬೆಳೆಯ ಮೊದಲ ಪಾಲನ್ನು ನೀಡುವ ಮೂಲಕ ಇವರ ಕೃತಜ್ಞತಾ ಭಾವನೆಯನ್ನು ಈ ಆಚರಣೆಯಲ್ಲಿ ಗಮನಿಸಬಹುದು. ಈ ಹಬ್ಬ ಮಾಡದೆ ತಾವು ಬೆಳೆದ ಆ ಗುಗ್ಗರಿ ಕಾಳುಗಳನ್ನು ಬೇಡರು ಊಟಕ್ಕೆ ಬಳಸುವುದಿಲ್ಲ. ರಾಸುಗಳಿಗೆ ಗುಗ್ಗರಿಯ ನೈವೇದ್ಯವಾದ ಮೇಲೆ ತಾವು ಗುಗ್ಗರಿಯನ್ನು ಸೇವಿಸುತ್ತಾರೆ.

### ಮಾರಮ್ಮನ ಹಬ್ಬದಲ್ಲಿನ ಆಹಾರ

ಭಾದ್ರಪದ ಮಾಸದಲ್ಲಿ ಪ್ರತಿ ಮಂಗಳವಾರ ಕರ್ನಾಟಕದಾದ್ಯಂತ ಯಾವುದಾದರೂ ಹಳ್ಳಿಗಳಲ್ಲಿ ಮಾರಮ್ಮನ ಹಬ್ಬ ಆಚರಿಸುತ್ತಾರೆ. ಈ ಹಟ್ಟಿಯಲ್ಲಿನ ಪ್ರತಿ ಮನೆಯವರು ಜನಸಂಖ್ಯೆಯ ಆಧಾರದ ಮೇಲೆ ಮನೆಗೊಂದು, ಎರಡರಂತೆ ಕುರಿ, ಮೇಕೆಯನ್ನು ಕೋಯ್ದು ಮಾಂಸದ ಅಡುಗೆ ಮಾಡಿ

ಊಟಮಾಡುತ್ತಾರೆ. ಹಬ್ಬದಲ್ಲಿ ಮಿಕ್ಕ ಮಾಂಸವನ್ನು ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿ ಚೆನ್ನಾಗಿ ಒಣಗಿಸಿ ಒಂದು ಬಟ್ಟೆಯಲ್ಲಿ ಸಂಗ್ರಹಿಸಿ ಇಟ್ಟಿರುತ್ತಾರೆ, ಆ ಒಣಗಿದ ಮಾಂಸವನ್ನು ಇವರು ಮುರಿಗೆ ಎನ್ನುತ್ತಾರೆ ಇದರ ಸಾರನ್ನು ಮುರಿಗೆ ಸಾರು ಎನ್ನುತ್ತಾರೆ. ಹಟ್ಟಿಯವರು ಪ್ರತಿನಿತ್ಯ ಸೇವಿಸುವುದು ಸಸ್ಯ ಆಹಾರವಾಗಿದ್ದರೂ ಹಬ್ಬ ಹರಿದಿನಗಳಲ್ಲಿ ಸಿಹಿ ಅಡುಗೆ, ಮಾಂಸದ ಅಡುಗೆಗಳನ್ನು ಊಟಮಾಡುತ್ತಾರೆ. ಅಲ್ಲದೆ ವಿಶೇಷ ಆಚರಣೆಗಳು ಅಂದರೆ ಮದುವೆ, ಋತುಮತಿ, ತಿಥಿ, ಹೆರಿಗೆ ಮುಂತಾದ ಸಂದರ್ಭಗಳಲ್ಲಿ ವಿಶಿಷ್ಟ ರೀತಿಯ ಆಹಾರವನ್ನು ಸೇವಿಸುತ್ತಾರೆ. ಇವರು ಯಾವ ಕಾಲಕ್ಕೆ ಯಾವ ಆಹಾರವನ್ನು ಸೇವಿಸಬೇಕು ಎಂಬುದನ್ನು ಅರಿತವರಾಗಿದ್ದಾರೆ. ಮಕ್ಕಳಿಂದ ಹಿಡಿದು ವಯಸ್ಸಾದವರವರೆಗೆ ಅವರವರ ವಯಸ್ಸಿಗೆ ಅನುಗುಣವಾಗಿ ಆಹಾರ ಸೇವಿಸುವುದು ಕಂಡುಬರುತ್ತದೆ. ಋತುಮತಿ, ಗರ್ಭಿಣಿ, ಬಾಣಂತಿಗೆ ಯಾವ ಯಾವ ಬಗೆಯ ಆಹಾರ ನೀಡಿದರೆ ಅವರು ಆರೋಗ್ಯದಿಂದ ಇರಲು ಸಾಧ್ಯ ಎಂಬುದನ್ನು ಅನುಭವದಿಂದ ಕಂಡುಕೊಂಡಿದ್ದಾರೆ.

**ನಾಮಕರಣ ಸಂದರ್ಭದಲ್ಲಿನ ಆಹಾರ**

ಬೇಡರ ಜೀವನಾವರ್ತಕ ಆಚರಣೆಗಳಲ್ಲಿ ಒಂದಾದ ನಾಮಕರಣ ಆಚರಣೆಯಲ್ಲಿ ಗುಗ್ಗರಿ ವಿಶೇಷ ಅಡುಗೆಯಾಗಿರುತ್ತದೆ. ಅಲ್ಲದೆ ಗೋಧಿ ಉಗ್ಗಿ ಅಥವಾ ಬೇರೆ ಯಾವುದೇ ಸಿಹಿ ಅಡುಗೆ ಮಾಡಿ ತಿನ್ನುತ್ತಾರೆ. ಈ ಹಿಂದೆ ಗೋಧಿಯನ್ನು ಕುಟ್ಟಿ ನುಚ್ಚುಮಾಡಿ ಅದರಲ್ಲಿ ಬೆಲ್ಲ ಹಾಕಿ ನೀರಿನಲ್ಲಿ ಬೇಯಿಸಿ ಹುಗ್ಗಿ ತಯಾರಿಸುತ್ತಿದ್ದರು. ಇಂದು ಆರ್ಥಿಕವಾಗಿ ಸಬಲರಾದವರು ಲಾಡು, ಜಿಲೇಬಿ, ಮುಂತಾದ ಸಿಹಿ ತಿನಿಸುಗಳನ್ನು ಮಾಡುತ್ತಾರೆ ಮತ್ತು ಮಗುವಿನ ಜವಳ ಅಥವಾ ಕೂದಲು ತೆಗೆಸುವಾಗ ಕಡ್ಡಾಯವಾಗಿ ಮಾಂಸದ ಅಡುಗೆ ಮಾಡುತ್ತಾರೆ.

**ಋತುಮತಿಗೆ ನೀಡುವ ಆಹಾರ**

ಇವರಲ್ಲಿ ಮೈನೆರೆದ ಹೆಣ್ಣನ್ನು ಸೂತಕ ಎಂದು ಭಾವಿಸಿ ಮನೆಯಿಂದ ಹೊರಗೆ ಗುಡಿಸಿಲಿನಲ್ಲಿ ಕೂಡಿಸುತ್ತಾರೆ. ಆ ಸಂದರ್ಭದಲ್ಲಿ ಋತುಸ್ರಾವವಾಗಿ ಅವಳು ನಿಶಕ್ತಳಾಗಿರುತ್ತಾಳೆ. ಆದ್ದರಿಂದ ಹನ್ನೊಂದು ದಿನ ಅವಳಿಂದ ಯಾವುದೇ ಕೆಲಸ ಮಾಡಿಸದೇ ಸಮುದಾಯದ ಪ್ರತಿಯೊಬ್ಬರು ತಮ್ಮ ಮನೆಯಿಂದ ನಿತ್ಯ ಅವಳಿಗೆ ಸಿಹಿ ಅಡುಗೆ ಅಥವಾ ಮಾಂಸದ ಅಡುಗೆ ಮಾಡಿ ತಂದು ಬಡಿಸುತ್ತಾರೆ. ಅಲ್ಲದೆ ನೆಂಟರು ಅವಳಿಗೆ ತಿನ್ನಲು ಒಸುಗೆ ಕಳುಹಿಸುತ್ತಾರೆ. ಒಸುಗೆ ಎಂದರೆ ಒಣಕೊಬ್ಬರಿ, ಉತ್ತುತ್ತಿಯನ್ನು ಸೇರಿಸಿ ಜೊತೆಗೆ ಕಲ್ಲುಸಕ್ಕರೆ ಸೇರಿಸಿ ಪುಡಿಮಾಡಿ ತರುತ್ತಾರೆ. ಇದನ್ನು ಒಸುಗೆ ಎಂದು ಜನಪದರ ಮಾತಿನಲ್ಲಿ ಹೇಳುತ್ತಾರೆ. ಋತುವಾದ ಹಣ್ಣು ಹನ್ನೊಂದು ದಿನದವರೆಗೆ ಇದನ್ನು ತಿನ್ನಬೇಕು, ಈ ಸಂದರ್ಭದಲ್ಲಿ ಅವಳ ದೈಹಿಕ ಸ್ಥಿತಿಯಲ್ಲಿ ಕೆಲವು ಬದಲಾವಣೆಗಳು ಆಗುವುದರಿಂದ ಮತ್ತು ಅವಳನ್ನು ಮುಂದಿನ ಜೀವನಕ್ಕೆ ಸಜ್ಜುಗೊಳಿಸುವ ಉದ್ದೇಶದಿಂದ ಈ ಒಸುಗೆಯನ್ನು ತಿನ್ನಲು ಕೊಡುತ್ತಾರೆ. ಇದು ದೇಹಕ್ಕೆ ಶಕ್ತಿಯನ್ನು ಒದಗಿಸುವ ಆಹಾರವಾದ್ದರಿಂದ ಋತುವಾದ ಹೆಣ್ಣಿಗೆ ತಪ್ಪದೆ ಕೊಡುತ್ತಾರೆ. ಈ ಹಿಂದೆ ಋತುವಾದ ಹೆಣ್ಣಿಗೆ ಹನ್ನೊಂದು ದಿನದವರೆಗೆ ಊಟಮಾಡಲು ಒಂದು ತೆಳುವಾದ

ಬಂಡೆಯನ್ನು ತಟ್ಟೆಯಾಗಿ ಬಳಸಲು ಕೊಡುತ್ತಿದ್ದರು ಅವಳು ಅದರಲ್ಲೇ ಊಟಮಾಡಬೇಕಿತ್ತು ಇತ್ತೀಚೆಗೆ ಈ ಪದ್ಧತಿ ಕಣ್ಮರೆಯಾಗಿದೆ ಹನ್ನೊಂದನೆಯ ದಿನ ಊರವರನ್ನು ಸೇರಿಸಿ ಮತ್ತು ಬಂಧುಗಳನ್ನು ಬರಮಾಡಿಕೊಂಡು ಉಗ್ಗಿ ಅಥವಾ ಅನ್ನ, ಸಾರು, ಬದನೇಕಾಯಿ ಪಲ್ಯ ಮಾಡಿ ಎಲ್ಲಾ ಬಂಧುಗಳಿಗೆ ಊಟಕ್ಕೆ ಹಾಕಿಸುತ್ತಾರೆ.

**ಬಾಣಂತಿಗೆ ನೀಡುವ ಆಹಾರ**

ಹೆರಿಗೆಯಾದ ಹೆಣ್ಣಿಗೆ ೩-೪ ತಿಂಗಳವರೆಗೆ ಊಟಕ್ಕೆ ಖಾರ ಕೊಡುವುದಿಲ್ಲ ಕಾರಣ ಅವಳ ಎದೆಹಾಲು ಖಾರವಾಗಿ ಮಗುವಿಗೆ ತೊಂದರೆಯಾಗುತ್ತದೆ. ಬಾಣಂತಿಗೆ ತೆಳುವಾದ ಮುದ್ದೆ, ಬೇಳೇಕಟ್ಟು ಅಂದರೆ ಬೇಳೆಯನ್ನು ಬೇಯಿಸಿ ಆ ಬೆಂದ ನೀರಿನಲ್ಲಿ ಉಪ್ಪು, ಬೆಳ್ಳುಳ್ಳಿ ಕಿವುಚಿ ಮುದ್ದೆಯೊಂದಿಗೆ ತಿನ್ನಲು ಕೊಡುತ್ತಾರೆ. ಹಾಲು ಅನ್ನ ಕೊಡುತ್ತಾರೆ. ಉತ್ತುತ್ತಿ ಒಣಕೊಬ್ಬರಿ, ಹಿಪ್ಲಿ, ಮೋಡಿಕಡ್ಡಿ, ಕಲ್ಲು ಸಕ್ಕರೆ, ಬಜೆ, ತುಪ್ಪ ಈ ಎಲ್ಲವನ್ನು ಸೇರಿಸಿ ಕುಟ್ಟಿ ಪುಡಿಮಾಡಿದ ಮಿಶ್ರಣ ಕೊಡುತ್ತಾರೆ. ಇದನ್ನು ಖಾರಾ ಎನ್ನುತ್ತಾರೆ. ಮಗುವಿಗೆ ತಾಯಿಯ ಎದೆಹಾಲು ಕಡಿಮೆಯಾದರೆ ಸಜ್ಜೆಯನ್ನು ಕುಟ್ಟಿ ಅದರ ಅನ್ನಮಾಡಿ ಹಾಲಿನೊಂದಿಗೆ ತಿನ್ನಲು ಕೊಡುತ್ತಾರೆ. ಇದನ್ನು ತಿಂದರೆ ಎದೆಹಾಲು ಹೆಚ್ಚುತ್ತದೆ ಎನ್ನುತ್ತಾರೆ. ಹೆರಿಗೆಯಾದ ಹದಿನಾರನೆಯ ದಿನದ ಮೇಲ್ಪಟ್ಟು ಖಾರ ಕಡಿಮೆ ಮಾಡಿ ಕುರಿ ಅಥವಾ ಮೇಕೆಯ ತಲೆಯ ಮಾಂಸವನ್ನು ಅಡುಗೆ ಮಾಡಿ ತಿನ್ನಿಸುತ್ತಾರೆ. ಮೂಲತಃ ಮಾಂಸಹಾರಿಗಳಾದ ಬೇಡರು ತಮ್ಮ ಹಬ್ಬ ಆಚರಣೆ ತಿಥಿ ಕರ್ಮಗಳಂತಹ ಆಚರಣೆಗಳಲ್ಲೂ ಸಹ ಸಿಹಿ ತಿಂದ ನಂತರ ಮಾಂಸವನ್ನು ತಿನ್ನುವುದು ಸಹಜ.

ಇವರು ಪ್ರತಿದಿನ ಸೇವಿಸುವ ಆಹಾರ ಮತ್ತು ಹಬ್ಬ ಜಾತ್ರೆ, ಋತುಮತಿ, ಮದುವೆ, ನಾಮಕರಣ, ತಿಥಿ, ಕರ್ಮ ಮುಂತಾದ ಸಂದರ್ಭಗಳಲ್ಲಿ ಹುರುಳಿ ಗುಗ್ಗರಿ ಪ್ರತಿಯೊಂದು ಸಂದರ್ಭದಲ್ಲೂ ವಿಶೇಷವಾಗಿ ಅಡುಗೆಮಾಡಿ ಸೇವಿಸುವುದರಿಂದ ಇವು ಇವರ ಪಾರಂಪರಿಕ ಆಹಾರಗಳು ಎನ್ನಬಹುದು. ಇಂದು ಇವರ ಪಾರಂಪರಿಕ ಆಹಾರ ಪದ್ಧತಿಯಲ್ಲಿ ಬದಲಾವಣೆ ಆಗಿರುವುದಕ್ಕಿಂತ ಹೊಸ ಹೊಸ ಆಹಾರ ಪದಾರ್ಥಗಳ ಪ್ರವೇಶವಾಗಿ ಬಗೆ ಬಗೆಯ ಅಡುಗೆಯ ರುಚಿಯನ್ನು ಕಂಡುಕೊಂಡಿದ್ದಾರೆ ಅಷ್ಟೇ. ಆದರೆ ಪರಂಪರೆಯಿಂದಲೂ ಸಹ ಜೋಳ, ರಾಗಿ, ಹುರುಳಿ, ಸಜ್ಜೆ, ಕಾಡು ಸೊಪ್ಪುಗಳನ್ನು ಇಂದಿನವರೆಗೂ ನಿತ್ಯದ ಆಹಾರವನ್ನಾಗಿ ಸೇವಿಸುತ್ತಾ ಬಂದಿದ್ದಾರೆ.

**೩.೫ ಪಾರಂಪರಿಕ ವೈದ್ಯ ಪದ್ಧತಿ**

ಪಾರಂಪರಿಕ ಜನಪದ ವೈದ್ಯವು ಜಗತ್ತಿನ್ನೆಲ್ಲೆಡೆ ಮನುಷ್ಯನೊಂದಿಗೆ ಹುಟ್ಟಿ ಬದುಕಿ, ಇಂದಿನ ತನಕ ಸಾಗಿಬಂದ ಒಂದು ಪರಿಸರ ಜನ್ಯ, ಅನುಭವಜನ್ಯ ವೈದ್ಯವಾಗಿದೆ. ಇದನ್ನು ಜನಪದ ವೈದ್ಯ, ದೇಸಿಯ ವೈದ್ಯ, ನಾಡ ವೈದ್ಯ, ನಾಟೀವೈದ್ಯ, ಹರ್ಬ್ಸ್/ಹರ್ಬನ್ ಮೆಡಿಸಿನ್, ಹಸಿರು ಮದ್ದು ಇತ್ಯಾದಿ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಈ ಮೇಲಿನ ಹೆಸರುಗಳೆಲ್ಲವೂ ಜನಪದ ವೈದ್ಯದ ಪರಿಪೂರ್ಣ ಮಾಹಿತಿಯನ್ನು ನೀಡುವುದಿಲ್ಲವಾದರೂ ಇದು ಒಂದು ವಿಶೇಷ ಬಗೆಯ ವೈದ್ಯ ಪದ್ಧತಿ ಎಂಬ

ಅಂಶವನ್ನು ತಿಳಿಸುತ್ತವೆ. ಜನಪದ ವೈದ್ಯ ಈ ಶಬ್ದದ ಹಿಂದೆ ಪ್ರದೇಶವಾಚಕ ಶಬ್ದವನ್ನು ಸೇರಿಸಿದಾಗ ಆಯಾ ಪ್ರದೇಶಕ್ಕೆ ಸಂಬಂಧಪಟ್ಟ ಜನಪದ ವೈದ್ಯ ಎಂಬ ವಿವರವು ದೊರಕುತ್ತದೆ. ಪಾರಂಪರಿಕ ವೈದ್ಯಪದ್ಧತಿ ಅಥವಾ ಜನಪದ ವೈದ್ಯದ ವ್ಯಾಪ್ತಿ ಬಹಳ ವಿಶಾಲವಾದುದು. ಮಹಿಳೆಯರ ಜ್ಞಾನ ಭಂಡಾರದಲ್ಲಿರುವ ಮನೆ ಮದ್ದು, ಜನಪದ ಮಂತ್ರವಾದಿಗಳಲ್ಲಿರುವ ವೈದ್ಯ ವಿಧಾನ, ಅವರ ಮಂತ್ರ ತಂತ್ರಗಳು, ಜನಪದ ಆಚರಣೆ, ಬಸುರಿ, ಮಗು, ಬಾಣಂತಿ ಶುಶ್ರೂಷೆ, ಅಹಾರವನ್ನು ತಯಾರಿಸುವ, ಉಣ್ಣುವ ರೀತಿ ನೀತಿ, ಹಬ್ಬ ಹರಿದಿನಗಳಲ್ಲಿ ಉಪವಾಸ ವ್ರತಾದಿಗಳಲ್ಲಿ ಇತರ ಜನಪದ ನಡವಳಿಕೆಗಳು ಅನೇಕ ಹಳ್ಳಿಗರಲ್ಲಿ ಇದುವರೆಗೂ ಜೀವಂತವಾಗಿರುವ ಜೈವಿಕ ಚರಾಚರಗಳ ಕುರಿತ ವೈದ್ಯಜ್ಞಾನ ಇತ್ಯಾದಿ ಹಲವಾರು ಸಂದರ್ಭಗಳಲ್ಲಿ ಜನಪದ ವೈದ್ಯವನ್ನು ಮತ್ತು ಅದರ ಬಗೆಯನ್ನು ಗುರುತಿಸಬಹುದು. "ಇತ್ತೀಚೆಗೆ ಜನಪದ ವೈದ್ಯವೆಂಬ ಹೆಸರಿನಿಂದ ನಾವು ಗುರುತಿಸುವ ಪ್ರಾಚೀನ ಜಗತ್ತಿನ ವೈದ್ಯ ಪದ್ದತಿಗಳೆಲ್ಲವೂ ನಮಗೆ ಅರಿವಿಲ್ಲದ ಕಾಲದಿಂದ ಜನಗಳ ನಡುವೆ ಬಾಳಿಕೊಂಡಿದ್ದವು, ಆದರೆ ಇದರ ಅಸ್ತಿತ್ವ ನಿರ್ದಿಷ್ಟ ಕಾಲಮಾನವನ್ನು ನಾವು ನಿರ್ಧರಿಸಲಾರೆವು ಜನಪದ ವೈದ್ಯವು ಕುರಿಗಾಹಿಗಳಲ್ಲಿ, ದನಗಾಹಿಗಳಲ್ಲಿ ಇತ್ತೆಂಬುದನ್ನು ಭಾರತದ ಹಿಂದಿನ ಋಷಿಮುನಿಗಳು ತಮ್ಮ ವೈದ್ಯ ಗ್ರಂಥಗಳಲ್ಲಿ ದಾಖಲಿಸಿದ್ದಾರೆ"[೨೯]. ಅದರಂತೆಯೇ ಪಶುಪಾಲಕರಾದ ಕಂಪಳದೇವರ ಹಟ್ಟಿಯ ಮ್ಯಾಸಬೇಡರಲ್ಲಿಯೂ ಸಹ ತಮ್ಮದೇ ಆದ ಜನಪದ ವೈದ್ಯವಿದ್ದು ಅದನ್ನು ಅವರು ಪರಂಪರೆಯಿಂದಲೂ ಅನುಸರಿಸುತ್ತಾ ಬಂದಿದ್ದಾರೆ. ಇಂದಿಗೂ ಹಟ್ಟಿಯಲ್ಲಿ ಕೆಲವು ಹಿರಿಯ ಪುರುಷರು, ಮಹಿಳೆಯರು ತಮ್ಮಲ್ಲಿನ ಸಣ್ಣ ಪುಟ್ಟ ಬೇನೆಗಳಿಗೆ ಸ್ಥಳೀಯವಾಗಿ ದೊರೆಯುವ ಗಿಡ, ನಾರು, ಬೇರು, ವಸ್ತು, ಪದಾರ್ಥಗಳಿಂದ ಮದ್ದುಮಾಡಿಕೊಡುವುದರ ಮೂಲಕ ಕಾಯಿಲೆಗಳನ್ನು ವಾಸಿಮಾಡಿಕೊಳ್ಳುತ್ತಾರೆ. ಅಂತಹ ಕೆಲವು ಕಾಯಿಲೆಗಳನ್ನು ಮಕ್ಕಳಿಗೆ ಬರುವ ಕಾಯಿಲೆಗಳು, ದೊಡ್ಡವರಿಗೆ ಬರುವ ಕಾಯಿಲೆಗಳು, ಹೆಂಗಸರಿಗೆ ಬರುವ ಕಾಯಿಲೆಗಳು ಎಂದು ವಿಂಗಡಿಸಿಕೊಂಡು ಅವುಗಳಿಗೆ ಸ್ಥಳೀಯರು ಅನುಸರಿಸುವ ಮದ್ದುಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

**೧. ಚಿಕ್ಕ ಮಕ್ಕಳಿಗೆ ಬರುವ ಕಾಯಿಲೆ ಮತ್ತು ಅದಕ್ಕೆ ನೀಡುವ ಮದ್ದುಗಳು**

ಸಾಮಾನ್ಯವಾಗಿ ದೊಡ್ಡವರಿಗೆ ಬರುವ ಕಾಯಿಲೆಗಳು ಒಂದು ಬಗೆಯವಾದರೆ ಮಕ್ಕಳಿಗೆ ಬರುವ ಕಾಯಿಲೆಗಳ ಬಗೆ ಬೇರೆ. ದೊಡ್ಡವರು ತಮಗೆ ಆದ ಬೇನೆಯನ್ನು ಹೇಳಿಕೊಳ್ಳುತ್ತಾರೆ ಆದರೆ ಮಕ್ಕಳು ಬಾಯಿಬಿಟ್ಟು ತಮ್ಮ ಬೇನೆಯನ್ನು ಹೇಳಿಕೊಳ್ಳಲಾರರು ಅಂತಹ ಸಂದರ್ಭದಲ್ಲಿ ಮಕ್ಕಳ ಕಾಯಿಲೆಗಳನ್ನು ಅನುಭವಿಗಳು/ಹಿರಿಯರು ತುಂಬಾ ಸೂಕ್ಷ್ಮವಾಗಿ ಅರಿತು ಅದಕ್ಕೆ ಮದ್ದು ಮಾಡುತ್ತಾರೆ, ಹಟ್ಟಿಯ ಜನಪದರು ತಾವೇ ಮನೆಯಲ್ಲಿಯೇ ಮಾಡಿಕೊಳ್ಳುವ ಮದ್ದುಗಳು ಮತ್ತು ಕಾಯಿಲೆಯ ಬಗೆಗಳೆಂದರೆ,

ಮಕ್ಕಳಿಗೆ ಕಾರ ತಿನ್ನಿಸುವುದು ಮಗು ಹುಟ್ಟಿ ಹನ್ನೊಂದು ದಿನದಿಂದ ಒಂದು ವರ್ಷದವರೆಗೂ ಪ್ರತಿ ಭಾನುವಾರ ಕಾರ ಹಾಕುವುದರಿಂದ ಮಗುವಿಗೆ ಯಾವುದೇ ರೋಗಗಳು ಬರುವುದಿಲ್ಲ. ಕಾರ ಎಂದರೆ ಜಾಪತ್ರೆ, ಜಾಜ್‌ಕಾಯಿ, ಅಳಲೆಕಾಯಿ, ಬಜೆ, ಶುಂಠಿ, ಅರಿಶಿಣದ ಬೇರು, ಹಿಪ್ಪಲಿಕಡ್ಡಿ,

ಮೋಡಿ ಕಡ್ಡಿ, ಮೆಣಸು, ಬೆಳ್ಳುಳ್ಳಿ, ಲವಂಗ, ಕರ್ಜೂರದ ಬೀಜ, ಹುಣಸೇ ಬೀಜ, ಗೋಟು ಅಡಿಕೆ, ಎಲೆಮೂಗು, ಉತ್ತುತ್ತಿ ಬೀಜ ಈ ಎಲ್ಲವನ್ನೂ ಸಾಣೇಕಲ್ಲಿನ ಮೇಲೆ ಒಂದೊಂದು ಸುತ್ತು ತೇದು ಸಿದ್ಧಪಡಿಸಿದ ಮಿಶ್ರಣವನ್ನು ಕಾರ ಎಂದು ಜನಪದರ ಮಾತಿನಲ್ಲಿ ಹೇಳುತ್ತಾರೆ ಈ ಮಿಶ್ರಣವನ್ನು ಮಗುವಿಗೆ ಒಂದು ವರ್ಷ ತುಂಬುವವರೆಗೂ ಪ್ರತಿ ಭಾನುವಾರ ತಾಯಿಯ ಎದೆಹಾಲಿನಲ್ಲಿ ಬೆರೆಸಿ ಕುಡಿಸುತ್ತಾರೆ. ಮಗು ಬೆಳೆದಂತೆ ಕಾರ ಹಾಕುವುದು ಸ್ವಲ್ಪ ಸ್ವಲ್ಪ ಜಾಸ್ತಿ ಮಾಡುತ್ತಾ ಹೋಗುತ್ತಾರೆ. ಹೀಗೆ ಮಾಡುವುದರಿಂದ ಮಗುವಿಗೆ ಯಾವುದೇ ರೋಗಗಳು ಬಾಧಿಸುವುದಿಲ್ಲ.

**ಹಸಿರು ಮದ್ದು**

ಹಸಿರು ಮದ್ದು ಎಂದರೆ ಕಾಕೆಸೊಪ್ಪು/ಕಾರೆಸೊಪ್ಪು, ಬುಡ್ಡೆಸೊಪ್ಪು, ಹಾಗಲ ಸೊಪ್ಪು ಮಿಶ್ರಣಮಾಡಿ ಒಂದು ಮೆಣಸು, ಒಂದು ಬೆಳ್ಳುಳ್ಳಿ, ಒಂದು ಹರಳು ಉಪ್ಪು ತೇದು ತಾಯಿಯ ಎದೆಹಾಲಿನಲ್ಲಿ ಬೆರೆಸಿದ ಮಿಶ್ರಣವನ್ನು ಹಸಿರು ಮದ್ದು ಎನ್ನುತ್ತಾರೆ. ಈ ಹಸಿರು ಮದ್ದನ್ನು ಮಗು ಹುಟ್ಟಿ ಮೂರು ದಿನ, ಐದು ದಿನ, ಒಂಬತ್ತು ದಿನ, ಹನ್ನೊಂದು ದಿನ ಮತ್ತು ಹದಿನಾರು ದಿನದಲ್ಲಿ ಕುಡಿಸಿದರೆ ಮುಂದೆ ಮಗುವಿಗೆ ಯಾವ ರೋಗಗಳೂ ಬರುವುದಿಲ್ಲ ಅಲ್ಲದೆ ಮೈ ಕೈಗೆ ಅದೆ ಸೊಪ್ಪನ್ನು ಹಚ್ಚಿ ಸ್ನಾನ ಮಾಡಿಸುತ್ತಾರೆ ಹೀಗೆ ಮಾಡುವುದರಿಂದ ಮಗುವಿಗೆ ಸಣ್ಣ ಪುಟ್ಟ ಗಾಯಗಳಾದರೆ ಬೇಗನೆ ವಾಸಿಯಾಗುತ್ತವೆ.

**ಶೆಟ್ಟಿ ಹಾಲು ಹಾಕುವುದು**

ಮಗು ಹುಟ್ಟಿ ಮೂರು ದಿನದೊಳಗೆ ಆ ಮಗುವಿಗೆ ಶೆಟ್ಟಿ ಹಾಲು (ಕತ್ತೆಹಾಲು) ಕುಡಿಸಿದರೆ ಮಗು ದಷ್ಟಪುಷ್ಟವಾಗಿ ಬೆಳೆಯುತ್ತದೆ ಮತ್ತು ಚೆನ್ನಾಗಿ ಊಟ ಮಾಡುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಕತ್ತೆಹಾಲಿನಲ್ಲಿ ರೋಗನಿರೋಧಕ ಶಕ್ತಿ ಇರುವುದರಿಂದ ಇಂದು ಕತ್ತೆ ಹಾಲಿಗೆ ಪಟ್ಟಣಗಳಲ್ಲಿ ತುಂಬಾ ಬೇಡಿಕೆ ಇದೆ.

**ಬಾಲಗ್ರಹದೋಷಕ್ಕೆ**

ಬಾಗೆ ಮರದ ಚಕ್ಕೆ, ಅರಳಿ ಮರದ ಚಕ್ಕೆ, ಬಿಳಿ ಎಕ್ಕೆ, ಭೂತಾಳಿ, ಕವಡೆ ಸಾಂಬ್ರಾಣಿ ಮಿಶ್ರಣ ಮಾಡಿ ಮಕ್ಕಳಿಗೆ ಹೊಗೆ ಹಾಕಿದರೆ ಬಾಲಗ್ರಹದ ದೋಷ ಕಡಿಮೆಯಾಗುತ್ತದೆ.

ಕೆಮ್ಮು ಆಗಿದ್ದರೆ ಚಿಕ್ಕ ಮಕ್ಕಳಿಗೆ ಕೆಮ್ಮು ಗಿದ್ದರೆ ಒಂದು ಲವಂಗ, ಒಂದು ವೀಳೆದ್ಯೆಲೆ, ಒಂದು ಮೆಣಸನ್ನು ತೆಗೆದುಕೊಂಡು ಸಾಣೆಕಲ್ಲಿನ ಮೇಲೆ ತೇದು ತಾಯಿಯ ಎದೆ ಹಾಲಿನೊಂದಿಗೆ ಕುಡಿಸುತ್ತಾರೆ. ಇದರಿಂದ ಕೆಮ್ಮು ವಾಸಿಯಾಗುತ್ತದೆ.

**ಚುಟಿಕೆ ಹಾಕುವುದು**

ಸೂಜಿಯನ್ನು ಕಾಯಿಸಿ ಅಥವಾ ಬಳೆಯ ಚೂರನ್ನು ಕಾಯಿಸಿ ನವಜಾತ ಶಿಶುವಿನ ಹೊಟ್ಟೆಯ ಮೇಲೆ ಚುಟಿಕೆ/ಬರೆ ಹಾಕುತ್ತಾರೆ. ಚುಟಿಕಿ ಹಾಕುವುದರಿಂದ ಹೊಟ್ಟೆ ಉಬ್ಬರ ಆಗುವುದಿಲ್ಲ ಮತ್ತು

ಮುಂದೆ ಯಾವುದೇ ರೋಗ ಮಗುವಿಗೆ ತಾಗುವುದಿಲ್ಲ. ಜ್ವರ ಬಂದಾಗ ಚುಟಿಕೆ ಹಾಕಿದರೆ ತಕ್ಷಣವೇ ಮಗುವಿನ ಮೈ ಬೆವೆತು ಜ್ವರ ಕಡಿಮೆಯಾಗುತ್ತದೆ. ಚುಟಿಕಿಯನ್ನು ಮಗುವಿನ ಕಿವಿ, ನೆತ್ತಿ, ಹಣೆ, ಕಣ್ಣ ಹುಬ್ಬಿನ ಮೇಲಿನ ನರಗಳಿಗೆ ಕಾದ ಸೂಜಿ ಅಥವಾ ಕಾದ ಬಳೆಯ ಚೂರಿನಿಂದ ಸುಡುವುದರಿಂದ ಮೈಗೆ ಶಖ ತಗುಲಿ ಮೈ ಬೆವೆತು ಜ್ವರ ವಾಸಿಯಾಗುತ್ತದೆ.

**ಓಕುಳಿ ಚೆಲ್ಲುವುದು**

ಮಗು ವಿಪರೀತ ಅಳುತ್ತಿದ್ದರೆ ಮನೆಯ ಯಜಮಾನಿ ಒಂದು ಚೆಂಬು ಅರಿಶಿಣದ ನೀರು ಕಲಸಿ ಒಂದು ತಟ್ಟೆಯಲ್ಲಿ ಹಾಕಿ ಅದರಲ್ಲಿ ಒಂದು ಎಲೆ, ಒಂದು ಅಡಿಕೆ, ಒಂದು ಮಿಟಿಗೆ ಅನ್ನವನ್ನು ಮಗುವಿಗೆ ನಿವಾಳಿಸಿ ತೆಗೆದು ಮೂರು ದಾರಿ ಕೂಡುವಲ್ಲಿ ಹಾಕುತ್ತಾರೆ/ಚೆಲ್ಲುತ್ತಾರೆ, ಇದನ್ನೇ ಓಕುಳಿ ಚೆಲ್ಲುವುದು ಎಂದು ಆಡುಮಾತಿನಲ್ಲಿ ಹೇಳುತ್ತಾರೆ. ಹೀಗೆ ಮಾಡಿದರೆ ಮಗುವಿಗೆ ತಗುಲಿರುವ ದೃಷ್ಟಿ ಕಡಿಮೆಯಾಗಿ ಮಗು ಅಳುವುದನ್ನು ನಿಲ್ಲಿಸುತ್ತದೆ.

**೨. ದೊಡ್ಡವರಿಗೆ ಬರುವ ಕಾಯಿಲೆಗಳು ಮತ್ತು ಮದ್ದು**

**ಮಲಬದ್ದತೆ:** ಮಲಬದ್ದತೆಗೆ ಪರಂಗಿ ಕಾಯಿಯ ರಸ(ಪಪ್ಪಾಯಿ) ಮತ್ತು ನೀರನ್ನು ಬೆರೆಸಿ ಅದಕ್ಕೆ ಜೀರಿಗೆ ಪುಡಿ, ನಿಂಬೆರಸ ಸೇರಿಸಿ ಸೇವಿಸಿದರೆ ಮಲಬದ್ದತೆ ನಿವಾರಣೆಯಾಗುತ್ತದೆ. ಮಲಬದ್ದತೆ ಇರುವವರಿಗೆ ಇದನ್ನೇ ಮದ್ದಾಗಿ ನಿಡುತ್ತಾರೆ.

ಬಿಳಿಸೆರಗು/ಬಿಳಿಮುಟ್ಟು ಬಿಳಿಸೆರಗು ಆಗುತ್ತಿದ್ದ ಮಹಿಳೆಯರಿಗೆ ಬಿಳಿದಾಸವಾಳದ ಗಿಡದ ಬೇರನ್ನು ಅರೆದು ಕುಡಿಸುತ್ತಾರೆ ಹೀಗೆ ಮಾಡುವುದರಿಂದ ಬಿಳಿ ಮುಟ್ಟು ನಿಲ್ಲುತ್ತದೆ. ಮತ್ತೊಂದು ವಿಧಾನವೆಂದರೆ ಸಕ್ಕರೆ, ರಸಬಾಳೆಹಣ್ಣು, ಬನ್ನಿಸೊಪ್ಪು ಮಿಶ್ರಣ ಮಾಡಿ ಕುಟ್ಟಿ ಒಂಬತ್ತು ಮಾತ್ರೆಗಳನ್ನು ಮಾಡಿ ಪ್ರತಿದಿನ ಮೂರು ಮಾತ್ರೆಯಂತೆ ಮೂರು ದಿನ ತೆಗೆದುಕೊಳ್ಳಬೇಕು ಯಾವುದೇ ಆಹಾರವನ್ನಾದರೂ ಸೇವಿಸಬಹುದು ಪಥ್ಯ ಇರುವುದಿಲ್ಲ. ಆದರೆ ಮೂರು ದಿವಸ ಹಾಸಿಗೆ ಪಥ್ಯ ಇರಬೇಕು(ಹಾಸಿಗೆ ಪಥ್ಯ ಎಂದರೆ ಗಂಡ-ಹೆಂಡತಿ ಕೂಡದಿರುವುದು) ಈ ವಿಧಾನಗಳಿಂದ ಬಿಳಿಸೆರಗು ಬೇನೆಯನ್ನು ನಿವಾರಿಸಿಕೊಳ್ಳುತ್ತಾರೆ. ಇವುಗಳ ಜೊತೆಗೆ ಕಾಡಿನ ಬಿಳಿಉಲಿ ಹಣ್ಣಿನ(ಜೋಳದ ಹಣ್ಣು) ಗಿಡದ ಹಣ್ಣನ್ನು ಕಷಾಯಮಾಡಿ ಕುಡಿಸುತ್ತಾರೆ ಇದರಿಂದ ಬಿಳಿಮುಟ್ಟಿ ಸಮಸ್ಯೆ ನಿವಾರಣೆಯಾಗುತ್ತದೆ.

**ಕೆಂಪು ಸೆರಗು/ಕೆಂಪು ಮುಟ್ಟು**

ಮಹಿಳೆಯರಿಗೆ ಯಥೇಚ್ಛವಾಗಿ ಕೆಂಪು ಸೆರಗು ಹೋಗುತ್ತಿದ್ದರೆ ಅದರಿಂದ ಅವರು ನಿಶಕ್ತರಾಗುತ್ತಾರೆ. ಇದನ್ನು ತಡೆಗಟ್ಟಲು ಉತ್ತತ್ತಿ, ದ್ರಾಕ್ಷಿ, ಗೋಡಂಬಿ, ಬಾದಾಮಿ, ಕೆಂಪು ಸಕ್ಕರೆ, ಜಂಬುನೇರಳೆ ಚಕ್ಕೆ ಎಲ್ಲವನ್ನು ಸೇರಿಸಿ ಚೂರ್ಣಮಾಡಿ ಕುಟ್ಟಿ ರಸ ತೆಗೆದು ಮೂರು ಹೊತ್ತು ರಸ ಕುಡಿಸಿದರೆ ಕೆಂಪು ಸೆರಗು ನಿಲ್ಲುತ್ತದೆ.

**ಪಿತ್ತಕ್ಕೆ ಮದ್ದು**

ಪಿತ್ತ ಹೆಚ್ಚಾಗಿದ್ದರೆ ರಾತ್ರಿ ಮಲಗುವಾಗ ಹುಣಸೇ ಹಣ್ಣನ್ನು ನೀರಿನಲ್ಲಿ ನೆನೆಹಾಕಿ ಹುಣಸೆ ಹಣ್ಣಿನ ರಸ ತೆಗೆದು ಜೀರಿಗೆ, ಬೆಲ್ಲ ಕುಟ್ಟಿ ಮಿಶ್ರಣಮಾಡಿ ಮುಂಜಾನೆ ಎದ್ದ ತಕ್ಷಣ ಹಾಳು ಹೊಟ್ಟೆಗೆ ಮೂರುದಿನ ಕುಡಿದರೆ ಪಿತ್ತ ಕಡಿಮೆಯಾಗುತ್ತದೆ.

**ಜಂತುವಿನ ಸಮಸ್ಯೆ**

ಹೊಟ್ಟೆಯೊಳಗಿನ ಜಂತುವಿನ ಸಮಸ್ಯೆಗೆ ಬೇವಿನ ಸೊಪ್ಪು, ಕೊತ್ತಂಬರಿ, ಶುಂಠಿ, ಮೆಣಸಿನಕಾಯಿ, ಉಪ್ಪು, ಹುಣಸೆ ಹಣ್ಣನ್ನು ಬೆರೆಸಿ ಅರೆದು ವಾರಕ್ಕೆ ಒಮ್ಮೆ ಬಿಸಿ ಅನ್ನದ ಮೂಲಕ ತಿನ್ನುತ್ತಾ ಬಂದರೆ ಹೊಟ್ಟೆಯಲ್ಲಿನ ಜಂತುವಿನ ಸಮಸ್ಯೆ ನಿವಾರಣೆಯಾಗುತ್ತದೆ.

**ಕೈ ಕಾಲು ಮುರಿದರೆ**

ಹಟ್ಟಿಯಲ್ಲಿ ಯಾರಿಗಾದರೂ ಕೈ ಕಾಲು ಮುರಿದರೆ ಕಿಲಾರಿ ಬೋರಯ್ಯನ ಹತ್ತಿರ ಕರೆದುಕೊಂಡು ಹೋಗುತ್ತಾರೆ ಈತ ಮುರಿದ ಕೈ ಕಾಲುಗಳಿಗೆ ಬಿದಿರು ಕಟ್ಟಿಗೆಯಿಂದ ಕಟ್ಟಿ ಜೋಡಿಸುತ್ತಾನೆ. ಅಷ್ಟೇ ಅಲ್ಲದೆ ತಪ್ಪಲ ಔಷಧಿಯನ್ನು ಆಡಿನ ಹಾಲಿನಲ್ಲಿ ಹಾಕಿ ಕುಡಿಸುತ್ತಾನೆ ಇದರಿಂದ ಮುರಿದ ಕೈಕಾಲು ಬೇಗನೆ ಕೂಡುತ್ತದೆ.

**ಮೂರ್ಛೆರೋಗಕ್ಕೆ**

ಮದ್ದು ಮೂರ್ಚೆರೋಗ ಇದ್ದವರಿಗೆ ಬೇವಿನ ಕಡ್ಡಿಯನ್ನು ಕಾಯಿಸಿ ಅದರಿಂದ ನಾಲಿಗೆ, ಕಿವಿಯ ಮೇಲೆ, ಕಣ್ಣು ಹುಬ್ಬಿನ ಮೇಲೆ ಚುಟಕಿಯ ರೀತಿ ಸುಡುತ್ತಾರೆ. ಅದರಿಂದ ಮೂರ್ಛೆರೋಗ ವಾಸಿಯಾಗುತ್ತದೆ ಎಂದು ಹೇಳುತ್ತಾರೆ. ಮೂಲತಃ ಪಶುಪಾಲನಾ ಸಂಸ್ಕೃತಿಯವರಾದ ಇವರು ತಮ್ಮ ಮನೆಯ ಅಂಗಳದಲ್ಲಿ ಗೋವುಗಳ ಸಗಣಿಯನ್ನು ಸಾರಿಸುವ ಮೂಲಕ ಕ್ರಿಮಿ ಕೀಟಗಳ ನಿವಾರಣೆ ಮಾಡುತ್ತಾರೆ. ಹಾಗೆಯೇ ಮನೆಗಳನ್ನು ಶುದ್ಧೀಕರಿಸುವಾಗ ಗೋಮೂತ್ರವನ್ನು ಮನೆಗಳಿಗೆ ಸಿಂಪಡಿಸುವ ಮೂಲಕ ಕ್ರಿಮಿಕೀಟಗಳನ್ನು ತಡೆಗಟ್ಟುತ್ತಾರೆ ಮತ್ತು ಕೆಲವೊಮ್ಮೆ ಆರೋಗ್ಯ ಹದಗೆಟ್ಟಾಗ ಗೋಮೂತ್ರವನ್ನು ಸೇವಿಸುವುದರ ಮೂಲಕ ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾರೆ. ಗೋ ಮೂತ್ರದಲ್ಲಿ ರೋಗ ನಿರೋಧಕ ಶಕ್ತಿಯಿದೆ.

**ಕಜ್ಜಿಯಾಗಿದ್ದರೆ**

ತುರಿಕೆಯಾಗಿ ಕೈ ಬೆರಳುಗಳ ಸಂದಿ ಮತ್ತು ತೊಡೆಯ ಸಂದಿಯಲ್ಲಿ ತಿಂಡಿಯಾಗುತ್ತಿದ್ದರೆ ಅದನ್ನು ಕಜ್ಜಿ ಎಂದು ಕರೆಯುತ್ತಾರೆ. ಇದರ ನಿವಾರಣೆಗಾಗಿ ನಮ್ಮ ಜನಪದರು ಕಾಡಿನಲ್ಲಿ ಸಿಗುವ ಆಲೆ ಬಳ್ಳಿಯ ಎಲೆ ತಂದು ಅದನ್ನು ಅರೆದು ಅದರ ರಸವನ್ನು ಮೇಕೆಯ ಗಂಜಲದಲ್ಲಿ ಬೆರೆಸಿ ಕಜ್ಜಿಯಾದ ವ್ಯಕ್ತಿಗೆ ಮೈಯಲ್ಲಾ ಹಚ್ಚುತ್ತಾರೆ. ಆಗ ತುಂಬಾ ಉರಿಯುತ್ತದೆ ಇದೇ ರೀತಿ ೨–೩ ದಿನ ರಾತ್ರಿಹೊತ್ತು ಹಚ್ಚಿದರೆ ಕಜ್ಜಿ ವಾಸಿಯಾಗುತ್ತದೆ.

ಮೈಯಲ್ಲಾ ಗುಳ್ಳೆಗಳಾಗಿದ್ದರೆ ಬೇವಿನ ತಪ್ಪಲನ್ನು ನೀರಿನಲ್ಲಿ ಹಾಕಿ ಕುದಿಸಿ ಸ್ವಲ್ಪ ಸಮಯ ನೀರನ್ನು ಆರಿಸಿ ನಂತರ ಗುಳ್ಳೆಗಳಾಗಿದ್ದ ವ್ಯಕ್ತಿಗೆ ಆ ನೀರಿನಲ್ಲಿ ಸ್ನಾನ ಮಾಡಿಸಿದರೆ ಗುಳ್ಳೆಗಳು ವಾಸಿಯಾಗುತ್ತವೆ.

ಬೇಸಿಗೆಯಲ್ಲಿ ಬಿಸಿಲ ತಾಪ ಹೆಚ್ಚು ಇರುವುದರಿಂದ ಹೆಚ್ಚಾಗಿ ಲಿಂಬೆ ಹಣ್ಣು, ಸೀಗೇಕಾಯಿ, ಮೊಸರು, ಮಜ್ಜಿಗೆ ಇತ್ಯಾದಿಗಳನ್ನು ಬಳಸುತ್ತಾರೆ. ಹಟ್ಟಿಯ ಪ್ರತಿಯೊಂದು ಮನೆಯು ಹೈನುಗಾರಿಕೆಯಿಂದ ಕೂಡಿದ್ದು ಸಂದರ್ಭಕ್ಕೆ ತಕ್ಕಂತೆ ಹಾಲು, ಮೊಸರು, ಮಜ್ಜಿಗೆ, ಗಿಣ್ಣ, ಬೆಣ್ಣೆ, ತುಪ್ಪ, ಇತ್ಯಾದಿಗಳನ್ನು ಬಳಸುತ್ತಾ ಆರೋಗ್ಯ ಸುಧಾರಿಸಿಕೊಳ್ಳುತ್ತಾರೆ.

**ಪಾರಂಪರಿಕ ಗಿಡ ಮದ್ದುಗಳು**

ಗ್ರಾಮೀಣ ಜನಪದರು ತಮಗೆ ಬಾಧಿಸುವ ಸಣ್ಣ ಪುಟ್ಟ ಬೇನೆಗಳನ್ನು ತಮ್ಮ ಸುತ್ತ ಮುತ್ತಲಿನ ಪರಿಸರದಲ್ಲಿ ದೊರೆಯುವ ಗಿಡಗಳನ್ನು, ಗಿಡಗಳ ಬೇರು, ಕಾಯಿ, ಎಲೆ, ತರಕಾರಿ ಜಾತಿಯ ಆಹಾರ ಸಸ್ಯಗಳನ್ನು ಬಳಸಿಕೊಂಡು ಬೇನೆ ವಾಸಿಮಾಡಿಕೊಳ್ಳುತ್ತಾರೆ. "ಭೂ ಗ್ರಹದ ಮೇಲೆ ಇದುವರೆಗೆ ೩,೫೦,೦೦೦ ಸಸ್ಯಗಳಿವೆ ಎಂದು ತಿಳಿದಿದೆ. ಈ ಸಸ್ಯರಾಶಿಗಳು ಜೈವಿಕ-ಅಜೈವಿಕ ಅಂಶಗಳಿಗೆ ಅನುಗುಣವಾಗಿ ಇಲ್ಲಿ ಬೆಳೆಯಲ್ಪಟ್ಟಿವೆ ಇಂತಹ ಸಸ್ಯಗಳು ಪ್ರಾಣಿಗಳಿಗೆ ಆಹಾರವಾಗಿ ಔಷಧಿಯಾಗಿ ವಿವಿಧ ರೀತಿಯ ಕ್ಷೇತ್ರಗಳಲ್ಲಿ ಉಪಯುಕ್ತವಾಗಿವೆ, ಇಂತಹ ಸಾವಿರಾರು ಸಸ್ಯಗಳಲ್ಲಿ ಮಾನವನು ತನ್ನ ಆರೋಗ್ಯಕ್ಕೆ ಸುಮಾರು ೭೦೦ ಗಿಡಗಳನ್ನು ಉಪಯೋಗಿಸಿಕೊಂಡು ನಾಟಿ ವೈದ್ಯರು ತಮ್ಮದೇ ಆದ ಆಧ್ಯಾತ್ಮಿಕ, ಧಾರ್ಮಿಕ, ಕಲಾತ್ಮಕ, ತಾತ್ವಿಕ ಕೈಚಳಕದಿಂದ ನಾಟಿ ವೈದ್ಯ ವೃತ್ತಿಯನ್ನು ರೂಢಿಸಿಕೊಂಡು ಬಂದಿದ್ದಾರೆ"[೩೦] ಕಂಪಳದೇವರ ಹಟ್ಟಿಯಲ್ಲಿಯೂ ಸಹ ಸಸ್ಯ, ಗಿಡ, ನಾರು, ಬೇರು, ಪದಾರ್ಥಗಳಿಂದ ಮಾನವನಿಗೆ ಒದಗುವ ಕೆಲವು ಕಾಯಿಲೆಗಳಿಗೆ ಮದ್ದು ಕೊಡುವವರು(ಕಿಲಾರಿ ಬೊರಯ್ಯ, ದಾಸರ ಪಾಲಯ್ಯ, ಪೂಜಾರಿ ಮಲ್ಲಯ್ಯ, ಗೋಲು ಪಾಪಯ್ಯ, ಜಂಗ್ಲಿ ಪಾಪಯ್ಯ ಮುಂತಾದವರು) ಇದ್ದಾರೆ ಅವರು ನೀಡಿದ ಮಾಹಿತಿಯ ಮೇಲೆ ಹಟ್ಟಿಯಲ್ಲಿನ ಜನಪದ ವೈದ್ಯಪದ್ಧತಿ ಅಥವಾ ಪಾರಂಪರಿಕ ವೈದ್ಯಪದ್ಧತಿಯಲ್ಲಿ ಇವರು ನೀಡುವ ಮದ್ದುಗಳು ಮತ್ತು ಯಾವ ಯಾವ ಕಾಯಿಲೆಗಳಿಗೆ ಯಾವ ಯಾವ ಗಿಡದ ಮದ್ದು ನೀಡುತ್ತಾರೆ ಎಂಬುದನ್ನು ನೋಡೋಣ, ನಾಟಿ ವೈದ್ಯವು ಜನರಿಗೆ ಅನುಭವದ ಮೂಲಕ ಬಂದಿರುವ ಒಂದು ಮಹತ್ವದ ವಿದ್ಯೆಯಾಗಿದೆ. ಹಟ್ಟಿಯ ಜನಪದರು ವೈದ್ಯಕ್ಕೆ ಬಳಸುವ ಕೆಲವು ಸಸ್ಯಗಳು ಮತ್ತು ಅವುಗಳ ಉಪಯೋಗ ಈ ಕೆಳಗಿನಂತೆ ತಿಳಿಯೋಣ,

**ಮದ್ಯಾಹ್ನಮಲ್ಲಿಗೆ ಗಿಡ**

ಯಾರಿಗಾದರೂ ಮೈಯಲ್ಲಿ ಅಥವಾ ಕೈ ಕಾಲುಗಳಲ್ಲಿ ಗಡ್ಡೆಗಳಾಗಿದ್ದರೆ ಈ ಗಿಡದ ಬೇರನ್ನು ತಂದು ಅರೆದು ಗಡ್ಡೆಗೆ ಹಚ್ಚಿದರೆ ಗಡ್ಡೆ ಹಣ್ಣಾಗಿ ಒಡೆದು ಗುಣವಾಗುತ್ತದೆ. ಈ ಗಿಡವು ಹಳದಿ, ಬಿಳಿ, ಕೆಂಪು, ಹೀಗೆ ವಿವಿಧ ಬಣ್ಣಗಳ ಹೂ ಬಿಡುವುದು ಮತ್ತು ಒಂದೊಂದು ಬಣ್ಣದ ಗಿಡವೂ ಒಂದೊಂದು ಬೇನೆಗೆ ಮದ್ದಾಗಿ ಕೆಲಸಮಾಡುವುವು. ಮದ್ಯಾಹ್ನಮಲ್ಲಿಗೆ ಗಿಡ ವರ್ಷದ ಎಲ್ಲಾ ತಿಂಗಳಲ್ಲೂ ಕಾಣಬರುತ್ತದೆ. ನಿರಾವರಿ ಹೊಲದಲ್ಲಿ ಬೇಲಿಗಳಲ್ಲಿ ಬೆಳೆದಿರುತ್ತದೆ. ಬಿಳಿಸೆರಗು ಆಗುತ್ತಿರುವ

ಮಹಿಳೆಯರಿಗೆ ಬಿಳಿ ಹೂವು ಬಿಡುವ ಈ ಗಿಡದ ಗೆಡ್ಡೆ/ಬೇರನ್ನು ತಂದು ಮೊಸರು ಅಥವಾ ಮಜ್ಜಿಗೆಯಲ್ಲಿ ಅರೆದು ದಿನಕ್ಕೆ ಎರಡು ಬಾರಿ ಕುಡಿಸಿದರೆ ಬಿಳಿ ಸೆರಗು ಕಾಯಿಲೆ ವಾಸಿಯಾಗುತ್ತದೆ. ಅದರಂತೆಯೇ ಕೆಂಪು ಮುಟ್ಟು ಅತಿಯಾಗಿ ಹೋಗುತ್ತಿದ್ದರೆ ಕೆಂಪು ಹೂ ಬಿಡುವ ಗೆಡ್ಡೆಯನ್ನು ಮೊಸರು, ಮಜ್ಜಿಗೆಯಲ್ಲಿ ಅರೆದು ಕುಡಿಸಬೇಕು.

**ಎಕ್ಕೆ ಗಿಡ/ಎಕ್ಕದ ಗಿಡ**

ಎಕ್ಕೆಗಿಡದಲ್ಲಿ ಎರಡು ಪ್ರಕಾರಗಳಿವೆ ಬಿಳಿ ಎಕ್ಕೆ ಮತ್ತು ಕೆಂಪು ಎಕ್ಕೆ, ಕೆಂಪು ಹೂ ಬಿಡುವ ಎಕ್ಕದ ಗಿಡಗಳು ಸಾಕಷ್ಟು ಬೆಳೆದಿರುತ್ತವೆ ಆದರೆ ಬಿಳಿ ಬಣ್ಣದ ಹೂ ಬಿಡುವ ಗಿಡ ಕಡಿಮೆ ಆ ಗಿಡಗಳನ್ನು ಪೂಜೆ ಮಾಡುತ್ತಾರೆ. ಮದ್ದಿಗೆ ಎರಡೂ ಬಗೆಯ ಗಿಡವನ್ನು ಬಳಸುತ್ತಾರೆ ಈ ಗಿಡದ ಹಾಲಿಗೆ ಸಮಪ್ರಮಾಣದಲ್ಲಿ ಅರಿಶಿಣಪುಡಿಯನ್ನು ಬೆರೆಸಿ ಇಸ್ಬು ಆದ ಜಾಗಕ್ಕೆ ಲೇಪಿಸಿದರೆ ಅದು ಕಾಯಿಲೆಯ ಮೂಲಕ್ಕೆ ತಲುಪಿ ಅದು ಇನ್ನಿಲ್ಲದಂತೆ ಗುಣಪಡಿಸುತ್ತದೆ. ಅದೇ ರೀತಿ ದನಕರುಗಳಿಗೆ ಗಾಯಗಳಾಗಿ ಹುಳುಗಳಾಗಿದ್ದರೆ ಎಕ್ಕೆಗಿಡದ ಹಾಲನ್ನು ಆ ಗಾಯಕ್ಕೆ ಹಾಕಿದರೆ ಹುಳುಗಳನ್ನು ಹೋಗಲಾಡಿಸುತ್ತದೆ. ಮನುಷ್ಯರ ಕಾಲಿಗೆ ಮುಳ್ಳು ಅಥವಾ ಕಲ್ಲು ಚುಚ್ಚಿ ಅದು ಹೊರಬಾರದೆ ಕಾಲಲ್ಲೇ ಉಳಿದು ಅಲುಕುತ್ತಿದ್ದರೆ/ ನೋಯುತ್ತಿದ್ದರೆ ಎಕ್ಕೆಗಿಡದ ಹಾಲನ್ನು ಮುಳ್ಳು ಇರುವ ಜಾಗದಲ್ಲಿ ಸ್ವಲ್ಪ ದಾರಿ ಮಾಡಿ ಅದರಲ್ಲಿ ಬಿಟ್ಟರೆ ಮುಳ್ಳು ಅಥವಾ ಕಲ್ಲು ಸುಲಭವಾಗಿ ಹೊರ ಬರುತ್ತದೆ.

**ಕಾರೆಗಿಡದ ಮದ್ದು**

ದಮ್ಮು ಅಸ್ತಮ ಇದ್ದವರಿಗೆ ಕಾರೆಗಿಡದ ಬೇರನ್ನು ತಂದು ತೇದು ರಾತ್ರಿ ಚೆಂಬಿನಲ್ಲಿ ತುಂಬಿಟ್ಟ ನೀರಿನಲ್ಲಿ ಮುಂಜಾನೆ ಕುಡಿಸುತ್ತಾರೆ. ವಿಶೇಷವೆಂದರೆ ಮದ್ದಿಗೆ ಬಳಸುವ ಕಾರೆ ಗಿಡವನ್ನು ತರುವಾಗ ಈಶಾನ್ಯ ದಿಕ್ಕಿಗೆ ತಿರುಗಿ ಗಿಡದ ಬೇರನ್ನು ಒಂದೇ ಏಟಿಗೆ ಕತ್ತರಿಸಿ ತರಬೇಕು ಹಾಗಾದರೆ ಮಾತ್ರ ಅದು ಮದ್ದಿಗೆ ಬರುತ್ತದೆ ಇಲ್ಲವಾದರೆ ಇಲ್ಲ.

**ತುಂಬೆಗಿಡದ ಮದ್ದು**

ಯಾರಿಗಾದರೂ ತಲೆನೋವು, ಅರ್ಧ ತಲೆನೋವು ಬಂದಿದ್ದರೆ ಅಂಥವರಿಗೆ ಈ ಗಿಡದ ಸೊಪ್ಪಿಗೆ ಸ್ವಲ್ಪ ನಿರು ಸೇರಿಸಿ ಕೈಯಲ್ಲಿ ಉಜ್ಜಿ ಒಂದೆರಡು ಹನಿ ರಸವನ್ನು ಮೂಗಿಗೆ ಹಿಂಡಿದರೆ ತಲೆನೋವು, ಅರೆ ತಲೆನೋವು ವಾಸಿಯಾಗುತ್ತದೆ. (ಮಹಿತಿ:ಪಾಲಮ್ಮ) ತುಂಬೆಗಿಡದ ಹೂವನ್ನು ಜೇನುತುಪ್ಪದಲ್ಲಿ ಅರೆದು ಕೆಮ್ಮು ಆಗಿರುವ ಮಕ್ಕಳಿಗೆ ತಿನ್ನಿಸಿದರೆ ಕೆಮ್ಮು ವಾಸಿಯಾಗುತ್ತದೆ. ಈ ಗಿಡದ ಸೊಪ್ಪನ್ನು ಅರೆದು ಹಿಂಡಿ ರಸವನ್ನು ಗಾಯಕ್ಕೆ ಹಾಕಿದರೆ ರಕ್ತ ಸೋರುವುದು ನಿಂತು ಗಾಯ ಗುಣವಾಗುತ್ತದೆ.

**ಬಸಳೆ ಸೊಪ್ಪಿನ ಮದ್ದು**

ಜನಪದರ ಮಾತಿನಲ್ಲಿ ಬಾಯಿ ಬಸಳೆ ಎಂದು ಕರೆಯುತ್ತಾರೆ. ಬಸಳೆ ಸೊಪ್ಪಿನಲ್ಲಿ ಎರಡು ಬಗೆ ಹಸಿರು ಬಸಳೆ, ಕೆಂಪು ಬಸಳೆ, ಇದರ ಸೊಪ್ಪನ್ನು ತರಕಾರಿಯಾಗಿ ಅಡುಗೆಗೆ ಬಳಸುತ್ತಾರೆ. ಉಷ್ಣತೆಯಿಂದ

ಬಾಯಿ ಹುಣ್ಣು ಅಗಿದ್ದರೆ ಈ ಬಳ್ಳಿಯ ಸೊಪ್ಪನ್ನು ಬೇಯಿಸಿ ತಿನ್ನಬೇಕು ಅಲ್ಲದೆ ದನಕರುಗಳಿಗೆ ಗಾಯವಾಗಿ ಅದರಲ್ಲಿ ಹುಳುಗಳು ಆಗಿದ್ದರೆ ಈ ಬಳ್ಳಿಯ ಬೇರನ್ನು ಅರೆದು ಲೇಪಿಸಿದರೆ ಹುಳು ಬಾದೆ ಕಡಿಮೆಯಾಗುತ್ತದೆ.

**ದಾಸವಾಳಗಿಡದ ಮದ್ದು**

ತಲೆಯಲ್ಲಿ ಹೊಟ್ಟು ಆಗಿದ್ದರೆ ಈ ಗಿಡದ ಎಲೆಯನ್ನು ನೀರಿನಲ್ಲಿ ಕಿವುಚಿ ತಲೆಗೆ ಹಚ್ಚಿಕೊಂಡು ಸ್ನಾನಮಾಡಿದರೆ ಹೊಟ್ಟು ನಿವಾರಣೆಯಾಗುತ್ತದೆ. ದಾಸವಾಳದಲ್ಲೂ ಸಹ ಎಡರು ಬಗೆ ಬಿಳಿದಾಸವಾಳ, ಕೆಂಪುದಾಸವಾಳ. ಬಿಳಿಮುಟ್ಟು ಆಗುತ್ತಿದ್ದವರಿಗೆ ಬಿಳಿದಾಸವಾಳದ ಬೇರನ್ನು ಅರೆದು ಕುಡಿಸುತ್ತಾರೆ ಹೀಗೆ ಮಾಡುವುದರಿಂದ ಬಿಳಿಸೆರಗು ಬೇನೆ ವಾಸಿಯಾಗುತ್ತದೆ.

**ಹೊಂಗೆ ಮರದ ಮದ್ದು**

ಹೊಂಗೆ ಮರದ ಚಕ್ಕೆಯನ್ನು ತಂದು ಜಜ್ಜಿ ನೀರಿನಲ್ಲಿ ಅರ್ಧಗಂಟೆ ನೆನೆಹಾಕಿ ನಂತರ ಕಾಲಿ ಹೊಟ್ಟೆಗೆ ಕೊಟ್ಟರೆ ಬೇಧಿ ನಿಂತು ಉಷಾರಾಗುತ್ತಾರೆ. ಗಾಯಕ್ಕೂ ಸಹ ಹೊಂಗೆ ಮರದ ಕಾಯಿಯನ್ನು ಸುಟ್ಟು ಅರೆದು ಕೊಬ್ಬರಿ ಎಣ್ಣೆ, ಕರ್ಪೂರ, ಕಣಗಿಲೆ ಹಾಲು, ಮೆಣಸಿನಕಾಯಿ ಸುಟ್ಟು ಅರೆದು ಮಿಶ್ರಣಮಾಡಿ ಗಾಯಕ್ಕೆ ಹಚ್ಚುತ್ತಾರೆ. ಹೀಗೆ ಎರಡು ಮೂರು ದಿನ ಹಚ್ಚಿದರೆ ಗಾಯ ವಾಸಿಯಾಗುತ್ತದೆ.

**ಲಂಟಾನ ಗಿಡದ ಮದ್ದು**

ಉಳುಕಡ್ಡಿ ಆಗಿದ್ದರೆ ಆ ಜಾಗಕ್ಕೆ ಲಂಟಾನ ಗಿಡದ ಎಲೆಯನ್ನು ತಂದು ಉಜ್ಜಬೇಕು ಆ ಗಿಡದ ಎಲೆಯು ಸಣ್ಣ ಮುಳ್ಳನ್ನು ಹೊಂದಿದ್ದು ಚುಚ್ಚುವಂತೆ ಇರುತ್ತವೆ ಆದ್ದರಿಂದ ಅದರ ಎಲೆಯಿಂದ ಉಜ್ಜುವಾಗ ಉಳುಕಡ್ಡಿ ಆದ ಜಾಗದಲ್ಲಿ ಉರಿ ಬಂದು ರಕ್ತ ಬರುತ್ತದೆ ನಂತರ ಉಳುಕಡ್ಡಿ ವಾಸಿಯಾಗುತ್ತದೆ.

**ಅಡಿಟಿಪ್ಪಣಿ**

೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೭, ಬೇಟೆ ಮತ್ತು ಬೇಡರು, ಚೆನ್ನಹಗಿರಿ ಪ್ರಕಾಶನ, ಪೂಜಾರಳ್ಳಿ, ಪುಟ-೧೭.

೨. ರಮೇಶ್ ಸ ಚಿ, ೨೦೦೩, ಶಿಕಾರಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,ಪುಟ-೩.

೩. ದೇವೇಂದ್ರ ಕುಮಾರ ಹಕಾರಿ, ಸಂಧ್ಯಾರೆಡ್ಡಿ ಕೆ ಆರ್(ಸಂ), ೨೦೦೦, ಗ್ರಾಮೀಣ ಬೇಟೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು,ಪುಟ-೧.

೪. ರಮೇಶ್ ಸ ಚಿ: ೨೦೦೪, ಬೇಟೆ ಸಾಂಸ್ಕೃತಿಕ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-:೯.

೫. ರಾಮಚಂದ್ರೇಗೌಡ ಹಿ ಶಿ(ಸಂ), ೨೦೦೩, ಜನಪದವೈದ್ಯ, ಅಂಬಳಿಕೆ ಹಿರಿಯಣ್ಣ(ಲೇ), ಪ್ರಾಣಿವೈಧ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ–೧೪೩.

೬. ಮಂಜಪ್ಪ ಎಚ್ ಬಿ, ೨೦೧೭, ಕರಕರಮುಂಡರ ಸಾಮಾಜಿಕ ಅಧ್ಯಯನ, ಪಿಎಚ್ ಡಿ ಮಹಾ ಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪುಟ–೭೩.

೭ ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೭, ಬೇಟೆ ಮತ್ತು ಬೇಡರು, ಚಿನ್ನಹಗಿರಿ ಪ್ರಕಾಶನ, ಪೂಜಾರಳ್ಳಿ, ಪುಟ–೨೮೩.

೮. ರಮೇಶ್ ಸ ಚಿ, ೨೦೦೩, ಶಿಕಾರಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,ಪುಟ–೧೯.

೯. ರಾಮಚಂದ್ರೇಗೌಡ ಹಿ ಶಿ(ಸಂ), ೨೦೦೩, ಜನಪದವೈದ್ಯ, ಅಂಬಳಿಕೆ ಹಿರಿಯಣ್ಣ(ಲೇ), ಪ್ರಾಣಿವೈಧ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ–೧೫೭.

೧೦. ದೇವೇಂದ್ರ ಕುಮಾರ ಹಕಾರಿ, ಸಂಧ್ಯಾರೆಡ್ಡಿ ಕೆ ಆರ್(ಸಂ), ೨೦೦೦, ಗ್ರಾಮೀಣ ಪಶುಸಾಕಣೆ, ವಿಜಯ ಕುಮಾರ ಸಾಲಿಮಠ(ಲೇ), ಉತ್ತರ ಕರ್ನಾಟಕದಲ್ಲಿ ದನಸಾಕಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೩೨.

೧೧. ಅದೇ, ಪುಟ–೩೮.

೧೨. ವಿಜಯವಾಣಿ ದಿಪತ್ರಿಕೆ ೧೦.೧೦.೧೦೧೬.

೧೩. ದೇವೇಂದ್ರ ಕುಮಾರ ಹಕಾರಿ, ಸಂಧ್ಯಾರೆಡ್ಡಿ ಕೆ ಆರ್(ಸಂ), ೨೦೦೦, ಗ್ರಾಮೀಣ ಪಶುಸಾಕಣೆ, ಡಾ. ಎಂ ಜಿ ಈಶ್ವರಪ್ಪ(ಲೇ), ಬಯಲು ಸೀಮೆಯಲ್ಲಿ ದನಸಾಕಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೪.

೧೪. ಅದೇ, ಪುಟ–೪.

೧೫. ಈಶ್ವರಪ್ಪ ಎಂ ಜಿ, ೧೯೯೫, ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೧೫.

೧೬. ಅದೇ, ಪುಟ–೬.

೧೭. ರಮೇಶ್ ಸ ಚಿ(ಸಂ), ೨೦೧೧, ಕೃಷಿ ಜ್ಞಾನ ಪರಂಪರೆ, ಚಂದ್ರ ಕಾಳೇನಹಳ್ಳಿ(ಲೇ), ಕೃಷಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೨೫.

೧೮. ಅಂಬಳಿಕೆ ಹಿರಿಯಣ್ಣ, ೨೦೧೪, ಜಾನಪದ ಜಗಲಿ ಸಂಪುಟ-೩, ಸಂಚಿಕೆ-೧, ಅಂಜಿನಪ್ಪ ಎಸ್ ಆರ್(ಲೇ), ದೇಶಿ ಕೃಷಿ ತಂತ್ರಜ್ಞಾನ ಪ್ರಸ್ತುತತೆ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಪುಟ-೧೩೨.

೧೯. ರಾಮಚಂದ್ರೇಗೌಡ ಹಿ ಶಿ(ಸಂ), ೨೦೦೩, ಜನಪದವೈದ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೪.

೨೦. ಗಾಣದಾಳು ಶ್ರೀಕಂಠ, ೨೦೦೮, ಕೃಷಿ ಉಪಕರಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೧೧೯.

೨೧. ಮಲ್ಲಿಕಾರ್ಜುನ ಹೊಸಪಾಳ್ಯ, ೨೦೦೮, ಕೃಷಿ ಆಚರಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೪೦.

೨೨. ಅಂಬಳಿಕೆ ಹಿರಿಯಣ್ಣ, ೨೦೧೪, ಜಾನಪದ ಜಗಲಿ ಸಂಪುಟ-೩, ಸಂಚಿಕೆ-೧, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಪುಟ-೮೦.

೨೩. ಅದೇ, ಪುಟ-೮೧.

೨೪. ಅದೇ, ಪುಟ-೮೨.

೨೫. ಮಲ್ಲಿಕಾರ್ಜುನ ಹೊಸಪಾಳ್ಯ, ೨೦೦೮, ಕೃಷಿ ಆಚರಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೪.

೨೬. ಅದೇ, ಪುಟ-೨.

೨೭. ಅಂಬಳಿಕೆ ಹಿರಿಯಣ್ಣ, ೨೦೧೪, ಜಾನಪದ ಜಗಲಿ ಸಂಪುಟ-೩, ಸಂಚಿಕೆ-೧, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಪುಟ-೮೮.

೨೮. ಅರವಿಂದ ಮಾಲಗತ್ತಿ, ೨೦೦೬, ಕನ್ನಡ ವಿಷಯ ವಿಶ್ವಕೋಶ ಜಾನಪದ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಯಲ, ಮೈಸೂರು, ಪುಟ-೨೧.

೨೯. ಅಂಬಳಿಕೆ ಹಿರಿಯಣ್ಣ, ೨೦೧೪, ಜಾನಪದ ಜಗಲಿ ಸಂಪುಟ-೩, ಸಂಚಿಕೆ-೧, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಪುಟ-೧೭.

೩೦. ಶಾಲಿನಿ ಅಘುನಾಥ(ಸಂ), ೨೦೦೧, ಜನಪದ ಸಾಹಿತ್ಯ ದರ್ಶನ ಭಾಗ-೨೪, ಎಚ್ ರಾಮಾಚಾರ್(ಲೇ), ಸಸ್ಯ-ಪ್ರಾಣಿ-ಪರಿಸರ ಜಾನಪದ ವೈದ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,ಪುಟ-೫೮.

# ಅಧ್ಯಾಯ: ನಾಲ್ಕು
# ಕಂಪಳದೇವರ ಹಟ್ಟಿಯ ಆಚರಣೆ ಮತ್ತು ಸಂಪ್ರದಾಯಗಳು

೪.೧ ಬೇಟೆ ಸಂಬಂಧಿ ಆಚರಣೆಗಳು

೪.೨ ಪಶು ಸಂಬಂಧಿ ಆಚರಣೆಗಳು

೪.೩ ಕೃಷಿ ಸಂಬಂಧಿ ಆಚರಣೆಗಳು

೪.೪ ಇತರೇ ಆಚರಣೆಗಳು

# ಅಧ್ಯಾಯ: ನಾಲ್ಕು
# ಕಂಪಳದೇವರ ಹಟ್ಟಿಯ ಆಚರಣೆ ಮತ್ತು ಸಂಪ್ರದಾಯಗಳು

## ಪ್ರಸ್ತಾವನೆ

ನಮ್ಮ ಜನಪದರಿಗೆ ಆಹಾರದಷ್ಟೇ ಆಚರಣೆ, ಧರ್ಮ, ದೇವರು ಮುಖ್ಯವಾದವು. ಆಚರಣೆ ಸಂಪ್ರದಾಯಗಳೆಂದರೆ ಪ್ರತಿ ವರ್ಷ ಇಡೀ ಹಟ್ಟಿಯ(ಗ್ರಾಮದ) ಜನರೆಲ್ಲಾ ಸೇರಿ ನಿಗದಿತ ಸಮಯ, ನಿರ್ದಿಷ್ಟಪಡಿಸಿದ ಸ್ಥಳ ಮತ್ತು ಪರಂಪರೆಯಿಂದಲೂ ನಡೆಸಿಕೊಂಡು ಬಂದಿರುವಂತೆ ಸಾಮೂಹಿಕವಾಗಿ ಸೇರಿ ಆಚರಿಸುವ ಆಚರಣೆಗಳಾಗಿವೆ. ಅವು ಊರಿನ ಪ್ರಮುಖ ದೈವಕ್ಕೆ ಸಂಬಂಧಿಸಿದ ಹಬ್ಬ, ಜಾತ್ರೆ ಅಥವಾ ಇತರೆ ಆಚರಣೆಗಳಾಗಿರಬಹುದು. ಇಂತಹ ಆಚರಣೆ ಸಂಪ್ರದಾಯಗಳ ಕುರಿತು ನೋಡುವುದಾದರೆ ಮೊದಲು ಹಬ್ಬ, ಜಾತ್ರೆಗಳ ಹುಟ್ಟು ಅವುಗಳಿಗಿರುವ ವ್ಯತ್ಯಾಸ, ಸಾಮ್ಯತೆ ತಿಳಿಯುವುದು ಅಗತ್ಯ. "ಹಬ್ಬವು ಕೌಟುಂಬಿಕ ಸಂಬಂಧ ವರ್ಧನೆಗೆ ಸಹಕಾರಿ, ಔತಣ ಮುಖ್ಯವಾಗಿದ್ದು ಪರಸ್ಪರ ಆಮಂತ್ರಣವಿರುತ್ತದೆ. ಜಾತ್ರೆ ನಡೆಯುವ ಸ್ಥಳಕ್ಕೆ ಹಲವಾರು ಕಡೆಗಳಿಂದ ಜನ ಜಮಾಯಿಸುತ್ತಾರೆ. ಇಲ್ಲಿ ಔತಣ ಅಪರೂಪ, ಆಮಂತ್ರಣದ ಅನಿವಾರ್ಯವಿರುವುದಿಲ್ಲ. ಹಬ್ಬ ಮತ್ತು ಜಾತ್ರೆಯ ವ್ಯತ್ಯಾಸವನ್ನು ತಿಳಿಸುವ ಹಬ್ಬ ಊಟಕ್ಕೆ ಚಂದ ಜಾತ್ರೆ ನೋಟಕ್ಕೆ ಚಂದ ಎಂಬ ಮಾತೇ ಇದೆ"[1]. ಹಬ್ಬವನ್ನು ಕೇವಲ ಒಂದು ಮನೆಯವರು, ಮನೆತನದವರು ಒಂದು ಬೆಡಗಿನವರು ಅಥವಾ ಒಂದು ಜಾತಿಯವರು ಸೇರಿ ಆಚರಿಸಿದರೆ ಜಾತ್ರೆಯನ್ನು ಎಲ್ಲಾ ಜಾತಿ ಧರ್ಮದ ಜನರೂ ಸೇರಿ ಸಂತೋಷದಿಂದ ಆಚರಿಸುವಂತಹದ್ದಾಗಿದೆ. ಹೀಗೆ ಹಬ್ಬ ಮತ್ತು ಜಾತ್ರೆಗಳಿಗೆ ವ್ಯತ್ಯಾಸವಿದ್ದರೂ ಹಟ್ಟಿಗಳಲ್ಲಿ ಹಬ್ಬ ಮತ್ತು ಜಾತ್ರೆಗಳನ್ನು ಒಂದೇ ಪರಿಭಾಷೆಯಲ್ಲಿ ಭಾವಿಸುವುದುಂಟು.

ಜನಪದರು ಹಟ್ಟಿ ಅಥವಾ ಗ್ರಾಮಗಳಲ್ಲಿ ಆಚರಿಸುವ ಸಂಪ್ರದಾಯ ಹಬ್ಬ, ಜಾತ್ರೆಗಳಲ್ಲಿ ಆಯಾ ಸಮುದಾಯದ ಅಥವಾ ಹಳ್ಳಿಯ, ಆಯಾ ಪ್ರದೇಶದ ಜನಪದರ ಪಾರಂಪರಿಕ ತಿಳುವಳಿಕೆ ಅಭಿವ್ಯಕ್ತಗೊಳ್ಳುವುದನ್ನು ಗಮನಿಸಬಹುದಾಗಿದೆ. ಜನಪದರು ಆಚರಿಸುವ "ಹಬ್ಬ ಮತ್ತು ಜಾತ್ರೆಗಳ

ಗುಣಲಕ್ಷಣಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ. ಅವು ಕ್ರಮವಾಗಿ ಬೇಸಾಯಗಾರರ ಹಳ್ಳಿ ಸಂಸ್ಕೃತಿ ಮತ್ತು ಪಶುಪಾಲಕ ವಲಸೆಗಾರರ 'ಹಟ್ಟಿ ಸಂಸ್ಕೃತಿ'ಗಳಿಂದ ಹುಟ್ಟಿದವೆಂಬುವುದು ಖಚಿತ"೨. ಪಶುಪಾಲನೆ ವೃತ್ತಿಗನುಗುಣವಾಗಿ ವಲಸೆಗಾರರಾಗಿದ್ದ ಜನರು ಹಟ್ಟಿ, ಹಳ್ಳಿ, ಊರುಗಳಲ್ಲಿ ನೆಲೆನಿಲ್ಲತೊಡಗಿದಾಗ ಪಶುಪಾಲನೆ ಮತ್ತು ಕೃಷಿ ಸಂಸ್ಕೃತಿಯ ಸಮೀಕರಣಗೊಂಡ ಆಚರಣೆಗಳು ಬಹುತೇಕ ಹಬ್ಬ ಆಚರಣೆಗಳಲ್ಲಿ ಕಂಡು ಬರುತ್ತವೆ. ಅದರಲ್ಲೂ ಕಂಪಳದೇವರ ಹಟ್ಟಿಯಲ್ಲಿನ ಜನಪದರು ಆಚರಿಸುವ ಆಚರಣೆಗಳಾದ ಹಬ್ಬ, ಜಾತ್ರೆಗಳಲ್ಲಿ ಬೇಸಾಯಗಾರರ ಹಳ್ಳಿ ಸಂಸ್ಕೃತಿ ಮತ್ತು ವಲಸೆಗಾರರ ಹಟ್ಟಿ ಸಂಸ್ಕೃತಿಯು ಅನಾವರಣಗೊಳ್ಳುವುದನ್ನು ನೋಡಬಹುದು.

ಜಾತ್ರೆ ಮತ್ತು ಹಬ್ಬಗಳು ಪರಸ್ಪರ ಪೂರಕವಾದವು "ಹಬ್ಬ ಎಂಬ ಪದವು ಸಂಸ್ಕೃತದ ಪರ್ವನ್ ಎಂಬ ಪದದಿಂದ ಬಂದಿದೆ. ಪರ್ವನ್ ಅಥವಾ ಪರ್ವ ಪದದ ತದ್ಭವ ರೂಪ ಹಬ್ಬ ಎಂಬುದಾಗಿದೆ. ಪರ್ವ ಎಂದರೆ ಬದಲಾವಣೆಯ ಕಾಲ ಇದು ಮಾನವನ ಬಯಕೆಯ ಸಂಕಲ್ಪ ಅಥವಾ ವ್ರತ ಕೈಗೊಳ್ಳುವ ಕಾಲ, ಉತ್ಸವ, ಪುಣ್ಯಕಾಲ, ಸಂಕ್ರಮಣದ ಕಾಲ ಆನಂದದ ಹಂಚಿಕೆಯ ಸಂದರ್ಭ ಮೊದಲಾದ ಸಮುಚ್ಚಯ ಅರ್ಥಗಳನ್ನು ಕೊಡುತ್ತದೆ"೩. ಮಾನವ ತನ್ನ ಬದುಕಿನ ಏಕತಾನತೆಯನ್ನು ಹೋಗಲಾಡಿಸಿಕೊಂಡು ಆತ್ಮೀಯರನ್ನು ಕೂಡಿಕೊಳ್ಳುವುದಕ್ಕಾಗಿ, ಮನಸಂತೋಷ ಹೊಂದುವುದಕ್ಕಾಗಿ ಕೆಲವು ದಿನಗಳನ್ನು ಗೊತ್ತು ಮಾಡಿಕೊಂಡು ಅದನ್ನು ಹಬ್ಬ ಹರಿದಿನಗಳೆಂದು ಕರೆದುಕೊಂಡಿರಬೇಕು. ಅಲ್ಲದೆ ಹೊಲ, ಗದ್ದೆ, ತೋಟ, ಮನೆ ಮಾರುಗಳ ಕ್ಷೇಮ ಸಾಧನೆಗಾಗಿ ಅಡ್ಡಿ ಆತಂಕಗಳನ್ನೊಡ್ಡುವ ದುಷ್ಟಶಕ್ತಿಗಳನ್ನು ನಿವಾರಿಸಿ ತನ್ನನ್ನು ರಕ್ಷಿಸುವ ದೈವವನ್ನು ಸಂತೃಪ್ತಿಗೊಳಿಸುವ ಸಲುವಾಗಿ ಸಂಪ್ರದಾಯ ಆಚರಣೆಗಳಿಂದ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಮಾನವ ಹಬ್ಬ, ಆಚರಣೆ, ಸಂಪ್ರದಾಯಗಳನ್ನು ರೂಢಿಸಿಕೊಂಡಿರಬಹುದು. ಹಬ್ಬ, ಉತ್ಸವ, ಜಾತ್ರೆಗಳು ಜನಪದರ ಸಂಸ್ಕೃತಿಯ ಅವಿಭಾಜ್ಯ ಅಂಗ. ಹಬ್ಬ ಆಚರಣೆಗಳು, ಸಂಪ್ರದಾಯವನ್ನು ಉಳಿಸಿ ಬೆಳಸಿಕೊಂಡು ಬರುತ್ತವೆ. ಇದರ ಜೊತೆಗೆ ಭವ್ಯ ಸಂದೇಶವನ್ನು ಜನತೆಗೆ ನೀಡುತ್ತವೆ. ಹಬ್ಬಗಳು ಆಯಾ ಭಾಗದ ಜನರ ಸಂಸ್ಕೃತಿಯ ಪ್ರತೀಕಗಳಾಗಿವೆ.

ಕಂಪಳದೇವರ ಹಟ್ಟಿಯ ಜನಪದರ ಆಚರಣೆ ಮತ್ತು ಸಂಪ್ರದಾಯಗಳನ್ನು ನೋಡುವುದಾದರೆ ಇವರು ಪ್ರಕೃತಿಯ ಆರಾಧಕರು ಪ್ರಕೃತಿಯಲ್ಲಿನ ನೆಲ, ಮುಗಿಲು, ಮನೆ, ಕಲ್ಲು, ಗಿಡ, ಹುತ್ತ, ಬೆತ್ತ, ಎತ್ತು ಎಲ್ಲವೂ ಅವರ ಪಾಲಿಗೆ ದೇವರೇ. ಹಟ್ಟಿಯಲ್ಲಿನ ಜನರು ಹಲವು ಹಬ್ಬ ಸಂಪ್ರದಾಯಗಳನ್ನು ಮಾಡುತ್ತಾರೆ. ಮಳೆ ಬಂದರೆ ಒಂದು ಹಬ್ಬ, ಮಳೆ ಬಾರದಿದ್ದರೆ ಒಂದು ಹಬ್ಬ ಹೀಗೆ ಆಯಾ ಋತುಮಾನಕ್ಕೆ ಅನುಗುಣವಾಗಿ ಒಂದೊಂದು ಹಬ್ಬವನ್ನು ಆಚರಿಸುತ್ತಾ ತಮ್ಮ ಸುಖ ಸಂತೋಷವನ್ನು ವ್ಯಕ್ತಪಡಿಸುತ್ತಾ ಬರುತ್ತಿದ್ದಾರೆ. ಇಂತಹ ಹಬ್ಬ ಹರಿದಿನಗಳಿಂದಲೇ ನಮ್ಮ ಜನಪದರ ಸಂಸ್ಕೃತಿ ಪರಂಪರೆಯ ಮಹೋನ್ನತಿ ನಮಗಿಂದು ಮೂರ್ತಸ್ವರೂಪದಲ್ಲಿ ಕಾಣಬರುತ್ತದೆ. ಈ ಹಬ್ಬ, ಜಾತ್ರೆಗಳು, ಆಚರಣೆಗಳು ಒಂದು ದೃಷ್ಟಿಯಿಂದ ವೈಜ್ಞಾನಿಕವೂ ಮತ್ತು ಶಾಸ್ತ್ರೋಕ್ತವೂ ಆಗಿದೆಯೆಂದು ಹೇಳಬಹುದು. ನಮ್ಮ ಜನಪದರು ಕರ್ಮ ಜೀವಿಗಳು ಹಗಲಿರುಳು ದುಡಿದು ದಣಿದು ಜೀವಕ್ಕೆ ತೃಪ್ತಿ ತಂದುಕೊಳ್ಳಲು

ಆಸೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ತಮ್ಮ ಬಾಳಿನಲ್ಲಿ ಸುಖ ಶಾಂತಿ ನೆಮ್ಮದಿ ತಂದುಕೊಳ್ಳಲು ಮನರಂಜನೆಯನ್ನು ಪಡೆಯಲು ಸಹಬಾಳ್ವೆಯನ್ನು ನಡೆಸಲು ಹಬ್ಬಗಳನ್ನು ಸೃಷ್ಟಿಸಿಕೊಂಡಿರುತ್ತಾರೆ. ಅಲ್ಲದೆ ಆಚರಣೆ ಸಂಪ್ರದಾಯಗಳಿಂದ ತಮ್ಮ ಪರಂಪರೆಯ ಮುಂದುವರಿಕೆ ಸಾಧ್ಯವಿದೆ ಎಂದು ಅರಿತವರಾಗಿದ್ದಾರೆ.

**೪.೧ ಬೇಟೆ ಸಂಬಂಧಿ ಆಚರಣೆಗಳು**

ಸಮಾಜದಲ್ಲಿ ಯಾವುದೇ ಒಂದು ಸಮುದಾಯ ಅಥವಾ ವರ್ಗ ಬಹುಕಾಲದಿಂದ ರೂಢಿಸಿಕೊಂಡು ಬಂದಿರುವ ನಂಬಿಕೆಯನ್ನು ಕ್ರಿಯಾರೂಪದ ಸಂಪ್ರದಾಯವೆನ್ನಬಹುದು. ಈ ಸಂಪ್ರದಾಯ ಒಬ್ಬ ವ್ಯಕ್ತಿಗೆ ಸಂಬಂಧಿಸಿರದೇ ಇಡಿ ಸಮುದಾಯದ ಸಂಪ್ರದಾಯ ಆಚರಣೆ ಎನಿಸಿಕೊಳ್ಳುತ್ತದೆ. ಹಬ್ಬ ಹರಿದಿನಗಳಲ್ಲಿ ಮಾಡುವಂತಹ ಉಪವಾಸ, ಮಡಿ, ಮೈಲಿಗೆ, ಬೇವಿನ ಉಡುಗೆ, ಬೇಟೆ ಮುಂತಾದವು ಪೂರ್ವಿಕರಿಂದ ಇಂದಿನ ದಿನಮಾನಗಳಲ್ಲಿ ಹಿರಿಯರ ಸಮ್ಮುಖದಲ್ಲಿ ಯುವ ಪೀಳಿಗೆ ಮುನ್ನೆಡೆಸುತ್ತಿರುವುದು ನಂಬಿಕೆಯಿಂದ ಮಾತ್ರ ಸಮಾಜದಲ್ಲಿ ಆಚರಣೆಗೊಳ್ಳುತ್ತದೆ. ಒಂದು ವೇಳೆ ನಂಬಿಕೆ ಇಲ್ಲದಿದ್ದರೆ ಇವರ ಅಸ್ತಿತ್ವವೆಂದೋ ಅಳಿಸಿ ಹೋಗಬಹುದಿತ್ತು. ಆದರೆ ಹಾಗೆ ಆಗದೇ ಇಂದಿನವರೆಗೂ ಆಚರಣೆಯಲ್ಲಿವೆ. ಇಂತಹ ಆಚರಣೆಗಳು ಚೆನ್ನಾಗಿ ತಿಳಿದವರು ಮಾತ್ರ ಮುಖಂಡತ್ವವನ್ನು ವಹಿಸಿ ಆಚರಣೆ ಯಶಸ್ವಿಗೊಳಿಸುವುದರಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತಾರೆ.

ನಮ್ಮ "ಜನಪದ ಸಂಸ್ಕೃತಿಗೆ ಆಚರಣೆಯೇ ಬೆನ್ನೆಲುಬು. ಆಚರಣೆಯಿಲ್ಲದೆ ಯಾವ ದೈವದ ಅಸ್ತಿತ್ವವೂ ಸಾಧ್ಯವಿಲ್ಲ. ಜನಪದ ಧರ್ಮ ಒಂದು ಬಗೆಯಲ್ಲಿ ಆಚರಣೆಯ ಧರ್ಮ ಎನ್ನಬಹುದು. ಆ ಆಚರಣೆ ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ವ್ಯಕ್ತಿಯಿಂದಲೇ ಆಗಬೇಕಾದುದು. ದೇವತೆಗೂ ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು"[೨]. ಒಂದು ಸಮುದಾಯದ ಸಂಸ್ಕೃತಿ, ಹಿನ್ನಲೆ, ಪರಂಪರೆಯನ್ನು ಇಂತಹ ಆಚರಣೆಗಳಿಂದ ಗ್ರಹಿಸಲು ಸಾಧ್ಯವಾಗಿದೆ. ಕಾರಣ ಆಚರಣೆಗಳು ದಿಢೀರನೆ ಹುಟ್ಟಿಕೊಂಡವುಗಳಲ್ಲ ಒಂದು ಸಮುದಾಯದ ಪರಂಪರೆಯನ್ನು ಮುಂದಿನ ತಲೆಮಾರಿಗೂ ವರ್ಗಾಯಿಸುವ ಸಲುವಾಗಿ ಹುಟ್ಟಿಕೊಂಡು ಹಿಂದಿನಿಂದಲೂ ಆಚರಣೆಯಲ್ಲಿ ಉಳಿದು ಬಂದಂಥವುಗಳಾಗಿವೆ. ಅದರಂತೆಯೇ ಕಂಪಳದೇವರ ಹಟ್ಟಿಯ ಮ್ಯಾಸಬೇಡರಲ್ಲಿ ಇಂದಿಗೂ ಸಹ ತಮ್ಮ ಮೂಲ ಆಚರಣೆಗಳು ರೂಢಿಯಲ್ಲಿವೆ. ಇವರು ಪಾರಂಪರಿಕ ಸಂಸ್ಕೃತಿಯಾದ ಬೇಟೆ ಸಂಸ್ಕೃತಿಯು ಹಟ್ಟಿಯಲ್ಲಿ ಆಚರಿಸುವ ಹಬ್ಬ ಹರಿದಿನಗಳಲ್ಲಿ ಪ್ರಾಣಿಗಳನ್ನು ಬಲಿ ನೀಡಿ ದೇವತೆಗಳನ್ನು ಸಂತೃಪ್ತಿಗೊಳಿಸುವ ಆಚರಣೆಯಿಂದ ತಿಳಿದು ಬರುತ್ತದೆ.

ಪ್ರಾಚೀನ ಕಾಲದಲ್ಲಿ ಬೇಡರು ದೈವಗಳಿಗೆ ಪ್ರಾಣಿಬಲಿ ಆಚರಣೆ ಮಾಡುತ್ತಿದ್ದರು. ಪ್ರಾಣಿ ಬಲಿ ನೀಡುವ ಕ್ರಮವು ಇಂದಿನದಲ್ಲ ಇದು ಆದಿಮ ಕಾಲದಿಂದಲೂ ಇವರಲ್ಲಿ ಆಚರಣೆ ಸಂಪ್ರದಾಯಗಳ ಮೂಲಕವಾಗಿ ಬಂದಿರುವುದು ನಿಜದ ಸಂಗತಿ. ಇಂದು ಸಹ ಹಟ್ಟಿಯ ಮ್ಯಾಸಬೇಡರಲ್ಲಿ ಕೆಲವು ಹಬ್ಬ ಆಚರಣೆಗಳಲ್ಲಿ ಬಲಿ ನೀಡುವ ಬೇಟೆ ಆಚರಣೆ ಮುಂದುವರೆದುಕೊಂಡು ಬಂದಿದೆ. ಇವರಲ್ಲಿ

ವಾರ್ಷಿಕಾವರ್ತನದ ಆಚರಣೆಗಳಲ್ಲಿ ಪ್ರಾಣಿಬಲಿ ನೀಡುವ ಆಚರಣೆ ರೂಢಿಯಲ್ಲಿರುವುದನ್ನು ಕಾಣಬಹುದು.

**೪.೧.೧ ಯುಗಾದಿಯ ಬೇಟೆ ಆಚರಣೆ**

ಮೂಲತಃ ಕಾಡು ವಾಸಿಗಳಾದ ಬೇಡರು ತಮ್ಮ ಹೊಟ್ಟೆಪಾಡಿಗೆ ಕಾಡು ಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ತಿನ್ನುತ್ತಾ ಜೀವಿಸುತ್ತಿದ್ದರು. ಕಾಲಾನಂತರ ಅರಣ್ಯನಾಶದಿಂದ ಮತ್ತು ಸರ್ಕಾರ ವಿಧಿಸಿದಅರಣ್ಯಕಾಯಿದೆಯಿಂದಾಗಿ ಬೇಟೆಯನ್ನೇ ಆಶ್ರಯಿಸಿ ಬದುಕುತ್ತಿದ್ದ ಬೇಡರು ತಮ್ಮ ಜೀವನಕ್ಕೆ ಪರ್ಯಾಯ ವೃತ್ತಿಗಳಾದ ಪಶುಪಾಲನೆ ಕೃಷಿಯನ್ನು ರೂಢಿಸಿಕೊಂಡರು. ಸ್ವಾತಂತ್ರ್ಯ ಪೂರ್ವದ ಅರಣ್ಯ ನೀತಿಗಳಾದ

ಮದ್ರಾಸ್ ಫಾರೆಸ್ಟ್ ಆಕ್ಟ್ – ೧೮೮೨

ಮೈಸೂರು ಫಾರೆಸ್ಟ್ ಆಕ್ಟ್ – ೧೯೦೦

ಇಂಡಿಯನ್ ಫಾರೆಸ್ಟ್ ಆಕ್ಟ್ – ೧೯೨೭ ಈ ಕಾಯ್ದೆಗಳಲ್ಲದೆ.

ಸ್ವಾತಂತ್ರ್ಯದ ನಂತರ ಕೆಲವು ಕಾಯಿದೆಗಳಾದ ವನ್ಯಜೀವಿಗಳ ಸಂರಕ್ಷಣೆಗಾಗಿ ೯–೯–೧೯೭೨ ರಲ್ಲಿ ನಿರ್ಬಂಧ ಕಾಯಿದೆಯನ್ನು ಜಾರಿಗೊಳಿಸಿದೆ ಇಂತಹ ಕಾಯಿದೆಗಳು ಮತ್ತು ಕಾಡುಗಳ ನಾಶದಿಂದಾಗಿ ಬೇಡರು ಬೇಟೆಯನ್ನು ತೊರೆದು ಪಶುಪಾಲನೆ ಮತ್ತು ಕೃಷಿಯಲ್ಲಿ ತೊಡಗುವಂತಾಯಿತು. ಆದರೂ ಸಹ ಹಬ್ಬ ಹರಿದಿನಗಳಲ್ಲಿ, ಜೀವನಾವರ್ತಕ ಆಚರಣೆಗಳಲ್ಲಿ ಕೆಲವೊಂದು ಸಂದರ್ಭದಲ್ಲಿ ಕಾಡುಗಳಿಗೆ ಬೇಟೆಗೆ ಹೋಗುವುದು ಅಥವಾ ಸಾಕಿದ ಕುರಿ, ಮೇಕೆಗಳನ್ನೇ ಬೇಟೆಯೆಂದು ಬಲಿಕೊಡುವುದು ಇಂದಿಗೂ ಇವರಲ್ಲಿ ರೂಢಿಯಲ್ಲಿ ಉಳಿದು ಬಂದಿದೆ. ಇಂತಹ ಬೇಡರ ಬೇಟೆ ಸಂಬಂಧಿ ಆಚರಣೆಗಳಲ್ಲಿ ಯುಗಾದಿಯ ಬೇಟೆ ಆಚರಣೆಯೂ ಸಹ ಒಂದು.

ಬೇಡರು ಯುಗಾದಿ ಹಬ್ಬದಲ್ಲಿ ಸಾಂಪ್ರದಾಯಿಕವಾಗಿ ಹಿಂದಿನಿಂದಲೂ ನಡೆದುಕೊಂಡು ಬಂದಂತಹ ಪದ್ಧತಿಯ ಪ್ರಕಾರ ಅಮವಾಸ್ಯೆಯ ದಿನ ಮುಂಜಾನೆ ಸ್ತ್ರೀಯರು ಮನೆ, ಗುಡಿಸಲುಗಳನ್ನು ಬಳಿದು ಸಗಣಿಯಿಂದ ನೆಲ ಸಾರಿಸಿ ಸ್ವಚ್ಛಗೊಳಿಸುತ್ತಾರೆ. ಅಂದು ಇವರ ಪಾರಂಪರಿಕ ವೃತ್ತಿಯಾದ ಬೇಟೆಯ ಆಯುಧಗಳಾದ ಭರ್ಚಿ, ಚಾಕು, ಗಂಡುಗೊಡಲಿ, ಕೊಡಲಿ, ತಲೆಕೋಲು, ಬಲೆ, ಚಂದ್ರಾಯುಧ, ಈಟಿ, ಇಂತಹ ಸಾಧನಗಳನ್ನು ಗುಡಿಸಲ ಅಟ್ಟದಿಂದ ಹೊರತೆಗೆದು ಅವುಗಳನ್ನು ಪೂಜಿಸುತ್ತಾರೆ. ನಂತರ ಆ ಆಯುಧಗಳು, ಬಲೆಗಳು ಬೇಟೆ ನಾಯಿಗಳೊಂದಿಗೆ ಹಟ್ಟಿಯ ಎಲ್ಲಾ ಮನೆಯಿಂದಲೂ ಒಬ್ಬೊಬ್ಬರಂತೆ ಮೆರವಣಿಗೆಯ ಮೂಲಕ ಅಲಿಗೆ ಬಡಿಯುತ್ತಾ, ಕೇಕೆ ಹಾಕುತ್ತಾ ಕಾಡಿಗೆ ಬೇಟೆಗೆ ಹೋಗುತ್ತಾರೆ. ಅಂದು ಹಟ್ಟಿಯ ಎಲ್ಲಾ ಮನೆಯವರು ಊಟಕ್ಕೆ ದೋಸೆಯನ್ನು ಮಾಡಿರುತ್ತಾರೆ. ಮೂಲತಃ ಬೇಡರು ಬೇಟೆಗಾರರು ಮತ್ತು ಮಾಂಸಹಾರಿಗಳು ಆದ್ದರಿಂದ ತಮ್ಮ ಪರಂಪರೆಯನ್ನು ಮರುಕಳಿಸುವಂತೆ ಬೇಟೆಗೆ ಹೋಗುತ್ತಾರೆ. ಬೇಟೆಗೆ ಹೋಗುವ ಮತ್ತೊಂದು ಕಾರಣವೆಂದರೆ ಈ

ಹಬ್ಬದಿಂದ ಬಿತ್ತನೆ ಕೆಲಸಗಳು/ಕೃಷಿ ಚಟುವಟಿಕೆಗಳು ಆರಂಭವಾಗುವುದರಿಂದ ತಾವು ಬಿತ್ತಿದ ಬೀಜಗಳನ್ನು ಮತ್ತು ಬೆಳದ ಪೈರನ್ನು ಕಾಡುಪ್ರಾಣಿಗಳಾದ ಹಂದಿ, ಜಿಂಕೆ, ಮೊಲ, ಇಲಿಗಳು ಮೊದಲಾದ ಪ್ರಾಣಿಗಳು ತಿಂದು ಹಾಕುವ ಸಾಧ್ಯತೆ ಇರುವುದರಿಂದ ಅವುಗಳನ್ನು ಹತೋಟಿಗೆ ತರಲು ಹಬ್ಬದ ದಿನ ಕಾಡಿಗೆ ಬೇಟೆಗೆ ಹೋಗುತ್ತಾರೆ. ಕಂಪಳದೇವರ ಹಟ್ಟಿಯ ಜನಪದರ ಯುಗಾದಿ ಬೇಟೆಯ ವಿಶೇಷವೆಂದರೆ ಇವರು ಮೊದಲ ದಿನ(ಅಮವಾಸ್ಯೆಯ ದಿನ) ದೇವರ ಬೇಟೆ ಎಂದು ಮೊಲದ ಬೇಟೆಯಾಡುತ್ತಾರೆ. ಅಂದು ದೇವರ ಪೂಜೆ ಮಾಡಿ ದೇವರ ಹೆಸರಲ್ಲಿ ಮೊಲವನ್ನು ಬೇಟೆಯಾಡಿ ಪೂಜಾರಿಗೆ ಒಪ್ಪಿಸುತ್ತಾರೆ.

ಎರಡನೆಯ ದಿನ ಸಮುದಾಯದ ಬೇಟೆ ಎಂದು ಹಂದಿಯ ಬೇಟೆಗೆ ಹೋಗುತ್ತಾರೆ. ಬೇಟೆಯಾಡಿ ತಂದ ಹಂದಿಯ ಕಿವಿ ಬಾಲವನ್ನು ಕತ್ತರಿಸಿ ಬುಡ್ಡೇಕಲ್ಲಿನ ಕೆಳಗೆ ಹೂಳುವುದು ಎಲ್ಲಾ ಊರುಗಳಲ್ಲಿ ಸಾಮಾನ್ಯ ಆದರೆ ಕಂಪಳದೇವರ ಹಟ್ಟಿಯಲ್ಲಿ ಬುಡ್ಡೆಕಲ್ಲು ಇಲ್ಲವಾದ್ದರಿಂದ ಹಟ್ಟಿಯ ಗಡಿ ಅಥವಾ ಹಟ್ಟಿಯ ಪ್ರವೇಶದ ಹಂತದಲ್ಲಿ ಹಂದಿಯನ್ನು ಪೂಜಿಸಿ ಅದರ ಕಿವಿ ಬಾಲವನ್ನು ಕತ್ತರಿಸಿ ಚರಗ ಮಾಡಿ ಹಟ್ಟಿಯ ಸುತ್ತ ಚರಗ ಚೆಲ್ಲುತ್ತಾರೆ. ಚರಗವನ್ನು ಉಲುಸು ಎಂದು ಭಾವಿಸುತ್ತಾರೆ. ನಂತರ ಹಂದಿಯನ್ನು ಮಾದಿಗ ಸಮುದಾಯದವರು ಹೊತ್ತೊಯ್ದು ಹಂಚಿಕೊಂಡು ತಿನ್ನುತ್ತಾರೆ. ಈ ರೀತಿಯಾಗಿ ಬೇಡರ ಮೂಲ ಬೇಟೆ ಪದ್ದತಿಯು ಅವರು ಆಚರಿಸುವ ಯುಗಾದಿ ಆಚರಣೆಯಲ್ಲಿ ಸಾಂಪ್ರದಾಯಿಕ ಆಚರಣೆಯಾಗಿ ಅನಾವರಣಗೊಳ್ಳುತ್ತದೆ.

### ೪.೧.೨ ಮಾರಮ್ಮನ ಹಬ್ಬದಲ್ಲಿ ಬೇಟೆ ಆಚರಣೆ

ಮಾರಮ್ಮನ ಹಬ್ಬವು ಬಲಿ ಪ್ರಧಾನವಾದ ಆಚರಣೆಯಾಗಿದೆ. ದೇವಿಯನ್ನು ಮೆರೆಸುವಾಗ, ಪೂಜೆ ಮಾಡುವಾಗ ಕುರಿ, ಕೋಣ, ಮೇಕೆ, ಹೋತಗಳನ್ನು ಬಲಿ ಕೊಡುವ ಪದ್ದತಿ ಮಾರಮ್ಮನ ಹಬ್ಬದಲ್ಲಿ ಸಾಮಾನ್ಯವಾಗಿದೆ. ಈ ಬಲಿಯ ಆಚರಣೆಯಲ್ಲಿ ಪ್ರಧಾನವಾದುದು ಕೋಣನ ಬಲಿಯ ಆಚರಣೆ. ಮಾರಮ್ಮ ದೇವಿಗೆ ಮೊದಲು ಪಟ್ಟದ ಕೋಣವನ್ನು ಬಲಿಕೊಟ್ಟ ನಂತರ ಕುರಿ, ಮೇಕೆಗಳನ್ನು ಬಲಿಕೊಡಲಾಗುತ್ತದೆ. ಹೀಗೆ ದೇವರಿಗೆ ಬಲಿಕೊಡುವ ಕುರಿ, ಮೇಕೆ, ಕೋಣಗಳನ್ನು ಬೇಟೆ ಎಂದು ಕರೆಯಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಕಾಡಿನಲ್ಲಿನ ಕ್ರೂರ ಪ್ರಾಣಿಗಳನ್ನು ಆಹಾರಕ್ಕಾಗೋ ಅಥವಾ ರಕ್ಷಣೆಗಾಗಿಯೋ ಮಾರಕಾಸ್ತ್ರಗಳಿಂದ ಹೊಡೆದುರುಳಿಸುವುದನ್ನು ಬೇಟೆ ಎಂದು ಕರೆಯಲಾಗುತ್ತಿತ್ತು ಆದರೆ ಇಂದು ತಾವೇ ಸಾಕಿದ ಕೋಣ, ಕುರಿ, ಮೇಕೆ, ಹೊತ, ಕೋಳಿಗಳನ್ನು ದೇವಿಯ ಮುಂದೆ ಹರಕೆ ಹೊತ್ತು ಬಲಿಕೊಡುವುದನ್ನು ಬೇಟೆ ಎಂದು ಕರೆಯುವುದು ರೂಢಿಯಾಗಿದೆ. ಪ್ರತಿವರ್ಷ ಸೆಪ್ಟೆಂಬರ್ ತಿಂಗಳಲ್ಲಿ ಕಂಪಳದೇವರ ಹಟ್ಟಿಯಲ್ಲಿ ಮಾರಮ್ಮನ ಹಬ್ಬ ಮಾಡುತ್ತಾರೆ. ಈ ಭಾಗದಲ್ಲಿ ಮೊಟ್ಟಮೊದಲಿಗೆ ಗೋಸಂದ್ರ ಮಾರಮ್ಮನ ಹಬ್ಬ ಮಾಡುತ್ತಾರೆ. ಈ ಜಾತ್ರೆ ಆದ ನಂತರ ಉಳಿದ ಊರುಗಳಲ್ಲಿ ಮಾರಮ್ಮನ/ಗ್ರಾಮದೇವತೆಗಳ ಹಬ್ಬ ಮಾಡುತ್ತಾರೆ. ಗೋಸಮುದ್ರದಲ್ಲಿ ಮಂಗಳವಾರ ಬುಧವಾರ ಬಲಿ ನೀಡಿ ಹಬ್ಬ ಆಚರಿಸಿದರೆ ಗುರುವಾರ ಕಂಪಳದೇವರ ಹಟ್ಟಿಯಲ್ಲಿ ಮಾರಮ್ಮನ

ಹಬ್ಬ ಮಾಡುತ್ತಾರೆ. ಪ್ರತಿವರ್ಷ ಯಾರಾದರೂ ಒಂದು ಮನೆಯವರು ಮಾರಮ್ಮನ ಹೆಸರಿನಲ್ಲಿ ಒಂದು ಕೋಣದ ಕರುವನ್ನು ಬಿಟ್ಟಿರುತ್ತಾರೆ. ಅದನ್ನು ಅಂದಿನಿಂದ ದೇವರ ಕೋಣ ಎಂದು ಮುದ್ರೆ ಒತ್ತಿ ಬಿಡಲಾಗುತ್ತದೆ. ಅದು ಎಲ್ಲೇ ಹೋದರು ಎಲ್ಲೇ ಮೇದರು ಯಾರೂ ಹೊಡೆಯುವುದಿಲ್ಲ. ಈ ದೇವರ ಕೋಣ ವರ್ಷಪೂರ ಚೆನ್ನಾಗಿ ಮೇದು ಕೊಬ್ಬಿರುತ್ತದೆ ಆ ಕೋಣವನ್ನು ಪಟ್ಟದ ಕೋಣ ಎನ್ನುತ್ತಾರೆ.

ಮಾರಮ್ಮನ ಹಬ್ಬವನ್ನು ಯಾವ ದಿನ ಮಾಡುವುದು ಎಂದು ಒಂದುವಾರ ಮುಂಚಿತವಾಗಿಯೇ ಮಾದಿಗ ಸಮುದಾಯದ ವ್ಯಕ್ತಿಯಿಂದ ಡಂಗೂರ ಸಾರಿಸಲಾಗುತ್ತದೆ. ಅದರಂತೆಯೇ ಹಟ್ಟಿಯ ಎಲ್ಲಾ ಮನೆಯವರು ಮನೆಗೊಂದರಂತೆ ಕುರಿ, ಟಗರು, ಮೇಕೆ ಮಾದಿಗ ಸಮುದಾಯದವರು ಕೋಣ, ಎತ್ತು, ಎಮ್ಮೆಗಳನ್ನು ಸಾಕಿಕೊಂಡಿರುತ್ತಾರೆ. ಹಬ್ಬದ ಸಿದ್ದತೆಗೆ ಎಲ್ಲ ಮನೆಯವರು ಮನೆಗಳನ್ನು ಸುಣ್ಣ ಬಣ್ಣದಿಂದ ಬಳಿದುಕೊಂಡು ಮಾರಮ್ಮನ ಗುಡಿಯನ್ನು ಸುಣ್ಣ ಜಾಜಿನಿಂದ ಬಳಿದು ಸಿದ್ದತೆ ಮಾಡಿಕೊಂಡಿರುತ್ತಾರೆ. ಹಬ್ಬದ ಹಿಂದಿನ ದಿನ ಹಗಲೆಲ್ಲಾ ಮಾರಮ್ಮನ ಪಟ್ಟದ ಕೋಣವನ್ನು ಮಾದಿಗ ಸಮುದಾಯದವರು ಹಗ್ಗಕಟ್ಟಿಕೊಂಡು ಮನೆಮನೆಗೆ ಹೊಡೆದುಕೊಂಡು ಹೋಗುತ್ತಾರೆ. ಆಗ ಎಲ್ಲಾ ಸಮುದಾಯದ ಮನೆಯವರು ಕೋಣಕ್ಕೆ ಪೂಜೆ ಮಾಡಿ ಅದರ ನೆತ್ತಿಯ ಮೇಲೆ ಹರಳೆಣ್ಣೆಯನ್ನು ಸುರಿಯುತ್ತಾರೆ.

ಹೀಗೆ ಇಡೀ ಹಟ್ಟಿಯ ಎಲ್ಲಾ ಮನೆಯವರು ಅದಕ್ಕೆ ಪೂಜೆ ಮಾಡಿ ನೆತ್ತಿಗೆ ಹರಳೆಣ್ಣೆ ಹಾಕಿ ಓಕುಳಿ ಚೆಲ್ಲಿ ಬೆಲ್ಲ, ಅಕ್ಕಿ, ಬೇಳೆ ನೀಡಿ ಕಳುಹಿಸುತ್ತಾರೆ. ಈ ಅಕ್ಕಿ ಬೇಳೆಯನ್ನು ಮಾದಿಗ ಸಮುದಾಯದ ಮಾರಮ್ಮನ ಪೂಜಾರಿಯು ತೆಗೆದುಕೊಳ್ಳುತ್ತಾನೆ. ಕೋಣವನ್ನು ಊರ ತುಂಬೆಲ್ಲಾ ಮೆರವಣಿಗೆ ಮಾಡಿದ ಮೇಲೆ(ವಿಶೇಷವೆಂದರೆ ಅಂದು ಆ ಕೋಣಕ್ಕೆ ನೀರು ಕುಡಿಸುವುದಿಲ್ಲ) ಆ ದಿನ ಮಧ್ಯರಾತ್ರಿ ಹನ್ನೆರಡು ಗಂಟೆಗೆ ಪಟ್ಟದ ಕೋಣವನ್ನು ಮಾರಮ್ಮನ ಗುಡಿಯ ಮುಂದೆ ಬಲಿಕೊಡಲಾಗುತ್ತದೆ. ಈ "ಕೋಣವನ್ನು ಕಡಿಯುವವನು ಬೇಡ ಸಮುದಾಯದವನಾಗಿರುತ್ತಾನೆ. ಅವನನ್ನು ಬೇಡರ ಕನ್ನೆಯ್ಯ ಎನ್ನುವರು"[೫]. ಆದರೆ ಹಟ್ಟಿಯಲ್ಲಿ ಅವನನ್ನು ತಳವಾರ ಎನ್ನುವರು ಕೋಣವನ್ನು ಕಡಿದು ಬಲಿ ನೀಡಿದ ನಂತರ ಅದರ ಬಲಗಾಲನ್ನು ಕೊಯ್ದು ಕೋಣದ ರುಂಡದ ಬಾಯಲ್ಲಿ ಆ ಕಾಲನ್ನು ಇಟ್ಟು ದೇವಿಯ ಗುಡಿಯ ಮುಂದಿನ ಮಾತಂಗಿ ದೇವತೆಯ ಗುಡಿಯಲ್ಲಿ ಬಲಿ ಕೊಟ್ಟ ಕೋಣದ ತಲೆಯನ್ನು ಇಟ್ಟು ತಲೆಯ ಮೇಲೆ ಅದೇ ಕೋಣದ ಕೊಬ್ಬನ್ನು ಇಟ್ಟು ದೀಪ ಹಚ್ಚುತ್ತಾರೆ. ಈ ರೀತಿಯಾಗಿ ಕೋಣವನ್ನು ಊರೆಲ್ಲ ಮೆರವಣಿಗೆ ಮಾಡಿ ಬಲಿಕೊಡುವುದು ಪ್ರಾಚೀನ ಕಾಲದಲ್ಲಿ ಕಾಡು ಪ್ರಾಣಿಗಳನ್ನು ಅಟ್ಟಾಡಿಸಿ ಬೇಟೆಯಾಡುತ್ತಿದ್ದುದರ ಪ್ರತೀಕದಂತೆ ಈ ಆಚರಣೆ ಕಂಡು ಬರುತ್ತದೆ. ಪಟ್ಟದ ಕೋಣವನ್ನು ದೇವಿಗೆ ಬಲಿ ನೀಡಿದ ಮೇಲೆ ಅದರ ರಕ್ತದಿಂದ ಅನ್ನವನ್ನು ಕಲಸಿ ಚರಗವನ್ನು ಸಿದ್ದಪಡಿಸಿ ಬೇಡರು ಮತ್ತು ಮಾದಿಗ ಸಮುದಾಯದವರು ಹಟ್ಟಿಯ ಸುತ್ತಾ ಚರಗ ಚೆಲ್ಲುತ್ತಾರೆ. ಹಟ್ಟಿಗೆ ಯಾವುದೇ ದುಷ್ಟ ಶಕ್ತಿಗಳು ಬಾರದಿರಲಿ ಎಂಬ ಉದ್ದೇಶಕ್ಕೆ ಮತ್ತು ಮಳೆ, ಬೆಳೆ ಸಮೃದ್ದಿಯಾಗಿ ಆಗಲಿ ಎಂಬ ಕಾರಣಕ್ಕೆ ಈ ರೀತಿಯಾಗಿ ಬಲಿ ನೀಡಿದ ಕೋಣದ ರಕ್ತವನ್ನು ಅನ್ನದಲ್ಲಿ ಕಲಸಿ

ಅದಕ್ಕೆ ಕುಂಕುಮ, ಭಂಡಾರ ಬೆರಸಿ ಚರಗವನ್ನು ಮಾಡಿ ಹಟ್ಟಿಯ ಸುತ್ತಾ ಚೆಲ್ಲಲಾಗುತ್ತದೆ. ಮರುದಿನ ಬೆಳಗಿನ ಜಾವದಿಂದ ಹಟ್ಟಿಯವರು ತಮ್ಮ ಶಕ್ತಾನುಸಾರ ಕೋಣ, ಕುರಿ, ಮೇಕೆ, ಟಗರುಗಳನ್ನು ದೇವಿಗೆ ಬಲಿ ನೀಡುತ್ತಾರೆ ಕೆಲವರು ದೇವಿಯ ಗುಡಿ ಮುಂದೆ ಬಲಿ ನೀಡಿದರೆ ಕೆಲವರು ತಮ್ಮ ಹೊಲಗಳಲ್ಲಿ, ಮನೆಗಳಲ್ಲಿ ಬೇಟೆಯನ್ನು ಕೊಯ್ದುಕೊಳ್ಳುತ್ತಾರೆ. ಹೀಗೆ ಬೇಟೆ ಮಾಡಿಕೊಂಡು ಬಂದುಬಳಗದವರೆಲ್ಲಾ ಸೇರಿ ಮಾಂಸದ ಊಟವನ್ನು ಮಾಡುತ್ತಾರೆ. ಮಳೆ, ಬೆಳೆ ಚನ್ನಾಗಿ ಆಗಿ ಮಕ್ಕಳಿಗೆ, ದನಕರುಗಳಿಗೆ ರೋಗ-ರುಜಿನಗಳು ಬಾರದಿರಲಿ ಎಂಬ ಕಾರಣಕ್ಕೆ ಮಾರಮ್ಮನ/ಗ್ರಾಮದೇವತೆಯ ಹಬ್ಬ ಮಾಡಲಾಗುತ್ತದೆ. ಈ ರೀತಿಯಾಗಿ ಹಟ್ಟಿಯಲ್ಲಿ ಆಚರಿಸುವ ಹಬ್ಬಗಳಲ್ಲಿ ಒಂದಾದ ಮಾರಮ್ಮನ ಹಬ್ಬವು ಬಲಿ ಕೇಂದ್ರಿತ ಹಬ್ಬವಾಗಿರುವುದರಿಂದ ಬೇಟೆ ಸಂಬಂಧಿ ಹಬ್ಬವೆಂದು ಹೇಳಬಹುದು. ಹಾಗೆಯೇ ಜನರು ದೇವಿಯಲ್ಲಿ ಮಳೆ ಬೆಳೆಯ ಕುರಿತು ಕೇಳುವುದರಿಂದ ಇದು ಕೃಷಿ ಸಂಬಂಧಿ ಆಚರಣೆಯೂ ಸಹ ಹೌದು.

**೪.೧.೩ ಜವಳ ತೆಗೆಸುವ ಸಂದರ್ಭದಲ್ಲಿ ಬೇಟೆ ಆಚರಣೆ**

ಹಟ್ಟಿಯ ಮ್ಯಾಸ ಬೇಡರಲ್ಲಿ ಕೆಲವೊಂದು ಜೀವನಾವರ್ತಕ ಆಚರಣೆಗಳಲ್ಲಿ ಬೇಟೆ ಆಚರಣೆ ಕಂಡು ಬರುತ್ತದೆ. ಅದರಲ್ಲಿ ಮಗುವಿನ ಹುಟ್ಟು ಕೂದಲು ತೆಗೆಸುವ ಸಂದರ್ಭದಲ್ಲಿ ಬೇಟೆ ಮಾಡುವುದನ್ನು ಕಾಣಬಹುದು. ಇವರು ತಮ್ಮ ಮಕ್ಕಳ ಹುಟ್ಟು ಕೂದಲು ದೇವರಿಗೆ ಹರಕೆ ಹೊತ್ತುಕೊಂಡು ಬಿಟ್ಟಿರುತ್ತಾರೆ. ಇದಕ್ಕೆ ಕಾರಣ ನಮ್ಮ ಮಕ್ಕಳ ಭವಿಷ್ಯ ಉಜ್ವಲವಾಗಲಿ ಯಾವುದೇ ರೀತಿಯ ಕೆಡುಕು ಆಗದಿರಲಿ ಎಂದು ಬೇಡಿಕೊಂಡಿರುತ್ತಾರೆ. ಹಟ್ಟಿಯ ಮ್ಯಾಸಬೇಡರು ತಮ್ಮ ಮಕ್ಕಳ ಜವಳ ತೆಗೆಸುವ ಕಾರ್ಯಕ್ರಮಕ್ಕೆ ತಮ್ಮ ಬಂಧುಗಳನ್ನೆಲ್ಲಾ ಕರೆದು ತಮ್ಮ ಮನೆದೇವರ ಗುಡಿಗೆ ವಾದ್ಯಗಳ ಸಮೇತ ಹೋಗಿ ಮಗುವಿನ ಸೋದರ ಮಾವನಿಂದ ತಲೆಗೂದಲು ತೆಗೆಯುವ ಶಾಸ್ತ್ರ ಮಾಡಿಸಿ ಅಂದರೆ ವಿಳ್ಯೆದೆಲೆಯನ್ನು ಕತ್ತರಿಯ ಹಾಗೆ ಮಾಡಿ ಎಲೆ ಕತ್ತರಿಯಿಂದ ಕೂದಲನ್ನು ಕತ್ತರಿಸುವ ಹಾಗೆ ಶಾಸ್ತ್ರ ಮಾಡಿ ಪೂಜೆ ಮಾಡಿಕೊಂಡು ಹೋಗುತ್ತಾರೆ. ನಂತರ ಕ್ಷೌರಿಕನಿಂದ ಮಗುವಿನ ತಲೆಗೂದಲು ಕತ್ತರಿಸುತ್ತಾರೆ. ಅಂದು ದೇವಸ್ಥಾನದ ಮುಂದೆ ಕುರಿ, ಮೇಕೆ, ಬಲಿಕೊಟ್ಟು ಅದರ ಮಾಂಸದ ಅಡುಗೆಯನ್ನು ಎಲ್ಲರೂ ಸಾಮೂಹಿಕವಾಗಿ ಊಟ ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಸಿಹಿ ತಿಂಡಿಗಳಾದ ಬೂಂದಿ, ಪಾಯಸ, ಅನ್ನಸಾರು ಮುಂತಾದವುಗಳನ್ನು ಮಾಡುವ ಕ್ರಮ ಕಂಡುಬರುತ್ತದೆ. ಆದರೂ ಸಹ ಕೂದಲು ತೆಗೆಯುವ ಶಾಸ್ತ್ರದಲ್ಲಿ ಹಟ್ಟಿಯ ಬೇಡರು ಅಲ್ಲದೆ ಎಲ್ಲಾ ಮ್ಯಾಸಬೇಡರು ಬೇಟೆಯನ್ನು ತಮ್ಮ ದೇವರಿಗೆ ಬಲಿಕೊಡುವ ಆಚರಣೆ ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ.

**೪.೧.೪ ದಿವಸ ಕಾಲ ಮಾಡುವ ಸಂದರ್ಭದಲ್ಲಿ ಬೇಟೆ ಆಚರಣೆ**

ಜೀವನಾವರ್ತಕ ಆಚರಣೆಗಳಲ್ಲಿ ಕೊನೆಯ ಮತ್ತು ಪ್ರಮುಖ ಆಚರಣೆ ಎಂದರೆ ದಿವಸಕಾಲ(ತಿಥಿ) ಮಾಡುವುದು. ಸತ್ತ ವ್ಯಕ್ತಿಯ ಆತ್ಮವನ್ನು ಬರಮಾಡಿಕೊಂಡು ಅದರ ಮೂಲಕ ಆರ್ಶೀವಾದ ಪಡೆದು ಆತ್ಮವನ್ನು ಹಿರಿಯರಲ್ಲಿ ಸೇರಿಸುವ ಕಾರ್ಯಕ್ರಮವಿದು. ಈ ಹಿಂದೆ ಇವರಲ್ಲಿ ಯಾರಾದರೂ

ಸತ್ತರೆ ಹಟ್ಟಿಯ ಮಾದಿಗ ಸಮುದಾಯದ ವ್ಯಕ್ತಿಯಿಂದ ಸತ್ತ ವ್ಯಕ್ತಿಯ ಸಂಬಂಧಿಗಳಿಗೆ ಸುದ್ದಿಯನ್ನು ತಲುಪಿಸಲು ಊರುಗಳಿಗೆ ಕಳುಹಿಸಲಾಗುತ್ತಿತ್ತು. ಈಗ ದೂರವಾಣಿಗಳ ಮೂಲಕ ವಿಷಯ ತಿಳಿಸಲಾಗುತ್ತಿದೆ. ನೆಂಟರು ತಂದ ಹೊಸ ಬಿಳಿ ಬಟ್ಟೆಯನ್ನು ಹೆಣಕ್ಕೆ ಹೊದಿಸಿ ಉದ್ದಕ್ಕೆ ಮಲಗಿಸುತ್ತಾರೆ. ಮನೆಯ ಮುಂದುಗಡೆ ಹೊಸ ಗಡಿಗೆಯಲ್ಲಿ ಮೂರು ಪಾವು ಅಕ್ಕಿಯ ಅನ್ನವನ್ನು ಬೇಯಿಸುತ್ತಾರೆ. ಆ ಸಮಯಕ್ಕಾಗಲೇ ಮಾದಿಗ ಸಮುದಾಯದವರು ಸುಡುಗಾಡಿನಲ್ಲಿ ಗುಂಡಿಯನ್ನು ತೋಡಿರುತ್ತಾರೆ. ಇಲ್ಲವೆ ಸುಡಲು ಕಟ್ಟಿಗೆಗಳನ್ನು ಸಿದ್ಧಪಡಿಸಿರುತ್ತಾರೆ. ಸಂಬಂಧಿಕರೆಲ್ಲಾ ಬಂದ ನಂತರ ಈಗಾಗಲೇ ಸಿದ್ಧಪಡಿಸಿದ್ದ ಚಟ್ಟದ ಮೇಲೆ ಶವವನ್ನು ಮುಖ ಮೇಲೆ ಮಾಡಿ ಮಲಗಿಸಿ ಅದರ ಮೇಲೆ ಬಿಳಿಯ ಬಟ್ಟೆ ಹಾಕಿ ಭದ್ರವಾಗಿ ಕಟ್ಟಿ ಸ್ಮಶಾನಕ್ಕೆ ಹೊತ್ತುಕೊಂಡು ಹೊರಡುತ್ತಾರೆ.

ಶವದ ಮುಂದೆ ಅನ್ನದ ಗಡಿಗೆಯನ್ನು ತೆಳು ಹಗ್ಗದಿಂದ ಕಟ್ಟಿಕೊಂಡು ಹಿರಿಯ ಅಥವಾ ಕಿರಿಯ ಮಗ ಅದನ್ನು ಹಿಡಿದುಕೊಂಡು ಶವದ ಮುಂದೆ ಸಾಗುತ್ತಾನೆ. ಇದನ್ನು ಪಿಂಡವೆಂದು ಕರೆಯುತ್ತಾರೆ. ಶವಯಾತ್ರೆ ಮಸಣದ ಅರ್ಧ ದಾರಿಗೆ ಹೋದ ಮೇಲೆ ದಾರಿಯಲ್ಲಿನ ತಂಗಡಿ ಗಿಡದ ಬುಡಕ್ಕೆ ಚಟ್ಟವನ್ನು ಇರಿಸುತ್ತಾರೆ. ಇಂಡಿ ಕೂಳು, ನೀರು ಹೊತ್ತ(ಪಿಂಡ) ಮಗ ಮತ್ತು ಮೊಮ್ಮಗ ಇಬ್ಬರನ್ನು ತಂಗಡಿ ಗಿಡ ಮತ್ತು ಚಟ್ಟ ಎರಡನ್ನು ಸೇರಿಸಿಕೊಂಡು ಮೂರು ಸುತ್ತು ಸುತ್ತಿಸುವರು. ತದನಂತರ ಅದೇ ಗಿಡದ ಬುಡದಲ್ಲಿ ಕೂಳು ನೀರಿನ ಮಡಿಕೆ ಇರಿಸಿ ಹೆಣದ ಹಿಂದೆ ಹೋದವರೆಲ್ಲಾ ಕೈಗೊಂದು ಕಲ್ಲು ತೆಗೆದು ಸೋರೆಗೆ ಹಾಕುತ್ತಾರೆ. ಅಲ್ಲಿಂದ ಮುಂದಕ್ಕೆ ಹೆಣವನ್ನು ಹೊತ್ತು ಬಂಧುಬಳಗದವರು ಮುಂದೆ ನಡೆದರೆ ಕೂಳು ನೀರು ತೆಗೆದುಕೊಂಡು ಹೋದ ಮಗ ಅಥವಾ ಮೊಮ್ಮಗ ಹೆಣ ಹೊತ್ತವರನ್ನು ಹಿಂದಿರುಗಿ ನೋಡದೆ ಮರಳಿ ಮನೆಗೆ ಬರುವರು. ನಂತರ ಬಂಧು ಬಾಂಧವರು ಶವಸಂಸ್ಕಾರವಾದ ಮೇಲೆ ಮನೆಗೆ ಬರುವರು ಆದರೆ ಅವರು ಹಾಗೆಯೇ ಮನೆಯ ಒಳಗೆ ಬರುವಂತಿಲ್ಲ. ದಾರಿಯಲ್ಲಿ ಎಲ್ಲಾದರು ಹಳ್ಳದಲ್ಲಿ ಸ್ನಾನ ಮಾಡಿಕೊಂಡು ಮನೆಯ ಒಳಗೆ ಬರುತ್ತಾರೆ. ಆ ವೇಳೆಗಾಗಲೇ ಮನೆಯಲ್ಲಿ ಉಳಿದವರು ಯಾರಾದರೂ ಹಸುವಿನ ಸಗಣಿ ತಂದು ಮನೆಯ ಮುಂದೆ ಇಟ್ಟು ಅದರೊಳಗೆ ಗರಿಕೆ ಹುಲ್ಲು ಇಟ್ಟಿರುತ್ತಾರೆ. ಶವಸಂಸ್ಕಾರಕ್ಕೆ ಹೋದವರು ಅಲ್ಲಿಂದ ಬಂದು ಆ ಗರಿಕೆ ಪಾಸೆಯನ್ನು ಕಾಲ ಹಚ್ಚಿಟ್ಟಿಯಿಂದ ಮುಟ್ಟಿಸಿಕೊಂಡು ಒಳಗೆ ಬರುವರು. ಸತ್ತ ವ್ಯಕ್ತಿಯ ಬಳಗದವರಿಗೆ ವೀಳ್ಯ ಕೊಟ್ಟು ಹನ್ನೆರಡನೆಯ ದಿನ ಕಾರ್ಯಕ್ಕೆ ಬರುವೆವೆಂದು ಹೇಳಿ ಹೋಗುವರು.

**ಬೇಟೆ ಆಚರಣೆ**

ಶವಸಂಸ್ಕಾರವಾದ ಮೂರನೆಯ ದಿನದಲ್ಲಿ ಒಂದು ಕುರಿಯನ್ನೋ ಮೇಕೆಯನ್ನೋ ಬೇಟೆ ಕೊಯ್ದು ಹಟ್ಟಿಯಲ್ಲಿ ಅಡುಗೆ ಮಾಡುತ್ತಾರೆ. ಸತ್ತವನ ಹೆಸರಲ್ಲಿ ಪ್ರತ್ಯೇಕ ಎಡೆ ಮಾಡಿ ಅದನ್ನು ಮಾದಿಗ ಸಮುದಾಯದವರು ಮತ್ತು ಸತ್ತ ವ್ಯಕ್ತಿಯ ಮನೆಯ ಒಬ್ಬರು ಎತ್ತಿಕೊಂಡು ಸಮಾಧಿಯ ಬಳಿ ಬಂದು ಶವದ ತಲೆಯ ಕಡೆ ಒಂದು ಗುಂಡಿ ತೋಡಿ ಅದರಲ್ಲಿ ಎಲೆಯಿಟ್ಟು ಎಲೆಯ ಮೇಲೆ ಎಡೆ ಇಡುತ್ತಾರೆ. ಹಾಗೆ ಎಡೆ ಇಟ್ಟು ಸ್ವಲ್ಪ ದೂರದಲ್ಲಿ ಹೋಗಿ ನಿಂತು ಕಾಗೆ ಬಂದು ಅದನ್ನು ತಿನ್ನುವುದೇ

ಎಂದು ಕಾಯುವರು. ಕಾಗೆ ಬೇಗ ಬಂದು ಎಡೆಯನ್ನು ತಿಂದರೆ ಅವನು ಪುಣ್ಯ ಮಾಡಿದ್ದಾನೆ ಎಂದು ತಿಳಿಯುತ್ತಾರೆ. ಒಂದು ವೇಳೆ ಕಾಗೆ ಬಹಳ ಹೊತ್ತಾದರೂ ಬಂದು ಎಡೆಯನ್ನು ತಿನ್ನದಿದ್ದರೆ ಸತ್ತ ವ್ಯಕ್ತಿ ಪಾಪ ಮಾಡಿದ್ದಾನೆಂದು ನಂಬುತ್ತಾರೆ. ಅಂತಹ ಸಂದರ್ಭದಲ್ಲಿ ಯಾರಾದರೂ ವಾಪಸ್ಸು ಹಟ್ಟಿಗೆ ಬಂದು ಒಂದು ಹಸುವನ್ನು ಹೊಡೆದುಕೊಂಡು ಬಂದು ಅದರ ಬಾಯಿಗೆ ಎಡೆ ತಿನಿಸುತ್ತಾರೆ. ಹಸು ಅಥವಾ ಕಾಗೆ ತಿಂದು ಬಿಟ್ಟ ಸ್ವಲ್ಪ ಎಡೆಯನ್ನು ತಂದು ಎಲ್ಲರ ಎಲೆಗೂ ಸ್ವಲ್ಪ ಸ್ವಲ್ಪ ಹಾಕಲಾಗುತ್ತದೆ. ನಂತರ ಅವರು ಅದನ್ನು ತಿಂದು ಮನೆಗೆ ಬಂದು ಸತ್ತ ವ್ಯಕ್ತಿಯ ಕುಟುಂಬದವರು ಅಂದರೆ ಅವನ ಅಣ್ಣ ತಮ್ಮಗಳ ಮನೆಯವರಷ್ಟೇ ಸೇರಿ ಬಲಿಕೊಟ್ಟ ಕುರಿಯ ಮಾಂಸದ ಅಡುಗೆಯನ್ನು ಊಟ ಮಾಡುತ್ತಾರೆ. ಇದನ್ನು ಸಣ್ಣ ದಿವಸ ಎಂದು ಕರೆಯುತ್ತಾರೆ. ನಂತರ ಹನ್ನೆರಡನೇ ದಿನದಂದು ದೊಡ್ಡದಿವಸ ಮಾಡುತ್ತಾರೆ. ಅಂದು ಎಲ್ಲಾ ಬಂಧುಗಳೂ ಬರುತ್ತಾರೆ. ಅಂದು ಮಾಂಸದ ಊಟ ಮಾಡಿಸುವುದಿಲ್ಲ. ಸಿಹಿ ಅಡುಗೆ ಊಟ ಮಾಡುತ್ತಾರೆ. ಸತ್ತ ಮೂರನೇ ದಿನದಲ್ಲಿ ಆ ವ್ಯಕ್ತಿ ಯಾವ ಸ್ಥಳದಲ್ಲಿ ಮರಣ ಹೊಂದಿರುತ್ತಾನೋ ಅದೇ ಸ್ಥಳದಲ್ಲಿ ಪ್ರಾಣಿ ಬಲಿಯನ್ನು ಕೊಡುತ್ತಾರೆ. ಇದನ್ನು ಬ್ಯಾಟೆ ಎಂದು ಕರೆಯುತ್ತಾರೆ. ಈ ಬಲಿ ಆಚರಣೆಗೆ "ಕರಿ ಎಂದು ಕರೆಯುವುದುಂಟು. ಅದರ ಮಾಂಸದಿಂದ ಮನೆಮಂದಿಯೆಲ್ಲಾ ಊಟ ಮಾಡುತ್ತಾರೆ. ಈ ರೀತಿಯಾದ ಬೇಟೆ ಸಂಬಂಧಿ ಆಚರಣೆಗಳು ಹಟ್ಟಿಯ ಮ್ಯಾಸಬೇಡರ ವಾರ್ಷಿಕಾವರ್ತನದ ಆಚರಣೆಗಳಲ್ಲಿ ಅನಾವರಣಗೊಳ್ಳುವುದನ್ನು ಕಾಣಬಹುದು. ಮತ್ತು ಬೇಟೆ ಆಚರಣೆಯಿಂದ ಈ ಸಮುದಾಯದ ಪ್ರಾಚೀನತೆ, ಮೂಲ ವೃತ್ತಿ, ಆಹಾರ ವೈವಿದ್ಯತೆ ಎಲ್ಲವನ್ನು ಗ್ರಹಿಸಲು ಸಾಧ್ಯವಾಗುತ್ತದೆ.

**೪.೨ ಪಶುಗಳಿಗೆ ಸಂಬಂಧಿಸಿದ ಆಚರಣೆಗಳು**

ಸಾಮಾನ್ಯವಾಗಿ ಗ್ರಾಮದೇವತೆಗಳ ಹಬ್ಬಗಳು, ಜಾತ್ರೆಗಳು ಸಾಮೂಹಿಕವಾಗಿ ಆಚರಿಸುವಂತಹವುಗಳಾಗಿವೆ. ಪರಂಪರೆಯಿಂದಲೂ ಪಶುಪಾಲನೆ ಮತ್ತು ಕೃಷಿಯನ್ನು ಮಾಡಿಕೊಂಡು ಬರುತ್ತಿರುವ ಜನಪದರ ಹಬ್ಬ ಸಂಪ್ರದಾಯಗಳಿಗೆ ಕಾರಣವೆಂದರೆ ಕಾಲಕಾಲಕ್ಕೆ ಸರಿಯಾಗಿ ಮಳೆಯಾಗಿ ರೈತರು ಹೊಲಗದ್ದೆಗಳಲ್ಲಿ ಫಲ ಪಡೆಯುತ್ತಿದ್ದರೆ ಅದಕ್ಕೆಲ್ಲಾ ಆಯಾ ಊರಿನ ಜನಪದ ದೈವವೇ ಕಾರಣ ಮತ್ತು ತಮ್ಮ ಕೃಷಿ ಬದುಕಿಗೆ ನೆರವಾದ ಎತ್ತುಗಳೂ ಸಹ ಕಾರಣ ಎಂದು ಅರಿತು ಆಯಾ ಗ್ರಾಮಗಳಲ್ಲಿ ಪರಂಪರೆಯಿಂದಲೂ ಇಂದಿನವರೆಗೆ ಹಬ್ಬ-ಜಾತ್ರೆಗಳನ್ನು ಶ್ರದ್ದೆಯಿಂದ ಆಚರಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಇಂತಹ ಹಬ್ಬಾಚರಣೆಗಳಲ್ಲಿ ಕಂಪಳ ದೇವರ ಹಟ್ಟಿಯ ಜನಪದರು ತಮ್ಮ ನಿತ್ಯದ ಕೃಷಿ ಬದುಕಿಗೆ ನೆರವಾದ ಎತ್ತುಗಳಿಗೆ, ಹಸುಗಳಿಗೆ ಸಂಬಂಧಿಸಿದಂತೆ ಕೆಲವು ಹಬ್ಬಗಳನ್ನು ಆಚರಿಸುತ್ತಾರೆ.

ಕೃಷಿ ಕೆಲಸದಲ್ಲಿ ಕೃಷಿಕನಿಗಿಂತ ಹೆಚ್ಚು ಶ್ರಮವಹಿಸಿ ದುಡಿಯುವ ಎತ್ತುಗಳನ್ನು ಹಟ್ಟಿಯ ಜನರು ಬರೀ ಪಶುಗಳು ಎಂದು ಭಾವಿಸದೆ ತಮ್ಮ ಮನೆಯ ಸದಸ್ಯರು ಎಂದು ಭಾವಿಸುತ್ತಾರೆ. ಜನಪದರಲ್ಲಿ ಬಳಕೆಯಲ್ಲಿರುವ 'ಎತ್ತು ಇಲ್ಲದವನಿಗೆ ಎದೆ ಇಲ್ಲ' ಎಂಬ ನಾನ್ನುಡಿ ಕೃಷಿಕನಿಗೆ ವ್ಯವಸಾಯಕ್ಕೆ ಎತ್ತು

ಎಷ್ಟು ಅಗತ್ಯ ಎಂಬುದನ್ನು ತಿಳಿಸುತ್ತದೆ. ವಿಶೇಷವೆಂದರೆ ಹಟ್ಟಿಯ ಬೇಡರಲ್ಲಿ ಸತ್ತ ತಮ್ಮ ಪೂರ್ವಿಕರ ಹೆಸರಲ್ಲಿ ದೇವರಿಗೆ ಎತ್ತು, ಹಸು, ಕರುಗಳನ್ನು ಸಹ ಬಿಡುತ್ತಾರೆ. ತಮ್ಮ ಕೃಷಿ ಬದುಕಿನ ಭಾಗವೇ ಆಗಿರುವ ಎತ್ತುಗಳನ್ನು ಗೌರವಿಸುವ, ಪೂಜಿಸುವ ಆಚರಣೆಗಳು ಹಟ್ಟಿಯಲ್ಲಿ ಹಲವು ನಡೆಯುತ್ತವೆ. ಹಟ್ಟಿಯಲ್ಲಿ ಎತ್ತುಗಳ ಹಬ್ಬವೆಂದೇ ಆಚರಿಸುವ ಹಬ್ಬಗಳು ಮೂರು, ಅವುಗಳನ್ನು ಕೃಷಿಕರ ಕ್ಯಾಲೆಂಡರಿನ ಪ್ರಕಾರ ನೋಡುವುದಾದರೆ ಮೊದಲಿಗೆ ಆಚರಿಸುವ ಹಬ್ಬ, ಮುಂಗಾರಿ ಹಬ್ಬ ನಂತರ ದೀಪಾವಳಿ ಹಬ್ಬ ಕೊನೆಯಲ್ಲಿ ಗುಗ್ಗರಿ ಹಬ್ಬ ಈ ಮೂರು ಹಬ್ಬಗಳು ಹಟ್ಟಿಯಲ್ಲಿ ಪ್ರಮುಖವಾಗಿ ಆಚರಿಸಲ್ಪಡುವ ರಾಸುಗಳ ಹಬ್ಬವಾಗಿವೆ. ಅವುಗಳ ಕುರಿತು ವಿಸ್ತೃತವಾಗಿ ಈ ಕೆಳಗಿನಂತೆ ನೋಡಬಹುದು.

### ೪.೨.೧ ಮುಂಗಾರಿ ಹಬ್ಬ

ಯುಗಾದಿ ಹಬ್ಬದ ಅಮವಾಸ್ಯೆ ಕಳೆದ ನಂತರ ಬರುವ ಅಮವಾಸ್ಯೆಯನ್ನು "ಬಾದಮಿ ಅಮವಾಸ್ಯೆ" ಎಂದು ಕರೆಯುತ್ತಾರೆ ಆ ದಿನ ಮ್ಯಾಸನಾಯಕರಲ್ಲಿ ಮುಂಗಾರಿ ಹಬ್ಬದ ಆಚರಣೆ ನಡೆಯುತ್ತದೆ. ಮಳೆಗಾಲದ ಪ್ರಾರಂಭದ ದಿನಗಳಲ್ಲಿ ಆಚರಿಸುವ ಈ ಹಬ್ಬದಲ್ಲಿ ಪಶುಪಾಲಕ ಮತ್ತು ಕೃಷಿಕರಾದ ಬೇಡರು ಮಳೆಗಾಲದ ಉತ್ತಮ ಆರಂಭವನ್ನು ಬಯಸಿ ಪಶು ಸಂಪತ್ತು ವೃದ್ಧಿಯಾಗಲಿ ಎಂದು ದನಗಾಹಿಗಳಾದ ಇವರು ದೇವರಿಗೆ ಬೇಡಿಕೊಳ್ಳುವ ಆಚರಣೆ ಇದು. ಮುಂಗಾರಿನ ಹಬ್ಬವು ಮುಂಗಾರು ಮಳೆಯ ಆರಂಭವನ್ನು ಸೂಚಿಸುತ್ತದೆ. ಕೃಷಿ ಬದುಕಿಗೆ ಮುಂಗಾರು ಆರಂಭದ ಸಂಕೇತ "ಆರು ಎಂದರೆ ಬೇಸಾಯ ಎಂಬ ಅರ್ಥವೇ ವಿವಕ್ಷಿತ"[೬]. ಇಲ್ಲಿ ಆರು ಅಥವಾ ಆರ್ ಎಂಬುದು ಸಂಖ್ಯಾವಾಚಿಯಲ್ಲ ಆರು ಅಥವಾ ಆರು ಹೊಡೆಯುವುದು ಎಂದರೆ ಕೃಷಿ ಕೆಲಸ ಮಾಡುವುದು ಎಂದು ಕರೆಯುತ್ತಾರೆ. ಉಳುಮೆ ಮಾಡುವುದು, ಕಸ ಆರಿಸಿ ನೆಲ ಸುಡುವುದು, ನೆಲದ ಫಲವತ್ತತೆಗೆ ಗೊಬ್ಬರ ಹಾಕುವುದು ಮುಂತಾದ ಚಟುವಟಿಕೆಗಳನ್ನು ಆರು ಎಂದು ಕರೆಯುತ್ತಾರೆ. ಮುಂಗಾರು ಹಬ್ಬವನ್ನು ಕರ್ನಾಟಕದಲ್ಲಿ ಬೇಡರು ಚಿತ್ರದುರ್ಗ ಜಿಲ್ಲೆಯ ಕಂಪಳ ದೇವರ ಹಟ್ಟಿಯಲ್ಲಿ ಮಾತ್ರ ವಿಶೇಷವಾಗಿ ಆಚರಿಸುತ್ತಾರೆ. ಮ್ಯಾಸ ನಾಯಕರ ಮೂಲ ಪದ್ಧತಿ, ಆಚರಣೆಗಳು ತಪ್ಪದಂತೆ ಪ್ರತಿಯೊಂದು ಈ ನೆಲೆಗಳಲ್ಲಿ ಮಾತ್ರ ನಡೆದುಕೊಂಡು ಬರುತ್ತಿವೆ.

ಬಾದಾಮಿ ಅಮವಾಸ್ಯೆಯ ನಂತರ ಬರುವ ಶುಕ್ರವಾರ ಹಟ್ಟಿಯ ಬೇಡರು ಮೀಸಲು ಹಾಲನ್ನು ಕಾಯಿಸಿ ಬೆಣ್ಣೆ ತೆಗೆದು ಶನಿವಾರ ಮುಂಜಾನೆ ಗುಡಿಗೆ ಕೊಡಲಾಗುತ್ತದೆ. ಕಂಪಳರಂಗಸ್ವಾಮಿ ಗುಡಿಯಲ್ಲಿ ಪರಂಪರೆಯಿಂದ ಉಳಿಸಿಕೊಂಡು ಬಂದ ಒಂದು ಎತ್ತಿನ ಕೊಂಬು ಇದೆ, ಇದು ದೇವರ ಹೆಸರಲ್ಲಿ ಬಿಟ್ಟ ಎತ್ತು ಮಡಿದಾಗ ಅದನ್ನು ಸಮಾಧಿ ಮಾಡಿ ಅದರ ಕೊಡನ್ನು(ಕೊಂಬನ್ನು) ಸಂಗ್ರಹಿಸಿ ಇಟ್ಟುಕೊಳ್ಳಲಾಗಿದೆ ಎಂದು ಹೇಳಲಾಗುತ್ತದೆ. ಜನರು ದೇವರಿಗೆ ಅರ್ಪಿಸುವ ಬೆಣ್ಣೆಯನ್ನು ಪೂಜಾರಿಯು ಈ ಕೊಂಬಿನಲ್ಲಿ ಸ್ವೀಕರಿಸುತ್ತಾನೆ ಹೀಗೆ ಭಕ್ತರು ನೀಡಿದ ಹಾಲು, ಮೊಸರು, ಬೆಣ್ಣೆಯನ್ನು ಸಂಗ್ರಹಿಸಿ, ಹಾಲನ್ನು ಪೂಜಾರಿಯು ಕಾಯಿಸಿ ಮೊಸರು ಮಾಡುತ್ತಾನೆ. ಕಂಪಳದೇವರ ಪೂಜಾರಿಗಳಲ್ಲಿ ಎರಡು ಬಗೆಗಳಿವೆ ೧. ಪಟ್ಟದ ಪೂಜಾರಿ ೨. ನಗರಿ ಪೂಜಾರಿ ಇವರು ಬೇರೆ ಬೇರೆ ಬೆಡಗಿನವರಾಗಿರುತ್ತಾರೆ

ಹಾಲು ಕಾಯಿಸುವ, ಹೆಪ್ಪು ಹಾಕುವ ಕಾರ್ಯವನ್ನು ನಗರಿ ಪೂಜಾರಿ ಮಾಡುತ್ತಾರೆ. ಈ ಬೆಣ್ಣೆಯನ್ನು ಕಾಯಿಸಿ ಪೂಜೆಯ ವೇಳಿಗೆ ದೇವರ ಮುಂದೆ ತುಪ್ಪದ ದೀಪ ಹಚ್ಚುತ್ತಾರೆ ಶುಕ್ರವಾರದಿಂದ ಆರಂಭವಾಗುವ ಮುಂಗಾರಿ ಹಬ್ಬದಲ್ಲಿ ಶುಕ್ರವಾರ ರಾತ್ರಿಯಲ್ಲಾ ಪೂಜೆ ನಡೆದು ಶನಿವಾರ ಬೆಳಗಿನ ವೇಳೆಗೆ ವಿಶೇಷ ಪೂಜೆ, ಜೋಳದ ಅನ್ನ ಮತ್ತು ಮೊಸರನ್ನು ನೈವೇದ್ಯ ಮಾಡುತ್ತಾರೆ ನಂತರ ಎಲ್ಲರೂ ಒಟ್ಟಾಗಿ ಕರಿ ಕಂಬಳಿಯ ಮೇಲೆ ಕಾಸಿಟ್ಟು ಸೂರ್ಯನಿಗೆ ನಮಸ್ಕರಿಸಿ ದೇವರಿಗೂ ನಮಸ್ಕರಿಸಿ ಉತ್ತಮ ಮಳೆ ಸುರಿಯಲಿ, ಮುಂಗಾರು ಉತ್ತಮವಾಗಿ ಪ್ರಾರಂಭವಾಗಲಿ ಎಂದು ಬೇಡಿಕೊಳ್ಳುತ್ತಾರೆ.

ಶನಿವಾರ ಬೆಳಗಿನಜಾವ ದಾಸೋಹ ಮಾಡಿದ ನಂತರ ದೇವರ ಎತ್ತುಗಳು ಬರುತ್ತವೆ ದೇವರ ಎತ್ತುಗಳು ಬಂದಾಗ ಅವುಗಳ ಮುಂದೆ ಕರಿ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ಕಾಸಿಟ್ಟು ಗೌರವ ಸೂಚಿಸಿ ಈ ಮೊದಲೇ ಅಕ್ಕಿ ಮತ್ತು ಅರಿಶಿಣ ಕುಟ್ಟಿ ತಯಾರಿಸಿದ ಭಂಡಾರವನ್ನು ಎತ್ತುಗಳು ಬಂದ ಕೂಡಲೇ ಅವುಗಳ ಸುತ್ತಲೂ ತಿರುಗಿ ಭಂಡಾರ ಎತ್ತುಗಳ ಮೇಲೆ ಚೆಲ್ಲುತ್ತಾರೆ ನಂತರ 'ಎರಿಪೋತು' ಬೆಡಗಿನ ವ್ಯಕ್ತಿಯಿಂದ(ಯರಿಪೋತು=ಕೆಂಪು ಓತುಗಳನ್ನು ಪಾಲನೆ ಮಾಡುವ ಬೆಡಗಿನವರು) ಅಲಗು ಸೇವೆ ನಡೆಯುತ್ತದೆ. ಕರಿ ಕಂಬಳಿಯನ್ನು ಹಾಸಿಕೊಂಡು ಮಂಡಿಯೂರಿ ಕುಂತು(ಕುಳಿತು) ವೀರಭದ್ರಾಸನದಲ್ಲಿ ಕತ್ತಿಯನ್ನು ಸೂರ್ಯ ಉದಯಿಸುವ ದಿಕ್ಕಿಗೆ ಮತ್ತು ಉತ್ತರ ದಿಕ್ಕಿಗೆ ಅಂದರೆ ಕಂಪಳರಂಗನ ಗರ್ಭಗುಡಿಯ ದಿಕ್ಕಿಗೆ ಕತ್ತಿಯನ್ನು ಬೀಸುತ್ತಾನೆ ಇದನ್ನು ಅಲಗು ಸೇವೆ ಎನ್ನುತ್ತಾರೆ. ನಂತರ ಪಾಪೇದೇವರ ಗುಡಿ ಮತ್ತು ಕಂಪಳರಂಗಸ್ವಾಮಿ ಗುಡಿಯ ಎದುರು ಬದುರಿಗೆ ದೇವರ ಎತ್ತುಗಳನ್ನು ಓಡಿಸುತ್ತಾರೆ. ಪಶುಪಾಲಕರಾದ ಮ್ಯಾಸಬೇಡರಿಗೆ ತಮ್ಮ ರಾಸುಗಳ ರಕ್ಷಣೆಗೆ ಹುಲ್ಲು ನೀರಿನ ಅವಶ್ಯಕತೆ ಜಾಸ್ತಿ ಹಾಗಾಗಿ ಮಳೆಗಾಗಿ ಪ್ರಾರ್ಥಿಸುವುದೇ ಈ ಮುಂಗಾರು ಹಬ್ಬದ ವಿಶೇಷತೆ. ದೇವರ ಹೆಸರಲ್ಲಿ ಬಿಟ್ಟ ಎತ್ತು ಸತ್ತರೆ ಈ ಮೊದಲು ಇವರಲ್ಲಿ ಸತ್ತದ್ದನ್ನ ತಿನ್ನುವ ಪದ್ಧತಿ ಇತ್ತು ಅದರಂತೆ ಈ ದೇವರ ಎತ್ತುಗಳು ಸತ್ತಾಗಲೂ ತಿನ್ನುತ್ತಿದ್ದರು(ಮಾಹಿತಿ: ಪೂಜಾರಿ ರೇವಣ್ಣ, ೫೦, ಕಂಪಳದೇವರ ಹಟ್ಟಿ) ಆದರೆ ಈಗ ಇಲ್ಲವೇ ಇಲ್ಲ ಅನ್ನುವಷ್ಟರ ಮಟ್ಟಿಗೆ ಅದು ಮರೆಯಾಗಿದೆ. ಇತ್ತೀಚೆಗೆ ಸತ್ತ ದೇವರ ಎತ್ತನ್ನು ತಲೆ ಕೊಯ್ದು ಹೂಳುತ್ತಾರೆ. ಆ ತಲೆಯನ್ನು ರಂಗಯ್ಯನ ಗುಡ್ಡಕ್ಕೆ ಕೊಂಡೂಯ್ದು ಹೂತು ಬರುತ್ತಾರೆ. ರಂಗಯ್ಯನ ಗುಡ್ಡದಲ್ಲಿ ಕಂಪಳ ದೇವರ ಹಳೆಯ ಪೂಜಾರಿಯ ಸಮಾಧಿಯೂ ಇದೆ. ಅಪರೂಪಕ್ಕೆ ಕಂಪಳರಂಗಸ್ವಾಮಿ ದೇವರು ಅಲ್ಲಿಗೆ ಹೋಗಿ ಬರುವುದೂ ಉಂಟು. ಈ ಮುಂಗಾರಿ ಹಬ್ಬದಲ್ಲಿ ಕಂಪಳರಂಗಸ್ವಾಮಿಗಿಂತ ಜಗಳೂರು ಪಾಪನಾಯಕನಿಗೆ ವಿಶೇಷ ಪೂಜೆ ನಡೆಯುತ್ತದೆ. ಮುಂಗಾರಿ ಹಬ್ಬದಲ್ಲಿ ಕಂಪಳರಂಗಸ್ವಾಮಿಯನ್ನು ಗುಡಿಯಿಂದ ಹೊರಗೆ ಹೊರಡಿಸುವುದಿಲ್ಲ. ಬರೀ ಪಾಪೇದೇವರು ಮಾತ್ರ ಹೊರಡುತ್ತದೆ ಪಾಪೇದೇವರ ಗುಡಿಯಿಂದ ಕಂಪಳರಂಗಸ್ವಾಮಿಯ ಗುಡಿಯವರಿಗೆ(ಎರಡು ಗುಡಿಗಳು ಇಪ್ಪತ್ತು ಅಡಿ ಅಂತರದಲ್ಲಿರುತ್ತವೆ ಅಂದರೆ ಕಂಪಳರಂಗಸ್ವಾಮಿಯ ಗುಡಿಯ ಮುಂದೆ ಇಪ್ಪತ್ತು ಅಡಿ ದೂರದಲ್ಲಿ ಪಾಪೇದೇವರ ಗುಡಿ ಇರುತ್ತದೆ ಎರಡೂ ದೇವಸ್ಥಾನಗಳೂ ದಕ್ಷಿಣಕ್ಕೆ ಮುಖ ಮಾಡಿರುತ್ತವೆ. ಜಾತ್ರೆ ನಡೆಯುವ ಸ್ಥಳದಲ್ಲಿ ಇದೇ ರೀತಿ ಪೌಳಿಗಳನ್ನು ಕಟ್ಟಲಾಗಿರುತ್ತದೆ ಅಲ್ಲಿ ಇವುಗಳ ದೂರ ಒಂದು ಪರ್ಲಾಂಗ ದೂರವಿರುತ್ತದೆ

ಇಲ್ಲಿ ಎತ್ತುಗಳನ್ನು ಮೆರವಣಿಗೆ ಮಾಡುತ್ತಾರೆ. ಹಾಗೆ ದೇವರ ಕುರಿಯುವರು ತಂದ ಮೊಸರು ಬೆಣ್ಣೆಯನ್ನು(ದೇವರ ಕುರಿಯುವರು ಎಂದರೆ ದೇವರ ಹೆಸರಲ್ಲಿ ಬಿಟ್ಟ ಕುರಿಗಳನ್ನು ಪಾಲನೆ ಮಾಡುವವರು, ಕುರಿ ಕಿಲಾರಿಗಳು) ಕಾಯಿಸಿ ದೇವರಿಗೆ ತುಪ್ಪದ ದೀಪ ಹಚ್ಚುತ್ತಾರೆ. ಎತ್ತುಗಳನ್ನು ಮೆರವಣಿಗೆಯ ಮೂಲಕ ಓಡಿಸಿದ ಮೇಲೆ ಎಲ್ಲರೂ ಒಂದೆಡೆ ಸೇರಿ ಸುಗ್ಗಿಯ ಕುಣಿತ ಕುಣಿಯುತ್ತಾರೆ. ಶನಿವಾರದ ದಿನ ಭಕ್ತರೆಲ್ಲಾ ಸಂಜೆಯವರೆಗೂ ದೇವರಿಗೆ(ಪಾಪೇದೇವರು, ಕಂಪಳ ದೇವರು) ಕಾಸು ಮೀಸಲು ತರುತ್ತಾರೆ. ಅಂದು ಅವರೆಲ್ಲಾ ಅಲ್ಲೇ ಉಳಿಯುತ್ತಾರೆ. ರಾತ್ರಿಯೆಲ್ಲಾ ಕಂಪಳದೇವರು ಮತ್ತು ಪಾಪೇದೇವರುಗಳಿಗೆ ಪೂಜೆ ನಡೆಯುತ್ತದೆ ಭಕ್ತರು ತಂದ ಅಕ್ಕಿಯಿಂದ ಅಂದು ಎರಡೂ ದೇವಸ್ಥಾನಗಳ ಬಳಿ ದಾಸೋಹ ಮಾಡುತ್ತಾರೆ. (ಕಾಸು ಮೀಸಲು–ಅಂದರೆ ಹಸು, ಕುರಿ, ಎಮ್ಮೆಗಳ ಹಾಲನ್ನು ಮಡಿಯಿಂದ ಕರೆದುಕೊಂಡು ಮಡಿಕೆಯಲ್ಲಿ ಹಾಕಿಕೊಂಡು ಬಂರಿಗಾಲಲ್ಲಿ ನಡೆದು ತರುವುದು, ಹಾಲು ಮಾತ್ರವಲ್ಲ ಹರುಳಿ ಕಾಳು, ಕಾಸು/ಹಣ ತಂದು ದೇವರಿಗೆ ಅರ್ಪಿಸುವುದನ್ನು ಕಾಸು ಮೀಸಲು ಎನ್ನುತ್ತಾರೆ).

ಕಂಪಳ ದೇವರ ಗುಡಿಯ ಹಿಂದೆ ಭಾಗ್ಯದ ಲಸುಮವ್ವಳ ಗುಡಿಸಲು ಇದ್ದು ಆ ಗುಡಿಸಲ ಎದುರು ಮೊದಲು ದಾಸೋಹ ನಡೆಯುತ್ತದೆ ನಂತರ ಪಾಪೇ ದೇವರ ಗುಡಿಯ ಬಳಿ ನಡೆಯುತ್ತದೆ. ದಾಸೋಹದ ಸಮಯದಲ್ಲೂ ಸಹ ಊಟ ಮಾಡುವ ಕೊಮುದಾರರು(ದೇವರ ಸೇವೆ ಮಾಡುವ ಪ್ರಮುಖರು) ಶ್ರೇಣಿ ವ್ಯವಸ್ಥೆಯಲ್ಲಿ ಕುಳಿತು ಊಟ ಮಾಡುತ್ತಾರೆ. ಮೊದಲ ಊಟ ಪೂಜಾರಿಯದು ನಂತರ ದಾಸರಯ್ಯಂದು ನಂತರ ೩ ಮಂದಿ ನಾಯಕರು, ಏಳು ಮಂದಿ ಹಿರಿಯರು, ಯರ್ರಪೊತು, ಧಗಮು ಪೂಜಾರಿ, ನಂತರ ಕುಲ ಸಾವಿರ ಹೀಗೆ ಹಂತ ಹಂತವಾಗಿ ಎಲೆ ಹಾಕಿರುತ್ತಾರೆ. ಮುದುಕದ ಎಲೆಯ ಹಾಳೆ ಮತ್ತು ಎಕ್ಕೆಯ ಎಲೆಯಿಂದ ಮಾಡಿದ ಸಣ್ಣ ಬಟ್ಟಲುಗಳು ಅವುಗಳಲ್ಲಿ ಹಾಲು ಮೊಸರನ್ನು ಹಾಕಿಕೊಂಡು ಊಟ ಮಾಡುತ್ತಾರೆ. ಹೀಗೆ ಶನಿವಾರ ಮತ್ತು ಭಾನುವಾರ ಎಂಟು ದಿನಗಳ ಕಾಲ ಕಂಪಳದೇವರು ಮತ್ತು ಪಾಪೇದೇವರ ಗುಡಿಯ ಹತ್ತಿರ ಹಬ್ಬ ನಡೆದ ನಂತರ ಸೋಮವಾರ ಮತ್ತು ಮಂಗಳವಾರ ಅದೇ ಕಂಪಳದೇವರ ಹಟ್ಟಿಯ ಮತ್ತೊಂದು ದೇವಸ್ಥಾನವಾದ ದಡ್ಡಿಮಿತ್ತಿ ಹಟ್ಟಿಯಲ್ಲಿರುವ ಮಲ್ಲಿಕಾರ್ಜುನಸ್ವಾಮಿ(ದಡ್ಡಿಕಾಮ ನಾಯಕ) ದೇವರ ಸನ್ನಿಧಿಯಲ್ಲಿ ಈ ಹಬ್ಬ ನಡೆಯುತ್ತದೆ. ಇಲ್ಲಿ ಹಟ್ಟಿಯ ಎಲ್ಲಾ ಮನೆಯವರು ಭಾಗವಹಿಸಿ ಎಲ್ಲಾ ಮನೆಗಳಲ್ಲಿ ಸಿಹಿ ಅಡುಗೆ ಮಾಡುವುದಿಲ್ಲ ಬೇರೆ ಬೇರೆ ಊರುಗಳಿಂದ ಭಕ್ತರು ಬರುತ್ತಾರೆ ದೇವಸ್ಥಾನದ ಹತ್ತಿರ ಪೂಜೆ ಮತ್ತು ಎತ್ತು ಅರಿಯುವುದರ ಮೂಲಕ ಹಬ್ಬ ಜರುಗುತ್ತದೆಯೇ ವಿನಃ ಎಲ್ಲಾ ಮನೆಗಳಲ್ಲಿ ಅಲ್ಲ. ದಡ್ಡಿಕಾಮ ನಾಯಕ ದೇವರಿಗೆ ಕಾಸು ಮೀಸಲನ್ನು ಆ ದೇವರಿಗೆ ಸಂಬಂಧಿಸಿದವರು ಮಾತ್ರ ತರುತ್ತಾರೆ ಅವರನ್ನು ಐದು ಕೋಮಿನವರು ಎಂದು ಕರೆಯುತ್ತಾರೆ.

೧. ದಡ್ಡಿಮಿತ್ತಿನಾರು

೨. ಅಬ್ಬನಾರು

೩. ಮಲ್ಲೇವಾರು

೪. ಕ್ಯಾತಪ್ಪಾರು

೫. ಅಬ್ರಾಜಲ/ಅಬ್‌ರಾಜಲು

ಇವರೆಲ್ಲಾ ಒಂದೇ ದೇವರಿನವರಾಗಿದ್ದು ಅಣ್ಣ ತಮ್ಮಂದಿರಾಗಬೇಕಾದವರಾಗಿರುತ್ತಾರೆ. ಕಂಪಳ ದೇವರಿಗೆ ತುಪ್ಪದ ದೀಪ ಹಚ್ಚಿ ದೇವರ ಕುರಿಯರು/ಕುರಿ ಕಿಲಾಗಳು ತಂದ ಮೀಸಲು ತುಪ್ಪದಿಂದ ದೀಪ ಹಚ್ಚುತ್ತಾರೆ ಆದರೆ ದಡ್ಡಿಕಾಮ ನಾಯಕ ದೇವರಿಗೆ ಮುತ್ತಿಗಾರ ಎತ್ತುಗಳ ಆಕಳುಗಳಿಂದ(ಶ್ರೀಶೈಲ ಮಲ್ಲಿಕಾರ್ಜುನ ಎತ್ತುಗಳು) ಅಂದರೆ ಮುತ್ತಿಗಾರಹಳ್ಳಿಯ ರೊಪ್ಪದಲ್ಲಿರುವ ಹಸುಗಳಿಂದ ಮಡಿಯಿಂದ ಹಾಲು ಕರೆದುಕೊಂಡು ಬರಬೇಕು ಆ ಎತ್ತುಗಳು ಎಷ್ಟೇ ದೂರದ ಕಾವಲಿನಲ್ಲಿದ್ದರೂ ದಡ್ಡಿಕಾಮ ನಾಯಕ ದೇವರ ಪೂಜಾರಿಯ ಮನೆಯವರು ಯಾರಾದರು ಒಬ್ಬರು ಭಾನುವಾರ ಬೆಳಿಗ್ಗೆ ಹೋಗಿ ಬೆಳಗಿನ ಮತ್ತು ಸಂಜೆಯ ಹಾಲು ಕರೆದುಕೊಂಡು ಅಲ್ಲಿಂದ ನಡೆದುಕೊಂಡು ಬರುತ್ತಾರೆ. ಆ ಹಾಲನ್ನು ಕಾಯಿಸಿ ಮೊಸರು ಮಾಡಿ ಸೋಮವಾರ ಬೆಳಿಗ್ಗೆ ಮೊಸರು ಕಡೆದು ಬೆಣ್ಣೆ ತೆಗೆದು ಅದನ್ನು ಕಾಸಿ ಆ ತುಪ್ಪದಿಂದ ತುಪ್ಪದ ದೀಪ ಹಚ್ಚುತ್ತಾರೆ. ಸೋಮವಾರದ ಹಾಲನ್ನು ಎತ್ತಿನ ಕಿಲಾರಿಗಳು ಕರೆದು ಕೊಂಡು ನಡೆದು ಬಂದು ದೇವರಿಗೆ ಅರ್ಪಿಸಬೇಕು.

ನಂತರ ಸೋಮವಾರ ಸಂಜೆಯಿಂದ ವಿವಿಧ ಊರುಗಳಿಂದ ಆ ದೇವರಿಗೆ ಸಂಬಂಧಿಸಿದವರು 'ಕಾಸು ಮೀಸಲು' ತಂದು ದೇವರಿಗೆ ಅರ್ಪಿಸುತ್ತಾರೆ ಅಂದು ರಾತ್ರಿ ಅಲ್ಲೇ ಉಳಿಯುತ್ತಾರೆ ಆ ದಿನ ರಾತ್ರಿಯೆಲ್ಲಾ ಪೂಜೆ ನಡೆದು ಬೆಳಗಿನ ಜಾವ ಮುಗಿಯುತ್ತದೆ ನಂತರ ದಾಸೋಹ ನಡೆಯುತ್ತದೆ. ಈ ರೀತಿಯಾಗಿ ಕಂಪಳದೇವರ ಹಟ್ಟಿಯಲ್ಲಿ ಮುಂಗಾರು ಹಬ್ಬವನ್ನು ನಾಲ್ಕು ದಿನಗಳ ಕಾಲ ಆಚರಿಸುತ್ತಾರೆ. ಮ್ಯಾಗಳ ಹಟ್ಟಿ ಮತ್ತು ದಡ್ಡಿಮಿತ್ತಿ ಹಟ್ಟಿ ಎಂದು ಎರಡು ಕಡೆ ಈ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಇವರು ಮೀಸಲು ಹಾಲನ್ನು ಕಾಯಿಸುವಾಗ ಅವರ ಉಸಿರೂ ಸಹ ಹಾಲಿಗೆ ತಾಗಬಾರದು ಎಂದು ಬಾಯಿಗೆ ಬಟ್ಟೆ ಕಟ್ಟಿಕೊಂಡಿರುತ್ತಾರೆ ಅಲ್ಲದೆ ಒಲೆಯನ್ನೂ ಸಹ ಬಾಯಿಯಿಂದ ಊದದೆ ಕೈಯಿಂದಲೇ ಗಾಳಿ ಬೀಸಿ ಒಲೆ ಉರಿಸುತ್ತಾರೆ ನಂತರ ಮೊಸರನ್ನು ಕಡೆಯುವಾಗಲೂ ಸಹ ಪೂರ್ಣವಾಗಿ ಬಾಯಿಗೆ ಬಟ್ಟೆ ಕಟ್ಟಿಕೊಂಡು ಕಡಗೋಲಿನಿಂದ ಮೊಸರು ಕಡೆಯುತ್ತಾರೆ. ಹಾಗೆ ಬೆಣ್ಣೆ ತೆಗೆದು ತುಪ್ಪವನ್ನು ಸಹ ಅದೇ ನೇಮದಿಂದ ಕಾಸಿ ದೇವರಿಗೆ ತುಪ್ಪದ ದೀಪ ಹಚ್ಚುತ್ತಾರೆ. ದಡ್ಡಿಕಾಮ ನಾಯಕ(ಮಲ್ಲಿಕಾರ್ಜುನ) ದೇವರ ಪ್ರತಿಮೆಯು ಯಾವುದೇ ವಿಗ್ರಹವಲ್ಲ ಸುಮಾರು ೮-೧೦ ಅಡಿ ಎತ್ತರದ ಬಡಿಗೆಯ ಅಕಾರದ ವಸ್ತುವಿಗೆ ಬಟ್ಟೆ ಸುತ್ತಿ ಗರ್ಭಗುಡಿಯಲ್ಲಿ ಇಟ್ಟಿರುತ್ತಾರೆ. ಅದನ್ನು ಎಂದೂ ತೆಗೆದು ನೋಡುವುದಿಲ್ಲ, ಪೂಜೆ ಮಾಡುವಾಗಲೂ ಸಹ ಪೂಜಾರಿಯು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಪೂಜಿಸುತ್ತಾನೆ. ಮುತ್ತಿಗಾರಹಳ್ಳಿ ಮಾರಮ್ಮನ ಹಬ್ಬ ನಡೆದಾಗ ಮಾತ್ರ ಈ ದೇವರನ್ನು ಹೊರಗೆ ತೆಗೆಯುತ್ತಾರೆ. ಆಗ ಬಡಿಗೆಯ ಪ್ರತಿರೂಪದ ಈ ದೇವರನ್ನು ಪೂಜಾರಿಯು ತನ್ನ ಹೆಗಲ ಮೇಲೆ ಹೊತ್ತುಕೊಂಡು ಹೋಗುತ್ತಾನೆ. 'ಮುತ್ತಿಗಾರ ಮಾರವ್ವ' ಹಬ್ಬವನ್ನು ಅಡವಿಯಲ್ಲಿ ಮಾಡುತ್ತಾರೆ. ಅಲ್ಲಿ ಬೇಡರ ೧೨ ಪೆಟ್ಟಿಗೆ ದೇವರುಗಳು ಸೇರುತ್ತವೆ ಆ ಸಮಯದಲ್ಲಿ ಮಾತ್ರ ಈ

ದೇವರನ್ನು ಅಲ್ಲಿಗೆ ಕೊಂಡೊಯ್ಯಲಾಗುತ್ತದೆ. ಊರವರೆಲ್ಲಾ ತಮ್ಮ ತಮ್ಮ ಮನೆಗಳಲ್ಲಿ ಆಚರಿಸುವ ಹಬ್ಬಗಳು ಹಲವು ಇದ್ದರೆ ಹಟ್ಟಿಯವರೆಲ್ಲಾ ಸೇರಿ ಜೊತೆಗೆ ಬೇರೆ ಬೇರೆ ಹಟ್ಟಿಯವರು ಬಂದು ದೇವಸ್ಥಾನಗಳ ಎದುರು ಅಂದರೆ ದೇವರುಗಳಿಗೆ ದೇವರ ಎತ್ತುಗಳಿಗೆ ಸಂಬಂಧಿಸಿದಂತೆ ಆಚರಿಸುವ ಪ್ರಮುಖ ಹಬ್ಬಗಳೆಂದರೆ ಗುಗ್ಗರಿ ಹಬ್ಬ, ದೀಪಾವಳಿ ಹಬ್ಬ, ಮುಂಗಾರು ಹಬ್ಬ ಈ ಮೂರು ಹಬ್ಬಗಳಲ್ಲಿ ಕಂಪಳರಂಗಸ್ವಾಮಿ, ಜಗಳೂರು ಪಾಪನಾಯಕ ಈ ಎಲ್ಲಾ ದೇವರುಗಳ ಹತ್ತಿರ ಮೊದಲು ೩-೫ ದಿನಗಳ ಕಾಲ ಕಂಪಳರಂಗಸ್ವಾಮಿ, ಪಾಪೇದೇವರಿಗೆ ಪೂಜೆ ಅವುಗಳ ಜೊತೆ ಗಾದ್ರಿಪಾಲನಾಯಕ ದೇವರ ಪೂಜೆ ನಡೆದು ಪ್ರತಿ ಹಬ್ಬವೂ ಭಾನುವಾರ ಕೊನೆಗೊಂಡರೆ ಸೋಮವಾರ ಮಂಗಳವಾರ ದಡ್ಡಿಕಾಮ ನಾಯಕ ದೇವರ ಗುಡಿಯ ಹತ್ತಿರ ಹಬ್ಬ/ಜಾತ್ರೆ ನಡೆಯುತ್ತದೆ. ಈ ಮೂರು ಹಬ್ಬಗಳಲ್ಲಿ ದೇವಸ್ಥಾನಗಳ ಮುಂದಿರುವ ಪೌಳಿಗಳಿಗೆ ಅಥವಾ ಉದಿಪದಿಗೆ ಲಕ್ಕಲಿ, ಬಂದರಕೆ ಬರಲುಗಳಿಂದ ಹೊಸ 'ಪೌಳಿ' ಕಟ್ಟುವುದು ಕಡ್ಡಾಯ, ಶಾಸ್ತ್ರಕ್ಕಾದರೂ ಹಳೆಯ ಪೌಳಿಗೆ ಹೊಸ ಲಕ್ಕಲಿ, ಬಂದರಕೆ ಬರಲನ್ನು ತಂದು ಸಿಕ್ಕಿಸುತ್ತಾರೆ. ಈ ಮೂರು ಹಬ್ಬಗಳಲ್ಲಿ ದೇವರ ಎತ್ತುಗಳು ಬರುತ್ತವೆ ಕಂಪಳದೇವರ ಎತ್ತುಗಳು ಪಾಪೇದೇವರ ಎತ್ತುಗಳು ಆ ದೇವರುಗಳ ಪೂಜೆಗೆ ಬಂದರೆ ದಡ್ಡಿಕಾಮ ನಾಯಕ ದೇವರ ಪೂಜೆಗೆ ಎತ್ತುಗಳು ಬರುವುದಿಲ್ಲ ಆ ದೇವರ ರಾಸುಗಳಿಂದ ಹಾಲು ಮೊಸರಿನ ಮೀಸಲು ಮಾತ್ರ ಬರುತ್ತದೆ.

### ೪.೨.೨ ಕಾರಹಬ್ಬ

ಜೇಷ್ಠ ಮಾಸದಲ್ಲಿ(ಜೂನ್-ಜುಲೈ) ಬರುವ ಹುಣ್ಣಿಮೆಯೇ ಕಾರ ಹುಣ್ಣಿಮೆ. ಹಟ್ಟಿಯ ಜನರು ಈ ಹಬ್ಬವನ್ನು ಕಾರಹುಣ್ಣಿಮೆ, ಕಾರಹಬ್ಬ ಎಂದು ಕರೆಯುತ್ತಾರೆ. "ಕಾರ್-ಎಂದರೆ ಮಳೆ ಇದು ಮಳೆಗಾಲದ ಆರಂಭದ ಹುಣ್ಣಿಮೆಯೆಂದು ಆಚರಿಸಲ್ಪಡುವುದರಿಂದ ಇದಕ್ಕೆ 'ಕಾರು ಹುಣ್ಣಿಮೆ' ಎಂಬ ಹೆಸರು ಬಂದಿದೆ"[೩]. ಮಳೆಗಾಲ ಪ್ರಾರಂಭವಾದ ಮೊದಲ ಹುಣ್ಣಿಮೆಯಾಗಿರುವುದರಿಂದ ಇದನ್ನು 'ಮಳೆ ಹುಣ್ಣಿಮೆ' ಎಂದೂ ಕರೆಯುತ್ತಾರೆ. ಅಲ್ಲದೆ ಈ ಹಬ್ಬದಲ್ಲಿ ಎತ್ತುಗಳನ್ನು ವಿಶೇಷವಾಗಿ ಅಲಂಕರಿಸಿ ಅವುಗಳಿಗೆ ಪೂಜೆಮಾಡಿ ಮೆರವಣಿಗೆ ಮಾಡಿ ಓಡಿಸಿ ಕಿಚ್ಚು ಹಾಯಿಸುವುದರಿಂದ ಇದನ್ನು 'ಎತ್ತಿನ ಹುಣ್ಣಿಮೆ' ಎಂದೂ ಸಹ ಕರೆಯುತ್ತಾರೆ. ಮಳೆಗಾಲ ಆರಂಭವಾಗಿ ತಮ್ಮ ಕೃಷಿ ಕೆಲಸ ಪ್ರಾರಂಭಿಸುವ ಜನರು ತಮ್ಮ ಕೃಷಿಗೆ ನೆರವಾಗುವ ಎತ್ತುಗಳನ್ನು ಗೌರವಪೂರ್ವಕವಾಗಿ ಪೂಜಿಸಿ ಓಡಿಸಿ ಅವುಗಳ ಸಾಮರ್ಥ್ಯ ಅರಿಯುತ್ತಾರೆ. ಹಟ್ಟಿಯ ಎಲ್ಲಾ ಎತ್ತುಗಳನ್ನು ಸಾಮೂಹಿಕವಾಗಿ ಓಡಿಸುತ್ತಾರೆ. ಯಾವ ಎತ್ತು ಮೊದಲು ಬರುತ್ತದೋ ಆ ಎತ್ತನ್ನು ಊರತುಂಬಾ ಮೆರವಣಿಗೆ ಮಾಡುತ್ತಾರೆ. ಹಟ್ಟಿಯ ಜನರು ತಮ್ಮ ಎತ್ತುಗಳನ್ನು ಮನೆಯ ಸದಸ್ಯರಂತೆ ಕಾಣುವುದು ವಿಶೇಷ. ಹಟ್ಟಿಯಲ್ಲಿ ಹಬ್ಬದ ಮೊದಲ ದಿನ ತಮ್ಮ ದನಕರುಗಳನ್ನು ಕೆರೆ, ಹೊಳೆ, ಬಾವಿಗಳಲ್ಲಿ ಮೈ ತೊಳೆದು ಅವುಗಳ ಕೊಡುಗಳಿಗೆ ಬಣ್ಣಹಚ್ಚಿ ಹೂವಿನ ಸರಗಳನ್ನು ಹಾಕಿ ಮಯ್ಯ ಮೇಲೆ ಬಣ್ಣ ಬಣ್ಣದ ಬಟ್ಟೆಯ ಜೂಲ್ ಹೊದಿಸಿ ಸಿಂಗರಿಸುತ್ತಾರೆ. ಈ ಹಿಂದೆ ದನಗಳ ಕೊಂಬಿಗೆ, ಕೊಟ್ಟಿಗೆಗೆ ಬಳಿಯುವ

ಬಣ್ಣವನ್ನು ಸ್ವತಃ ಅವರೇ ತಯಾರಿಸುತ್ತಿದ್ದರಂತೆ ಒಣಗಿದ ಬಾಳೆ ಎಲೆಯ ರವದಿಯನ್ನು ಸುಟ್ಟು ಅದರ ಬೂದಿಗೆ ಹರಳೆಣ್ಣೆ, ಸ್ವಲ್ಪ ನೀಲಿ ಪುಡಿಯನ್ನು ಸೇರಿಸಿ ಕಲಸಿ ಎತ್ತಿನ ಕೋಡುಗಳಿಗೆ ಹಚ್ಚುತ್ತಿದ್ದರು ಇತ್ತೀಚಿಗೆ ಅಂಗಡಿಗಳಿಂದ ಬಣ್ಣ ತಂದು ಹಚ್ಚುತ್ತಾರೆ. ದನಗಳ ಗ್ವಾದ್ಲಿಗಳಿಗೆ ಸುಣ್ಣ, ಸಗಣಿ, ಉರಮಂಜು ಹಚ್ಚಿ ಶುದ್ದಗೊಳಿಸುತ್ತಾರೆ. ದನದ ಕೊಟ್ಟಿಗೆಯ ಗೋಡೆಗೆ ಅಥವಾ ಗ್ವಾದ್ಲಿಯ ಬಂಡೆಯ ಮೇಲೆ ಸುಣ್ಣ, ಜಾಜಿನಿಂದ ಜೋಡಿ ಎತ್ತುಗಳ, ಸೂರ್ಯ ಚಂದ್ರ, ನೇಗಿಲು ಮೊದಲಾದ ಚಿತ್ರಗಳನ್ನು ಬರೆಯುತ್ತಾರೆ. ಸಿಂಗಾರಗೊಂಡ ಎತ್ತುಗಳಿಗೆ ಪೂಜೆ ಮಾಡಿ ಮನೆಗಳಿಗೆ ಕರೆತಂದು ಸ್ವಲ್ಪ ಜಾಗವನ್ನು ಸಗಣಿಯಿಂದ ಸಾರಿಸಿ ಅದರ ಮೇಲೆ ಜೋಳದ ಸಣ್ಣ ಗುಂಪೆ(ರಾಶಿ)ಗಳನ್ನು ಹಾಕುತ್ತಾರೆ. ಆ ಜೋಳದ ಚಿಕ್ಕ ಗುಂಪೆ(ಪು)ಗಳ ಮೇಲೆ ಎತ್ತುಗಳು ಬಲಗಾಲನ್ನು ಇಟ್ಟು ನಿಲ್ಲುವಂತೆ ಮಾಡುತ್ತಾರೆ. ಹಾಗೆ ನಿಂತ ಎತ್ತುಗಳ ಕಾಲಿಗೆ ಪೂಜೆಮಾಡುತ್ತಾರೆ. ಎತ್ತುಗಳು ಜೋಳದ ಗುಂಪೆಯಮೇಲೆ ಕಾಲಿಟ್ಟಾಗ ಜೋಳ ಚೆಲ್ಲಾಪಿಲ್ಲಿಯಾಗುತ್ತವೆ. ಹೀಗೆ ಚೆಲ್ಲಾಪಿಲ್ಲಿಯಾದ ಜೋಳವನ್ನು ಹೊನ್ನು(ಬಂಗಾರ) ಎಂದು ಕರೆಯುತ್ತಾರೆ. ದಿನನಿತ್ಯ ಆಹಾರಕ್ಕೆ ಬಳಸುವ ಧಾನ್ಯವನ್ನೇ ಈ ಹಟ್ಟಿಯ ಜನರು ಹೊನ್ನು ಎಂದು ಸಂಬೋಧಿಸುವುದು ನಿಜಕ್ಕೂ ಅರ್ಥಪೂರ್ಣವಾಗಿದೆ. ಅನ್ನದೇವರ ಮುಂದೆ ಇನ್ನ ದೇವರು ಉಂಟೇ? ಎಂಬ ಮಾತಿನಂತೆ ಆಹಾರ ಧಾನ್ಯಕ್ಕೆ ಮತ್ತು ಎತ್ತುಗಳಿಗೆ ಇವರು ಕೊಡುವ ಗೌರವ ಶ್ಲಾಘನೀಯ. ಎತ್ತುಗಳಿಗೆ ನೈವೇದ್ಯಕ್ಕೆ ಹೊಸ ಜೋಳದ ಕಿಚಡಿಯನ್ನು ಮಾಡುತ್ತಾರೆ. "ಜೋಳ ಬೇಯಿಸಿ ಮಾಡಿದ ಈ ಹುಗ್ಗಿಗೆ ಹೊನ್ನುಗ್ಗಿ ಎಂದು ವಿಶೇಷ ಗೌರವ ನೀಡುವರು"[೮]. ಎತ್ತುಗಳಿಗೆ ಪೂಜೆ ನೈವೇದ್ಯ ಮಾಡಿದ ನಂತರ ಮನೆಯವರೆಲ್ಲಾ ಊಟ ಮಾಡುತ್ತಾರೆ. ಕಾರಹಬ್ಬ ಹಬ್ಬಗಳನ್ನು ಕರೆದುಕೊಂಡು ಬರುತ್ತದೆ. ಯುಗಾದಿಹಬ್ಬ ಹಬ್ಬಗಳನ್ನು ಬಳಿದುಕೊಂಡು ಹೋಗುತ್ತದೆ ಎಂಬ ಮಾತಿದೆ. ಅಂದರೆ ಕಾರಹುಣ್ಣಿಮೆಯಿಂದ ಕೃಷಿ ಕೆಲಸ ಪ್ರಾರಂಭಿಸುವ ಜನರಿಗೆ ಇದು ಮೊದಲ ಹಬ್ಬವಾಗಿ ಕಂಡುಬರುತ್ತದೆ. ಆದ್ದರಿಂದ ಕಾರಹಬ್ಬ ಹಬ್ಬಗಳನ್ನು ಕರೆದುಕೊಂಡು ಬರುತ್ತದೆ ಎಂಬ ಮಾತು ಹುಟ್ಟಿಕೊಂಡಿದೆ.

ಕೃಷಿಕರಾದ ಹಟ್ಟಿಯ ಜನರಿಗೆ ಕಾರಹುಣ್ಣಿಮೆ ಮಂಗಳ ಕಾರ್ಯಗಳ ಕಡೆಯ ದಿನವಾಗಿದೆ. ಜಾತ್ರೆ, ಉತ್ಸವಗಳಾಗಲಿ ಮದುವೆ ಮೊದಲಾದ ಮಂಗಳ ಕಾರ್ಯಗಳಾಗಲಿ ಈ ಹುಣ್ಣಿಮೆಯಾದ ಮೇಲೆ ಮಾಡುವುದಿಲ್ಲ. "ಕಾರ ಹುಣ್ಣಿಮೆಯಾದ ಮೇಲೆ ಕತ್ತೆ ಸಹ ಬಾಸಿಂಗ ಕಟ್ಟುವುದಿಲ್ಲ" ಎಂಬ ಮಾತೇ ಇದೆ. ಈ ಹಬ್ಬದಿಂದ ಕೃಷಿಕರಿಗೆ ಬಿಡುವೇ ಸಿಗುವುದಿಲ್ಲ ಮುಂಗಾರಿಯ ಮಳೆಯು ಆಗಲೇ ಆರಂಭವಾಗಿರಲು ಭೂಮಿಯನ್ನು ಹದಮಾಡಿ ಬಿತ್ತನೆಗೆ ನಿರತರಾಗುವುದರಿಂದ ಈ ಸಮಯದಲ್ಲಿ ಮಂಗಳಕಾರ್ಯಗಳನ್ನು ಆರಂಭಿಸಿಕೊಳ್ಳುವುದಿಲ್ಲ. ನಿಸರ್ಗಪ್ರಿಯರಾದ ಹಟ್ಟಿಯ ಜನ ಈ ಹಬ್ಬದಲ್ಲಿ ರಂಟೆ, ಕುಂಟೆ, ಕೂರಿಗೆ, ಬಂಡಿ, ಬಿತ್ತುವ ಬೀಜ ಮೊದಲಾದ ಸಾಮಗ್ರಿಗಳನ್ನು ಪೂಜೆಮಾಡಿ ಕೃಷಿಯ ಆರಂಭಕ್ಕೆ ಸಿದ್ದತೆ ಮಾಡಿಕೊಳ್ಳುತ್ತಾರೆ. ಕೃಷಿಕಾರ್ಯ ಪ್ರಾರಂಭಿಸುವ ಸಂದರ್ಭದ ಈ ಹಬ್ಬದ ವಿಶಿಷ್ಟತೆಯೇ ಎತ್ತುಗಳನ್ನು ಸಿಂಗರಿಸಿ ಅವುಗಳಿಗೆ ಪೌಷ್ಟಿಕ ಆಹಾರ ನೀಡಿ ಅವುಗಳನ್ನು ವ್ಯವಸಾಯಕ್ಕೆ ಅಣಿಗೊಳಿಸುವುದು. ಇದು ಬಿತ್ತನೆಗೆ ಬೀಜಗಳ ಆಯ್ಕೆಯ ಹಬ್ಬವಾಗಿದೆ. "ಕಾರಹಬ್ಬ ಒಂದು ಪ್ರಾದೇಶಿಕ ಪದ್ದತಿಯಾಗಿ ಮತ್ತು ಸಾಂಪ್ರದಾಯಿಕ ರೀತಿಯಲ್ಲಿ ಆಚರಿಸಲ್ಪಡುತ್ತದೆ"[೯]. ಈ

ಹಬ್ಬದಲ್ಲಿನ ಆಚರಣೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಕಾರಹಬ್ಬದ ಉದ್ದೇಶ ತಿಳಿಯುತ್ತದೆ. ಈ ಹಬ್ಬ ಮುಖ್ಯವಾಗಿ ಕೃಷಿಕರ ಹಬ್ಬ ಇದು ರೈತನಿಗೆ ತನ್ನ ಮುಂದಿನ ವರ್ಷ ಸಿಗಬಹುದಾಗ ಹುಲುಸು ಮತ್ತು ಪೈರಿನ ಪ್ರಮಾಣ ಮುಂತಾದವನ್ನು ತಿಳಿಸುತ್ತದೆ.

**೪.೨.೩ ದೀಪಾವಳಿ ಹಬ್ಬ**

ಪ್ರತಿವರ್ಷ ನವೆಂಬರ್ ತಿಂಗಳಲ್ಲಿ ನಡೆಯುವ ನರಕ ಚತುರ್ದಶಿ ಅಥವಾ ದೀಪಾವಳಿ ಎಂಬ ಹಬ್ಬವನ್ನು ಇಡಿ ನಾಡಿನಾದ್ಯಂತ ಲಕ್ಷ್ಮೀ ಪೂಜೆ ಮಾಡಿ ಸಂಪತ್ತು ವೃದ್ಧಿಸಲಿ ಎಂದು ಆಚರಿಸುತ್ತಾರೆ. ಇತ್ತೀಚಿಗೆ ಈ ಹಬ್ಬದಲ್ಲಿ ಪಟಾಕಿಗಳನ್ನು ಹೊಡೆದು ವಿಜೃಂಭಣೆಯಿಂದ ಆಚರಿಸುತ್ತಾರೆ. ಆದರೆ ಹಟ್ಟಿಯಲ್ಲಿ ಇಂದಿಗೂ ಸಹ ಪಟಾಕಿಗಳನ್ನು ಹೊಡೆಯುವ, ವಿಜೃಂಭಣೆಯಿಂದ ಆಚರಿಸುವ ಗೋಜಿಗೆ ಹೋಗದೆ ತಮ್ಮ ದನಕರುಗಳನ್ನೇ ಸಂಪತ್ತೆಂದು ಪೂಜಿಸುತ್ತಾರೆ. ಹಟ್ಟಿಯ ಜನಪದರು ತಮ್ಮ ಕಂದೆಲುಗು ಭಾಷೆಯಲ್ಲಿ ದೀಪಾವಳಿ ಹಬ್ಬವನ್ನು 'ದೂಲೆ ಪಂಡುವ' ಎಂದು ಕರೆಯುತ್ತಾರೆ. ಈ ಹಬ್ಬದಲ್ಲಿ ಇಡಿ ಹಟ್ಟಿಯ ಜನರೆಲ್ಲಾ ಒಂದು ಬಯಲಿನಲ್ಲಿ ಸೇರಿ(ಗುಗ್ಗರಿ ಹಬ್ಬ ನಡೆಯುವ ಸ್ಥಳ) ಕಂಪಳದೇವರು ಮತ್ತು ಪಾಪನಾಯಕ ದೇವರುಗಳನ್ನು ಒಂದು ಪರ್ಲಾಂಗ ಅಂತರದಲ್ಲಿ ಎದುರು ಬದಿರಿನಲ್ಲಿ ಕಂಪಳದೇವರನ್ನು ಹುಲ್ಲಿನ ಗುಡಿಸಲಿನಲ್ಲಿ, ಪಾಪೇದೇವರನ್ನು ಕರಿಕಂಬಳಿ ಗುಡಿಸಿಲಿನಲ್ಲಿ ಕೂರಿಸಿ ಪೂಜೆ ಮಾಡಿ ದೇವರ ಎತ್ತುಗಳನ್ನು ಆ ದೇವರುಗಳ ಮುಂದೆ ಓಡಿಸುವುದರ ಮೂಲಕ ದೀಪಾವಳಿಯನ್ನು ಆಚರಿಸುತ್ತಾರೆ. ಈ ಹಬ್ಬಕ್ಕೆ ಸುತ್ತಮುತ್ತಲ ಎಲ್ಲಾ ಹಟ್ಟಿಗಳಿಂದ ಬೇಡ ಬುಡಕಟ್ಟಿನವರು ಬರುತ್ತಾರೆ. ಜೊತೆಗೆ ದೇವರಿಗೆ ಕಾಸು ಮೀಸಲು ಹುರುಳಿಕಾಳನ್ನು ತರುತ್ತಾರೆ.

**ಕಾಸು ಮೀಸಲು**

ಕಾಸು ಎಂದರೆ ಹಣ ಅಥವಾ ಚಿಲ್ಲರೆ, ಮೀಸಲು ಎಂದರೆ ಮಡಿಯಿಂದ ದೇವರಿಗೆ ಅರ್ಪಿಸುವ ಹಾಲು, ಮೊಸರು, ಬೆಣ್ಣೆ. ಹಟ್ಟಿಯ ಜನರು ಅದು ಯಾವುದೇ ಸಮುದಾಯದವರಾಗಿರಬಹುದು ಅವರು ತಮ್ಮ ಮನೆಗಳಲ್ಲಿ ಹಸು, ಎಮ್ಮೆ, ಕುರಿಗಳಿಂದ ಹಾಲನ್ನು ಮಡಿಯಿಂದ ಕರೆದು ನೆಲ ಒಲೆಯನ್ನು ಸಾರಿಸಿ ಒಲೆಯ ಮೇಲೆ ಹಾಲನ್ನು ಕಾಯಿಸುತ್ತಾರೆ, ಕಾಯಿಸುವಾಗ ಅವರ ಉಸಿರು ಹಾಲಿಗೆ ತಾಗದಿರಲೆಂದು ಮುಖಕ್ಕೆ ಕಣ್ಣು ಮಾತ್ರ ಕಾಣುವಂತೆ ಬಟ್ಟೆಯನ್ನು ಕಟ್ಟಿಕೊಂಡಿರುತ್ತಾರೆ, ಒಲೆಯನ್ನು ಬಾಯಿಯಿಂದ ಊದದೆ ಕೈ ಬಳೆಗಳ ಸದ್ದಾಗದಂತೆ ಸೀರೆಯ ಸೆರಗು ಹಾರಾಡದಂತೆ ಹಾಲನ್ನು ಕಾಯಿಸುತ್ತಾರೆ, ಗಂಡು ಮಕ್ಕಳು ಸಹಾ ಮೀಸಲು ಹಾಲನ್ನು ಕಾಯಿಸಬಹುದು ಆದರೆ ಮಡಿಯಿಂದ ಒಂದೊತ್ತಿನಿಂದ ಕಾಯಿಸಬೇಕು, ಹೀಗೆ ಕಾಯಿಸಿಕೊಂಡು ಬಂದು ಹಾಲು ಬೆಣ್ಣೆಯನ್ನು ದೇವರಿಗೆ ಅರ್ಪಿಸುತ್ತಾರೆ. ಆ ಮೀಸಲನ್ನು ಪೂಜಾರಿಯು ಸ್ವೀಕರಿಸಿ ಮಣ್ಣಿನ ಮಗಿಯಲ್ಲಿ ಹಾಕಿ ಕಾಯಿಸುತ್ತಾನೆ. ಮೀಸಲು ತರುವವರು ತಮ್ಮ ತಮ್ಮ ಊರುಗಳಿಂದ ಬರಿಗಾಲಿನಲ್ಲಿ ನಡೆದುಕೊಂಡು ಮಡಿಯಿಂದ ಬರಬೇಕು. ಈ ಮೀಸಲು ಹಾಲನ್ನು ತಂಗಡಿಕೆ ಗಿಡದ ಕಟ್ಟಿಗೆಯಿಂದ ಕಾಯಿಸುತ್ತಾರೆ.

**ಎತ್ತಿನಕೊಂಬು**

ಕಂಪಳದೇವರ ಗುಡಿಯಲ್ಲಿ ತಲೆತಲೆಮಾರಿನಿಂದ ಬಂದ ಜೋಳಿಗೆ ಮತ್ತು ಒಂದು ಹಳೆಯ ಎತ್ತಿನಕೊಂಬು ಇದೆ. ಭಕ್ತರು ದೇವರಿಗೆ ನೀಡುವ ಕಾಳನ್ನು ಈ ಜೋಳಿಗೆಯಲ್ಲಿ ಮತ್ತು ಮೀಸಲು ಹಾಲು, ಮೊಸರು, ಬೆಣ್ಣೆ, ತುಪ್ಪವನ್ನು ಎತ್ತಿನ ಕೊಂಬಿನಲ್ಲಿ ಪೂಜಾರಿಯು ಸ್ವಿಕರಿಸುತ್ತಾನೆ. ಮ್ಯಾಸಬೇಡ ಬುಡಕಟ್ಟು ಹಿಂದಿನಿಂದಲೂ ಪಶುಪಾಲಕರಾಗಿದ್ದರು ಎಂಬುದನ್ನು ಈ ಕೊಂಬು ಮತ್ತು ಮೀಸಲು ಹಾಲು ಮೊಸರಿನ ನೈವೇದ್ಯ ಸಾಬೀತು ಪಡಿಸುತ್ತದೆ. ಅಲ್ಲದೇ ಈ ಹಬ್ಬದಲ್ಲಿ ಎತ್ತುಗಳನ್ನು ಓಡಿಸುವುದು ಸಹ ಪಶುಪಾಲನಾ ವೃತ್ತಿಗೆ ಸಾಕ್ಷಿಯಾಗಿದೆ. ಹೀಗೆ ಹಟ್ಟಿಯಲ್ಲಿ ದೀಪಾವಳಿ ಆಚರಣೆಯನ್ನು ಇಂದಿಗೂ ಸಹ ತಮ್ಮ ಎತ್ತುಗಳ ಹಬ್ಬವೆಂದೇ ಆಚರಿಸುತ್ತಾರೆ. ಇವರು ಪಶು/ರಾಸುಗಳೇ ತಮ್ಮ ಸಂಪತ್ತು ಎಂದು ಭಾವಿಸುತ್ತಾರೆ. ಕಂಪಳದೇವರ ಹಟ್ಟಿಯಲ್ಲಿ ದೀಪಾವಳಿ ಹಬ್ಬವನ್ನು ಮೂರು ದಿನಗಳ ಕಾಲ ಆಚರಿಸುತ್ತಾರೆ. ಮೊದಲ ದಿನ ದೇವರುಗಳನ್ನು ಹೊರಡಿಸಿ ಊರ ಹೊರಗೆ ಕೂಡಿಸುತ್ತಾರೆ. ಎರಡನೇ ದಿನ ಆ ದೇವರಿಗೆ ಪೂಜೆ ನೈವೇದ್ಯಗಳು ಭಕ್ತರಿಂದ ಜರುಗುತ್ತವೆ. ಕೊನೆಯ ದಿನ ದೇವರಿಗೆ ಕಾಸು ಮೀಸಲನ್ನು ಭಕ್ತರು ಅರ್ಪಿಸುತ್ತಾರೆ. ನಂತರ ಅ ದಿನ ಸಂಜೆ ದೇವರ ಎತ್ತುಗಳನ್ನು ದೇವರ ಮುಂದೆ ಓಡಿಸುತ್ತಾರೆ(ಇದನ್ನು ಎತ್ತು ಅರಿಯುವುದು ಎನ್ನುತ್ತಾರೆ). ಈ ಸಂದರ್ಭದಲ್ಲಿ ಬೇಡರು ತಮ್ಮ ದೈವವೇ ಈ ಎತ್ತುಗಳ ರೂಪದಲ್ಲಿ ನಮಗೆ ಆರ್ಶೀವದಿಸುತ್ತವೆ ಎಂದು ನಂಬುತ್ತಾರೆ. ದೇವರಿಗೆ ಅರ್ಪಿಸಿದ ಮೀಸಲು ಹಾಲು ಮತ್ತು ಬೆಣ್ಣೆಯನ್ನು ಒಂದೇ ಕಡೆ ಕಾಯಿಸಿ ಆ ತುಪ್ಪವನ್ನು ಅಂದು ನೆರದ ಭಕ್ತರಿಗೆ ದಾಸೋಹದಲ್ಲಿ ಊಟದ ವೇಳೆಯಲ್ಲಿ ಬಳಸುತ್ತಾರೆ. ಭಕ್ತರು ನೀಡಿದ ಕಾಳನ್ನು ಪೂಜಾರಿ ಮನೆತನದವರು ಕೊಂಡೊಯ್ಯುತ್ತಾರೆ. ಈ ರೀತಿಯಾಗಿ ಹಟ್ಟಿಯಲ್ಲಿ ದೂಲೆಪಂಡುವ/ ದೀಪಾವಳಿಯನ್ನು ಆಚರಿಸುತ್ತಾರೆ.

**ರೊಪ್ಪದಲ್ಲಿ/ಎತ್ತಿನ ಗೂಡಿನಲ್ಲಿ ದೀಪಾವಳಿ ಆಚರಣೆ**

ಕಂಪಳದೇವರ ಹಟ್ಟಿ ಮತ್ತು ಮುತ್ತಿಗಾರಹಳ್ಳಿಯ ಮಧ್ಯದಲ್ಲಿನ ಕಮರನ ಕಾವಲಿನಲ್ಲಿ ಮುತ್ತಿಗಾರ ಎತ್ತುಗಳಿಗೆ(ದೇವರ ಎತ್ತುಗಳಿಗೆ) ಒಂದು ಶಾಶ್ವತ ರೊಪ್ಪ ನಿರ್ಮಿಸಿದ್ದು, ದೀಪಾವಳಿಯ ಅಮವಾಸ್ಯೆಯ ದಿನ ಅಲ್ಲಿ ಬೇಡರೆಲ್ಲಾ ಸೇರಿ ಪೂಜೆ ಸಲ್ಲಿಸಿ ಮರುದಿನ ಗೂಡು ಬದಲಾಯಿಸುವ ಆಚರಣೆ ಮಾಡುತ್ತಾರೆ. ಅಂದರೆ ಹೊಸ ಗೂಡು ಕಟ್ಟಿ ಅಲ್ಲಿ ಎತ್ತುಗಳನ್ನು ಕೂಡುತ್ತಾರೆ(ಎತ್ತುಗಳೆಂದರೆ ಅಲ್ಲಿ ಬರಿ ಎತ್ತುಗಳು ಮಾತ್ರ ಇರುವುದಿಲ್ಲ ಹಸುಗಳೂ ಸಹ ಇರುತ್ತವೆ) ಇದಕ್ಕೆ ವೈಜ್ಞಾನಿಕ ಕಾರಣವೂ ಇದೆ. ರಾಸುಗಳು ವರ್ಷಪೂರ್ತಿ ಒಂದೇ ಗೂಡಿನಲ್ಲಿ ಇದ್ದು ಅಲ್ಲಿ ಉಣ್ಣೆಗಳು ಹೆಚ್ಚಾಗಿರಬಹದು. ಹಾಗಾಗಿ ಪ್ರತಿವರ್ಷ ದೀಪಾವಳಿಯಲ್ಲಿ ಹೊಸ ಗೂಡು ಮಾಡುತ್ತಾರೆ ಎನ್ನಬಹುದು ಅಥವಾ ಅಲೆಮಾರಿಗಳಾದ ಇವರು ವರ್ಷದಲ್ಲಿ ಹಲವು ಸಾರಿ ಬೇರೆ ಬೇರೆ ಕಡೆ ರೊಪ್ಪ ಕಟ್ಟಿಕೊಂಡು ದನಕರುಗಳನ್ನು ಸಾಕಿಕೊಂಡು ನಂತರ ಮುಂದುವರಿಯುತ್ತಿದ್ದುದು ಈ ಆಚರಣೆಯಿಂದ ತಿಳಿದು ಬರುತ್ತದೆ. ದೀಪಾವಳಿಯ ಅಮವಾಸ್ಯೆಯ ದಿನ ರೊಪ್ಪದಲ್ಲಿ "ಎತ್ತಿನ ಹಬ್ಬ" ಆಚರಿಸುತ್ತಾರೆ. ಇದನ್ನು

ಗೂಡು ಬದಲಾಯಿಸುವ ಆಚರಣೆ ಎಂದೂ ಸಹ ಕರೆಯುತ್ತಾರೆ. ಹಬ್ಬಕ್ಕೂ ಮೊದಲು ೮-೧೦ ದಿನಗಳ ಮೊದಲೇ ಹಳೆ ರೊಪ್ಪದ ಎದುರು ಸ್ವಲ್ಪ ದೂರದ ಬಯಲಿನಲ್ಲಿ ಒಂದು ಹೊಸ ರೊಪ್ಪ ಅಥವಾ ಗೂಡು ಕಟ್ಟಿರುತ್ತಾರೆ. ಅಮವಾಸ್ಯೆಯ ದಿನ ಎಲ್ಲಾ ಬೇಡರು ಕಾಡಿನಲ್ಲಿನ ಎತ್ತಿನ ಗೂಡಿಗೆ ಬಂದು ಸೇರುತ್ತಾರೆ. ರಾತ್ರಿ ಎಲ್ಲಾ ಅಲ್ಲೇ ಇದ್ದು ಅಮವಾಸ್ಯೆಯ ಬೆಳಗಿನ ಜಾವ ಆರು ಗಂಟೆಗೆ ಈ ಮೊದಲೇ ಬಯಲಿನಲ್ಲಿ ಪಶ್ಚಿಮ ದಿಕ್ಕಿಗೆ ಹೊಸದೊಂದು ರೊಪ್ಪ ಕಟ್ಟಿ ಪೂರ್ವಕ್ಕೆ ಒಂದು ಉದಿ-ಪದಿಯನ್ನು ಬಂದರಕೆಯ ಸೊಪ್ಪಿನಿಂದ ಗೋಡೆಯಾಕಾರವಾಗಿ ಕಟ್ಟಿರುತ್ತಾರೆ. ಇವೆರಡರ ಮಧ್ಯೆ ಅರ್ಧ ಪರ್ಲಾಂಗದ ಅಂತರ ಇರುತ್ತದೆ. ಮಧ್ಯದಲ್ಲಿ ಸಣ್ಣದೊಂದು ಬೆಂಕಿ ಕುಂಡವನ್ನು ಹಾಕಿರುತ್ತಾರೆ. ಆ ಬೆಂಕಿ ಕುಂಡವನ್ನು ಮುತ್ತಿಗಾರ ಒಡಪು ಎಂದು ಕರೆಯುತ್ತಾರೆ.

ಹಬ್ಬದ ದಿನ ಬೆಳಗಿನ ಐದು ಗಂಟೆಗೆ ರೊಪ್ಪದ ಎತ್ತುಗಳನ್ನು ಹೊರಗೆ ಹೊಡೆದು ರೊಪ್ಪವನ್ನು ಸ್ವಚ್ಛಗೊಳಿಸಿ ಅಲ್ಲಿ ಕಂಬಳಿ ಹಾಸಿ ಅದರಲ್ಲಿ ಭಕ್ತರು ತಂದ ಕಾಸು ಮೀಸಲನ್ನು ಹಾಕಿ ರೊಪ್ಪಕ್ಕೆ ಪೂಜೆ ಮಾಡಿ ನಂತರ ಬಂದ ಭಕ್ತಾದಿಗಳು ಎಲ್ಲರೂ ಒಂದೊಂದು ಕಾಸು ಮತ್ತು ಎಲೆ ಅಡಿಕೆ ತೆಗೆದುಕೊಳ್ಳುತ್ತಾರೆ. ಉಳಿದ ಕಾಸು ಮೀಸಲನ್ನು ಎತ್ತಿನ ಕಿಲಾರಿ ತೆಗೆದುಕೊಳ್ಳುತ್ತಾರೆ. ನಂತರ ಹೊಸ ರೊಪ್ಪದಲ್ಲಿ ದೇವರ ಎತ್ತುಗಳನ್ನು ಕೂಡಿ ಅಲ್ಲಿಂದ ರೊಪ್ಪದ ಮುಂದಿನ ಬಯಲಿನಲ್ಲಿ ದೇವರ ಎತ್ತುಗಳನ್ನು ಸೂರ್ಯ ಉದಯಿಸುವ ದಿಕ್ಕಿಗೆ ಉದಿಪದಿ ಕಟ್ಟಿರುವ ಕಡೆಗೆ ಓಡಿಸುತ್ತಾರೆ. ಹೀಗೆ ಮೂರು ಸಲ ಓಡಿಸುತ್ತಾರೆ. ಕಾರಣ ದೇವರ ಎತ್ತುಗಳು ಸೂರ್ಯನಿಗೆ ನಮಸ್ಕಾರ ಮಾಡುತ್ತವೆ ಎನ್ನುತ್ತಾರೆ. ಉದಿಪದಿ ಕಟ್ಟಿರುವಲ್ಲಿ ದೇವರುಗಳ ಪ್ರತೀಕವಾದ ಪೂಜಾರಿ, ಕಿಲಾರಿಗಳು ನಿಂತಿರುತ್ತಾರೆ.

**ಮುತ್ತಿಗಾರ ಒಡಪು**

ಕಾಡಿನಲ್ಲಿ ಪಶುಪಾಲನೆ ಮಾಡುತ್ತಾ ನೆಲೆಸಿರುವ ಬೇಡರು ಕಾಡಿನಲ್ಲಿ ದನಕರುಗಳ ಗೂಡಿನ ಬಳಿ ರಾತ್ರಿ ವೇಳೆ ಸದಾ ಬೆಂಕಿಯನ್ನು ಉರಿಸುತ್ತಿದ್ದರು. ಒಂದು ಮೊಳದಷ್ಟು ಅಳಾದ ಗುಂಡಿ ತೆಗೆದು ಒಣಗಿದ ಅಥವಾ ಹಸಿ ತಂಗಡಿ ಕಟ್ಟಿಗೆಗಳನ್ನು ಹಾಕಿ ಕಿಲಾರಿಗಳು ಬೆಂಕಿ ಉರಿಸುತ್ತಿದ್ದರು. ಕಾಡು ಪ್ರಾಣಿಗಳಿಂದ ರಕ್ಷಣೆ ಪಡೆಯಲು, ದನಕರುಗಳ ಗೂಡುಗಳನ್ನು ರಕ್ಷಿಸುವ ಸಲುವಾಗಿ ಮತ್ತು ಬಯಲಿನಲ್ಲೇ ಮಲಗಬೇಕಾದ ಸಂದರ್ಭದಲ್ಲಿ ಚಳಿಯಿಂದ ರಕ್ಷಿಸಿಕೊಳ್ಳಲು ಈ ರೀತಿ ಬೆಂಕಿಯನ್ನು ಉರಿಸುತ್ತಿದ್ದಿರಬಹುದು. ಇದೇ ಅವರಿಗೆ ರಾತ್ರಿಯ ವೇಳೆ ಬೆಳಕಿನ ಮೂಲವೂ ಹೌದು. ತೆಲುಗು ಪದಕೋಶದ ಪ್ರಕಾರ ಒಡಪು ಎಂದರೆ ಬೆಳಕು ಎಂದು ಅರ್ಥ ಬರುತ್ತದೆ. ಈ ಒಡಪೇ ಇಂದಿನ ಆಚರಣೆಯಲ್ಲಿ ಮುತ್ತಿಗಾರ ಒಡಪು ಎಂದು ಆಚರಣೆಯಲ್ಲಿ ರೂಢಿಯಲ್ಲಿ ಕಂಡುಬರುತ್ತದೆ. ಹಿಂದೆ ಹೀಗೆ ರಾತ್ರಿಯಿಡೀ ಕಾಡಿನಲ್ಲಿ ರೊಪ್ಪದ ಬಳಿ ಬೆಂಕಿ ಉರಿಸುತ್ತಿದ್ದ ಇವರನ್ನು ಇತರರು ಮ್ಯಾಸರು, "ಕೊಳ್ಳಿ ಮ್ಯಾಸರು" ಎಂದು ಕರೆಯುತ್ತಿದ್ದದ್ದೂ ಉಂಟು. ಮ್ಯಾಸರನ್ನು ಕೊಳ್ಳಿ ಮ್ಯಾಸ, ಕಳ್ಳ ಮ್ಯಾಸ(ಕಳ್ಳೆ ಮ್ಯಾಸ), ಅಡವಿ ಮ್ಯಾಸ ಎಂದು ಕರೆಯುತ್ತಾರೆ ಎಂದು ಎಂ ಜಿ ಈಶ್ವರಪ್ಪನವರು ತಮ್ಮ ಮ್ಯಾಸಬೇಡರು ಪುಸ್ತಕದಲ್ಲಿ ವಿಶ್ಲೇಷಿಸುತ್ತಾರೆ. ಈ ರೀತಿಯಾಗಿ ಕಂಪಳದೇವರ ಹಟ್ಟಿ ಮತ್ತು ಎತ್ತಿನ ಗೂಡಿನಲ್ಲಿ ದೀಪಾವಳಿ ಹಬ್ಬವನ್ನು ತುಂಬಾ ವಿಶೇಷವಾಗಿ ಆಚರಿಸಲಾಗುತ್ತದೆ.

**ಧಗಮು ಸೇವೆ**

ದೇವರ ಪ್ರತಿ ಆಚರಣೆ, ಪೂಜೆಯ ವೇಳೆ ಪ್ರಮುಖವಾಗಿ ಕಂಡು ಬರುವ ಸಾಧನ ಧಗಮು(ನಗಾರಿ). ಇದು ಒಂದು ಚರ್ಮವಾದ್ಯ, ತಳಭಾಗ ಚಿಕ್ಕದಾಗಿದ್ದು ಮೇಲೆ ಅಗಲವಾಗಿರುವ ಕಂಚು ಅಥವಾ ಹಿತ್ತಾಳೆಯ ಬಾನೆ ಆಕಾರದ ವಸ್ತುವಿಗೆ ಚರ್ಮವನ್ನು ಬಿಗಿದು ಧಗಮನ್ನು ಸಿದ್ದಪಡಿಸಿರುತ್ತಾರೆ. ಇದು ಸುಮಾರು ೨-೪ ಅಡಿ ಎತ್ತರವಾಗಿರುತ್ತದೆ. ಇದರ ಮೇಲೆ ಹಸುವಿನ ಚರ್ಮವನ್ನು ಬಿಗಿದು ಕಟ್ಟಿ ಸಿದ್ದಪಡಿಸಿರುತ್ತಾರೆ.

ತಯಾರಿಸುವ ವಿಧಾನ: ಧಗಮನ್ನ ತಯಾರಿಸಲು ತಮ್ಮದೇ ಆದ ವಿಶಿಷ್ಟ ನಿಯಮವಿದೆ. "ಬಿಳಿಯ ಗೊಡ್ಡು ಹಸುವನ್ನು ತಂದು ಊರಿಂದ ಆಚೆ ಒಂದು ಮರಕ್ಕೆ ಆ ಹಸುವನ್ನು ಎರಡು ಮುಂದಿನ ಕಾಲು ಮೇಲೆ ಮಾಡಿ, ಎರಡು ಕೆಳಗೆ ಮಾಡಿ ಕಟ್ಟಿ ಹಟ್ಟಿಯ ಮಾದಿಗ ಸಮುದಾಯದವರು ಅದು ಜೀವಂತ ಇರುವಂತೆಯೇ ಅದರ ಚರ್ಮ ಸುಲಿಯುತ್ತಾರೆ. ಆ ಹಸುವು ಚರ್ಮ ಸುಲಿಯುವಾಗ ಅರಚಬಾರದು, ಅದಕ್ಕೆಂದೇ ಊರವರು ಸಾಕಷ್ಟು ಬಾಳೆಹಣ್ಣು, ಬೆಲ್ಲ ಕೊಡಿಸಿರುತ್ತಾರೆ, ಅವನ್ನು ಹಸುವಿನ ಬಾಯಿಗೆ ನಿರಂತರ ತಿನ್ನಿಸುತ್ತಿರುತ್ತಾರೆ. ಮಾದಿಗ ಸಮುದಾಯದವರು ಹಸುವನ್ನು ಜೀವಂತ ಇರುವಂತೆಯೇ ಅದರ ಚರ್ಮ ಸುಲಿದು ನಂತರ ಅದನ್ನು ಮೂರು ಹೆಜ್ಜೆ ನಡೆಸುತ್ತಾರೆ. ನಂತರ ಅದು ಪ್ರಾಣ ಬಿಡುತ್ತದೆ ಆಗ ಅದನ್ನು ಈ ಮೊದಲೇ ತೊಡಿರುವ ಗುಂಡಿಯೊಳಗೆ ಹೂಳಿ ಸಮಾಧಿ ಮಾಡುತ್ತಾರೆ. ನಂತರ ಚರ್ಮ ಹದಮಾಡಿ ಧಗಮು ಸಿದ್ಧ ಪಡಿಸುತ್ತಾರೆ. ಈ ಎಲ್ಲಾ ಕಾರ್ಯ ಮುಗಿಯುವವರೆಗೆ ಮಾದಿಗ, ಛಲವಾದಿ, ಬೇಡರ ಆ ತಂಡ ಊರ ಒಳಗೆ ಬರುವುದಿಲ್ಲ ಅವರಿಗೆ ಊಟ ನೀರು, ವಿಶ್ರಾಂತಿಗೆ ಹಟ್ಟಿಯ ಜನರು ಅಲ್ಲಿಯೇ ವ್ಯವಸ್ಥೆ ಮಾಡಿರುತ್ತಾರೆ. ಧಗಮು ತಯಾರಿಸಿದ ಮೇಲೆ ಸಂಬಂಧಿಸಿದ ಬೆಡಗಿನವರು(ಯರಪೊತು). ದೇವರಿಗೆ ಪೂಜೆ ಸಲ್ಲಿಸಿ ಅದನ್ನು ದೇವರಿಗೆ ಒಪ್ಪಸುತ್ತಾರೆ. ನಂತರ ಅದು ದೇವರ ಪೂಜಾ ಕಾರ್ಯಗಳಲ್ಲಿ ಬಳಕೆಯಾಗುತ್ತದೆ. ಧಗಮು ಸಿದ್ದಪಡಿಸಲು ಬೇಕಾದ ಗೊಡ್ಡು ಹಸುವನ್ನು ದುಡ್ಡುಕೊಟ್ಟು ಖರೀದಿ ಮಾಡಿಕೊಂಡು ಬರುವುದು, ಅದರ ಚರ್ಮಸುಲಿದು ಅದನ್ನು ಸಿದ್ದಪಡಿಸುವ ತಂಡದ ಖರ್ಚು ವೆಚ್ಚ ಭರಿಸುವ ಜವಾಬ್ದಾರಿ ಕುರಿ ಕಿಲಾರಿಯದೇ ಆಗಿರುತ್ತದೆ"(ಮಾಹಿತಿ: ಕಿಲಾರಿ ಬೋರಯ್ಯ, ೭೫, ದೇವರ ಕುರಿಯವರು, ಕಂಪಳದೇವರ ಹಟ್ಟಿ). ಧಗಮನ್ನು ಬಡಿಯಲು ಅದೇ ಹಸುವಿನ ಚರ್ಮದಿಂದ ಮಾಡಿದ ಕೈಗಳಾಕಾರದ ಎರಡು ಜೋಡು ಮಾಡಿರುತ್ತಾರೆ. ದೇವರು ಹೊರಗೆ ಹೊರಟಾಗ ಮಡಿಚಿದ ಕಂಬಳಿಯನ್ನು ತಲೆಯ ಮೇಲೆ ಹಾಕಿಕೊಂಡು ಒಬ್ಬ ಇದನ್ನು ಹೊತ್ತುಕೊಂಡರೆ ಮತ್ತೊಬ್ಬ ಹಿಂದೆ ಚರ್ಮದ ಪಟ್ಟಿಯಿಂದ (ಜೋಡಿನಿಂದ) ಧಗಮನ್ನು ಬಡಿಯುತ್ತಾ ಹೋಗುತ್ತಾನೆ.

ಉಳಿದಂತೆ ಪ್ರತಿ ಶನಿವಾರ ಗುಡಿಯಲ್ಲಿ ಪೂಜೆ ನಡೆಯುವಾಗ ಗುಡಿಯ ಆವರಣದಲ್ಲಿ ನೆಲದ ಮೇಲೆ ಕಂಬಳಿ ಹಾಸಿ ಅದರ ಮೇಲೆ ಧಗಮನ್ನು ಇಟ್ಟು ಬಡಿಯಲಾಗುತ್ತದೆ. ಇಲ್ಲಿಯ ದೇವರುಗಳು ಮೂಲತಃ ಈ ಸಮುದಾಯದ ಸಾಂಸ್ಕೃತಿಕ ನಾಯಕರೇ ಆಗಿದ್ದು ಅವರು ಹುಟ್ಟು ಹೋರಾಟಗಾರರು,

ಭಕ್ತರೂ ಹಾಗೂ ವೀರ ಪರಂಪರೆಯಿಂದ ಬಂದವರೇ ಆಗಿರುತ್ತಾರೆ. ಹಾಗಾಗಿ ರಣವಾದ್ಯಗಳ ಬಳಕೆಯೇ ಇಲ್ಲಿ ಸಾಮಾನ್ಯ. ದೇವಸ್ಥಾನದ ಆವರಣದ ಹೊರಗೆ ನಿಂತ ಛಲವಾದಿಗಳು ಉರುಮೆಯನ್ನು, ಮಾದಿಗ ಸಮುದಾಯದವರು ಕಹಳೆ, ತಮಟೆಯ ವಾದ್ಯಗಳನ್ನು ನುಡಿಸುತ್ತಿರುತ್ತಾರೆ. ಕಾಡುಗೊಲ್ಲರಲ್ಲಿಯೂ ಈ ಧಗಮು ವಾದ್ಯ ಭಾರಿಸುವುದು ಕಂಡುಬರುತ್ತದೆ. ವಿಶೇಷವಾಗಿ ಪಶುಪಾಲಕರಲ್ಲಿ ಮಾತ್ರ ಧಗಮು ಅಥವಾ ನಗಾರಿ ವಾದ್ಯ ಕಂಡು ಬರುತ್ತದೆ.

### ೪.೨.೪ ಗುಗ್ಗರಿ ಹಬ್ಬ(ಎತ್ತಿನ ಹಬ್ಬ)

ಮೂಲತಃ ಕಾಡು ಮೇಡುಗಳಲ್ಲಿ ಅಲೆಮಾರಿಯಾಗಿ ಅಲೆಯುತ್ತಿದ್ದ ಬೇಡ ಬುಡಕಟ್ಟಿನವರು ಕಾಡಿನಲ್ಲಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಅವುಗಳ ಮಾಂಸ ತಿಂದು ಜೀವಿಸುತ್ತಿದ್ದರು, ಕಾಲಾನಂತರದಲ್ಲಿ ಕಾಡಿನ ಕೆಲವು ಸೌಮ್ಯ ಪ್ರಾಣಿಗಳನ್ನು ಹಿಡಿದು ಸಾಕತೊಡಗಿದರು. ಹೀಗೆ ಪಶುಪಾಲನೆಗೆ ತೊಡಗಿದ ಇವರು ಕಾಲಾನಂತರ ಹಟ್ಟಿಗಳನ್ನು ಕಟ್ಟಿಕೊಂಡು ಒಂದೆಡೆ ನೆಲಸಿ ಕೃಷಿಗೆ ಪ್ರವೇಶ ಪಡೆದರು. ಕೃಷಿಗೆ ತೊಡಗಿದ ಸಂದರ್ಭದಲ್ಲಿ ತಮ್ಮ ಕೃಷಿ ಬದುಕಿಗೆ ಸಹಾಯಕವಾಗಿದ್ದ ಎತ್ತುಗಳನ್ನೇ ತಮ್ಮ ದೇವರೆಂದು ಆರಾಧಿಸಿ ವರ್ಷದ ಸುಗ್ಗಿಯ ನಂತರ ತಾವು ಆ ವರ್ಷ ಬೆಳೆದ ಗುಗ್ಗರಿ ಕಾಳುಗಳನ್ನು ಎತ್ತುಗಳಿಗೆ ಎಡೆಯಿಟ್ಟು ನಂತರ ತಾವು ಸೇವಿಸುವುದು ಎಂದು ನಿರ್ಧರಿಸಿಕೊಂಡವರಂತೆ ಇಂದಿಗೂ ಸಹ ಪಾರಂಪರಿಕ ಆಹಾರ ಧಾನ್ಯಗಳಾದ ಹುರುಳಿಕಾಳು ಹೆಸರುಕಾಳುಗಳನ್ನು ಎಲ್ಲಾ ಮನೆಯವರು ಸ್ವಲ್ಪ ಸ್ವಲ್ಪ ಸಂಗ್ರಹಿಸಿ ಒಂದೆಡೆ ಬೇಯಿಸಿ ಗುಗ್ಗರಿ ಮಾಡಿ ದೇವರಿಗೆ, ದೇವರ ಎತ್ತುಗಳಿಗೆ ಎಡೆಯಿಟ್ಟು ನಂತರ ತಾವು ಸೇವಿಸುತ್ತಾರೆ. ಇದನ್ನೇ ಗುಗ್ಗರಿ ಹಬ್ಬ ಎನ್ನುತ್ತಾರೆ. ಪಶುಪಾಲನೆಯೊಂದಿಗೆ ಕೃಷಿಯೂ ನಮ್ಮ ಪ್ರಾಚೀನರಲ್ಲಿ ಪ್ರಾರಂಭವಾದ ವಿವರಗಳನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಕೃಷಿ ಎಂದಾಗ ಮುಖ್ಯವಾಗಿ ಮಧ್ಯಕರ್ನಾಟಕದ ಪ್ರಮುಖ ಬೆಳೆಗಳಾದ ರಾಗಿ, ಸಜ್ಜೆ, ನವಣೆ ಮತ್ತು ದ್ವಿದಳ ಧಾನ್ಯಗಳು ಅದರಲ್ಲಿ ಹುರುಳಿ ಪ್ರಮುಖ ಬೆಳೆ. ಕಂಪಳದೇವರ ಹಟ್ಟಿ ಮತ್ತು ಸುತ್ತಮುತ್ತಲ ಹಟ್ಟಿಯ ಮ್ಯಾಸಬೇಡರು ಹುರುಳಿಯನ್ನು ಒಂದೆಡೆ ಬೇಯಿಸಿ ಗುಗ್ಗರಿ ಮಾಡಿ ಜೋಳ, ಸಜ್ಜೆ, ಅಥವಾ ನವಣೆಯನ್ನು ಕುಟ್ಟಿ ಅಕ್ಕಿ ಮಾಡಿ ಬೇಯಿಸಿ ಮೀಸಲಾಗಿರಿಸಿದ್ದ ಹಾಲು ಮೊಸರಿನೊಂದಿಗೆ ದೇವರಿಗೆ, ದೇವರ ಎತ್ತುಗಳಿಗೆ ನೈವೇದ್ಯ ಮಾಡುತ್ತಾರೆ. ಇದನ್ನು ಕಂಪಳದೇವರ ಹಟ್ಟಿಯಲ್ಲಿ ಇಂದಿಗೂ ಕಟ್ಟುನಿಟ್ಟಾಗಿ ಅನುಸರಿಸಿಕೊಂಡು ಆಚರಿಸಿಕೊಂಡು ಬರುತ್ತಿದ್ದಾರೆ. ಗುಗ್ಗರಿಗೆ ಬಳಸುವ ಕಾಳುಕೇಂದ್ರಿತ ಹಬ್ಬ ಇಂದಾಗಿರುವುದರಿಂದ ಇದನ್ನು 'ಕಾಳು ಹಬ್ಬ' ಎಂದು ಕರೆಯುತ್ತಾರೆ. ಈ ಹಬ್ಬದಲ್ಲಿ ಸರ್ವೇಸಾಮಾನ್ಯವಾಗಿ ಬಳಸುವ ಧಾನ್ಯ ಹುರುಳಿ ಆದ್ದರಿಂದ ಇದನ್ನು "ಹುರುಳಿ ಬತ" ಎನ್ನುತ್ತಾರೆ. ಮ್ಯಾಸಬೇಡ ದೈವಗಳಿಗೆ ಹುರುಳಿಕಾಳಿನ ಗುಗ್ಗರಿ ಎಡೆಗೆ ಬಳಸುತ್ತಾರೆ. ಆದರೆ ಕಾಡುಗೊಲ್ಲರ ದೈವಗಳಿಗೆ ನವಣೆ ಅನ್ನ ಎಡೆಗೆ ಬಳಸುವುದರಿಂದ ಅದನ್ನು "ನವಣೆ ಬತ" ಎನ್ನುತ್ತಾರೆ. ಕಂಪಳದೇವರ ಹಟ್ಟಿಯಲ್ಲಿ ಕಂಪಳದೇವರು ಮತ್ತು ಪಾಪೇದೇವರುಗಳನ್ನು ಮಾಡುವಾಗ ಈ ಗುಗ್ಗರಿ ಹಬ್ಬವನ್ನು ಆಚರಿಸುತ್ತಾರೆ. ಹೊಲಗದ್ದೆಗಳಲ್ಲಿ ಪೈರು ಪಚ್ಚೆ ಹುಲುಸಾಗಿ ಬೆಳೆದು ರೈತನ ಕಣಸೇರಿ ರೈತನ ಮನಸ್ಸಿಗೆ ಹರ್ಷವನ್ನುಂಟು ಮಾಡುವ

ಕಾಲವದು. ಸಾಮಾನ್ಯವಾಗಿ ನಮ್ಮ ಹಬ್ಬಗಳು ಒಂದು ದಿವಸ ಹೆಚ್ಚೆಂದರೆ ಎರಡು ದಿವಸದಲ್ಲಿ ಮುಗಿಯುತ್ತವೆ. ಆದರೆ ಈ ಗುಗ್ಗರಿ ಹಬ್ಬವು ಆರು ದಿನಗಳ ಕಾಲ ನಡೆಯುತ್ತದೆ.

ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ಗುಗ್ಗರಿ ಹಬ್ಬ ನಡೆಯುತ್ತದೆ. ಜಾತ್ರೆಯ ಹಿಂದಿನ ದಿನ ಪೆಟ್ಟಿಗೆ ದೇವರುಗಳಾದ ಕಂಪಳ ರಂಗಸ್ವಾಮಿಯ ಪೆಟ್ಟಿಗೆಯನ್ನು ಪೂಜಾರಿಯಿಂದ ಹೋರಿಸಿಕೊಂಡು ಬಂದು ಊರಿಂದ ಆಚೆ ಈ ಮೊದಲೇ ನಿಗದಿ ಮಾಡಿದ ಸ್ಥಳದಲ್ಲಿ ಇಡುತ್ತಾರೆ. ಹಿಂದೆ ಈ ಹಬ್ಬವನ್ನು ಕಾಡಿನ ಅಥವಾ ಕಾವಲಿನ ಮಧ್ಯದಲ್ಲಿ ಎಲ್ಲಾದರೂ ಒಂದು ಕಡೆ ಸಮ ಮಾಡಿ ಅಲ್ಲಿಗೆ ಹಟ್ಟಿಯಿಂದ ದೇವರನ್ನು ಮೆರವಣಿಗೆ ಹೊರಡಿಸಿಕೊಂಡು ಆ ಭಾಗಕ್ಕೆ ತಂದು ಅಲ್ಲಿ ಹಬ್ಬ ಮಾಡುತ್ತಿದ್ದುದಾಗಿ ಹಟ್ಟಿಯ ಹಿರಿಯ ವ್ಯಕ್ತಿ ಕಿಲಾರಿ ಬೋರಯ್ಯ ಹೇಳುತ್ತಾರೆ. ಈಗೀಗ ದೇವರ ಪೆಟ್ಟಿಗೆಯನ್ನು ಪೂಜಾರಿಯೊಬ್ಬನಿಂದ ಹೊತ್ತುಕೊಂಡು ಅಷ್ಟು ದೂರ ನಡೆಯುವುದು ಕಷ್ಟವೆಂತಲೋ(ದೇವರ ಪೆಟ್ಟಿಗೆಯನ್ನು ಬೇರೆ ಯಾರೂ ಹೊರುವಂತಿಲ್ಲ ಪಟ್ಟದ ಪೂಜಾರಿ ಮಾತ್ರ ಅದು ತಲೆಯ ಮೇಲೆ ಹೊರಬೇಕು. ಒಂದು ವೇಳೆ ಬೇರೆಯವರು ಹೊರುವುದಾದರೆ ನಗರಿ ಮನೆಯ ನಗರಿ ಪೂಜಾರಿಗಳು ಹೆಗಲ ಮೇಲೆ ಹೊರಬಹುದು) ಕಾಡು ನಾಶವಾಗಿದ್ದರಿಂದಲೋ ಅಥವಾ ನಾಗರಿಕತೆಯ ಪ್ರಭಾವದಿಂದಲೋ ಈಗ ಜಾತ್ರೆಯನ್ನು ಮಾಡಲು ಕಾಡಿಗೆ ಹೋಗದೆ ಊರಿಂದ ಆಚೆ ಒಂದು ಬಯಲಿನಲ್ಲಿ ಕಂಪಳದೇವರಿಗೆ ಕೌಂಸಿ ಗುಡಿಸಲು, ಪಾಪದೇವರಿಗೆ ಕರಿಕಂಬಳಿ ಗುಡಿಸಲು ಹಾಕಿ ಅವುಗಳ ಮುಂದೆ ಲಕ್ಕಲಿ ಬರಲಿನಿಂದ ನರಿಕೆ ಕಟ್ಟಿರುತ್ತಾರೆ. ಈ ಲಕ್ಕಿಲಿಬರಲು ವಿಷ್ಣುವಿಗೆ ಪ್ರಿಯವಾದ ಸಸ್ಯವರ್ಗ. ಹಿಂದೆ ತಮ್ಮ ಕುಲದೇವತೆಯಾದ ಅಥವಾ ಸಾಂಸ್ಕೃತಿಕ ನಾಯಕನಾದ ಜಗಳೂರು ಪಾಪನಾಯಕನು ತಿರುಪತಿಗೆ ಹೋಗಿ ಅಲ್ಲಿ ವಿಷ್ಣುವನ್ನು ಪ್ರತ್ಯಕ್ಷವಾಗಿಸಿಕೊಂಡು ಆರ್ಶೀವಾದ ಪಡೆದು ಅಲ್ಲಿಂದ ತಿರುಪತಿ ತಿಮ್ಮಪ್ಪನ ಜೊತೆ ಒಪ್ಪಂದ ಮಾಡಿಕೊಂಡು(ಭಾವ ಭಾಮೈದ ಆಗುವ ಮತ್ತು ನನ್ನ ಪೂಜೆಯಲ್ಲಿ ಮೊದಲ ಪೂಜೆ ನಿನಗೆ ನಡೆಸುತ್ತೇನೆ ಎಂಬ ಒಪ್ಪಂದ) ಆ ದೈವವನ್ನು ತಂದು ಕಂಪಳದೇವರ ಹಟ್ಟಿಯಲ್ಲಿ ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ತಿರುಪತಿಯಲ್ಲಿ ನಡೆಯುವ ಎಲ್ಲಾ ಪೂಜಾ ವಿಧಾನಗಳು(ನಿಯಮಗಳು) ಇಲ್ಲಿ ನಡೆಯುತ್ತವೆ.

ಕಂಪಳದೇವರ ಹಟ್ಟಿಯನ್ನು ಕರ್ನಾಟಕದ ಮ್ಯಾಸಬೇಡರ ತಿರುಪತಿ ಎಂದು ಕರೆಯುತ್ತಾರೆ. ಹಾಗೆಯೇ ಬೇಡರ ಕುಲದ ಶರಣನಾದ ಜಗಳೂರು ಪಾಪನಾಯಕನು ತನ್ನ ಪಶುಪಾಲನಾ ಅಲೆಮಾರಿ ಜೀವಿತಾವಧಿಯಲ್ಲಿ ಕೆಲವು ಕಾಲ ಕಂಪಳದೇವರ ಹಟ್ಟಿಯಲ್ಲಿ ತಂಗಿದ್ದು ಅಲ್ಲಿಯೇ ಒಂದು ವಿಷ್ಣು ಸಾಲಿಗ್ರಾಮವನ್ನು ಸ್ಥಾಪಿಸಿದನೆಂದು ಹಟ್ಟಿಯ ಹಿರಿಯರು ಹಾಡುವ ಮೌಖಿಕ ಕಾವ್ಯಗಳಿಂದ ತಿಳಿದು ಬರುತ್ತದೆ. ಜಗಳೂರಜ್ಜನು ವಿಷ್ಣುದೇವರನ್ನು ಅಲ್ಲಿ ಸ್ಥಾಪಿಸಿದ್ದರಿಂದಲೋ ಏನೋ ಈ ಹಬ್ಬದಲ್ಲಿ ಯಾವುದೇ ರೀತಿ ಪ್ರಾಣಿ ಹಿಂಸೆ ಅಥವಾ ಬಲಿ ಇಲ್ಲದೆ ಸಾತ್ವಿಕ ಆಹಾರ ಮತ್ತು ಗುಗ್ಗರಿ, ಹಾಲು–ಮೊಸರಿನ ನೈವೇದ್ಯದೊಡನೆ ಈ ಜಾತ್ರೆಯನ್ನು ನೆರವೇರಿಸುತ್ತಾರೆ. ದೇವರಿಗೆ ಬಾಳೇಹಣ್ಣು, ತೆಂಗಿನಕಾಯಿಯ ಬದಲು ಬೆಲ್ಲವನ್ನು ಪೂಜೆಗೆ ಬಳಸುತ್ತಾರೆ. ಈ ಹಬ್ಬದಲ್ಲಿ ಕಂಪಳದೇವರ ಗುಡಿಸಲಿಗೆ

ಅರ್ಧಪಾರ್ಲಿಂಗ ದೂರಕ್ಕೆ ಪಾಪನಾಯಕ ದೇವರ ಗುಡಿಸಲು ಹಾಕಿರುತ್ತಾರೆ. ಈ ಎರಡು ದೇವತೆಗಳನ್ನು ಬಿಟ್ಟರೆ ಅಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವುದು ದೇವರಿಗೆ ಬಿಟ್ಟ ದೇವರ ಎತ್ತುಗಳು. ಈ ಎತ್ತುಗಳನ್ನು ಮ್ಯಾಸಮಂಡಲದವರು ಹರಕೆ ಮಾಡಿಕೊಂಡು ಪಾಪನಾಯಕ ಅಥವಾ ಕಂಪಳದೇವರ ಹೆಸರಿನಲ್ಲಿ ಬಿಟ್ಟಿರುತ್ತಾರೆ. ಹೀಗೆ ಹರಕೆ ಕಟ್ಟಿಕೊಂಡು ಬಿಟ್ಟ ರಾಸುಗಳು ಒಂದು ಗುಂಪಾಗಿ ಆ ಗುಂಪನ್ನು ಯಾವುದೋ ಒಂದು ಕಾವಲಿನಲ್ಲಿ ಬಿಟ್ಟು ದನದ ಗೂಡು ಹಾಕಿಕೊಂಡು ಮೇಯಿಸಲು ಕಿಲಾರಿಗಳನ್ನು ನೇಮಿಸಿರುತ್ತಾರೆ. ಈ ಕಿಲಾರಿ ಎಂಬ ಪದ ಪಶುಸಮೂಹ, ಹಾಲು ಕರೆಯುವಿಕೆ, ಕ್ಷೀರಸಾಗರ, ಗೋಶಾಲೆ, ಗೋವುಗಳನ್ನು ಕಾಯುವವರು ಈ ಅರ್ಥಗಳನ್ನು ಕೊಡುತ್ತದೆ. ಮ್ಯಾಸಬೇಡರಲ್ಲಿ ಕುರಿ ಕಿಲಾರಿಗಳು ಮತ್ತು ಎತ್ತಿನ ಕಿಲಾರಿಗಳು ಎಂಬ ಎರಡು ಬಗೆಯ ಕಿಲಾರಿಗಳಿರುತ್ತಾರೆ. ಗುಗ್ಗರಿ ಹಬ್ಬದಲ್ಲಿ ಇವರ ಪಾತ್ರವು ಪ್ರಮುಖವಾಗಿರುತ್ತದೆ. ಈ ಹಬ್ಬದಲ್ಲಿ ಹಟ್ಟಿಯವರೆಲ್ಲಾ ಆಚರಣೆಯಲ್ಲಿ ಭಾಗವಹಿಸುವುದಲ್ಲದೆ ಬೇರೆ ಬೇರೆ ಊರುಗಳಿಂದಲೂ ಕಾಸು, ಮೀಸಲು ಹುರುಳಿ ಕಾಳುಗಳನ್ನು ತೆಗೆದುಕೊಂಡು ಬರಿಗಾಲಿನಿಂದ ನಡೆದು ಬಂದು ಅವನೆಲ್ಲಾ ಭಕ್ತಿ ಪೂರ್ವಕವಾಗಿ ದೇವಾಲಯಕ್ಕೆ ಅರ್ಪಿಸಿ ಪೂಜಾಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾರೆ.

**ಜಲಧಿಗೆ ಹೋಗುವುದು**

ಮೊದಲ ದಿನ ಹಟ್ಟಿಯ ಪಕ್ಕದಲ್ಲೇ ಹರಿಯುವ ಚಿನ್ನಹಗರಿ ನದಿಗೆ ಜಲಧಿಗೆ ದೇವರ ಪೆಟ್ಟಿಗೆ, ಬಿಲ್ಲುಗಳನ್ನು ಮೆರವಣಿಗೆ ಮಾಡುತ್ತಾ ಹೊಯ್ದು ಗಂಗೆಪೂಜೆ ಮಾಡಿಕೊಂಡು ಬರುತ್ತಾರೆ. ಒಂದು ವೇಳೆ ಹಳ್ಳದಲ್ಲಿ ನೀರು ಇಲ್ಲದಿದ್ದರೆ ಚಿಲುಮೆ ತೋಡಿ ಅದರಲ್ಲಿ ಬಂದ ನೀರಿನಲ್ಲಿ ದೇವರ ಒಡವೆಗಳನ್ನು ತೊಳೆದು ಸುತ್ತಲೂ ಕರಿಕಂಬಳಿಯ ತೆರೆ ಕಟ್ಟಿಕೊಂಡು ದೇವರ ಒಡವೆಗಳನ್ನು ಪೂಜಿಸುತ್ತಾರೆ. ಆ ಸಂದರ್ಭದಲ್ಲಿ ಬೇಡ ಮಹಿಳೆಯರು ದೇವರ ಪವಾಡದ ಬಗ್ಗೆ ಹಾಡು, ಕಥನಗಳನ್ನು ಹಾಡುತ್ತಿರುತ್ತಾರೆ. ಪೂಜಾರಿ ಕಣ್ಣುಕಟ್ಟಿಕೊಂಡು ದೇವರ ಪೂಜೆ ಮಾಡುತ್ತಾನೆ. ಇದನ್ನೆಲ್ಲಾ ಮಾಡುವಾಗ ಬೇರೆ ಯಾರು ನೋಡುವಂತಿಲ್ಲ ಸ್ವತಃ ಪೂಜಾರಿಯೂ ಸಹ ನೋಡದೆ ಕಣ್ಣು ಕಟ್ಟಿಕೊಂಡು ಪೂಜಿಸುತ್ತಾನೆ. ಬೇರೆಯವರು ನೊಡಬಾರದಂತಲೇ ಕರಿಕಂಬಳಿಯ ತೆರೆ ಕಟ್ಟಿರುತ್ತಾರೆ. ಒಳಗಡೆ ನೂರಾಒಂದು ಪೂಜೆ ಸಲ್ಲಿಸಲಾಗುತ್ತದೆ. ಆ ದಿನ ಸಂಜೆಯ ವೇಳೆಗಾಗಲೇ ದೇವಸ್ಥಾನಕ್ಕ ಅಕ್ಕಿ, ಹುರುಳಿ, ಮೀಸಲು ಹಾಲು, ಮೊಸರನ್ನು ಭಕ್ತರು ತಂದುಕೊಟ್ಟಿರುತ್ತಾರೆ. ಹುರುಳಿಕಾಳನ್ನು ಬೇಯಿಸಿ ಗುಗ್ಗರಿ ಮಾಡಿ ನೈವೇದ್ಯಕ್ಕೆ ತಳಿಗೆ ಅನ್ನ ಮಾಡುತ್ತಾರೆ(ಅಕ್ಕಿ ಬೇಯಿಸಿ ಅದಕ್ಕೆ ಬಾಳೆಹಣ್ಣು, ಹಾಲು, ಮೊಸರು, ಬೆಲ್ಲ ಹಾಕಿ ಬೆರೆಸುವುದೇ ತಳಿಗೆ ಅನ್ನ). ರಾತ್ರಿಯೆಲ್ಲಾ ಪೂಜೆ ಮಾಡಿ ಬೆಳಗಿನ ಜಾವ ಮುಗಿಸುತ್ತಾರೆ. ಮರುದಿನ ಮಣೇವುಸೇವೆ ಎಂಬ ಆಚರಣೆ ನಡೆಸುತ್ತಾರೆ. ಗುಡಿಯ ಮುಂಭಾಗದಲ್ಲಿ ಮಡಿ ಬಟ್ಟೆ ಹಾಸಿ ಅದರ ಮೇಲೆ ಬೆಲ್ಲ, ಬಾಳೆಹಣ್ಣು, ತಂಬಿಟ್ಟು ಬೆರಸಿ ಸಾಲಾಗಿ ಇಟ್ಟ ಸಣ್ಣ ಸಣ್ಣ ಕುಪ್ಪೆಗಳನ್ನು ದಾಸಯ್ಯಗಳು ಕುಣಿಯುತ್ತಾ ಹೊಂಕರಿಸುತ್ತಾ ಬಂದು ಮಲಗಿ ಬಲಪಕ್ಕಕ್ಕೆ ಹೊರಳಿ ಆ ಕುಪ್ಪೆಗಳಿಗೆ ಬಾಯಿ ಹಾಕಿ ತಿನ್ನುತ್ತಾರೆ, ಮೂರನೆಯ ದಿನ ಮುಂಜಾನೆ ಸುಮಾರು ಎರಡು ಗಂಟೆಗಳ ಸಮಯಕ್ಕೆ

ಊರಿನ ಹೆಣ್ಣು ಮಕ್ಕಳು ಆರತಿ ತಟ್ಟೆಯನ್ನು ಹಿಡಿದು ಸಾಲಾಗಿ ದೇವಸ್ಥಾನದ ಮುಂದೆ ನಿಲ್ಲುತ್ತಾರೆ. ಸೂರ್ಯ ಉದಯಿಸುವ(ಮೂಡಣ) ದಿಕ್ಕಿಗೆ ಮತ್ತು ದೇವರುಗಳಿಗೂ ಆರತಿ ಬೆಳಗುತ್ತಾರೆ. ನಂತರ ಭಕ್ತಾದಿಗಳು ತಂದಿದ್ದ ಅಕ್ಕಿಯನ್ನು ಅಳೆದು ದಾಸೋಹ ಮಾಡಲಾಗುತ್ತದೆ. ಜಾತ್ರೆಯಲ್ಲಿನ ಮತ್ತೊಂದು ಆಕರ್ಷಣೆ ಎಂದರೆ ಪಂಜಿನ ಸೇವೆ. ಪಂಜಿನ ಸೇವೆ ಎಂದರೆ ಬೆಂಕಿಯ ಪಂಜನ್ನು ದಾಸರಿ ಬೆಡಗಿನ ಪೂಜಾರಿ ಬರಿ ಕೈಯಲ್ಲಿ ಹಿಡಿಯುವುದು, ಮೈಗೆಲ್ಲ ಪಂಜಿನಿಂದ ಸವರಿಕೊಳ್ಳುವುದು ಮತ್ತು ಪಂಜನ್ನೇ ಬಾಯಲ್ಲಿ ಇಟ್ಟುಕೊಳ್ಳುವುದು ಮುಂತಾದ ಮೈನವಿರೇಳಿಸುವ ಸಾಹಸವನ್ನು ಮಾಡುವುದು. ಈ ಹಬ್ಬದಲ್ಲಿ ಪ್ರಮುಖವಾಗಿ ಕಂಡುಬರುವುದು ದೇವರಿಗೆ ಬಿಟ್ಟ ಎತ್ತುಗಳು ಅವು ಜಾತ್ರೆಗೆ ಬರಲೇ ಬೇಕು. ಇಲ್ಲದಿದ್ದರೆ ಜಾತ್ರೆ ನಡೆಯುವುದಿಲ್ಲ. ಕಂಪಳದೇವರ ಎತ್ತುಗಳು ದೂರ ದೂರದ ಕಾವಲುಗಳಿಗೆ ಮೇವು ನೀರಿಗಾಗಿ ಹೋಗಿರುವುದರಿಂದ ಅಲ್ಲೇ ಹತ್ತಿರದ ಮುತ್ತಿಗಾರಹಳ್ಳಿಯ ಕಮರದ ಕಾವಲಿನಿಂದ ಮುತ್ತಿಗಾರ ಎತ್ತುಗಳನ್ನು(ದೇವರ ಎತ್ತುಗಳು/ಶ್ರೀಶೈಲದ ಎತ್ತುಗಳು) ಹೊರಡಿಸಿಕೊಂಡು ಬಂದು ಪಾಪನಾಯಕನ ಗುಡಿಯಿಂದ ಕಂಪಳರಂಗನ ಗುಡಿಯವರೆಗೆ ಮೆರವಣಿಗೆ ಹೊರಡಿಸುವರು. ಜಾತ್ರೆ ನಡೆಯುವ ಬಯಲಿನಲ್ಲಿ ಇವೆರಡು ಗುಡಿಗಳು ಪರಸ್ಪರ ಒಂದು ಫರ್ಲಾಂಗ ಅಂತರದಲ್ಲಿವೆ.

ದೇವರ ಎತ್ತುಗಳನ್ನು ಒಂದು ಗುಡಿಯಿಂದ ಇನ್ನೊಂದು ಗುಡಿಯವರೆಗೆ ಮೆರವಣಿಗೆ ಹೊರಡಿಸುವುದೇ ಜಾತ್ರೆಯ ವಿಶೇಷತೆ. ಎತ್ತುಗಳ ಮೆರವಣಿಗೆ ಮುಗಿದರೆ ಜಾತ್ರೆಯೇ ಮುಗಿದಂತೆ. ಒಟ್ಟು ಕಂಪಳದೇವರ ಜಾತ್ರೆ(ಗುಗ್ಗರಿ ಹಬ್ಬ) ಒಂಬತ್ತು ದಿನಗಳ ಕಾಲ ನಡೆಯುತ್ತದೆ. ಎತ್ತುಗಳನ್ನು ಹೀಗೆ ಓಡಿಸುವಾಗ ಯಾವ ಬಣ್ಣದ ಎತ್ತು ಮುಂದೆ ಬರುತ್ತದೋ ಅದರ ಆಧಾರದ ಮೇಲೆ ತಮ್ಮ ಆ ವರ್ಷದ ಬೆಳೆಗಳನ್ನು ನಿರ್ಧರಿಸುತ್ತಾರೆ. ಉದಾಹರಣೆಗೆ: ಬಿಳಿಯ ಎತ್ತು ಮೊದಲು ಬಂದರೆ ಹತ್ತಿಬೆಳೆ ಚೆನ್ನಾಗಿ ಆಗುತ್ತದೆ. ಕಂದುಬಣ್ಣದ ಎತ್ತು ಮೊದಲು ಬಂದರೆ ಕಾಳುಗಳ ಬೆಳೆ ಚೆನ್ನಾಗಿ ಆಗುತ್ತದೆ. ಹೀಗೆ ಆ ವರ್ಷದ ಬೆಳೆ ನಿರ್ಧರಿಸುತ್ತಾರೆ. ಎತ್ತುಗಳ ಮೆರವಣಿಗೆಗೆ ಈ ಹಬ್ಬದಲ್ಲಿ ವಿಶೇಷ ಆದ್ಯತೆ ಇದ್ದು ಆ ವರ್ಷ ರೈತರು ತಾವು ಬೆಳೆದ ಗುಗ್ಗರಿ ಕಾಳುಗಳನ್ನು ಇಲ್ಲಿ ಒಂದೆಡೆ ಬೇಯಿಸಿ ದೇವರಿಗೆ ಮತ್ತು ದೇವರ ಎತ್ತುಗಳಿಗೆ ಎಡೆ ಮಾಡಿದ ನಂತರ ತಾವು ಸೇವಿಸಿ ಅಂದಿನಿಂದ ಆ ವರ್ಷದ ಗುಗ್ಗರಿ ಕಾಳುಗಳನ್ನು ತಮ್ಮ ಮನೆಗಳಲ್ಲಿ ಬೇಯಿಸುತ್ತಾರೆ.

**೪.೩ ಕೃಷಿ/ಪ್ರಕೃತಿ ಸಂಬಂಧಿ ಆಚರಣೆಗಳು**

ಮಾನವನ ಪ್ರಮುಖವಾದ ಕಸುಬು ಕೃಷಿಯಾಗಿದೆ. ಕೃಷಿಯ ಆವಿಷ್ಕಾರದಿಂದಲೇ ಕಾಡು ಮೇಡುಗಳಲ್ಲಿ ಆಹಾರಕ್ಕಾಗಿ ಅಲೆಯುತ್ತಿದ್ದ ಪ್ರಾಚೀನ ಮಾನವನು ಒಂದೆಡೆ ನೆಲೆನಿಲ್ಲಲು, ತನ್ನದೇ ಆದ ಸಂಸ್ಕೃತಿಯೊಂದನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು. ಕೃಷಿಯನ್ನೇ ಪ್ರಧಾನ ವೃತ್ತಿಯಾಗಿ ಹೊಂದಿರುವ ನಮ್ಮ ಜನಪದರ ಈ ವೃತ್ತಿಯು ಸಾಂಪ್ರದಾಯಿಕವಾಗಿ ಪರಂಪರಾಗತವಾಗಿ ಬಂದಿರುವಂಥದ್ದು "ಅದು ಕಂಠಸ್ಥ ಸಂಪ್ರದಾಯದ್ದು. ಕೆಲವು ಕ್ರಮಗಳು ಶೃತಿಯಿಂದ, ಕೆಲವು ಸ್ಮೃತಿಯಿಂದ, ಕೆಲವು

ಆಚರಣೆಗಳ ವಹಿವಾಟಿನಿಂದ ಅನುಚಾನವಾಗಿ ನಡೆದುಕೊಂಡು ಬಂದಿದೆ"[೧೦]. ತಲೆ ತಲೆಮಾರುಗಳಿಂದ ಕೃಷಿಕರು ಭೂಮಿಯ ಜೊತೆಗಿನ ಸಂಪರ್ಕದಿಂದ/ಕೃಷಿಯಿಂದ ಪಡೆದುಕೊಂಡ ಅನುಭವವನ್ನು ಆಚರಣೆಯ ಮುಖಾಂತರವೋ, ಕ್ರಿಯಾತ್ಮಕ ಕಲೆಯ ಮುಖಾಂತರವೋ, ಗಾದೆ ಒಗಟುಗಳ ಮುಖಾಂತರವೋ, ಐತಿಹ್ಯಗಳ ಮುಖಾಂತರವೋ ತನ್ನ ಮುಂದಿನ ತಲೆಮಾರಿಗೆ ವರ್ಗಾಯಿಸಿಕೊಂಡು ಬರುತ್ತಿದ್ದಾರೆ. ಕೃಷಿಕರಾದ ಹಟ್ಟಿಯ ಜನಪದರು ತಮ್ಮ ಹೊಲಗದ್ದೆಗಳಿಗೆ ಬೀಜ ಬಿತ್ತುವುದರಿಂದ ಪ್ರಾರಂಭಿಸಿ ಫಸಲು ಬೆಳೆದು ಕೊಯಿಲು ಮಾಡಿ ಬೆಳೆ ಕಣ ಸೇರಿ ರಾಶಿ ಮಾಡುವವರೆಗೆ ಕೃಷಿಗೆ ಸಂಬಂಧಿಸಿದಂತೆ ಅನೇಕ ಆಚರಣೆಗಳನ್ನು ನೆರವೇರಿಸುತ್ತಾರೆ. ಇದರ ಉದ್ದೇಶ ಬಿತ್ತಿದ ಬೀಜ ಚೆನ್ನಾಗಿ ಮೊಳಕೆ ಬರಲು, ಬೆಳೆಗಳಿಗೆ ರೋಗಾದಿ ಕೀಟಗಳು ಬಾಧಿಸದಿರಲು, ಫಸಲಿಗೆ ನೋಡುಗರ ದೃಷ್ಟಿ ತಾಗದಿರಲು ಇನ್ನು ಹಲವು ಕಾರಣಗಳಿಂದ ಹಲವು ಆಚರಣೆಗಳನ್ನು ಆಚರಿಸುತ್ತಾರೆ. ಮುಖ್ಯವಾಗಿ ತಮ್ಮ ಮುಂದಿನ ತಲೆಮಾರಿಗೆ ಕೃಷಿಯ ಚಟುವಟಿಕೆಗಳನ್ನು ತಿಳಿಸುವ, ಉಳಿಸುವ, ಮುಂದುವರಿಸಿಕೊಂಡು ಹೋಗುವ ಉದ್ದೇಶದಿಂದ ಹತ್ತು ಹಲವು ಕೃಷಿ ಸಂಬಂಧಿ ಆಚರಣೆಗಳನ್ನು ಹಟ್ಟಿಯಲ್ಲಿ ಆಚರಿಸುತ್ತಾರೆ. ಕೃಷಿಕರ ವೇಳಾಪಟ್ಟಿ(ಕ್ಯಾಲೆಂಡರ) ಪ್ರಕಾರ ಯುಗಾದಿಯೇ ಅವರ ಹೊಸ ವರ್ಷ(ಯುಗದ-ಆದಿ=ಯುಗಾದಿ ಎಂದು ಕರೆಯುವುದನ್ನು ಸಹ ನೋಡಬಹುದು). ಜನಪದರ ಕೃಷಿ ಚಟುವಟಿಕೆ ಪ್ರಾರಂಭವಾಗುವುದೇ ಯುಗಾದಿಯಿಂದ ಆದ್ದರಿಂದ ಹಟ್ಟಿಯ ಜನಪದರ ಕೃಷಿ ಸಂಬಂಧಿ ಆಚರಣೆಗಳು ಅಲ್ಲಿಂದಲೇ ಆರಂಭ ಎಂದು ಹೇಳಬಹುದು ಹಾಗಾಗಿ ಪ್ರಸ್ತುತ ಹಟ್ಟಿಯ ಜನರ ಕೃಷಿ ಸಂಬಂಧಿ ಆಚರಣೆಗಳನ್ನು ಯುಗಾದಿಯಿಂದ ಪ್ರಾರಂಭಿಸಿ ತಿಳಿಯುವುದು ಸೂಕ್ತ. ಇಲ್ಲಿ ಕೃಷಿ ಸಂಬಂಧಿ ಆಚರಣೆಗಳು ಕೇವಲ ಕೃಷಿಗೇ ಸೀಮಿತವಾಗಿರದೆ ಪಶುಸಂಬಂಧಿ, ಪ್ರಕೃತಿ ಸಂಬಂಧಿ ಆಚರಣೆಗಳೂ ಸಹ ಆಗಿರುತ್ತವೆ ಎಂಬುದನ್ನು ತಿಳಿಸ ಬಯಸುತ್ತೇನೆ.

### ೪.೩.೧ ಯುಗಾದಿ(ಉಗಾದಿ ಆಚರಣೆ)

ಯುಗಾದಿಯು ರೈತರ ಸಂಪೂರ್ಣ ಬಿಡುವಿನ ಕಾಲದಲ್ಲಿ ಮಾಡುವ ಹಬ್ಬ. ಬೇಸಿಗೆಯ ಕೊನೆಯ, ಮಳೆಗಾಲದ ಆರಂಭದ ಕಾಲದಲ್ಲಿ ಮಾಡುವ ಹಬ್ಬ ಆದ್ದರಿಂದ ನಮ್ಮ ಜನಪದರು ಈ ಹಬ್ಬವನ್ನು ವರ್ಷದ ಆರಂಭದ ಹಬ್ಬ ಎಂದು ಪರಿಗಣಿಸುತ್ತಾರೆ. ಈ ಹಬ್ಬದ ದಿನದಿಂದಲೇ ಕೃಷಿಯ ಚಟುವಟಿಕೆ ಆರಂಭ ಮಾಡುತ್ತಾರೆ. ಆದ್ದರಿಂದ ಯುಗಾದಿಯನ್ನು ಯುಗದ ಆರಂಭ ಎಂದು ಕರೆಯುತ್ತೇವೆ. ಜನಪದರ ಪ್ರಕಾರ ಇಲ್ಲಿಂದಲೇ ಹೊಸವರ್ಷ ಆರಂಭವಾಗುತ್ತದೆ. ಹಟ್ಟಿಯ ಜನರು ಯಗಾದಿ ಹಬ್ಬದ ಅಮವಾಸ್ಯೆಯ ದಿನ ಕಾಡಿಗೆ ಹಂದಿ ಬೇಟೆಗೆ ಹೋಗುತ್ತಾರೆ. ಮೂಲತಃ ಬೇಡರು ಬೇಟೆಗಾರರು ಮತ್ತು ಮಾಂಸಾಹಾರಿಗಳು ಆದ್ದರಿಂದ ತಮ್ಮ ಪಾರಂಪರಿಕತೆಯನ್ನು ಮರುಕಳಿಸುವಂತೆ ಬೇಟೆಗೆ ಹೋಗುತ್ತಾರೆ. ಬೇಟೆಗೆ ಹೋಗುವ ಮತ್ತೊಂದು ಕಾರಣವೆಂದರೆ ಈ ಹಬ್ಬದಿಂದ ಬಿತ್ತನೆ ಕೆಲಸಗಳು ಆರಂಭವಾಗುವುದರಿಂದ ತಾವು ಬಿತ್ತಿದ ಬೀಜಗಳನ್ನು ಮತ್ತು ಬೆಳೆದ ಪೈರನ್ನು ಕಾಡು ಹಂದಿ, ಮೊಲ, ಇಲಿ ಮೊದಲಾದ ಪ್ರಾಣಿಗಳು ತಿಂದು ಹಾಕುವ ಸಾಧ್ಯತೆ ಇರುವುದರಿಂದ ಅವುಗಳನ್ನು ಹತೋಟಿಗೆ ತರಲು ಹಬ್ಬದ ದಿನ ಕಾಡಿಗೆ ಬೇಟೆಗೆ ಹೋಗುತ್ತಾರೆ.

ಒಂದು ಬಾರಿ ಹೀಗೆ ಬೇಟೆಗೆ ಹೋಗಿ ಸಿಕ್ಕ ಪ್ರಾಣಿಗಳನ್ನು ಬೇಟೆಯಾಡುವುದರಿಂದ ತಪ್ಪಿಸಿಕೊಂಡ ಪ್ರಾಣಿಗಳು ಭಯಗೊಂಡು ಇವರ ಕೃಷಿ ಜಮೀನುಗಳ ಕಡೆ ಬರದೆ ಕಾಡಲ್ಲೇ ಅವೆತುಕೊಳ್ಳುತ್ತವೆ ಈ ಉದ್ದೇಶದಿಂದಲೇ ಬೇಡರು ಯುಗಾದಿಯಂದು ಬೇಟೆಗೆ ಹೋಗುವುದು. ವಿಶೇಷವೆಂದರೆ ಕಂಪಳದೇವರ ಹಟ್ಟಿಯಲ್ಲಿ ಮೊದಲ ದಿನ ದೇವರ ಬೇಟೆ ಎಂದು ಮೊಲದ ಬೇಟೆಯಾಡುತ್ತಾರೆ. ಅಂದು ದೇವರ ಪೂಜೆ ಮಾಡಿ ದೇವರ ಹೆಸರಲ್ಲಿ ಮೊಲವನ್ನು ಬೇಟೆಯಾಡಿ ಪೂಜಾರಿಗೆ ಒಪ್ಪಿಸುತ್ತಾರೆ. ಎರಡನೆಯ ದಿನ ಸಮುದಾಯದ ಬೇಟೆ ಎಂದು ಹಂದಿಯ ಬೇಟೆಗೆ ಹೋಗುತ್ತಾರೆ. ಬೇಟೆಯಾಡಿ ತಂದ ಹಂದಿಯ ಕಿವಿ ಬಾಲವನ್ನು ಬುಡ್ಡೆಕಲ್ಲಿನ ಕೆಳಗೆ ಹೂಳುವುದು ಎಲ್ಲ ಊರುಗಳಲ್ಲಿ ಸಾಮಾನ್ಯ ಆದರೆ ಕಂಪಳದೇವರ ಹಟ್ಟಿಯಲ್ಲಿ ಬುಡ್ಡೆಕಲ್ಲು ಇಲ್ಲವಾದ್ದರಿಂದ ಹಟ್ಟಿಯ ಗಡಿ ಅಥವಾ ಹಟ್ಟಿಯ ಪ್ರವೇಶದ ಹಂತದಲ್ಲಿ ಹಂದಿಯನ್ನು ಪೂಜಿಸಿ ಅದರ ಕಿವಿ ಬಾಲವನ್ನು ಕತ್ತರಿಸಿ ಚರಗ ಮಾಡಿ ಹಟ್ಟಿಯ ಸುತ್ತ ಚರಗ ಚೆಲ್ಲುತ್ತಾರೆ. ಚರಗವನ್ನು ಉಲುಸು ಎಂದು ಭಾವಿಸುತ್ತಾರೆ. ಹಂದಿಯನ್ನು ಲಕ್ಷ್ಮಿ ಎಂದೂ ಭಾವಿಸಿರುವ ಜನಪದರು ಅದರ ಬಾಲ ಮತ್ತು ಕಿವಿಯನ್ನು ಉಲುಸು(ಫಲವಂತಿಕೆ) ಎನ್ನುತ್ತಾರೆ. ಹೀಗೆ ಹಂದಿಯ ಬಾಲ ಮತ್ತು ಕಿವಿಯನ್ನು ಕತ್ತರಿಸಿ ಅದರ ರಕ್ತದಿಂದ ಚರಗ ಚೆಲ್ಲಿದಮೇಲೆ ಈ ಹಂದಿಯನ್ನು ಮಾದಿಗ ಸಮುದಾಯದವರು ಕೊಂಡೊಯ್ದು ಹಂಚಿಕೊಂಡು ತಿನ್ನುತ್ತಾರೆ. ಈ ಆಚರಣೆ ಪ್ರಾಚೀನ ಬುಡಕಟ್ಟುಗಳ ಆಹಾರ ಪದ್ಧತಿಯನ್ನು ಸೂಚಿಸುತ್ತದೆ.

ಯುಗಾದಿ ಹಬ್ಬವನ್ನು ನಿಸರ್ಗದ ಹಬ್ಬ ಎನ್ನಬಹುದು. ಈಗಾಗಲೇ ಹೇಳಿದಂತೆ ಕೃಷಿ ಚಟುವಟಿಕೆ ಪ್ರಾರಂಭಿಸುವ ಆ ವರ್ಷದ ಮೊದಲ ದಿನ ಇದು ಆದ್ದರಿಂದ ಆ ವರ್ಷದ ಒಳ್ಳೆಯದು ಕೆಟ್ಟದ್ದನ್ನು ಸಮವಾಗಿ ಸ್ವೀಕರಿಸುವ ಆಶಯದಿಂದ ಬೇವು ಬೆಲ್ಲ ಬಾಯಿಗೆ ಹಾಕಿಕೊಂಡು ಪರಸ್ಪರ ಹಂಚಿಕೊಂಡು ಬೇವು ಬೆಲ್ಲ ಕೊಟ್ಟು ಬಂಗಾರದಂಗೆ ಬಾಳಿರಿ ಎಂದು ಪರಸ್ಪರ ಹರಸಿಕೊಳ್ಳುತ್ತಾರೆ. "ಯುಗಾದಿಯ ನೈಜತೆ ಉಳಿದಿರುವುದೇ ರೈತಾಪಿಗಳಲ್ಲಿ". ಕಾರಣ ರೈತರು ಈ ಹಬ್ಬದಲ್ಲಿ ತಮ್ಮ ಕೃಷಿಗೆ ಬೇಕಾಗುವ ಸಲಕರಣೆಗಳಿಗೆ ಪೂಜೆ ಮಾಡಿ ಕೃಷಿ ಕೆಲಸಕ್ಕೆ ಅಂದಿನಿಂದ ಸಂಭ್ರಮದಿಂದ ತೊಡಗುತ್ತಾರೆ"[೧೧]. ಹಟ್ಟಿಯ ಎಲ್ಲ ಮನೆಯ ಹೆಣ್ಣು ಮಕ್ಕಳು ಹಬ್ಬಕ್ಕೆ ಒಂದು ವಾರ ಮುಂಚೆಯೇ ಮನೆ ಸ್ವಚ್ಛಗೊಳಿಸಲು ಪ್ರಾರಂಭಿಸುತ್ತಾರೆ. ಮನೆಯ ಪ್ರತಿಯೊಂದು ವಸ್ತುವನ್ನು ತೊಳೆದು, ಬೆಳಗಿ ನೆಲಸಾರಿಸುತ್ತಾರೆ. ಗಂಡು ಮಕ್ಕಳು ಬೇಸಾಯಕ್ಕೆ ಬೇಕಾದ ಸಲಕರಣೆಗಳಾದ ನೇಗಿಲು, ನೊಗ, ಮೇಣಿ, ಮಿಣಿ ಹಗ್ಗ ಚಿಲಕಣ್ಣಿ ಕುಂಟೆ, ಕುಳ, ಕೂರಿಗೆ ಮುಂತಾದವುಗಳನ್ನು ಸಿದ್ದಪಡಿಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಸ್ವಲ್ಪ ಮಳೆಯಾಗುವುದರಿಂದ ತಮ್ಮ ತಮ್ಮ ಹೊಲದಲ್ಲಿ ಅಂದಿನಿಂದಲೇ ಕೃಷಿಯ ಪ್ರಾರಂಭ ಎಂಬಂತೆ ಸ್ವಲ್ಪ ಬೇಸಾಯ ಮಾಡಿ ಪೂಜೆ ಮಾಡಿ ಬರುತ್ತಾರೆ.

ಹಟ್ಟಿಯಲ್ಲಿ ಈ ಹಬ್ಬವನ್ನು ಮೂರು ದಿನ ಆಚರಿಸುತ್ತಾರೆ. ಮೊದಲನೆಯ ದಿನ ಅಮವಾಸ್ಯೆ ಮಾಡುತ್ತಾರೆ. ಅಂದು ಎಲ್ಲಾರ ಮನೆಯಲ್ಲಿ ದೋಸೆ ಮಾಡುತ್ತಾರೆ. ಮತ್ತು ಅಂದು ಹಟ್ಟಿಯವರೆಲ್ಲಾ ಸೇರಿ ಕಾಡಿಗೆ ಬೇಟೆಗೆ ಹೋಗುತ್ತಾರೆ. ಎರಡನೇಯ ದಿನ ಹೀರೇರಹಬ್ಬ ಅಂದು ಮನೆ ಮಕ್ಕಳೆಲ್ಲಾ

ಎಣ್ಣೆ ಸ್ನಾನ ಮಾಡಿ ಹೊಸ ಬಟ್ಟೆ ತೊಡುತ್ತಾರೆ. ಮನೆಯ ಎಲ್ಲಾ ಬಾಗಿಲುಗಳಿಗೆ, ದನಕರುಗಳ ಕೊಟ್ಟಿಗೆಗಳಿಗೆ, ಕಣದ ಬಾಗಿಲಿಗೆ ಮಾವಿನ ತೊರಣ ಕಟ್ಟಿ ಬೇವಿನ ಚಿಕ್ಕ ಚಿಕ್ಕ ಕೊಂಬೆಗಳನ್ನು ಸಿಕ್ಕಿಸುತ್ತಾರೆ. ಅಂದು ಬೇವು ಬೆಲ್ಲ ತಿನ್ನುತ್ತಾರೆ. ಹಿರಿಯರ ಮಗಿಗಳನ್ನು ಜೋಳದ ಚಿಕ್ಕ ಚಿಕ್ಕ ಗುಂಪುಗಳ ಮೇಲೆ ಇಟ್ಟು ಪೂಜೆ ಮಾಡಿ ಹೊಸ ಬಟ್ಟೆ ಹಾಕಿ ಎಡೆ ಹಾಕುತ್ತಾರೆ. ಈ ಹಬ್ಬವನ್ನು ಹಟ್ಟಿಯ ಜನಪದರು ಹಿರೇರ ಹಬ್ಬ/ಹಿರಿಯರ ಹಬ್ಬ ಎಂದೇ ಕರೆಯುತ್ತಾರೆ. ಹೊಸ ಬಟ್ಟೆಯನ್ನು ಮೊದಲು ಹಿರಿಯರ ಮಗಿಗಳ ಮೇಲೆ ಹಾಕಿ ನಂತರ ತಾವು ಧರಿಸುತ್ತಾರೆ(ಮಗಿ ಎಂದರೆ ಮಣ್ಣಿನಿಂದ ಮಾಡಿದ ಸಣ್ಣ ಸಣ್ಣ ಸೋರೆಗಳು. ಇವುಗಳನ್ನು ನೇಮದಿಂದ ಕುಂಬಾರನು ಉಪವಾಸವಿದ್ದು ಮಣ್ಣಿಗೆ ನೀರಿನ ಜೊತೆ ಸ್ವಲ್ಪ ಹಾಲು, ತುಪ್ಪ ಹಾಕಿ ಮಾಡಿರುತ್ತಾನೆ). ಮೂರನೆಯ ದಿನ ಚಂದ್ರನನ್ನು ನೋಡುವುದು(ಚಂದ್ರಮಾನ ಯುಗಾದಿ) ಅಂದು ಚಂದ್ರನು ಮೂಡುವ/ಕಾಣಿಸುವ ರೀತಿ ನೋಡಿ ಆ ವರ್ಷದ ಮಳೆ-ಬೆಳೆ ನಿರ್ಧರಿಸುತ್ತಾರೆ. ಹಟ್ಟಿಯ ಹಿರಿಯರು ಚಂದ್ರನ ಯಾವ ಭಾಗ ಎದ್ದಿರುತ್ತದೆಯೋ ಆ ಭಾಗಕ್ಕೆ ಸಾಧಾರಣ ಫಸಲು ಎಂದು ಗ್ರಹಿಸುತ್ತಾರೆ. "ಚಂದ್ರನ ತುದಿಗಳನ್ನು ಕೋಡು ಎಂದು ಕರೆಯುತ್ತಾರೆ. ಆ ಕೋಡುಗಳನ್ನು ಅನ್ನದ ಕೊಡು, ಹೊನ್ನಿನ ಕೊಡು ಎಂದು ಹೇಳುತ್ತಾರೆ. ಆ ವರ್ಷ ಅನ್ನದ ಬೆಲೆ ಜಾಸ್ತಿಯೋ, ಚಿನ್ನದ ಬೆಲೆ ಜಾಸ್ತಿಯೋ ಎಂದು ಚರ್ಚೆಯಾಗುತ್ತದೆ"[೨]. ಹಟ್ಟಿಯ ಹಿರಿಯರು ನಕ್ಷತ್ರಗಳನ್ನು ನೋಡಿ ಮಳೆ ಬೆಳೆ ತಿಳಿಯುವ ಪರಿಸರ ತಜ್ಞರಾಗಿದ್ದಾರೆ. ನಕ್ಷತ್ರಗಳ ಚಲನ ವಲನ, ಚಂದ್ರನು ಯುಗಾದಿಯಲ್ಲಿ ಕಾಣುವ ರೀತಿಗಳನ್ನು ನೋಡಿ ಮಳೆ ಬೆಳೆ ತಿಳಿಯುವಂತಹ ಪಾರಂಪರಿಕ ಜ್ಞಾನ ನಮ್ಮ ಜನಪದರದ್ದಾಗಿದೆ. ಚಂದ್ರನ ದರ್ಶನ ಆದ ನಂತರ ಹಟ್ಟಿಯ ಎಲ್ಲಾ ಕಿರಿಯರು ಹಿರಿಯರಿಗೆ ಕಾಸುಕೊಟ್ಟು ಪಾದಕ್ಕೆ ನಮಸ್ಕರಿಸಿ ಅರ್ಶೀವಾದ ಪಡೆಯುತ್ತಾರೆ.

**೪.೩.೨ ಕಾರ ಹಬ್ಬ(ಕಾರ ಹುಣ್ಣಿಮೆ)**

ಗ್ರಾಮೀಣ ಜನರು ಯುಗಾದಿ ಹಬ್ಬದಲ್ಲಿ ಕೃಷಿಯ ಆರಂಭ ಎಂಬಂತೆ ಹೊಲ ಉಳುವುದನ್ನು ಪ್ರಾರಂಭಿಸುತ್ತಾರೆ. ನಂತರ ಬಿತ್ತನೆಗೆ ಅಗತ್ಯವಿರುವ ಎತ್ತುಗಳ ಸಾಮರ್ಥ್ಯ ಮತ್ತು ಬಿತ್ತನೆ ಬೀಜಗಳ ಭವಿಷ್ಯವನ್ನು ತಿಳಿಯಲು ಕಾರಹಬ್ಬ ಆಚರಿಸುತ್ತಾರೆ. ಇದು ರಾಸುಗಳಿಗೆ ಮತ್ತು ಕೃಷಿಗೆ ಸಂಬಂಧಿಸಿದ ಹಬ್ಬವಾಗಿದೆ. ಜೂನ್-ಜುಲೈ ತಿಂಗಳಲ್ಲಿ ಮಾಡುವ ಈ ಹಬ್ಬವನ್ನು ಜನರು ಕಾರಹಬ್ಬ, ಕಾರಹುಣ್ಣಿಮೆ ಎಂದು ಕರೆಯುತ್ತಾರೆ. ಮಳೆಗಾಲ ಆರಂಭವಾದ ಮೊದಲ ಹುಣ್ಣಿಮೆಯಾಗಿರುವುದರಿಂದ ಇದನ್ನು ಮಳೆ ಹುಣ್ಣಿಮೆ ಎಂದೂ ಕರೆಯುತ್ತಾರೆ. ಅಲ್ಲದೇ ಈ ಹಬ್ಬದಲ್ಲಿ ಎತ್ತುಗಳನ್ನು ವಿಶೇಷವಾಗಿ ಸಿಂಗರಿಸಿ ಅವುಗಳಿಗೆ ಪೂಜೆ ಮಾಡಿ ಮೆರವಣಿಗೆ ಮಾಡಿ ಓಡಿಸಿ ಕಿಚ್ಚು ಹಾಯಿಸುವುದರಿಂದ ಇದನ್ನು ಎತ್ತಿನ ಹುಣ್ಣಿಮೆ ಎಂದೂ ಸಹ ಕರೆಯುತ್ತಾರೆ. ಮಳೆಗಾಲ ಆರಂಭವಾಗಿ ತಮ್ಮ ಕೃಷಿ ಕೆಲಸ ಪ್ರಾರಂಭಿಸುವ ಜನರು ತಮ್ಮ ಕೃಷಿಗೆ ನೆರವಾಗುವ ಎತ್ತುಗಳನ್ನು ಗೌರವ ಪೂರ್ವಕವಾಗಿ ಪೂಜಿಸಿ ಓಡಿಸಿ ಅವುಗಳ ಸಾಮರ್ಥ್ಯ ಅರಿಯುತ್ತಾರೆ. ಹಟ್ಟಿಯ ಜನರು ತಮ್ಮ ಎತ್ತುಗಳನ್ನು ಮನೆಯ ಸದಸ್ಯರಂತೆ ಕಾಣುವುದು ವಿಶೇಷ. ಕಾರಹಬ್ಬದ ಮೊದಲ ದಿನ ತಮ್ಮ ದನಕರುಗಳನ್ನು ಕೆರೆ-ಹಳ್ಳಗಳಲ್ಲಿ ಮೈ ತೊಳೆದು

ಅವುಗಳ ಕೋಡುಗಳಿಗೆ ಬಣ್ಣ ಹಚ್ಚಿ ಹೂವಿನ ಸರಗಳನ್ನು ಹಾಕಿ ಮೈಮೇಲೆ ಬಣ್ಣ ಬಣ್ಣದ ಬಟ್ಟೆಯ ಜೂಲ್ ಹೊದಿಸಿ ಸಿಂಗರಿಸುತ್ತಾರೆ. ದನಗಳ ಗ್ವಾದ್ಲಿಗಳಿಗೆ ಸುಣ್ಣ, ಸಗಣಿ, ಜಾಜು ಹಚ್ಚಿ ಕೊಟ್ಟಿಗೆಯ ಗೋಡೆಗೆ ಅಥವಾ ಗ್ವಾದ್ಲಿಗೆ ಬಂಡೆಯ ಮೇಲೆ ಸುಣ್ಣ ಮತ್ತು ಜಾಜಿನಿಂದ ಸೂರ್ಯ, ಚಂದ್ರ, ನೇಗಿಲು ಮೊದಲಾದ ಚಿತ್ರಗಳನ್ನು ಬರೆಯುತ್ತಾರೆ.

ಎತ್ತುಗಳನ್ನು ಸಿಂಗರಿಸಿ ಮನೆಯೊಳಗೆ ಕರೆತಂದು ಮನೆಯ ಪಡಸಾಲೆ ಮೇಲೆ ಸ್ವಲ್ಪ ಭಾಗವನ್ನು ಸಗಣಿಯಿಂದ ಸಾರಿಸಿ ಅದರ ಮೇಲೆ ಜೋಳದ ಚಿಕ್ಕ ರಾಶಿಗಳನ್ನು ಹಾಕುತ್ತಾರೆ(೩ ರಾಶಿ) ಆ ರಾಶಿಗಳ ಮೇಲೆ ಎತ್ತುಗಳು ಬಲಗಾಲನ್ನು ಇಟ್ಟು ನಿಲ್ಲುವಂತೆ ಮಾಡುತ್ತಾರೆ. ಹಾಗೆ ನಿಂತ ಎತ್ತುಗಳ ಕಾಲಿಗೆ ಪೂಜೆ ಮಾಡುತ್ತಾರೆ. ಜೋಳದ ಗುಂಪೆ ಮೇಲೆ ಕಾಲಿಟ್ಟಾಗ ಜೋಳ ಚೆಲ್ಲಾಪಿಲ್ಲಿಯಾಗುತ್ತವೆ ಹೀಗೆ ಚೆಲ್ಲಾಪಿಲ್ಲಿಯಾದ ಜೋಳವನ್ನು ಹೊನ್ನು(ಬಂಗಾರ) ಎಂದು ಕರೆಯುತ್ತಾರೆ. ಹಟ್ಟಿಯ ಜನರು ತಾವು ದಿನನಿತ್ಯ ಆಹಾರಕ್ಕೆ ಬಳಸುವ ಧಾನ್ಯವನ್ನು ಎತ್ತುಗಳು ಕಾಲಿನಿಂದ ಸೋಂಕಿಸಿದಾಗ ಆ ಧಾನ್ಯವನ್ನು ಹೊನ್ನು ಎಂದು ಸಂಬೋಧಿಸುವುದು ನಿಜಕ್ಕೂ ಅರ್ಥಪೂರ್ಣವಾಗಿದೆ. ಆಹಾರ ದಾನ್ಯಗಳಿಗೆ ಮತ್ತು ಎತ್ತುಗಳಿಗೆ ಇವರು ಕೊಡುವ ಗೌರವ ಶ್ಲಾಘನೀಯವಾದುದು. ಈ ಹಬ್ಬದ ವಿಶಿಷ್ಠತೆಯೆಂದರೆ ಎತ್ತುಗಳನ್ನು ಶೃಂಗರಿಸಿ ಅವುಗಳಿಗೆ ಪೌಷ್ಠಿಕ ಆಹಾರ ನೀಡಿ ಅವುಗಳನ್ನು ವ್ಯವಸಾಯಕ್ಕೆ ಅಣಿಗೊಳಿಸುವುದು ಮತ್ತು ಬಿತ್ತನೆಗೆ ಬೀಜಗಳನ್ನು ಆಯ್ಕೆ ಮಾಡಿಕೊಳ್ಳುವುದಾಗಿದೆ. ಈ ಹಬ್ಬ ಮುಖ್ಯವಾಗಿ ಕೃಷಿಕರ ಹಬ್ಬ ಇದು ರೈತನಿಗೆ ತನ್ನ ಮುಂದಿನ ವರ್ಷ ಸಿಗಬಹುದಾದ ಉಲುಸು ಮತ್ತು ಪೈರಿನ ಪ್ರಮಾಣ ಮುಂತಾದವನ್ನು ತಿಳಿಸುತ್ತದೆ.

**೪.೩.೩ ನಾಗಪ್ಪನ ಹಬ್ಬ(ನಾಗರ ಪಂಚಮಿ)**

ಶ್ರಾವಣ ಮಾಸದ ಮೂರನೆಯ ಶನಿವಾರ ಹಟ್ಟಿಯವರು ನಾಗಪ್ಪನ ಹಬ್ಬವನ್ನು ಆಚರಿಸುತ್ತಾರೆ. ಸರ್ವ ಚೇತನವಾದಿಗಳಾದ ಇವರು ಮಳೆಗಾಲದಲ್ಲಿ ಎಲ್ಲೆಂದರಲ್ಲಿ ಹರಿದಾಡುವ ಹಾವುಗಳ ಪೂಜೆ ಮತ್ತು ಬೆಳೆಯುತ್ತಿರುವ ಬೆಳೆಗಳ ಸಂಭ್ರಮವನ್ನು ನಾಗರ ಪಂಚಮಿಯಲ್ಲಿ ಅನುಭವಿಸುತ್ತಾರೆ. ಈ ಹಬ್ಬದಲ್ಲಿ ಪ್ರತಿ ಮನೆಯವರು ಮೀಸಲು ಸಿಹಿ ಅಡುಗೆ ಮಾಡಿ ವಿಶೇಷವಾಗಿ ತಂಬಿಟ್ಟು, ಎಳ್ಳುಚಿಗಳಿ, ನೆನೆಯಕ್ಕಿ, ಸಜ್ಜೆಯ ಮೊಳಕೆ, ತೆಂಗಿನಕಾಯಿ, ಬಾಳೆಹಣ್ಣು, ಅಂಗನೂಲು, ಕಂಕಣ ಮೊದಲಾದ ಸಾಮಾನುಗಳನ್ನು ತೆಗೆದುಕೊಂಡು ಕುಟುಂಬದವರೊಂದಿಗೆ ಹಟ್ಟಿಯ ಹೊರಗೆ ಇರುವ ನಾಗರ ಕಲ್ಲುಗಳು ಅಥವಾ ಹುತ್ತದ ಹತ್ತಿರ ಹೋಗಿ ಇಲ್ಲವೇ ತಮ್ಮ ಹೊಲಗಳಲ್ಲಿನ ಹುತ್ತ ಅಥವಾ ನಾಗರ ಕಲ್ಲುಗಳಿಗೆ ಎಡೆ ಹಾಕಿ ಕಾಯಿ ಒಡೆದು ಹುತ್ತದ ಕೋಮಿನಲ್ಲಿ ಮುತ್ತೈದೆಯರು ಮೂರು ಸಲ ಹಾಲು ಬಿಟ್ಟು ತಂಬಿಟ್ಟಿನ ಎಡೆಯನ್ನು ಕೋಮಿನಲ್ಲಿ ಬಿಡುತ್ತಾರೆ. ಬೇಡ ಸಮುದಾಯದವರು ನಾಗರ ಹಾವನ್ನು ದೈವ ಸ್ವರೂಪಿಯಾಗಿ ಆರಾಧಿಸುವುದರಿಂದ ಅದನ್ನು ಒಡೆಯುವುದಾಗಲಿ, ಕೊಲ್ಲುವುದಾಗಲಿ ಮಾಡುವುದಿಲ್ಲ. ಆಕಸ್ಮಿಕವಾಗಿ ನಾಗರಹಾವುಗಳನ್ನು ಕೊಂದರೆ ಕೊಂದಂತ ವ್ಯಕ್ತಿ ಹಾವಿನ ಬಾಯಿಯಲ್ಲಿ ಕಾಸು ಇಟ್ಟು ಸುಡುವ ಪದ್ದತಿ ಇದೆ. ನಾಗರ ಹಾವು ದಾರಿಯಲ್ಲಿ ಅಡ್ಡ ಬಂದರೆ ಹೋಗುವ ಕೆಲಸ

ಆಗುವುದಿಲ್ಲವೆಂದು ನಂಬುತ್ತಾರೆ. ಆದರೆ ಕನಸಿನಲ್ಲಿ ನಾಗರ ಹಾವು, ಹುತ್ತ, ನಾಗರಕಲ್ಲುಗಳು, ಹೆಡೆ ಬಿಚ್ಚಿ ಹಾಡುವ ನಾಗರ ಹಾವು ಕಂಡರೆ ಶುಭ ಎಂದು ಭಾವಿಸುತ್ತಾರೆ. ಮಳೆಗಾಲದಲ್ಲಿ ಹೆಚ್ಚು ಹರಿದಾಡುವ ಹಾವುಗಳಿಂದ ತೊಂದರೆಯಾಗಬಾರದೆಂದು, ವಿಷಬಾದೆ ತಟ್ಟಬಾರದು ಎಂಬ ಉದ್ದೇಶಕ್ಕಾಗಿ ನಾಗರ ಪಂಚಮಿ ಆಚರಿಸುತ್ತಾರೆ.

**೪.೩.೪ ಗೌರಿ ಗಣೇಶನ ಹಬ್ಬಾಚಾರಣೆ**

ಇಂದು ಎಲ್ಲಾ ಕಡೆ ವಿಜೃಂಭಣೆಯಿಂದ ಆಚರಿಸುತ್ತಿರುವ ಗೌರಿ ಗಣೇಶ ಹಬ್ಬವನ್ನು ಕೃಷಿಕರ ಆಚರಣೆಯ ದೃಷ್ಟಿಯಿಂದ ನೋಡುವುದಾದರೆ ಅದರ ಹಿನ್ನೆಲೆ ಅರ್ಥವಾಗುತ್ತದೆ. ಕೃಷಿಕರು ತಮ್ಮ ಫಸಲಿನ ರಕ್ಷಣೆ ಮತ್ತು ಫಸಲಿನ ಹೆಚ್ಚಳಕ್ಕೆ ಸಂಬಂಧಪಟ್ಟಂತೆ ಅನೇಕ ಹಬ್ಬ ಆಚರಣೆಗಳನ್ನು ಮಾಡುತ್ತಾರೆ. "ಕೃಷಿಕರು ಫಲಶಕ್ತಿಗಾಗಿ ಆಚರಿಸುವ ಹಬ್ಬಗಳಲ್ಲಿ ಗೌರಿಹಬ್ಬವೂ ಒಂದು. ಈ ಹಬ್ಬವನ್ನು ಭಾದ್ರಪದ(ಆಗಸ್ಟ್-ಸೆಪ್ಟೆಂಬರ್) ಮಾಸದಲ್ಲಿ ವೈದಿಕ ಹಾಗೂ ಜಾನಪದ ಪದ್ಧತಿಯಲ್ಲಿ ಆಚರಿಸಲಾಗುತ್ತದೆ"[೧೩]. ಕಂಪಳದೇವರ ಹಟ್ಟಿಯಲ್ಲಿ ಪ್ರತಿವರ್ಷ ಗೌರಿಗಣೇಶನ ಹಬ್ಬವನ್ನು ಎಲ್ಲಾ ಜನಪದರು ಸೇರಿ ಆಚರಿಸುತ್ತಾರೆ. ಗೌರಿಹುಣ್ಣಿಮೆಯನ್ನು ಸಣ್ಣಗೌರಿಹಬ್ಬ ಮತ್ತು ದೊಡ್ಡಗೌರಿಹಬ್ಬ ಎಂದು ಎರಡು ಪ್ರಕಾರದಲ್ಲಿ ಆಚರಿಸುತ್ತಾರೆ. ಈ "ಗೌರಿ ಮತ್ತು ಗಣೇಶನ ಹಬ್ಬ ಮುಖ್ಯವಾಗಿ ಭೂಮಿ ಮತ್ತು ಜಲ ಸಂಬಂಧದ ಆಚರಣೆಗಳನ್ನು ಹೊಂದಿವೆ"[೧೪]. ಈ ಹಬ್ಬ ಆಚರಿಸುವ ಸಮಯದಲ್ಲಿ ಹೊಲಗಳಲ್ಲಿ ಫಸಲು ಬೆಳವಣಿಗೆಯ ಹಂತದಲ್ಲಿರುತ್ತವೆ. ಇದು ಹುಬ್ಬೆ, ಉತ್ತರೆ ಮಳೆಗಳ ತುಂಬು ಮಳೆಗಾಲವಾಗಿರುತ್ತದೆ. ಈ ಹಟ್ಟಿ ಅಥವಾ ಈ ಭಾಗದಲ್ಲಿ ರಾಗಿ ಶೇಂಗಾ ಹೆಚ್ಚಾಗಿ ಬೆಳೆಯುತ್ತಾರೆ. ಶೇಂಗಾ, ರಾಗಿ ಕಳೆತೆಗೆಯುವ ಹಂತದಲ್ಲಿರುತ್ತವೆ. ಅಥವಾ ಕಳೆ ಕೆಲಸ ಮುಗಿದು ರೈತರಿಗೆ ಬಿಡುವು ಇರುತ್ತದೆ. ಹಿರಿಯರು ಹೇಳುವಂತೆ ಈ ಹಿಂದೆ ರೈತರು ಹೊಲಗದ್ದೆಗಳಿಂದಲೇ ಮರುಳು ಮಿಶ್ರಿತ ಕೆಂಪು ಮಣ್ಣನ್ನು ತಂದು ಅದರಿಂದಲೇ ಗಣೇಶನನ್ನು ನಿರ್ಮಿಸಿ ಪೂಜಿಸುತ್ತಿದ್ದರು. ಪೂಜಾ ಸಾಮಗ್ರಿಗಳಲ್ಲಿ ಮುಖ್ಯವಾದುದೇ ಗರಿಕೆ, ಹೊಲದಲ್ಲಿ ಬೆಳೆಗೆ ತೊಂದರೆ ಕೊಡುವ ಕಳೆ ಗರಿಕೆ, ಈ ಗರಿಕೆಯ ಜೊತೆಗೆ ಧಾನ್ಯಗಳ ಶತ್ರು ಇಲಿಯೂ ಇರುತ್ತದೆ. ಗಣೇಶನ ಕಾಲ ಅಡಿಯಲ್ಲಿ ಇಲಿ ಗಣೇಶನ ಒಂದು ಕೈಯಲ್ಲಿ ಧಾನ್ಯದ ತೆನೆ ಇನ್ನೊಂದು ಕೈಯಲ್ಲಿ ಅದೇ ಧಾನ್ಯದಿಂದ ತಯಾರಿಸಿದ ಕಡುಬು ಇರುತ್ತದೆ. ಈ ಹಬ್ಬ ಬೆಳೆಗಳೆಲ್ಲಾ ಬೆಳವಣಿಗೆಯ ಹಂತದಲ್ಲಿರುವಾಗ ಬರುವುದು ಇದನ್ನೆಲ್ಲಾ ನೋಡಿದರೆ ಈ ಹಬ್ಬವು ಕೃಷಿಸಂಬಂಧಿ ಆಚರಣೆಯಾಗಿ ಕಾಣಿಸುತ್ತದೆ.

**೪.೩.೫ ಜೋಕುಮಾರನ ಹಬ್ಬ**

ಪಂಚಮಿ ಹಬ್ಬದ ನಂತರ ಶ್ರಾವಣ ಮಾಸ ಮುಗಿದೊಡನೆ ಬರುವುದು ಗಣೇಶನ ಹಬ್ಬ. ಗಣೇಶನ ಹಬ್ಬದ ನಂತರ ಬರುವ ಹಬ್ಬ ಜೋಕುಮಾರನ ಹಬ್ಬ. "ಗಣೇಶ ಶಿಷ್ಟ ಪರಂಪರೆಯ ದೇವರಾದರೆ ಇದೇ ಸಂದರ್ಭದಲ್ಲಿ ಬರುವ ಜೋಕುಮಾರ ಅಪ್ಪಟ ಜನಪದರ ದೇವರಾಗಿದ್ದಾನೆ"[೧೫]. ಗಣೇಶನ ಹಬ್ಬವಾದ ಮೇಲೆ ಹಬ್ಬದಲ್ಲಿ ಸಂತೃಪ್ತಿಯಾಗಿ ಉಂಡು ಭೂಲೋಕದಲ್ಲಿ ಎಲ್ಲವೂ ಸೌಖ್ಯವಾಗಿದೆ

ಎಂದು ಗಣೇಶನು ತನ್ನ ತಂದೆ–ತಾಯಿಗಳಾದ ಶಿವ ಪಾರ್ವತಿಯರಿಗೆ ವರದಿ ಒಪ್ಪಿಸಿದರೆ, ಜನಪದರ ದೇವರಾದ ಜೋಕುಮಾರ ಇಲ್ಲಿ ಮಳೆ–ಬೆಳೆ ಇಲ್ಲದೆ ಕಂಗಾಲಾಗಿದ್ದ ಜನತೆಯ ಕಷ್ಟ ಕಾರ್ಪಣ್ಯಗಳನ್ನು ನೋಡಿ ಮರುಗಿ ಶಿವ ಪಾರ್ವತಿಯರಿಗೆ ಮಳೆಸುರಿಸಲು ವಿನಂತಿಸಿಕೊಳ್ಳುತ್ತಾನೆ. ಜೋಕುಮಾರನ ಹಬ್ಬವಾಗಿ ಅವನ ಸಾವಿನ ನಂತರವೇ ಉತ್ತರ, ಹಸ್ತಾಮಳೆಗಳು ಸುರಿಯುತ್ತವೆ. ಹೀಗಾಗಿಯೇ ಜೋಕುಮಾರ ಕೃಷಿಕರಿಗೆ ಮಳೆ ತರುವ ನಂಬಿಕಸ್ತ ದೇವರು. "ಭಾದ್ರಪದ ಮಾಸದ ಅಷ್ಟಮಿಯ ದಿನದಂದು ಹುಟ್ಟಿದ ಜೋಕುಮಾರ 'ಜೋಕ' ಎಂಬ ಮುನಿ ಮತ್ತು ಜೇಷ್ಟದೇವಿಯ ಮಗನೆಂದೂ ಹೇಳಲಾಗುತ್ತಿದೆ"[೧೭]. ಇವನು ಹುಟ್ಟಿದೊಡನೆಯೇ ತನ್ನ ಅತ್ಯಂತ ಕಾಮುಕ ಪ್ರವೃತ್ತಿಯಿಂದ ಊರಿನವರಿಗೆಲ್ಲಾ ಹೊರೆಯಾಗುತ್ತಾನೆ. ನಂತರ ಅಗಸರ ಹೆಣ್ಣನ್ನು ಕಾಮುಕತನದಿಂದ ಕೆಣಕಿದ್ದರಿಂದ ಇವನ ತಲೆ ಕಡಿದು ಅಗಸರು ತಾವು ಬಟ್ಟೆ ಒಗೆಯುವ ಬಂಡೆಯ ಕೆಳಗೆ ಹೂಳಲಾಯಿತು. ಜೋಕುಮಾರನನ್ನು ಮಾಡುವವರು ಅಂದರೆ ಅವನ ಮೂರ್ತಿಯನ್ನು ಮಾಡುವವರು ಬಡಿಗೇರು(ವಿಶ್ವಕರ್ಮ)ಆಗಿರುತ್ತಾರೆ.

ಮಣ್ಣಿನಿಂದ ತಿದ್ದಿ ತೀಡಿದ ಅತ್ಯಂತ ಚೆಲುವಿನಿಂದ ಕೂಡಿದ ಮೂರ್ತಿ ಇದಾಗಿರುತ್ತದೆ. ಜೋಕುಮಾರನ ಮೂರ್ತಿಯನ್ನು ಬುಟ್ಟಿಯಲ್ಲಿಟ್ಟುಕೊಂಡು ಮೊದಲು ಗೌಡರ ಮನೆಗೆ, ಕೆಲವೊಂದು ಊರಿನಲ್ಲಿ ಗೌಡರು ಇಲ್ಲದಿದ್ದರೆ ಆ ಊರಿನ ಪ್ರಮುಖರ ಮನೆಗೆ ಜೋಕುಮಾರನನ್ನು ತರುತ್ತಾರೆ. ಜೋಕುಮಾರನನ್ನು ಮಾಡಿದವರಿಗೆ ಕೊಡಬೇಕಾದ ಕಾಣಿಕೆ ಎಂದರೆ ಗೌರವಧನ, ಎಲೆ, ಅಡಿಕೆ, ಹಿಟ್ಟು, ಬೇಳೆ, ಅಕ್ಕಿ ಮುಂತಾದುವುಗಳನ್ನು ಕೊಟ್ಟು ಪೂಜಿಸಿ ಕಳುಹಿಸುತ್ತಾರೆ. ಕಂಪಳದೇವರ ಹಟ್ಟಿಯಲ್ಲಿ ಗೌಡರು ಇಲ್ಲ ಹಾಗಾಗಿ ಇಲ್ಲಿನ ಮುಖ್ಯಸ್ಥ ಪೂಜಾರಿಯ ಮನೆಗೆ ತರುತ್ತಾರೆ. ಅವರ ಮನೆಯಲ್ಲಿ ಪೂಜೆಯಾದ ನಂತರ ಅವರು ಕೊಡುವ ಬಿಳಿ ಬಟ್ಟೆಯನ್ನು ಜೋಕುಮಾರನಿಗೆ ಹೊದಿಸಿ ಬೆಣ್ಣೆಯನ್ನು ಜೋಕುಮಾರ ಮೂರ್ತಿಯ ಬಾಯಿಗೆ ಸವರಿ ಏಳು ದಿನಗಳ ಕಾಲ ಊರಿನ ಪ್ರತಿ ಮನೆ ಮನೆಗೂ ಜೋಕುಮಾರನನ್ನು ಕರೆದುಕೊಂಡು ಹೋಗುತ್ತಾರೆ. ನಾಯಕರು, ಕೋಲಕಾರರು, ಅಂಬಿಗರ ಮಹಿಳೆಯರೇ ಹೆಚ್ಚಾಗಿ ಜೋಕುಮಾರನನ್ನು ಹೊತ್ತು ತಿರುಗುವ ಕೆಲಸ ಮಾಡುತ್ತಾರೆ. ಪ್ರತಿ ಮನೆಗೆ ಹೋಗಿ ಮನೆಯ ಮುಂದಿನ ಅಂಗಳ ಅಥವಾ ಕಟ್ಟೆಯ ಮೇಲೆ ಜೋಕುಮಾರನನ್ನು ಇಟ್ಟು ಆತನಿಗೆ ಸಂಬಂಧಿಸಿದ ಹಾಡುಗಳನ್ನು ಹೇಳುತ್ತಾರೆ. ಈ ಹಾಡುಗಳಲ್ಲಿ ಜೋಕುಮಾರನ ಜನನ, ಉಡಾಳತನ, ಆತನ ಕೊಲೆ, ಹಾಗೆಯೇ ಹಾಡಿನಲ್ಲಿ "ಅಡ್ಡಡ್ಡ ಮಳೆಯಾಗಿ ಒಡ್ಡುಗಳೆಲ್ಲಾ ತುಂಬಿ ಗೊಡ್ಡೆಮ್ಮೆ ಹೈನಾಗಿ"[೧೮]. ಎಂಬಂತಹ ಅನೇಕ ವಿಚಾರಗಳ ಪ್ರಸ್ತಾಪ ಬರುತ್ತದೆ. ಪ್ರತಿ ಮನೆಯವರು ಕೊಡುವ ಜೋಳಕ್ಕೆ ಪ್ರತಿಯಾಗಿ ಜೋಕುಮಾರನ ಮರದಲ್ಲಿದ್ದ ಐದಾರು ಬಗೆಯ ಕಾಳು, ಜೋಳ, ಬೇವಿನ ಸೊಪ್ಪು, ಒಂದಿಷ್ಟು ನುಚ್ಚನ್ನು ಇಡುತ್ತಾರೆ, ಜೋಳದ ಕಾಳನ್ನು, ಬೇವಿನ ಸೊಪ್ಪನ್ನು ಕಾಳಿನ ಸಂಗ್ರಹದಲ್ಲಿ ಹಾಕುತ್ತಾರೆ. ಹೀಗೆ ಮಾಡುವುದರಿಂದ ಪೈರುಗಳು ಹುಲುಸಾಗುತ್ತವೆಂದು, ಧಾನ್ಯಗಳಿಗೆ ಹುಳು ಹತ್ತುವುದಿಲ್ಲವೆಂಬುದು ಜನಪದರ ನಂಬಿಕೆಯಾಗಿದೆ. ಬೇವಿನ ಸೊಪ್ಪಿನಲ್ಲಿ ಔಷಧೀಯ ಗುಣವಿರುವುದರಿಂದ ಧಾನ್ಯಗಳ ಜೊತೆ ಬೇವಿನ ಎಲೆಯನ್ನ ಬೆರಸಿ ಸಂಗ್ರಹಿಸುವುದರಿಂದ ಧಾನ್ಯಗಳಿಗೆ

ಹುಳು, ಕ್ರಿಮಿ, ಕೀಟಗಳ ಬಾಧೆ ತಗಲುವುದಿಲ್ಲವೆಂಬುದನ್ನು ಖಚಿತಪಡಿಸಿಕೊಂಡೇ ಈ ಪದ್ದತಿಯನ್ನು ಅನುಸರಿಸುತ್ತಾ ಬಂದಿದ್ದಾರೆ.

ಏಳು ದಿನಗಳ ಕಾಲ ಎಲ್ಲಾ ಊರುಗಳಲ್ಲಿ ಜೋಕುಮಾರನನ್ನು ಹೊತ್ತವರು ತಿರುಗಾಡಿದ ನಂತರ(ಏಳುದಿನಗಳು ಮಾತ್ರ ಇವನ ಪೂಜೆ ಮಾಡುತ್ತಾರೆ ಕಾರಣ ಜೋಕುಮಾರನ ಆಯಸ್ಸು ಏಳೇ ದಿನ ಅವನು ಹುಟ್ಟಿ ಏಳು ದಿನಕ್ಕೆ ಸಾಯುತ್ತಾನೆ.) ಊರಿನ ತಳವಾರರ ಮನೆಯಲ್ಲಿ ಬುಟ್ಟಿ ತುಂಬುವಷ್ಟು ಜೋಳದ ಕಡುಬು ಮಾಡಿ ಜೋಕುಮಾರನ ಮೈ ಮೇಲಿನ ವಸ್ತುಗಳನ್ನು ತೆಗೆದು. ಆತನ ಕುತ್ತಿಗೆ ಮುಚ್ಚುವವರೆಗೆ ಕಡುಬುಗಳನ್ನು ಪೇರಿಸಿ ಇಡಲಾಗುತ್ತದೆ. ಒಂದು ಕೈಯಲ್ಲಿ ಕೊಬ್ಬರಿ ಬಟ್ಟಲನ್ನು ಇನ್ನೊಂದು ಕೈಯಲ್ಲಿ ದೀಪ ಹಚ್ಚಿದ ಪರಟೆಯನ್ನು ಕೊಡಲಾಗುತ್ತದೆ. ಆ ನಂತರದಲ್ಲಿ ಗಂಡಸೊಬ್ಬನು ಜೋಕುಮಾರನನ್ನು ಕುಳ್ಳಿರಸಲಾಗಿದ್ದ ಬುಟ್ಟಿಯನ್ನು ಹೊತ್ತುಕೊಂಡು ನಡೆಯುತ್ತಾನೆ. ಹೀಗೆ ಕತ್ತಲಲ್ಲಿ ಸಾಗುವ ಜೋಕುಮಾರನನ್ನಾಗಲೀ ಆತನ ಕೈಯಲ್ಲಿಯ ದೀಪವನ್ನಾಗಲೀ ಯಾರೂ ನೋಡುವಂತಿಲ್ಲ, ನೋಡಿದರೆ ಅಪಶಕುನ ಅಷ್ಟೇ ಅಲ್ಲ ವರ್ಷ ತುಂಬುವುದರೊಳಗಾಗಿಯೇ ನೋಡಿದವರು ಲೈಂಗಿಕ ಹಗರಣದಲ್ಲಿ ಸಿಲುಕಿ ಅಪಮಾನವಾಗಿ ಇಲ್ಲವೆ ಪ್ರಾಣಕಳೆದುಕೊಳ್ಳುವ ಅಪಾಯ ಉಂಟೆಂದು ಹೇಳಲಾಗುತ್ತದೆ. ಆ ಕಾರಣಕ್ಕಾಗಿಯೇ ಜೋಕುಮಾರನು ಹತ್ಯೆಯಾಗುವ ದಿನ ಆತ ಹಾಯ್ದು ಹೋಗುವ ದಾರಿಯುದ್ದಕ್ಕೂ ಮೊದಲೇ ಒಬ್ಬ ಜೋಕುಮಾರ ಬರುತ್ತಾನೆ ಬೇಗ ಬಾಗಿಲು ಹಾಕಿಕೊಳ್ಳಿ ಎಂದು ಸಾರುತ್ತಾ ಹೋಗುತ್ತಾನೆ. ಅಂದು ಮಧ್ಯರಾತ್ರಿ ಜೋಕುಮಾರನನ್ನು ಹೊತ್ತು ಮಾದಿಗರ/ಹೊಲಗೇರಿಗೆ ಕರೆತರಲಾಗುತ್ತದೆ. ಹೊಲಗೇರಿಯ ಚಾವಡಿಯಲ್ಲೊಬ್ಬ ಬೆನ್ನು ಹಿಂದಕ್ಕೆ ಮಾಡಿಯೇ ಜೋಕುಮಾರನ ಬುಟ್ಟಿಯನ್ನು ತೆಗೆದು ಕೊಳ್ಳುತ್ತಾನೆ. ಈ ಕ್ರಿಯೆ ನಡೆಯುವಾಗ ಬುಟ್ಟಿ ಕೊಡುವವ ಮತ್ತು ತೆಗೆದುಕೊಳ್ಳವವ ಪರಸ್ಪರ ಒಬ್ಬರ ಮುಖವನ್ನು ಇನ್ನೊಬ್ಬರು ನೋಡುವಂತಿಲ್ಲ. ನಂತರ ಬುಟ್ಟಿಯಲ್ಲಿದ್ದ ಕಡುಬುಗಳನ್ನು ತೆಗೆಯಲಾಗುತ್ತದೆ. ಅದೇ ಸಮಯದಲ್ಲಿ ಚಾವಡಿ ಕಟ್ಟೆಯ ಮೇಲೆ ಜೋಕುಮಾರನ ಬುಟ್ಟಿಯ ಸಮೀಪ ಬಾರೆ ಮುಳ್ಳಿನ(ಬಾರೇ ಹಣ್ಣಿನ ಮರದ ಮುಳ್ಳು) ಕಂಟಿಯನ್ನಿಟ್ಟಿರುತ್ತಾರೆ.

ದೇವದಾಸಿಯರು(ಹಟ್ಟಿಯಲ್ಲಿ ಯಾರೂ ದೇವದಾಸಿಯರಿಲ್ಲ ಆದ ಕಾರಣ ಅಲ್ಲಿನ ಹಿರಿಯ ಮಹಿಳೆಯರು ಈ ಆಚರಣೆಯಲ್ಲಿ ಭಾಗವಹಿಸುತ್ತಾರೆ) ಚಾವಡಿಯಲ್ಲಿ ಜೋಕುಮಾರ ನಮ್ಮನ್ನು ಹಿಡಿದುಕೊಳ್ಳಲು ಬಂದ, ನಮ್ಮ ಮೇಲೆ ಅತ್ಯಾಚಾರಕ್ಕೆ ಯತ್ನಿಸಿದ ಎಂದು ಬಾಯಿ ಬಡಿದುಕೊಳ್ಳುತ್ತಾರೆ. ಅದನ್ನು ಕೇಳಿದ ಜನರೆಲ್ಲಾ ಓಡಿ ಬರುತ್ತಾರೆ. ಬಂದು ಜೋಕುಮಾರನನ್ನು ಒನಕೆಯಿಂದ ಹಿಗ್ಗಾ ಮುಗ್ಗಾ ಹೊಡೆದು ಕೊಂದು ಹಾಕುತ್ತಾರೆ. ನಂತರ ಅವನ ಹೆಣವನ್ನು ಅಗಸರು ಬಟ್ಟೆ ಒಗೆಯುವ ಹಳ್ಳದ ದಂಡೆಗೋ, ನದಿ ಅಥವಾ ಕರೆ ದಂಡೆಗೋ ಒಯ್ದು ಬಟ್ಟೆ ಒಗೆಯುವ ಬಂಡೆಯ ಕೆಳಗೆ ಹೋಳುತ್ತಾರೆ. ಇಷ್ಟು ಕಾರ್ಯ ಮುಗಿದ ನಂತರ ಅಂದರೆ ಜೋಕುಮಾರ ಸತ್ತ ನಂತರವೇ ಏಳುದಿನಗಳ ಕಾಲ ಜೋಕುಮಾರನನ್ನು ಹೊತ್ತು ತಿರುಗಿದ ಮಹಿಳೆಯರು ತಲೆಗೆ ನೀರು ಹಾಕಿಕೊಂಡು ಸ್ನಾನ

ಮಾಡುತ್ತಾರೆ. ಮಡಿವಾಳರು ಇರುವ ಊರುಗಳಲ್ಲಿ ಮಡಿವಾಳರು ಜೋಕುಮಾರ ಸತ್ತ ಕೆಲವು ದಿನಗಳಲ್ಲಿ ಊರಿನವರ ಬಟ್ಟೆಗಳನ್ನು ಒಗೆಯುವುದಿಲ್ಲ ಯಾಕೆಂದರೆ ಕೊಲೆಯಾದ ಜೋಕುಮಾರ ನರಳುತ್ತಿರುತ್ತಾನೆಂದೂ, ತಾವು ಬಟ್ಟೆ ಒಗೆಯುವ ಸ್ಥಳದಲ್ಲೇ ಆತನ ಶವ ಎಸೆದಿರುವುದರಿಂದ ತಮಗೆ ಮೈಲಿಗೆಯಾಗುತ್ತದೆ ಎಂದೂ ಹೇಳುವ ಅವರು ಮೂರನೇ ದಿನ ಮನೆ ಮನೆ ತಿರುಗಿ ಜೋಳ, ಉಪ್ಪು, ಮೆಣಸಿನ ಕಾಯಿ ಸಂಗ್ರಹಿಸಿ ಜೋಳದ ನುಚ್ಚು ಮಾಡುತ್ತಾರೆ. ನಂತರ ಜೋಕುಮಾರನನ್ನು ಹೂತಿಟ್ಟ ಸ್ಥಳದಲ್ಲಿ ಕಲ್ಲಿಟ್ಟು ಪೂಜಿಸಿ ಎಡೆ ತೋರಿಸಿ ದಿವಸ ಕಾಲ ಮಾಡಿ ಮುಗಿಸಿ ತಮ್ಮ ನಿತ್ಯದ ಕೆಲಸ ಪ್ರಾರಂಭಿಸುತ್ತಾರೆ. "ಜೋಕುಮಾರ ಬರುವ ಸಂದರ್ಭ ಆತ ಸಾಯುವ ಸಂದರ್ಭ ಒಟ್ಟಾರೆ ಜೋಕುಮಾರನ ಆಚರಣೆಯ ಕಾಲ ಸೆಪ್ಟಂಬರ್ ಮತ್ತು ಅಕ್ಟೋಬರ್ ತಿಂಗಳಲ್ಲಿ ನಡೆಯುತ್ತದೆ ಈ ಸಂದರ್ಭದಲ್ಲಿ ಸೂರ್ಯನ ಕಿರಣಗಳು ಲಂಬವಾಗಿ ಭೂಮಿಗೆ ಬರುವುದರಿಂದ ಭೂಮಿಯ ತಾಪಮಾನ ಹೆಚ್ಚಾಗುವುದು"[೧೮]. ಹಾಗಾಗಿ ಈ ಸಂದರ್ಭದಲ್ಲಿ ಭೂಮಿ ತಂಪಾಗಲು ಮಳೆಯ ಅಗತ್ಯತೆ ಇರುತ್ತದೆ, ಇಲ್ಲವಾದರೆ ಫಸಲೆಲ್ಲಾ ಒಣಗಿ ಹೋಗುತ್ತವೆ ಈ ಸಂದರ್ಭದಲ್ಲಿ ಬರುವ ಮಳೆಗಾಲದ ಉತ್ತರೆ ಮಳೆ ಮತ್ತು ಹಸ್ತ ಮಳೆಗಳು ರೈತರಿಗೆ ಮಾತುಕೊಟ್ಟ ಮಳೆಗಳೆಂದು ಕರಸಿಕೊಳ್ಳುತ್ತವೆ.

ಈ ಮಳೆಗಳು ಸುರಿಯುವುದು ತಡವಾಗಿದ್ದರೆ ಅಥವಾ ಬಾರದೇ ಹೋದರೆ ರೈತರಿಗೆ ಬರಗಾಲ ಗ್ಯಾರಂಟಿ ಆದರೆ ಈ ಮಳೆಗಳಲ್ಲಿ ಒಂದಾದರೂ ಬಂದೇ ಬರುತ್ತದೆ ತಡವಾದರೆ ಜೋಕುಮಾರನ ಆಚರಣೆ ಆದ ಮೇಲಂತೂ ಮಳೆ ಬಂದೇ ಬರುತ್ತದೆ. ಜೋಕುಮಾರನು ಸತ್ತು ದೇವಲೋಕಕ್ಕೆ ಹೋಗಿ ಶಿವ ಪಾರ್ವತಿಯರಿಗೆ ಭೂಲೋಕದಲ್ಲಿನ ಕಷ್ಟ ಹೇಳಿ ಮಳೆ ಬರಿಸುತ್ತಾನೆ ಎಂಬುದು ನಮ್ಮ ಜನಪದರ ನಂಬಿಕೆಯಾಗಿದೆ. ಕಂಪಳದೇವರ ಹಟ್ಟಿಯಲ್ಲಿ ಜೋಕುಮಾರನನ್ನು ಮಾಡಿ ಪುಟ್ಟಿಯಲ್ಲಿಟ್ಟುಕೊಂಡು ತಿರುಗಾಡುವವರು ಯಾರೂ ಇಲ್ಲ ಆದ್ದರಿಂದ ಬೇರೆ ಊರುಗಳಿಂದ ಯಾರಾದರೂ(ಬಾರಿಕೇರು) ಜೋಕುಮಾರನನ್ನು ಹೊತ್ತು ತಂದು ಮನೆ ಮನೆಗೆ ಹೋಗುತ್ತಾರೆ ಹಟ್ಟಿಯ ಜನರು ಅವರಿಗೆ ಕಾಳು ಕಡಿ ನೀಡಿ ಜೋಕುಮಾರನನ್ನು ಪೂಜಿಸಿ ಕಳುಹಿಸುತ್ತಾರೆ.

**೪.೩.೬ ದಸರಾ ಆಚರಣೆ**

ದಸರಾ ಹಬ್ಬವು ಕೃಷಿಕರು ತಾವು ಬಿತ್ತಿದ ಬೀಜವೆಲ್ಲಾ ಮೊಳೆತು ಬೆಳೆ ಫಲಕ್ಕೆ ಬಂದಂತಹ(ಹೊಡೆ ಹೊಡೆದ ಕಾಲ) ಸಂದರ್ಭದಲ್ಲಿ ಬೆಳೆಗಳ ವಿಜಯವೇ ಈ ವಿಜಯದಶಮಿ ಎಂಬಂತೆ ಆಚರಿಸುತ್ತಾರೆ. ಈ ಹಬ್ಬವನ್ನು ಜನಪದರು ಬನ್ನಿಹಬ್ಬ, ಹಿರೇರ ಹಬ್ಬ, ದಸರಾ ಹಬ್ಬ, ಮೊರ್ನೊಮಿ/ಮಹಾನವಮಿ ಎಂದೆಲ್ಲಾ ಕರೆಯುತ್ತಾರೆ. ಕಂಪಳದೇವರ ಹಟ್ಟಿಯಲ್ಲಿ ವಿಜಯದಶಮಿಯಂದು ಇವರು ಹಿರಿಯರ ಹಬ್ಬ, ಆಯುಧ ಪೂಜೆ ಮಾಡದೇ ವಿಜಯ ದಶಮಿಯ ಹತ್ತು ದಿನ ಮುಂಚೆ ಅಂದರೆ ಮಹಾಲಯ ಅಮವಾಸ್ಯೆಯ ದಿನ ಆಯುಧ ಪೂಜೆ ಮತ್ತು ಹಿರಿಯರ ಪೂಜೆ ಮಾಡುತ್ತಾರೆ. ಕಾರಣ ಇವರ ಎಲ್ಲಾ ಪ್ರಮುಖ ಕಾರ್ಯಗಳಿಗೆ ಅಮಾವಾಸ್ಯೆಯೇ ಪವಿತ್ರದಿನ ಎಂದೇ ನಂಬುತ್ತಾರೆ. ಆದ್ದರಿಂದ

ಅಮವಾಸ್ಯಯ ದಿನ ಆಯುಧ ಪೂಜೆ ಮಾಡುತ್ತಾರೆ. ತಮ್ಮ ಕೃಷಿ ಬದುಕಿಗೆ ಮತ್ತು ಹಿಂದೆ ಬೇಟೆಗೆ ಸಹಾಯಕವಾಗಿರುವ ಕುಡುಗೋಲು, ಕತ್ತಿ ನೇಗಿಲು ಚಲಕೆ, ಗುದ್ದಲಿ ಮುಂತಾದ ಆಯುಧಗಳನ್ನು ಹಟ್ಟಿಯ ಜನಪದರು ಪೂಜಿಸುತ್ತಾರೆ. ಇದರಿಂದ ಈ ಹಬ್ಬವೂ ಸಹ ಜನಪದರ ಕೃಷಿ ಸಂಬಂಧಿ ಆಚರಣೆಯಾಗಿದೆ ಎಂದು ಹೇಳಬಹುದಾಗಿದೆ.

ಹಟ್ಟಿಯ ಬೇಡರು ತಮ್ಮ ಪೂರ್ವಿಕರು ದಸರದ ಶರನ್ ನವರಾತ್ರಿಯ ದಿನ ಸ್ವರ್ಗದಿಂದ ಭೂಮಿಗೆ ಬರುತ್ತಾರೆ, ಎಂದು ನಂಬುತ್ತಾರೆ. ಇವರು ತಮ್ಮ ಪೂರ್ವಿಕರು/ಹಿರಿಯರ ಪ್ರತಿರೂಪವಾಗಿ ಮಾಡಿಕೊಂಡಿರುವ ಮಣ್ಣಿನ ಮಗಿಗಳನ್ನು ಜೋಳ ಅಥವಾ ಅಕ್ಕಿಯ ಚಿಕ್ಕ ಚಿಕ್ಕ ರಾಶಿಗಳ ಮೇಲೆ(ಈ ರಾಶಿಗಳನ್ನು ನಿಧಿ ಹೊಯ್ಯುವುದು ಎನ್ನುತ್ತಾರೆ) ಇಟ್ಟು ಅದಕ್ಕೆ ಪೂಜೆಮಾಡಿ ಆ ಹಿರೇರ ಮಗಿಗಳ ಮೇಲೆ ಹೊಸ ಬಟ್ಟೆ ಹೊದಿಸಿ ಎಡೆ ಇಡುತ್ತಾರೆ. ಹೀಗೆ ಮಾಡುವುದರಿಂದ ಅಂದು ತಮ್ಮ ಪೂರ್ವಿಕರು ಸ್ವರ್ಗದಿಂದ ಬಂದು ತಾವು ಬಡಿಸಿದ ಎಡೆಯನ್ನು ಸ್ವೀಕರಿಸಿ ತಮ್ಮನ್ನು ಹಾರೈಸಿ ಹೋಗುತ್ತಾರೆ. ಎಂಬುದು ಹಟ್ಟಿಯ ಜನರ ನಂಬಿಕೆಯಾಗಿದೆ. ಅವರವರ ಬೆಡಗಿಗೆ ಸಂಬಂಧಿಸಿದಂತೆ ಅದೇ ಸಮುದಾಯದ ದಾಸರಯ್ಯನನ್ನು ನೇಮಿಸಿಕೊಂಡಿರುತ್ತಾರೆ ಆ ದಾಸರಯ್ಯ ಈ ಹಬ್ಬದಲ್ಲಿ ಬಂದು ಹಿರಿಯರ ಮಗಿಗಳಿಗೆ ಪೂಜೆ ಮಾಡಿ ಶಂಖ ಊದಿ, ಜಾಗಟೆ ಬಾರಿಸಿ, ಎಡೆ ಸ್ವೀಕರಿಸಿದ ಮೇಲೆ ಮನೆಯವರು ಊಟ ಮಾಡುತ್ತಾರೆ. ಅಲ್ಲಿಯವರೆಗೆ ಮನೆಯ ಯಜಮಾನ ಅಥವಾ ಯಜಮಾನಿ ಉಪವಾಸವಿರುತ್ತಾರೆ.

ಹಿರಿಯರಿಗೆ ಹೊಸ ಬಟ್ಟೆ ಹಾಕದೆ ಮನೆಯವರು ಹೊಸಬಟ್ಟೆ ತೊಡುವುದಿಲ್ಲ ಹಿರಿಯರಿಗೆ ಎಡೆ ಇಡದೆ ತಾವು ಊಟ ಮಾಡುವುದಿಲ್ಲ. ಇಂತಹ ವಿಶಿಷ್ಟತೆಯನ್ನು ಹಬ್ಬ ಹರಿದಿನಗಳಲ್ಲಿ ಮಾತ್ರವಲ್ಲದೆ ಹಟ್ಟಿಯ ಜನರ ದಿನನಿತ್ಯದ ಬದುಕಿನಲ್ಲೂ ಕಾಣಬಹುದು. ಹಟ್ಟಿಯ ಬೇಡರ ಪ್ರತಿ ಮನೆಯಲ್ಲೂ ಪರಂಪರೆಯಿಂದ ಪೂಜಿಸಿಕೊಂಡು ಬಂದಿರುವ ಮಣ್ಣಿನ ಮಗಿಗಳು ಎರಡು ಅಥವಾ ಮೂರು ಇರುತ್ತವೆ ಈ ಮಗಿಗಳನ್ನು ಹಿರಿಯರ ಹಬ್ಬ ಮಾಡುವ ಸಂದರ್ಭದಲ್ಲಿ ಮಾತ್ರ ಹೊರ ತೆಗೆದು ಪೂಜಿಸಿ ಮತ್ತೆ ನೆಲುವಿನ ಮೇಲೆ ಇಡುತ್ತಾರೆ. ನಂತರ ಮತ್ತೊಮ್ಮೆ ಹಿರಿಯರನ್ನು ಮಾಡುವಾಗ ಮಾತ್ರ ಅವನ್ನು ಹೊರ ತೆಗೆಯುವುದು ಆ ಮಗಿಗಳೇ ಇವರ ಹಿರಿಯರು ಆಗಿರುತ್ತವೆ. ಹಿರಿಯರನ್ನು ಮಾಡುವ ಸಂದರ್ಭದಲ್ಲಿ ಹಿರಿಯರ ಮಗಿಗಳನ್ನು ನೇರವಾಗಿ ನೆಲದ ಮೇಲೆ ಅಥವಾ ಸಿಂಬೆಯ ಮೇಲೆ ಇಡದೆ ನೆಲ ಸಾರಿಸಿ ಅದರ ಮೇಲೆ ಜೋಳ, ಸಜ್ಜೆ, ಅಥವಾ ಅಕ್ಕಿಯ ಸಣ್ಣ ಕುಪ್ಪೆಗಳನ್ನು ಹಾಕಿ ಆ ರಾಶಿಗಳ ಮೇಲೆ ಹಿರಿಯರ ಮಗಿಗಳನ್ನು ಇಡುತ್ತಾರೆ. ಈ ಜೋಳದ ಚಿಕ್ಕ ಚಿಕ್ಕ ರಾಶಿಗಳನ್ನು ಇವರು ತಮ್ಮ ಮಾತಿನಲ್ಲಿ ನಿಧಿ ಎಂದು ಕರೆಯುತ್ತಾರೆ. ಬಹುಶಃ ಹಣಕ್ಕೆ ಪ್ರಾಶಸ್ತ್ಯ ಕೊಡದ ಹಿಂದಿನ ಜನ ಅವರ ಆಹಾರ ಧಾನ್ಯಗಳನ್ನು ಸಂಪತ್ತು ಎಂದು ನಂಬಿ ಈ ಸಂಪತ್ತು ಎಂದೂ ನಮ್ಮ ಕೈ ತಪ್ಪಿ ಹೋಗದಿರಲಿ ಎಂದು ಮತ್ತು ಮುಂದಿನ ತಲೆಮಾರಿಗೆ ಹೀಗೆ ದೊರೆಯಲಿ ಎಂಬ ಉದ್ದೇಶದಿಂದ ಹಿರಿಯರ ಅಡಿಯಲ್ಲಿ ನಿಧಿ ಹೊಯ್ಯುತ್ತಿದ್ದರು ಎಂದು ಊಹಿಸಬಹುದು. ಹೀಗೆ ಹಿರಿಯರಿಗೆ ನಿಧಿ

ಹೊಯ್ದ ಕಾಳನ್ನು ಹಬ್ಬ ಮುಗಿದ ಮೇಲೆ ಹಿರಿಯರ ಮಗಿಗಳನ್ನು ತೆಗೆದು ನೆಲುವಿನ ಮೇಲಿಟ್ಟು ಆ ನಿಧಿ ಹೊಯ್ದ ಕಾಳನ್ನು ಎಲ್ಲಿಯೂ ಚೆಲ್ಲದೆ ಯಾರಿಗೂ ಕೊಡದೆ ಹಿರಿಯರ ಮಗಿಯಲ್ಲಿ ಹಾಕಿದ್ದ ನೀರಿನಲ್ಲಿ ನಿಧಿ ಹೊಯ್ದು ಕಾಳನ್ನು ಮತ್ತು ಎಡೆ ಇಟ್ಟ ತಿಂಡಿಯನ್ನು ಬೆರಸಿ ತಮ್ಮ ರಾಸುಗಳಿಗೆ ಕುಡಿಸುತ್ತಾರೆ ಕೆಲವರು ಆ ಕಾಳನ್ನು ಹಿಟ್ಟು ಮಾಡಿ ಮುದ್ದೆ ಅಥವಾ ಕಡುಬು ಮಾಡಿ ಊಟ ಮಾಡುತ್ತಾರೆ.

ಈ ಆಚರಣೆಯಿಂದ ಪರಂಪರೆಯಿಂದ ಮಾನವ ಹಣಕ್ಕೆ ಹೆಚ್ಚು ಪ್ರಾತಿನಿಧ್ಯ ಕೊಡದೆ ಆಹಾರ ಧಾನ್ಯಗಳಿಗೆ ಆದ್ಯತೆ ನೀಡುತ್ತಾ ಬಂದಿರುವುದು ತಿಳಿದು ಬರುತ್ತದೆ. ಈ ಹಬ್ಬದಲ್ಲಿ ಹಿರಿಯರ ಪೂಜೆಗೆ ವಿಶೇಷವಾಗಿ ತಮ್ಮ ಹೊಲ ಗದ್ದೆಗಳಲ್ಲಿ ಬೆಳೆದಿರುವ ತಮ್ಮ ಬೆಳೆಗಳ ಹೂವು ಮತ್ತು ಪ್ರಕೃತಿಯಲ್ಲಿನ ಇತರೆ ಹೂವು ಪತ್ರೆಗಳನ್ನು ಬಳಸುತ್ತಾರೆ. ಅವುಗಳೆಂದರೆ ತಂಗಟೆ ಹೂವು, ಸೂರ್ಯಕಾಂತಿ ಹೂವು, ಸೇವಂತಿಗೆ, ಚೆಂಡು ಹೂವು, ಗುರಾಳು ಹೂವು, ಜೋಳದತೆನೆ, ಸಜ್ಜೆಯತೆನೆ ಮುಂತಾದ ಕೃಷಿ ಬೆಳೆಗಳನ್ನು ಇಟ್ಟು ಹಬ್ಬದಲ್ಲಿ ಹಿರಿಯರನ್ನು ಪೂಜಿಸುವುದರಿಂದ ಇದು ಕೃಷಿ ಮತ್ತು ಪ್ರಕೃತಿ ಸಂಬಂಧಿ ಆಚರಣೆಯಾಗಿ ಹಟ್ಟಿಯ ಜನಪದರಲ್ಲಿ ರೂಢಿಯಲ್ಲಿ ಉಳಿದು ಬಂದಿದೆ.

**೪.೩.೭ ದೀಪಾವಳಿ**

ಇಡಿ ನಾಡಿನಾದ್ಯಂತ ದೀಪಾವಳಿಯಲ್ಲಿ ಲಕ್ಷ್ಮೀ ಪೂಜೆ ಮಾಡಿ ಸಂಪತ್ತು ವೃದ್ಧಿಸಲಿ ಎಂದು ದೀಪ ಹಚ್ಚಿ ಆಚರಿಸುವ ಹಬ್ಬ ದೀಪಾವಳಿ. ಇತ್ತೀಚಿನ ದಿನಗಳಲ್ಲಿ ಈ ಹಬ್ಬದಲ್ಲಿ ಪಟಾಕಿಗಳನ್ನು ಹೊಡೆದು ವಿಜೃಂಬಣೆಯಿಂದ ಎಲ್ಲಾ ಕಡೆ ಆಚರಿಸುತ್ತಿದ್ದರೂ ಹಟ್ಟಿಯಲ್ಲಿ ಮಾತ್ರ ಪಟಾಕಿಗಳನ್ನು ಹೊಡೆಯುವ ಗೋಜಿಗೆ ಹೋಗದೆ ದನಕರುಗಳನ್ನೇ ತಮ್ಮ ಸಂಪತ್ತೆಂದು ಪೂಜಿಸುತ್ತಾರೆ. ಹಟ್ಟಿಯ ಜನಪದರು ತಮ್ಮ ಕಂದೆಲುಗು ಭಾಷೆಯಲ್ಲಿ ದೀಪಾವಳಿ ಹಬ್ಬವನ್ನು 'ದೂಲೆ ಪಂಡುವ' ಎಂದು ಕರೆಯುತ್ತಾರೆ. ಅಲ್ಲದೆ. ದೀವಲಿ ಎಂದೂ ಸಹ ಕರೆಯುತ್ತಾರೆ. ಈ ಹಬ್ಬದಲ್ಲಿ ಎತ್ತುಗಳನ್ನು ಓಡಿಸಿ ಧೂಳು ಎಬ್ಬಿಸುವುದರಿಂದ ದೂಲೇ ಪಂಡುವ ಎಂದು ಕರೆಯುತ್ತೇವೆ ಎಂದು ಹೇಳುತ್ತಾರೆ. ಇಡೀ ಹಟ್ಟಿಯ ಜನರೆಲ್ಲಾ ಒಂದು ಬಯಲಿನಲ್ಲಿ ಸೇರಿ ಕಂಪಳದೇವರು ಮತ್ತು ಪಾಪನಾಯಕ ದೇವರುಗಳನ್ನು ಒಂದು ಪರ್ಲಾಂಗ ಅಂತರದಲ್ಲಿ ಎದುರು ಬದಿರಿನಲ್ಲಿ ಕಂಪಳದೇವರನ್ನು ಕಾಂಸಿ ಹುಲ್ಲಿನ ಗುಡಿಸಿಲಿನಲ್ಲಿ, ಪಾಪೇದೇವರನ್ನು ಕರಿಕಂಬಳಿಯ ಗುಡಿಸಿಲಿನಲ್ಲಿ ಕೂರಿಸಿ ಪೂಜೆ ಮಾಡಿ ದೇವರ ಎತ್ತುಗಳನ್ನು ದೇವರುಗಳ ಮುಂದೆ ಓಡಿಸುವುದರ ಮೂಲಕ ದೀಪಾವಳಿಯನ್ನು ಆಚರಿಸುತ್ತಾರೆ. ಈ ಹಬ್ಬಕ್ಕೆ ಸುತ್ತ ಮುತ್ತಲ ಎಲ್ಲಾ ಹಟ್ಟಿಗಳಿಂದ ಬೇಡ ಬುಡಕಟ್ಟಿನವರು ಬರುತ್ತಾರೆ. ಜೊತೆಗೆ ತಾವು ಬೆಳೆದ ಹುರುಳಿಕಾಳು, ತಮ್ಮ ಹಸುಗಳಿಂದ ಕರೆದ ಮೀಸಲು ಹಾಲು ಮತ್ತು ಕಾಸು ತಂದು ದೇವರಿಗೆ ಅರ್ಪಿಸುತ್ತಾರೆ. ದೀಪಾವಳಿ ಹಬ್ಬ ಪಶುಪಾಲಕ ಸಂಸ್ಕೃತಿ ಮತ್ತು ಕೃಷಿ ಸಂಸ್ಕೃತಿಯ ಸಮೀಕರಣಗೊಂಡಿರುವಂತಹ ಆಚರಣೆಯಾಗಿದೆ. ಹಟ್ಟಿಯಲ್ಲಿ ವಿಶೇಷವಾಗಿ ಎತ್ತುಗಳ ಪೂಜೆ, ಅವುಗಳನ್ನು ಓಡಿಸುವುದರ ಮೂಲಕ ಮಾಡುವ ಈ ಹಬ್ಬದ ಹೆಚ್ಚು ವಿವರಣೆಯನ್ನು ಪಶುಸಂಬಂಧಿ ಆಚರಣೆಯಲ್ಲಿ ತಿಳಿಸಿರುತ್ತೇನೆ.

### ೪.೩.೮ ಸಂಕ್ರಾಂತಿ ಆಚರಣೆ

ಪ್ರಕೃತಿಯ ಆರಾಧಕರಾದ ಹಟ್ಟಿಯ ಬೇರಡು ಆದಿಯಿಂದಲೂ ಗಿಡ, ಮರ, ಹುತ್ತ, ಸೂರ್ಯ, ಚಂದ್ರ ಎಲ್ಲವನ್ನು ಪೂಜಿಸಿಕೊಂಡು ಬಂದಿದ್ದಾರೆ. ಸಾಮಾನ್ಯವಾಗಿ ಪುಷ್ಯ ಮಾಸದಲ್ಲಿ ಅಂದರೆ ಜನವರಿ ತಿಂಗಳಲ್ಲಿ ಬರುವ ಮಕರ ಸಂಕ್ರಾಂತಿಯನ್ನು ತುಂಬಾ ಸರಳವಾಗಿ ಆಚರಿಸುತ್ತಾರೆ. ಮಕರ ಸಂಕ್ರಾಂತಿಯ ಇನ್ನೊಂದು ಹೆಸರು ಉತ್ತರಾಯಣ ಪುಣ್ಯಕಾಲ ಎಂದೂ ಕರೆಯುತ್ತಾರೆ. “ಸೂರ್ಯನು ಭೂಮಿಯ ಮೇಲಿನ ಎಲ್ಲಾ ಚಟುವಟಿಕೆಗಳಿಗೂ ಆಧಾರ ಇಂತಹ ಸೂರ್ಯ ಒಂದು ರಾಶಿಯಿಂದ ಮತ್ತೊಂದು ರಾಶಿಯನ್ನು ಪ್ರವೇಶಿಸುವ ಸಂಧಿ ಕಾಲಕ್ಕೆ ‘ಸಂಕ್ರಾಂತಿ’ ಅಥವಾ ಸಂಕ್ರಮಣ ಎಂದು ಹೆಸರು. ಮಕರ ಸಂಕ್ರಾಂತಿ ದಕ್ಷಿಣಾಯನ, ಉತ್ತರಾಯಣಗಳ ಪ್ರಾರಂಭದ ದಿನಗಳಾದ್ದರಿಂದ ವಿಶೇಷ ಮಹತ್ವ ಹೊಂದಿದೆ. ಸಂಕ್ರಾಂತಿ ಒಂದು ವಿಧದಲ್ಲಿ ಸೂರ್ಯರಾಧನೆ”[೯೯]. ಈ ದಿನದವರೆಗೆ ದಕ್ಷಿಣದತ್ತ ವಾಲಿ ಚಲಿಸುತ್ತಿದ್ದ ಸೂರ್ಯ ಈ ದಿನದಿಂದ ಉತ್ತರ ದಿಕ್ಕಿಗೆ ತಿರುಗಿ ಚಲಿಸುತ್ತಾನೆ. ಸೂರ್ಯನ ಚಲನೆ ಈ ಬದಲಾವಣೆಯಿಂದ ಕೊರೆಯುವ ಚಳಿ ಕಡಿಮೆಯಾಗಿ ಹಗಲು ಹೆಚ್ಚು ಸಂಭವಿಸುತ್ತದೆ. ಹಗಲು ಹೆಚ್ಚು ಇರುವುದರಿಂದ ಕೃಷಿಕರಿಗೆ ಕೃಷಿ ಕೆಲಸ ಮಾಡಲು ಹೆಚ್ಚು ಕಾಲಾವಕಾಶ ದೊರೆಯುತ್ತದೆ. ಚಳಿ ಕಡಿಮೆಯಾಗುವುದರಿಂದಲೂ ಸಹ ದನ ಕರುಗಳ ಆರೋಗ್ಯ ಸುಧಾರಿಸುತ್ತದೆ. ಎಳ್ಳಿನ ಹಬ್ಬ ಎಂದೇ ಪ್ರಸಿದ್ಧವಾಗಿರುವ ಈ ಹಬ್ಬದಲ್ಲಿ ಎಳ್ಳು ಬೆಲ್ಲ ಅಥವಾ ಕೊಬ್ಬರಿ, ಕಡಲೆಕಾಯಿ ಇತ್ಯಾದಿ ಪರಿಕರಗಳಿಂದ ಮಿಶ್ರಮಾಡಿರುವ ಎಳ್ಳನ್ನು ಹಟ್ಟಿ ಜನ, ವಿವಾಹಿತ ಹಾಗೂ ಆ ವಿವಾಹಿತ ಹೆಣ್ಣು ಮಕ್ಕಳು ಆಪ್ತರಿಗೆಲ್ಲ ಹಂಚಿ ಬರುತ್ತಾರೆ. ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತನಾಡೋಣವೆಂದು ಪರಸ್ಪರ ಹೇಳುತ್ತಾರೆ. ಒಟ್ಟಾರೆ ಆ ಹಬ್ಬವು ಕೃಷಿಕರ ಕೃಷಿ ಆಚರಣೆಯ ಹಬ್ಬವಾಗಿದೆ. ಸೂರ್ಯನನ್ನು ಆರಾಧನೆ ಮಾಡುವುದರಿಂದ ಇದು ಪ್ರಕೃತಿ ಹಬ್ಬವೂ ಸಹ ಹೌದು.

### ೪.೪ ಪ್ರಕೃತಿಗೆ ಸಂಬಂಧಿಸಿದ ಆಚರಣೆಗಳು

ಮೂಲತಃ ಅರಣ್ಯವಾಸಿಗಳಾದ ಮ್ಯಾಸಬೇಡರು ಪ್ರಕೃತಿಯ ಆರಾಧಕರಾಗಿದ್ದಾರೆ. ಇವರು ಇಂದಿಗೂ ಸಹ ಗ್ರಾಮೀಣ ಪರಿಸರದಿಂದ ದೂರವಾಗಿ ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿರುವ ಸರ್ವ ಚೇತನವಾದಿಗಳು ಪಶುಪಾಲನೆ ಮತ್ತು ವ್ಯವಸಾಯ ಎರಡನ್ನೂ ನಂಬಿಕೊಂಡು ಜೀವಿಸುತ್ತಿರುವ ಹಟ್ಟಿಯ ಈ ಜನರ ಮೇಲೆ ನಾಡಿನ ಸಂಸ್ಕೃತಿ ಮತ್ತು ಸಂಪ್ರದಾಯಗಳ ಪ್ರಭಾವ ಆಗಿದ್ದರೂ ಕಾಡಾಡಿ ಬದುಕಿನ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಕೈ ಬಿಟ್ಟಿಲ್ಲ. ಇವರು ಆಚರಿಸುವ ಹಬ್ಬ ಜಾತ್ರೆ, ಉತ್ಸವ, ದೇವರು ಬೆಡಗು, ಕುಲ, ಬಳಿ, ಹೆಸರು ಮೊದಲಾದ ಅಂಶಗಳನ್ನು ಗಮನಿಸಿದರೆ ಮೂಲತಃ ಪ್ರಕೃತಿಯ ಆರಾಧನೆಯ ಜೊತೆಗೆ ಕಾಡಾಡಿ ಬದುಕಿನ ರೀತಿ ನೀತಿಗಳು ಇವರಲ್ಲಿ ಸ್ಪಷ್ಟವಾಗಿ ಕಾಣುತ್ತವೆ. ಇವರಲ್ಲಿ ಕಂಡು ಬರುವ ಗಿರಿಯಪ್ಪ, ಗಂಗಮ್ಮ ಕಾವಲಪ್ಪ, ಎದ್ದುಲುಬೋರಯ್ಯ, ಮೊದಲಾದ ಹೆಸರುಗಳು ಎಮ್ಮೆಯರು(ಯನುಮುಲೋರು), ಕಾವಲರು, ಗೋವಿನವರು(ಆವುಲೋರು), ಕುರಿಯವರು(ಗೊಡ್ಲಾರು),

ಮೇಕೆಯವರು(ಮ್ಯಾಕಲ್ಲಾರು), ಹಾವಿನವರು(ಪಾಮುಡಲಾರು), ಮಂದಲಾರು, ಗೋಸೇಲಾರು, ದೊಡ್ಡೆತ್ತಿನವರು ಮೊದಲಾದ ಬೆಡಗುಗಳಲ್ಲಿ ಪ್ರಕೃತಿಗೆ ಸಂಬಂಧಿಸಿದ ಹೆಸರುಗಳನ್ನು ಗುರುತಿಸಬಹುದು. ಇವರು ಆರಾಧಿಸುವ ದೈವಗಳಾದ ಗೌರಸಮುದ್ರದ ಮಾರಮ್ಮ, ಗಾದ್ರಿಪಾಲನಾಯಕ, ಜಗಳೂರು ಪಾಪನಾಯಕ, ಮೊದಲಾದ ದೇವರುಗಳ ನೆಲೆ ಪ್ರಕೃತಿಯನ್ನು ಆಧರಿಸಿವೆ. ಹಟ್ಟಿಯ ಜನಪದರು ಆಚರಿಸುವ ಗುಗ್ಗರಿ ಹಬ್ಬ ನಾಗಪ್ಪನಹಬ್ಬ, ದೀಪಾವಳಿ, ಗಿಡದ ದೇವರು, ಮಾರಮ್ಮನ ಹಬ್ಬ, ಹೊರಬೀಡು, ಚರಗ ಚೆಲ್ಲುವುದು, ರಾಶಿಪೂಜೆ, ಆಯುಧ ಪೂಜೆ, ಗಂಗೆಪೂಜೆ, ಯುಗಾದಿ ಮೊದಲಾದ ಹಬ್ಬಗಳು. ಮತ್ತು ಬಿತ್ತನೆ ಪ್ರಾರಂಭದಲ್ಲಿ ಬೀಜಗಳನ್ನು ಮೊದಲು ದೇವರಿಗೆ ಅರ್ಪಿಸಿ ಹೊಲಕ್ಕೆ ಬಿತ್ತುವುದು ಮೊದಲಾದ ಅಂಶಗಳನ್ನು ಗಮನಿಸಿದಾಗ ಈ ಜನರ ಸಂಸ್ಕೃತಿ ಮತ್ತು ಜೀವನ ವಿಧಾನದಲ್ಲಿ ಪ್ರಾಕೃತಿಕ ಶಕ್ತಿಯ ಪ್ರಭಾವವನ್ನು ಕಾಣಬಹುದಾಗಿದೆ.

ಹಟ್ಟಿಯ ಬೇಡರು ತಮ್ಮ ದೇವರುಗಳಿಗೆ ದೇವಸ್ಥಾನ(ಪೌಳಿ) ಗಳನ್ನು ನಿರ್ಮಿಸುವಾಗ ಬಳಸುವ ಹಂಚಿಹುಲ್ಲು(ಕಾಂಸೆ ಹುಲ್ಲು), ಬಾದೆ ಹುಲ್ಲು, ಬಾಳೆಪಟ್ಟೆ, ಲಕ್ಕಿಸೊಪ್ಪು. ಬಂದರಿಕೆ ಬರಲು, ಅಲ್ಲದೆ ಇವರು ಹಟ್ಟಿಯಿಂದ ಹೊರಗೆ ಗುಡ್ಲು/ದೇವರ ಪೌಳಿ ಹಾಕಿಕೊಂಡು ಹಬ್ಬ ಮಾಡುವುದು, ಹೊಸದಾಗಿ ಬೆಳೆದ ದವಸ–ಧಾನ್ಯಗಳನ್ನು ಮೊದಲು ದೇವರಿಗೆ ಮೀಸಲು ಅರ್ಪಿಸಿ ನಂತರ ಅಡುಗೆಗೆ ಬಳಸುವುದು ದೇವರುಗಳಿಗೆ ವಿಶೇಷವಾಗಿ ಅರ್ಪಿಸುವ ಹಾಲು, ಮೊಸರು, ಮಜ್ಜಿಗೆ, ತುಪ್ಪ, ಬೆಣ್ಣೆ ಬಾಳೆಹಣ್ಣು ಅನ್ನ ಹೊಂಬಾಳೆ, ಎಕ್ಕೆ, ತಂಗಟೆ ಮೊದಲಾದ ವಸ್ತುಗಳು ಕೂಡ ಪ್ರಕೃತಿಯ ಆರಾಧನೆಯ ಸಂಕೇತಗಳಾಗಿವೆ. ಜನಪದರ ಸಂಪ್ರದಾಯ ಮತ್ತು ನಂಬಿಕೆಗಳು ಇವರ ಕಾಡಾಡಿ ಬದುಕನ್ನು ತೋರಿಸುತ್ತದೆ. ಹಟ್ಟಿಯಲ್ಲಿ ಆಚರಿಸುವ ಪ್ರತಿಯೊಂದು ಧಾರ್ಮಿಕ ಆಚರಣೆಗಳಲ್ಲಿ ಕರಿಕಂಬಳಿ ಬಹಳ ಮಹತ್ವ ಪಡೆಯುತ್ತದೆ. ಹಿಂದೆ ಅಲೆಮಾರಿ ಪಶುಪಾಲಕರಾದ ಇವರು ಕಾಡಿನಲ್ಲಿ ವಾಸಿಸುತ್ತಿದ್ದ ಸಂದರ್ಭದಲ್ಲಿ ಈ ಕರಿಕಂಬಳಿ ಜೀವನಾಧಾರವಾಗಿತ್ತು ಎಂದು ತಿಳಿದು ಬರುತ್ತದೆ. ಪ್ರಾಕೃತಿಕ ಶಕ್ತಿಗಳಾದ ಸೂರ್ಯ, ಚಂದ್ರ, ಮತ್ತು ಭೂಮಿಯನ್ನು ನಂಬಿ ಬದುಕಿದ್ದ ಈ ಬುಡಕಟ್ಟು ಜನರು ಇಂದಿಗೂ ತಮ್ಮ ಹೊಲಗದ್ದೆಗಳಲ್ಲಿ ಬೆಳೆಯುವ ಬೆಳೆಗಳಿಗೆ ಯಾವುದೇ ರೀತಿಯ ತೊಂದರೆಗಳಾಗದಿರಲೆಂದು ಅಮವಾಸ್ಯೆ, ಹುಣ್ಣಿಮೆ, ಮತ್ತು ಗ್ರಹಣಗಳ ದಿನ ತಮ್ಮ ಹೊಲ ಗದ್ದೆಗಳಲ್ಲಿನ ಬೆಳೆಗಳಿಗೆ 'ಮುಸುರೆ' ಚೆಲ್ಲುವುದು, ಅಥವಾ ಬೆದರು ಗೊಂಬೆ ಇಟ್ಟು ಬರುವ ಪದ್ಧತಿಗಳಿವೆ ಅಲ್ಲದೆ. ತಮ್ಮ ಹಟ್ಟಿಯ ಸುತ್ತ ಚರಗ ಚೆಲ್ಲುವುದು ಹೊರ ಬೀಡು ಹೋಗಿ ಬರುವುದು, ಮಾರಮ್ಮಗೆ ಬೇಟೆ ಕಡಿಯುವುದು. ಹಿರಿಯರ ಹಬ್ಬ ಆಚರಿಸುವುದು ಮೊದಲಾದ ಅಂಶಗಳನ್ನು ಗಮನಿಸಿದರೆ ಮೂಲತಃ ಈ ಹಟ್ಟಿಯ ಬೇಡರು ಪ್ರಾಕೃತಿಕ ಶಕ್ತಿಯ ಆರಾಧಕರಾಗಿದ್ದರು ಎಂದು ತಿಳಿದು ಬರುತ್ತದೆ.

**೪.೪.೧ ಪಂಚಮಿ ಹಬ್ಬ(ನಾಗರ ಪಂಚಮಿ)**

ಶ್ರಾವಣ ಮಾಸದ(ಆಗಸ್ಟ ತಿಂಗಳು) ಮೂರನೇ ಶನಿವಾರ ಹಟ್ಟಿಯವರು ನಾಗಪ್ಪನ ಹಬ್ಬವನ್ನು ಆಚರಿಸುತ್ತಾರೆ. ಸರ್ವಚೇತನವಾದಿಗಳಾದ ಇವರು ಮನೆ ಬಳಿದು ನೆಲ ಸಾರಣೆ ಮಾಡಿ ಹುತ್ತ

ಅಥವಾ ನಾಗರಕಲ್ಲಿಗೆ ಕೆಲವರು ಒಂದೂತ್ತಿನಿಂದ ಹಾಲು ಎರೆದು ಪೂಜೆ ಸಲ್ಲಿಸುತ್ತಾರೆ. ಈ ಹಬ್ಬಕ್ಕೆ ಮೀಸಲು ಸಿಹಿ ಅಡುಗೆ ಮಾಡಿ ವಿಶೇಷವಾಗಿ ತಂಬಿಟ್ಟು, ಚಿಗುಳಿ, ನೆನೆಯಕ್ಕಿ ಸಜ್ಜೆಯ ಮೊಳಕೆ, ತೆಂಗಿನಕಾಯಿ, ಬಾಳೆಹಣ್ಣು ಅಂಗನೂಲು, ಕಂಕಣ, ಮೊದಲಾದ ಸಾಮಾನುಗಳನ್ನು ತೆಗೆದುಕೊಂಡು ಕುಟುಂಬ ಪರಿವಾರದವರೊಂದಿಗೆ ಹಟ್ಟಿಯ ಹೊರಗೆ ಇರುವ ನಾಗರ ಕಲ್ಲುಗಳ ಅಥವಾ ಹುತ್ತದ ಹತ್ತಿರ ಹೋಗಿ ಎಡೆ ಹಾಕಿ, ಕಾಯಿ ಒಡೆದು, ಹುತ್ತದ ಕೋಮೆಯಲ್ಲಿ ಮುತ್ತೈದೆಯರು ಮೂರು ಸಲ ಹಾಲು ಬಿಟ್ಟು ತಂಬಿಟ್ಟಿನ ಎಡೆಯನ್ನು ಕೋಮೆಯಲ್ಲಿ ಇಳಿಬಿಡುತ್ತಾರೆ. ನಾಗರ ಪ್ರತಿಮೆಗಳಿಗಾದರೆ ಅವುಗಳ ಮೇಲೆ ಮೂರು ಸಲ ಹಾಲು ಹಾಕಿ ಎಡೆ ಇಡುತ್ತಾರೆ. "ಈ ಹಬ್ಬದಲ್ಲಿ ಗೌಲಿಯ ಪಾಯಸ ಮಾಡುವುದು ನಿಷೆಧ ಕಾರಣ ಗೌಲಿಯು ಹಾವುಗಳ ಆಕಾರ ಇರುವುದರಿಂದ ನಾಗರ ಹಾವಿನ ಮೇಲೆನ ಭಯ ಅಥವ ಭಕ್ತಿಯೇ ಈ ಸಂಪ್ರದಾಯಕ್ಕೆ ಪ್ರೇರಣೆಯಾಗಿರಬೇಕು"[೨೦]. ಪರಂಪರೆಯಿಂದಲೂ ನಾಗಾರಾಧಕರಾದ ಇವರು ತಮ್ಮ ಎಲ್ಲಾ ದೈವಗಳ ಮೂರ್ತಿಗಳನ್ನು ಬೆಳ್ಳಿಯ ನಾಗರ ಎಡೆಗಳ ಆಕಾರವಾಗಿ ಮಾಡಿಸಿ ಅವುಗಳನ್ನೇ ಪೂಜಿಸಿಕೊಂಡು ಬರುತ್ತಿದ್ದಾರೆ. ಹೊಸದಾಗಿ ಮದುವೆಯಾದ ಗಂಡು ಹೆಣ್ಣು ಗಂಡಿನ ಮನೆಯಲ್ಲಿ ಆ ವರ್ಷ ಕಡ್ಡಾಯವಾಗಿ ನಾಗಪ್ಪನ ಹಬ್ಬಮಾಡಿ ಹುತ್ತಕ್ಕೆ ಹಾಲು ಹೊಯ್ದು ಸುಖ ಭೋಜನ ಮಾಡುತ್ತಾರೆ. ಇವರು ತಮ್ಮ ಪ್ರತಿ ಧಾರ್ಮಿಕ ಕಾರ್ಯಗಳಲ್ಲಿ ನಾಗರ ಪ್ರತಿಮೆಗೆ, ಹುತ್ತಕ್ಕೆ ಪೂಜೆ ಮಾಡುವ ಪದ್ಧತಿ ಉಳಿಸಿಕೊಂಡು ಬಂದಿರುವುದನ್ನು ನೋಡಿದರೆ ದ್ರಾವಿಡರಾದ ಈ ಬೇಡರು ನಾಗಾರಾಧರಕರೆಂಬುದು ಖಚಿತವಾಗುತ್ತದೆ. ನಾಗಮುರಿ ಬೆತ್ತ, ನಾಗರ ಹೆಡೆಯ ಬೆಳ್ಳಿ ಆಭರಣಗಳು ಹಟ್ಟಿಯ ಕಂಪಳರಂಗಸ್ವಾಮಿ ದೇವಸ್ಥಾನದಲ್ಲಿ ತುಂಬಾ ಹಿಂದಿನ ಕಾಲದಿಂದಲೂ ಇರುವುದು ಕಂಡು ಬರುತ್ತವೆ.

**ನಾಗಾರಾಧನೆ**

ಬೇಡರ ಹಬ್ಬ ಆಚರಣೆಗಳನ್ನು ಮತ್ತು ದೇವರ ವಿಗ್ರಹಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇವರು ನಾಗರಾಧಕರು ಎಂದು ತಿಳಿದು ಬರುತ್ತದೆ ಇವರ ದೇವಸ್ಥಾನಗಳ ಬಹುಪಾಲು ಕಂಬ, ತೊಲೆ, ಬಾಗಿಲು, ಗೋಡೆ, ಕಲ್ಲಿನ ದೀಪಸ್ತಂಭ ದೇವರ ಆಭರಣಗಳು ಪಲ್ಲಕ್ಕಿ, ಬೆತ್ತ, ಪ್ರಭಾವಳಿ ಮೊದಲಾದ ಕಡೆ ನಾಗರಹಾವಿನ ಚಿತ್ರಗಳೇ ಹೆಚ್ಚು ಕಂಡು ಬರುತ್ತವೆ. ದೇವಸ್ಥಾನದಲ್ಲಿ ದೇವರ ಆಭರಣಗಳಿಗೆ ನೆಲದಲ್ಲಿ, ಕೋಟೆ ಕೊತ್ತಲುಗಳಲ್ಲಿ ಹೂತ್ತಿಟ್ಟ ನಿಧಿಗಳಿಗೆ ಕಲ್ಲಿನಲ್ಲಿ ಕೆತ್ತಿದ ದೇವರ ಶಾಸನಗಳಿಗೆ ಸರ್ಪ ಕಾವಲಿರುತ್ತದೆ ಎಂದು ಹಿರಿಯರು ಹಲವು ಕಥೆಗಳನ್ನು ಹೇಳುತ್ತಾರೆ.

ಮ್ಯಾಸಬೇಡರ ದೇವರುಗಳಿಗೂ ಮತ್ತು ನಾಗರ ಹಾವುಗಳಿಗೆ ಪರಸ್ಪರ ಸಂಬಂಧಗಳಿವೆ ಚಳ್ಳಕೆರೆ ತಾಲ್ಲೂಕು ಗೊರ್ಲಕಟ್ಟೆಯ ಹತ್ತಿರ ಇರುವ ಜಗಳೂರು ಪಾಪನಾಯಕ ದೇವಸ್ಥಾನದಲ್ಲಿ ಹಾವಿನ ಹುತ್ತಕ್ಕೆ ಕರಿಕಂಬಳಿ ಹೊದಿಸಿ ಹುತ್ತದ ಕೋಮೆಯಲ್ಲಿ ಬೆಳ್ಳಿಯ ಛತ್ರಿ, ಕತ್ತಿ, ಕಠಾರಿ, ಚೂರಿ, ಮೊದಲಾದ ದೇವರ ಪರಿಕರಗಳನ್ನು ಹುತ್ತದಲ್ಲಿ ಸಿಕ್ಕಿಸಿ ಜಗಳೂರಜ್ಜನ ಗುಡಿ ಎಂದು ಆ ಹುತ್ತವನ್ನೇ ಪೂಜಿಸುತ್ತಾರೆ. ಆಂಧ್ರಪ್ರದೇಶದ ಆದಿವಾಸಿಗಳಾದ ಅಡವಿ ಚೆಂಚರು, ಸುಡುಗಾಡು ಸಿದ್ದರು, ಮತ್ತು ಬುಡಬುಡಕೆ

ಸಮುದಾಯದವರು ಶಾಸ್ತ್ರ ಹೇಳುವ ತಾಳೆಗರಿ ಹೊತ್ತಿಗೆಗಳಲ್ಲಿ ಬಹುಪಾಲು ನಾಗರ ಹಾವಿನ ಚಿತ್ರಗಳೇ ಹೆಚ್ಚು ಕಾಣಿಸುತ್ತವೆ. ಈ ಸಮುದಾಯದವರು ನಾಗರ ಹಾವನ್ನು ದೈವ ಸ್ವರೂಪಿಯಾಗಿ ಆರಾಧಿಸುವುದರಿಂದ ಅದನ್ನು ಒಡೆಯುವುದಾಗಲಿ, ಕೊಲ್ಲುವುದಾಗಲಿ ಮಾಡುವುದಿಲ್ಲ. ಆಕಸ್ಮಿಕವಾಗಿ ನಾಗರಹಾವುಗಳನ್ನು ಕೊಂದರೆ ಕೊಂದಂಥ ವ್ಯಕ್ತಿ ಹಾವಿನ ಬಾಯಲ್ಲಿ ಕಾಸು(ನಾಣ್ಯ) ಇಟ್ಟು ಸುಡುವ ಪದ್ಧತಿ ಇದೆ. ನಾಗರ ಹಾವು ದಾರಿಯಲ್ಲಿ ಅಡ್ಡ ಬಂದರೆ ನಾವು ಹೋಗುವ ಕೆಲಸ ಆಗುವುದಿಲ್ಲವೆಂದು ನಂಬುತ್ತಾರೆ. ಆದರೆ ಕನಸಿನಲ್ಲಿ ನಾಗರಹಾವು, ಹುತ್ತ ನಾಗರ ಕಲ್ಲುಗಳು, ಹೆಡೆ ಬಿಚ್ಚಿ ಆಡುತ್ತಿರುವ ನಾಗರಹಾವು ಕಂಡರೆ ಶುಭ ಎಂದು ಭಾವಿಸುತ್ತಾರೆ. ದೇವಸ್ಥಾನದ ಗುಬ್ಬಗಳಲ್ಲಿ ಮೂರು, ಐದು, ಏಳು ಮತ್ತು ಒಂಬತ್ತು ನಾಗರ ಹೆಡೆ ಇರುವ ಬೆಳ್ಳಿಯ ಪ್ರಭಾವಳಿಯನ್ನು ದೇವರ ಹಿಂಭಾಗ ಎದ್ದು ಕಾಣುವಂತೆ ಇಟ್ಟಿರುತ್ತಾರೆ. ಈ ಹಟ್ಟಿಯಲ್ಲಿ ನಾಗರ ಪಂಚಮಿಯನ್ನು ತಪ್ಪದೇ ಆಚರಿಸುತ್ತಾ ಬಂದಿದ್ದಾರೆ. ಹಟ್ಟಿಯಲ್ಲಿ ನಾಗರ ಪಂಚಮಿ ಹಬ್ಬದ ದಿನ ಮನೆಯ ಹಿರಿಯ ಮಗ ಅಥವಾ ಕಿರಿಯ ಮಗ ಒಂದೊತ್ತು ಇದ್ದು ಹುತ್ತಕ್ಕೆ ಹಾಲು ಎರೆದ ನಂತರ ಊಟ ಮಾಡುತ್ತಾನೆ. ಸರ್ಪಗಳಿಂದ ತೊಂದರೆಯಾಗಬಾರದು, ವಿಷಬಾಧೆ ತಟ್ಟಬಾರದು, ಎಂಬ ಉದ್ದೇಶವಾಗಿ ನಾಗರ ಪಂಚಮಿ ಮಾಡುತ್ತಾರೆ. ಅಲ್ಲದೆ ಈ ಹಬ್ಬದಲ್ಲಿ ಮನೆಯಲ್ಲಿ ಅಕ್ಕ ತಂಗಿಯರು ನಾಗರ ಮೂರ್ತಿಗಳ ಮೇಲೆ ಹಾಕಿರುವ ಅರಿಶಿಣದ ದಾರವನ್ನು ಅವರ ಸಹೋದರರ ಕೈಗಳಿಗೆ ಕಟ್ಟಿ ರಕ್ಷಾಬಂಧನ ಏರ್ಪಡಿಸಿಕೊಳ್ಳುತ್ತಾರೆ.

**೪.೪.೨ ದಸರಾ ಹಬ್ಬ(ಹಿರಿಯರ ಹಬ್ಬ)**

ಪ್ರತಿಯೊಂದು ಹಟ್ಟಿ ಅಥವಾ ಹಟ್ಟಿಯ ಜನಪದರು ಈ ದಸರಾ ಹಬ್ಬವನ್ನು ಬನ್ನಿಹಬ್ಬ, ಹಿರೇರ ಹಬ್ಬ ಎಂದು ಕರೆಯುವುದು ವಾಡಿಕೆ, ಇವರು ಸತ್ತ ತಮ್ಮ ಪೂರ್ವಿಕರು ದಸರಾದ ಶರನ್ ನವರಾತ್ರಿಯ ದಿನ ಸ್ವರ್ಗದಿಂದ ಭೂಮಿಗೆ ಬರುತ್ತಾರೆ ಎಂದು ನಂಬುತ್ತಾರೆ. ಹಿರಿಯರ ಪ್ರತಿರೂಪವಾಗಿ ಮಾಡಿಕೊಂಡಿರುವ ಮಣ್ಣಿನ ಮತ್ತು ಕಂಚಿನ ಮಗಿಗಳನ್ನು ಜೋಳ ಅಥವಾ ಅಕ್ಕಿಗಳ ಚಿಕ್ಕ ಚಿಕ್ಕ ರಾಶಿಗಳ(ನಿಧಿ) ಮೇಲೆ ಇಟ್ಟು ಅವಕ್ಕೆ ಪೂಜೆಮಾಡಿ ಆ ಹಿರೇರ ಮಗಿಗಳ ಮೇಲೆ ಹೊಸ ಬಟ್ಟೆ ಹೊದಿಸಿ ಎಡೆ ಇಡುತ್ತಾರೆ. ಹೀಗೆ ಮಾಡುವುದರಿಂದ ಅಂದು ತಮ್ಮ ಪೂರ್ವಿಕರು(ಹಿರಿಯರು) ಸ್ವರ್ಗದಿಂದ ಬಂದು ತಾವು ಬಡಿಸಿದ ಎಡೆಯನ್ನು ಸ್ವೀಕರಿಸಿ ನಮ್ಮನ್ನು ಹಾರೈಸಿ ಹೋಗುತ್ತಾರೆ ಎಂಬುದು ನಮ್ಮ ಜನಪದರ ನಂಬಿಕೆಯಾಗಿದೆ.

**ಪತ್ರೆ–ಹೂವುಗಳು**

ಹಿರಿಯರನ್ನು ಪೂಜಿಸಲು ಹಟ್ಟಿಯ ಜನರು ಮಲ್ಲಿಗೆ ಕನಕಾಂಬರಿ ಬಿಲ್ವಪತ್ರೆ ಮುಂತಾದವುಗಳನ್ನು ಬಳಸದೇ ಹಳದಿ ಬಣ್ಣದ ಹೂವುಗಳನ್ನು ಹೆಚ್ಚಾಗಿ ಬಳಸುತ್ತಾರೆ. ಅವೂ ಸಹ ಸುತ್ತಮುತ್ತಲ ಪರಿಸರದಲ್ಲಿ ಸುಲಭವಾಗಿ ದೊರೆಯುವ, ತಮ್ಮ ಹೊಲಗದ್ದೆಗಳಲ್ಲೇ ಬೆಳೆದಿರುವ ಧಾನ್ಯಗಳ ಹೂವುಗಳೇ ಆಗಿರುತ್ತವೆ. ಅವುಗಳೆಂದರೆ, ತಂಗಟಿ ಹೂವು(ಬಂಗಾರದ ಹೂವು), ಸೂರ್ಯಕಾಂತಿ ಹೂವು, ಗುರಾಳ ಹೂವು,

ಸೇವಂತಿಗೆ ಹೂವು, ಚೆಂಡು ಹೂವು. ತಂಗಟಿ ಹೂವನ್ನು ಜನಪದರು ಆಡು ಮಾತಿನಲ್ಲಿ ಬಂಗಾರದ ಹೂವು ಎಂದು ಕರೆಯುತ್ತಾರೆ. ಈ ಪತ್ರೆ ಹೂವುಗಳ ಜೊತೆ ಹಿರಿಯರ ಪೂಜೆಗೆ ತಾವು ಬೆಳೆದ ಹೊಸ ಧಾನ್ಯಗಳನ್ನು(ಸಜ್ಜೆತೆನೆ) ಸಹ ಇಡುತ್ತಾರೆ. ಈ ಸಮುದಾಯದಲ್ಲಿ ಹುಟ್ಟಿನಿಂದ ಸಾವಿನವರೆಗಿನ ಎಲ್ಲಾ ಆಚರಣೆ ಮತ್ತು ಹಬ್ಬ-ಜಾತ್ರೆಗಳಲ್ಲಿ ತಂಗಡಿ ಗಿಡ ಅತ್ಯಂತ ಮಹತ್ವದ ಪಾತ್ರ ವಹಿಸುತ್ತದೆ. ತಂಗಡಿ ಗಿಡದಲ್ಲಿ ಔಷಧೀಯ ಗುಣವಿದ್ದು ನಂಜನ್ನು ನಿವಾರಣೆ ಮಾಡುವ ಗುಣವನ್ನು ಹೊಂದಿದೆ. ಅಸುಗೂಸಿಗೆ ೧೫ ದಿನಗಳಲ್ಲಿ ಕರುಳುಬಳ್ಳಿ ಕತ್ತರಿಸಿದ ಜಾಗ ವಾಸಿಯಾಗದಿದ್ದರೆ ಅದು ನಂಜು ಆಗಿದೆ ಎಂದು ತಿಳಿದು ಅದಕ್ಕೆ ತಂಗಡಿ ಹೂವನ್ನು ಒಣಗಿಸಿ ಪುಡಿಮಾಡಿ ಕೊಬ್ಬರಿ ಎಣ್ಣೆಯಲ್ಲಿ ಬೆರಸಿ ಕರುಳು ಬಳ್ಳಿಗೆ ಹಚ್ಚುವರು ಹೀಗೆ ಮಾಡುವುದರಿಂದ ನಂಜು ವಾಸಿಯಾಗುತ್ತದೆ.

**ಬನ್ನಿ ಮುಡಿಯುವ ಪದ್ಧತಿ**

ಎಲ್ಲಾ ಊರುಗಳಲ್ಲಿ ಈ ಹಬ್ಬದ ಮೊದಲ ದಿನ ಆಯುಧಪೂಜೆ ಎರಡನೆ ದಿನ ಹಿರಿಯರ ಹಬ್ಬ ನಂತರ ಮೂರನೇ ದಿನ ಊರಿನವರೆಲ್ಲಾ ಸೇರಿ ಆ ದಿನ ಸಂಜೆ ಊರಿನ ದೇವರನ್ನು ಗುಡಿಯಿಂದ ಹೊರಡಿಸಿಕೊಂಡು ಉರುಮೆ ವಾದ್ಯ, ಅಲಗೆ, ಮೇಳ ನಂದಿಕೋಲು ಕುಣಿಸುತ್ತಾ ಊರ ಹೊರಗಿನ ಬನ್ನಿ ಮರದ ಹತ್ತಿರ ಹೋಗಿ ಪೂಜೆ ಮಾಡಿಕೊಂಡು ಬನ್ನಿಯನ್ನು ಎಲ್ಲರೂ ಪರಸ್ಪರ ಹಂಚಿಕೊಂಡು ಬನ್ನಿ ನೀಡಿ ಬಂಗಾರದ ಹಾಗೆ ಇರು ಎಂದು ಹಾರೈಸಿಕೊಳ್ಳುತ್ತಾರೆ. ವಿಶೇಷವೆಂದರೆ "ಕಂಪಳದೇವರ ಹಟ್ಟಿಯಲ್ಲಿ ಇಲ್ಲಿಯವರೆಗೆ ಎಂದೂ ಸಹ ಬನ್ನಿ ಮುಡಿಯುವುದನ್ನು ಮಾಡಿರುವುದಿಲ್ಲ. ಕೇವಲ ಅವರವರು ತಮಗೆ ತಿಳಿದ ಹಾಗೆ ಬನ್ನಿ ತಂದು ತಮ್ಮ ಹಿರಿಯರಿಗೆ ಕೊಟ್ಟು ಆಶೀರ್ವಾದ ಪಡೆಯುತ್ತಿದ್ದರು"(ಮಾಹಿತಿ: ಪೂಜಾರಿ ಚನ್ನಯ್ಯ) ಆದರೆ ಈ ಬಾರಿ(೨೦೧೪ ರಲ್ಲಿ) ಊರಿನವರೆಲ್ಲಾ ಸೇರಿ ಕೋಟೇಗುಡ್ಡದ ಮಾರಮ್ಮನನ್ನು ಹೊರಡಿಸಿ ಬನ್ನಿಯನ್ನು ಮುಡಿದದ್ದು ವಿಶೇಷ ಈ ಬನ್ನಿ ಮುಡಿಯುವ ಕಾರ್ಯಕ್ರಮ ರಾತ್ರಿಯಿಡಿ ನಡೆಯುತ್ತದೆ. ಬನ್ನಿಮರದ ಬಳಿ ಹಾಡು, ಕುಣಿತ, ನಂದಿಕೋಲು ಕುಣಿತ ಮುಂತಾದ ಚಟುವಟಿಕೆಗಳು ನಡೆಯುತ್ತವೆ.

ಪ್ರತಿ ಊರುಗಳಲ್ಲಿ ಬನ್ನಿ ಮುಡಿಯಲು ಜನರು ದೇವರೊಡನೆ ಊರ ಹೊರಗೆ ಹೋಗಿ ಬರುವಾಗ ಊರ ಮುಖ್ಯದ್ವಾರದ ಬಳಿ ಬುಡ್ಡೆಕಲ್ಲಿಗೆ ದೇವರ ಪಲ್ಲಕ್ಕಿಯ ಎದುರು ಒಂದು ಮೇಕೆ ಮರಿಯನ್ನು(ಧೂಳುಮರಿ) ಬಲಿಕೊಡುತ್ತಾರೆ. ಎರಡು ಕಡೆ ಇಬ್ಬರು ಆ ಮರಿಯ ಮುಂದಿನ ಮತ್ತು ಹಿಂದಿನ ಕಾಲುಗಳನ್ನು ಹಿಡಿದು ಬುಡ್ಡೇಕಲ್ಲಿನ ಮೇಲೆ ಎಳೆದು ನಿಂತಿರುತ್ತಾರೆ ಆಗ ಆ ಊರಿನ ತಳವಾರ ಕತ್ತಿಯಿಂದ ಅದನ್ನು ಹೊಟ್ಟೆಯ ಭಾಗಕ್ಕೆ ಎರಡು ತುಂಡು ಆಗುವಂತೆ ಕತ್ತರಿಸುತ್ತಾನೆ. ಹೀಗೆ ಮೇಕೆ ಮರಿ ಬಲಿಕೊಡುವುದರಿಂದ ಊರಿಗೆ ಒಳ್ಳೆಯದಾಗುತ್ತದೆ ಎಂದು ಹೇಳುತ್ತಾರೆ. ಆದರೆ ಬುಡ್ಡೆಕಲ್ಲೇ ಇಲ್ಲದ ಹಟ್ಟಿ ಸಂಸ್ಕೃತಿಯ ಕಂಪಳ ದೇವರ ಹಟ್ಟಿಯಲ್ಲಿ ಈ ಧೂಳುಮರಿ ಕೊಯ್ಯುವ ಪದ್ದತಿ ಇರುವುದಿಲ್ಲ. ಬೇರೆ ಊರುಗಳಲ್ಲಿ ಹೀಗೆ ಬಲಿ ಕೊಟ್ಟ ಮರಿಯ ಮಾಂಸವನ್ನು ಆ ಊರಿನ ಆಯಗಾರರಾದ ತಳವಾರ ಮಡಿವಾಳ, ಮಾದಿಗರು ಛಲವಾದಿಗಳು ಕುಂಬಾರರು ಹಂಚಿಕೊಂಡು ತಿನ್ನುತ್ತಾರೆ.

## ಬನ್ನಿ ಹಬ್ಬದ ಪೌರಾಣಿಕ ಹಿನ್ನೆಲೆ

ಯಾವುದೇ ಒಂದು ಹಬ್ಬದ ಆಚರಣೆಗೆ ಪೌರಾಣಿಕ ಐತಿಹಾಸಿಕ ಸಾಂಪ್ರದಾಯಿಕ ನಂಬಿಕೆಗಳು ಕಾರಣವಾಗಿದ್ದು ಅಲ್ಲೆಲ್ಲಾ ನಮ್ಮ ಸಾಂಸ್ಕೃತಿಕ ಪರಂಪರೆ ಅಡಕವಾಗಿರುತ್ತದೆ. ಬನ್ನಿ ಹಬ್ಬಕ್ಕಾದರೂ ಪೌರಾಣಿಕ ಹಿನ್ನೆಲೆಯಿದ್ದು ಅದನ್ನು ಜಾನಪದ ಬದುಕಿನ ನಿಟ್ಟಿನಲ್ಲಿ ನೋಡೋಣ. ಪಾಂಡವರು ಪಗಡೆಯಾಡಿ ಧರ್ಮದ ಜೂಜಾಡಿ ಸೋತು ವನವಾಸಕ್ಕೆ ಹೋಗಬೇಕಾಗುವುದು, ಹೋಗುವ ಪೂರ್ವದಲ್ಲಿ ತಮ್ಮ ಶಸ್ತ್ರಾಸ್ತ್ರಗಳನ್ನು ಬನ್ನಿ ಗಿಡಕ್ಕೆ ತೂಗು ಹಾಕಿ ಹೋಗುವರು ಬನ್ನಿ ಗಿಡದಲ್ಲಿ ಮಹಾಕಾಳಿ ವಾಸವಾಗಿದ್ದು ಆಕೆ ಅವುಗಳ ರಕ್ಷಕಳಾಗಿರುವಳು.

ಬನ್ನಿಯ ಗಿಡದಾಗ ಬಾಣ ಇಟ್ಟೇವಿ ತಾಯಿ
ಯಾರೂ ಬಂದರೂ ಕೊಡಬೇಡ । ಹಡದವ್ವ
ಅರ್ಜುನ ಬಂದರೆ ಕೊಡಬೇಕು.

ಹೀಗೆ ಬನ್ನಿ ಮಹಾಕಾಳಿಯನ್ನು ಪಾಂಡವರು ಪ್ರಾರ್ಥಿಸಿರುವರು ಅವರು ವನವಾಸದಲ್ಲಿ ಕಷ್ಟವನ್ನು ಅನುಭವಿಸಿದರೆಂಬುದಕ್ಕೆ ಈ ಕೆಳಗಿನ ತ್ರಿಪದಿಯೇ ಸಾಕು.

ಕಲ್ಲು ಕಡಬ ಮಾಡಿ ಮುಳ್ಳ ಶ್ಯಾವಿಗೆ ಮಾಡಿ
ಬನ್ನಿಯ ಎಲಿಯ ಎಡಿಮಾಡಿ । ಪಾಂಡವರು
ಉಂಡು ಹೋಗ್ಯಾರೋ ವನವಾಸೋ

ಕೇವಲ ಮೂರು ಶಬ್ದಗಳಲ್ಲಿ ಅವರ ವನವಾಸದ ತಾಪತ್ರಯ ಅರ್ಥಪೂರ್ಣವಾಗಿ ಚಿತ್ರಿತಗೊಂಡಿದೆ ಜನಪದರು ತಾವು ಅನುಭವಿಸುವ ನೈಜ ಬದುಕಿನಲ್ಲಿಯೇ ಪಾಂಡವರನ್ನು ಕಂಡಿದ್ದು ಸಮರ್ಥನೀಯವಾಗಿದೆ. ಮುಂದೆ ಪಾಂಡವರು ತಮ್ಮ ವನವಾಸ ಅಜ್ಞಾತವಾಸಗಳನ್ನು ಹೆಚ್ಚಾಗಿ ವಿರಾಟ ರಾಜ್ಯದಲ್ಲಿಯೇ ಕಳೆದರಂತೆ. ಅಂದಿನ ವಿರಾಟ ನಗರವೇ ಇಂದಿನ ನಮ್ಮ 'ಹಾನಗಲ್ಲು'(ಮೊಳಕಾಲ್ಮೂರು ಹತ್ತಿರ ಇರುವುದು) "ಅವರು ಇದ್ದು ಹೋದ ಗುಹೆಗಳು ಮಿಂದು ಹೋದ ಕೊಳಗಳು ಕರ್ನಾಟಕದಲ್ಲಿಯೇ ಹೆಚ್ಚಾಗಿವೆ." ಅದುದರಿಂದಲೇ ಪಾಂಡವರು ಕನ್ನಡಿಗರಿಗೆ ಅಪರಿಚಿತವಲ್ಲ ಈಗಲೂ ಅವರ ಮೇಲಿನ ಅಭಿಮಾನ ಕಡಿಮೆಯಾಗಿಲ್ಲ ಮುಂದೆ ಪಾಂಡವರು ತಮ್ಮ ವನವಾಸ ಮುಗಿಸಿ ಮರಳಿ ತಾವು ತಮ್ಮ ಶಸ್ತ್ರಾಸ್ತ್ರವಿಟ್ಟಿದ್ದ ಬನ್ನಿ ಗಿಡಕ್ಕೆ ಬಂದು ಮಹಾಕಾಳಿಯನ್ನು ಪೂಜಿಸಿ ತಮ್ಮ ವಸ್ತುಗಳನ್ನು ಪಡೆದು ದಿಗ್ವಿಜಯ ಸಾಧಿಸಿದ ದಿನವೇ 'ವಿಜಯ ದಶಮಿ' ದಿನವೆಂದು ಕರೆಯಲಾಗಿದೆ. ಅಂದಿನಿಂದ ಇಂದಿನ ತನಕ ಪಾಂಡವರ ವನವಾಸದ ಹಿನ್ನೆಲೆಯಲ್ಲಿ ವಿಜಯದಶಮಿ/ ಬನ್ನಿಹಬ್ಬ ಆಚರಣೆಗೊಳ್ಳುತ್ತಾ ಬಂದಿದೆ. ಈಗಲೂ ಜನರು ಶಸ್ತ್ರಾಸ್ತ್ರಗಳನ್ನು ಮೆರೆಸುತ್ತಾ ಬನ್ನಿಯ ಮುಡಿದು ಊರು ಸೇರುವರು. ವನವಾಸಕ್ಕೆ ಹೋದ ಪಾಂಡವರು ಶಸ್ತ್ರಾಸ್ತ್ರಧಾರಿಗಳಾಗಿ ಅಂದೇ ಊರನ್ನು ಸೇರಿದರೆಂದು ಪೌರಾಣಿಕ ಕಥೆ ಹೇಳುತ್ತದೆ. ಬನ್ನಿ ಮರಕ್ಕೆ ಅಂಬು ಹೊಡೆದ ನಂತರ ದೇವರ ಉತ್ಸವ ಮೂರ್ತಿಗಳನ್ನು ಹಟ್ಟಿಯಲ್ಲಿ ಮೆರವಣಿಗೆ ಮಾಡಿ ಆರತಿ ಬೆಳಗುವ ಸಂಪ್ರದಾಯ

ಹಟ್ಟಿಯ ಬೇಡರಲ್ಲಿ ಕಂಡುಬರುತ್ತದೆ. ಹೊಸದುರ್ಗ ತಾಲ್ಲೂಕು ಹಾರನಕಣಿವೆ ರಂಗಪ್ಪ, ಹೊಳಲ್ಕೆರೆ ತಾಲ್ಲೂಕು ಚಿತ್ರಹಳ್ಳಿ ಚಿತ್ರಲಿಂಗೇಶ್ವರ, ಹಿರಿಯೂರು ತಾಲೂಕು ನಂದಿಹಳ್ಳಿ ರಂಗಪ್ಪ ಮತ್ತು ಹಿರಿಯೂರು ತೇರು, ಆಡು ಮಲ್ಲೇಶ್ವರನ ಸರಪಳಿ ಹರಿಯುವುದು, ಚಿತ್ರದುರ್ಗ ಪಾಳೇಗಾರರ ಮನೆದೇವತೆಯಾದ ಉಚ್ಚಂಗಮ್ಮ ಅಥವಾ ಉತ್ಸಾವಾಂಬೆ, ಚಳ್ಳಕೆರೆ ತಾಲ್ಲೂಕು ಸಾಣಿಕೆರೆ ಗಂಜಿಗುಂಟಮ್ಮ, ಕಾಪರಹಳ್ಳಿ ಕಾಟಮ್ಮಲಿಂಗೇಶ್ವರ, ಚಳ್ಳಕೆರೆ ಚಳ್ಳಕೇರಮ್ಮದೇವಿ, ಹುರ್ಲತ್ತು ಮಾರಕ್ಕ ಪೂಜಾರಳ್ಳಿ ಬಸವಣ್ಣ, ಕೂಡ್ಲಿಗಿ ತಾಲೂಕಿನ ಕನ್ಯೆಬೋರನ ಹಟ್ಟಿಯ ಬಸವಣ್ಣ ಮೊದಲಾದ ದೇವರುಗಳ ಹಬ್ಬ ಬಹಳ ಹೆಸರುವಾಸಿಯಾಗಿದೆ.

ಬನ್ನಿಗಿಡವನ್ನು ಶಮೀವೃಕ್ಷ ಎಂದು ಕರೆಯುತ್ತಾರೆ. ಬನ್ನಿಗಿಡದ ಎಲೆಗಳು ಬಂಗಾರಕ್ಕೆ ಸಮವೆಂದೂ ವಿಜಯದ ಸಂಕೇತವೆಂದೂ ಪುರಾಣಗಳು ಸಾರುವುದು, ಆದ್ದರಿಂದ ನಮ್ಮ ಜನಪದರು ಈ ಹಬ್ಬವನ್ನು ಬನ್ನಿ ಮರವನ್ನು ಪೂಜಿಸಿ ಅದರ ಎಲೆಗಳನ್ನು ಮುಡಿಯುವರು ಅಲ್ಲದೆ ಪರಸ್ಪರ ಬನ್ನಿ ಕೊಟ್ಟು ಬಂಗಾರದ ಹಾಗೆ ಇರು ಎಂದು ಹಾರೈಸುವರು. ಹಟ್ಟಿಯ ಜನರು ಬನ್ನಿ ಗಿಡದ ಬಗೆಗೆ ವಿಶೇಷ ಗೌರವ ತಾಳಿದ್ದಾರೆ. ಅವರು ಬನ್ನಿ ಗಿಡವನ್ನು ಕಡಿಯುವುದಿಲ್ಲ. ಒಂದು ವೇಳೆ ಕಡಿದರೆ ಅಥವಾ ತಾನಾಗೇ ಒಣಗಿ ಬಿದ್ದರೆ ಅದನ್ನು ಉರುವಲಾಗಿ ಉಪಯೋಗಿಸುವುದಿಲ್ಲ. ಆ ಗಿಡದಿಂದ ಗೋದಲಿಗಂಬವನ್ನಾಗಿಯೋ, ದೇವರ ಕಂಬವನ್ನಾಗಿಯೋ, ಹೊಲದಲ್ಲಿ ಕೂರಿಗೆಯನ್ನಾಗಿಯೋ, ಕಣದಲ್ಲಿ ಮೇಟಿಯನ್ನಾಗಿಯೋ ಮಾಡುವರು ಯಾಕೆಂದರೆ ಆ ವಸ್ತುಗಳನ್ನು ಯಾರು ಕಾಲು ಮುಟ್ಟಿ ಕಾರ್ಯ ನಡೆಸುವಂತಿಲ್ಲ.

ಬನ್ನಿಯ ಗಿಡ ಕಡಿದು ಬಣ್ಣದ ಕೂರಿಗೆ ಹಾಸಿ
ಮಂಡಿ ಕಟ್ಟಿಸಿದೆ ಬಗೆ ಬಗೆದು । ಮುತ್ತೈದಿಯ
ಉಡಿಯ ತುಂಬಿಸಿದೆ ಕೂರಿಗ್ಯೂ

ಬನ್ನಿಯ ಗಿಡ ಕಡಿದು ಬಣ್ಣದ ಕೂರಿಗೆ ಮಾಡಿ
ಸಣ್ಣ ವಿಳ್ಯೆದೆಲೆ ಉಡಿತುಂಬಿ । ಪಾಂಡವರು
ಹೊನ್ನ ಬಿತ್ಯಾರೋ ಹೊಳಿಸಾಲ

ಬನ್ನಿ ಮೇಟಿಯ ಹೊಡದು ಮುನ್ನೂರು ಬಸವಾನಕಟ್ಟಿ
ಹಾಡ್ಯಾಡಿ ಹಂತಿ ಹೊಡದೇವೋ । ಬಸವಣ್ಣ
ಕಾಣದಾ ಕಂಕಿ ಉಳದಾವ.

ಇದಲ್ಲದೆ ಬನ್ನಿ ಕಂಟಿ ಹೊಲದಲ್ಲಿ ಬೆಳೆದಿದ್ದರೆ ಹೊನ್ನು ಹುಟ್ಟತೆಂದು ಭಾವಿಸಿ ಅದನ್ನು ಸವರಿ ಸರಿಯಾಗಿ ಬೆಳೆಸುವರು. ಹಿರಿಯರ ಸಮಾಧಿ ಮೇಲೆಯೂ ಆ ಗಿಡವನ್ನು ಬೆಳೆಸುವರು ಇಷ್ಟೊಂದು ಪೂಜ್ಯ ಭಾವನೆ ಬನ್ನಿ ಗಿಡದ ಬಗೆಗೆ ಅನಾದಿಕಾಲದಿಂದಲೂ ಬೆಳೆದು ಬಂದಿದ್ದು ಅದರ ಪತ್ರೆಯನ್ನು

ವಿಜಯದಶಮಿಯ ದಿನ ಪರಸ್ಪರ ಮುಡಿಯುವರಾದ್ದರಿಂದ ಬನ್ನಿ ಹಬ್ಬ ಎಂದು ಹೆಸರು ಬಂದಿರುವುದಲ್ಲದೆ ಆ ಹಬ್ಬದ ಆಚರಣೆಯ ಹಿನ್ನೆಲೆ ಇದಾಗಿದೆ. ನಮ್ಮ ಜನಪದರು ತಮ್ಮ ಕೃಷಿ ಬದುಕಿನಲ್ಲಿ ಉತ್ತು ಬಿತ್ತುವ ಕೆಲಸ ಮುಗಿದು ಬೆಳೆದ ಬೆಳೆ ಮನೆ ಸೇರುವ ಶುಭ ಸಂದರ್ಭಕ್ಕೆ ಮುನ್ನ ರೈತರಿಗೆ ಸ್ವಲ್ಪಕಾಲ ಬಿಡುವಿದ್ದು ಆ ಸಂದರ್ಭದಲ್ಲಿ ಆಚರಿಸುವ ಈ ಹಬ್ಬ ಜನಪದರ ಬದುಕಿನಲ್ಲಿ ಪ್ರಕೃತಿ ಹಾಗೂ ದೈವ ಕುರಿತಾದ ನಂಬಿಕೆಯ ಸಂಪ್ರದಾಯಕ್ಕೆ ಸಂಬಂಧಿಸಿದ್ದಾಗಿದೆ. ಹೀಗೆ ಹಟ್ಟಿಯ ಜನರು ಹಲವಾರು ಹಿನ್ನೆಲೆಗಳಲ್ಲಿ ವಿಜಯದಶಮಿಯನ್ನು/ಬನ್ನಿ ಹಬ್ಬವನ್ನು ವಿವಿಧ ಕಾರಣಗಳಿಂದಾಗಿ ತಾವು ನಂಬಿದಂತೆ ಆಯಾ ಪ್ರಾದೇಶಿಕತೆಗನುಗುಣವಾಗಿ ಆಚರಿಸುವ ಸಂಪ್ರದಾಯ ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿದೆ.

ಆಶ್ವಯುಜ ಶುಕ್ಲ ಪ್ರತಿಪದ(ಪಾಡ್ಯ) ಯಿಂದ ಹಿಡಿದು ದಶಮಿಯತನಕ ಆಚರಿಸುವ ಈ ಹಬ್ಬದಲ್ಲಿ ನಾಲ್ಕು ಹಂತಗಳಿವೆ.

ಮೊದಲನೆಯದಾಗಿ ಮಹಾನವಮಿ, ಅಮವಾಸ್ಯೆಯ ನಂತರ ಪ್ರತಿಪದ, ದ್ವಿತಿಯ, ತೃತಿಯಗಳೆಂದು ಮೂರು ದಿನ ರೋಗ–ದಾರಿದ್ರ್ಯ–ದುಃಖ–ದುಮ್ಮಾನಗಳ ನಿವಾರಣೆಗಾಗಿ ದುರ್ಗಾಪೂಜೆಯನ್ನು ಕೈಗೊಳ್ಳುವರು. ಎರಡನೆಯದಾಗಿ ಚತುರ್ಥಿ, ಪಂಚಮಿ, ಷಷ್ಠಿ ಈ ಮೂರು ದಿನ ಸುಖ ಸಂಪತ್ತು ಅಭಿವೃದ್ಧಿಗೊಳ್ಳಲು ಮಹಾಲಕ್ಷ್ಮಿಯನ್ನು ಪೂಜಿಸುವರು. ಮೂರನೆಯದಾಗಿ ಸಪ್ತಮಿ, ಅಷ್ಟಮಿ, ನವಮಿ ಈ ಮೂರು ದಿನ ವಿದ್ಯೆ, ಬುದ್ಧಿ ಜ್ಞಾನಗಳು ವೃದ್ದಿಯಾಗಲೆಂದು ಸರಸ್ವತಿಯನ್ನು ಪೂಜಿಸುವರು. ಹೀಗೆ ಮೂರು ಹಂತಗಳಲ್ಲಿ ಶಕ್ತಿ ಪೂಜೆ ಒಂಬತ್ತು ದಿನಗಳವರೆಗೆ ನಡೆಯುವುದರಿಂದ ಈ ಹಬ್ಬಕ್ಕೆ ನವರಾತ್ರಿ, ಮಹಾನವಮಿ ಎಂದೂ ಕರೆಯುವರು. ನಾಲ್ಕನೆಯದಾಗಿ ಈ ಹಬ್ಬದ ಪರಿಸಮಾಪ್ತಿಯೆಂಬಂತೆ ಬರುವ ಹತ್ತು ರಾತ್ರಿಗಳ ಹಬ್ಬಾಚರಣೆ ದಸರಾ/ದಶಮಿ ಎಂದು ಹೆಸರು ಇದರಿಂದಲೇ ಬಂದಿದೆ. ಅಂದು ದೇವಿಯ ಮೆರವಣಿಗೆ ಉತ್ಸವ, ಬನ್ನಿ ಪೂಜೆ ಮುಂತಾದವುಗಳು ಜರುಗುವುದರೊಂದಿಗೆ ಈ ಹಬ್ಬ ಮುಕ್ತಾಯಗೊಳ್ಳುವುದು.

ನಾವು ಆಚರಿಸುವ ಪ್ರತಿಯೊಂದು ಹಬ್ಬವೂ ನಮ್ಮ ಧಾರ್ಮಿಕ ಜೀವನದ ಒಂದು ಅಂಗವಾಗಿದೆ. ಪ್ರತಿವರ್ಷವೂ ಅವು ಬರುತ್ತಿದ್ದು ಸಡಗರದಿಂದ ನಾವು ಆಚರಿಸುತ್ತಲೇ ಬಂದಿರುವೆವು. ಇವುಗಳ ಆಚರಣೆಯಿಂದ ಆಧ್ಯಾತ್ಮಿಕ ವಿಚಾರ ಬೆಳೆಯುತ್ತಿದ್ದ ಆ ಕಾಲದಲ್ಲಿ ನಡೆಸುವ ಉಪವಾಸ ವ್ರತಗಳು ಆರೋಗ್ಯ ದೃಷ್ಟಿಯಿಂದ ಒಳ್ಳೆಯದ್ದಾಗಿವೆ, ಮಾನಸಿಕ ನೆಮ್ಮದಿಯೂ ಇವುಗಳಿಂದ ಬೆಳೆಯುವುದು. ಈ ಹಬ್ಬ ವ್ರತಗಳ ಹಿನ್ನೆಲೆಯಲ್ಲಿ ದುಷ್ಟಶಕ್ತಿಯ ದಮನ ಹಾಗೂ ಶಿಷ್ಟಶಕ್ತಿಯ ವಿಜಯದ ತಾತ್ಪರ್ಯವೂ ಅಡಗಿದೆ. ಬಹುಮಟ್ಟಿಗೆ ಹಬ್ಬ ಉತ್ಸವಗಳೆಲ್ಲದರ ಸಂಬಂಧವಾಗಿರುವ ಕಥೆಗಳು ಈ ತತ್ವವನ್ನೇ ಪ್ರತಿಪಾದಿಸುತ್ತವೆ. ದಸರಾ ಹಬ್ಬವೂ ನೇರವಾಗಿ ಇದೇ ತತ್ವವನ್ನು ಒಳಗೊಂಡಿದೆ.

ವಿಜಯದಶಮಿಯನ್ನು ಇಡಿ ಭಾರತವೇ ಆಚರಿಸುತ್ತದೆ. ಕನ್ನಡಿಗರಿಗಂತೂ ಇದು ಮಹತ್ವದ ಹಬ್ಬವೆನಿಸುತ್ತದೆ. ವಿಜಯನಗರ, ಕಿತ್ತೂರು, ಮೈಸೂರು, ಅರಸರ ಕಾಲದಿದಂಲೂ ಈ ಹಬ್ಬದ

ವೈಭವವನ್ನು ಕನ್ನಡಿಗರು ಅನುಭವಿಸುತ್ತಾ ಬಂದಿದ್ದಾರೆ. ಅದುದರಿಂದಲೇ ಇದನ್ನು ನಾಡಹಬ್ಬವೆಂದೂ ಕರೆಯುವರು. ಬನ್ನಿ ಮುಡಿಯುವ ಕಾರ್ಯ ಮನೆಮಂದಿಗೆ ಸೀಮಿತವಾಗಿರದೆ ಇಡಿ ಮಾನವ ಜನಾಂಗಕ್ಕೆ ಮುಡಿಯಬಹುದಾಗಿದ್ದರಿಂದ ಪರಸ್ಪರರಲ್ಲಿ ಬನ್ನಿ ಮುಡಿಯುವಾಗ ಪ್ರೀತಿ, ವಿಶ್ವಾಸ, ಸಹಕಾರ ಭಾವನೆಗಳು ಹೆಚ್ಚಾಗಲು ಕಾರಣವೆನಿಸುತ್ತದೆ. ಜಾತೀಯತೆ ಅಳಿದು ಮಾನವ ಜನಾಂಗ ಒಂದೆ ಎಂದು ಸಾರಲು ಬನ್ನಿ ಹಬ್ಬದ ಆಚರಣೆಗಳೇ ಸಾಕ್ಷಿ.

**೪.೪.೩ ಇತರೆ ಆಚರಣೆಗಳು**

ಪ್ರತಿಯೊಂದು ಸಮುದಾಯದಲ್ಲೂ ಆ ಸಮುದಾಯಕ್ಕೆ ವಿಶೇಷವಾದ ಕೊಡುಗೆಯನ್ನು ನೀಡಿದ ವ್ಯಕ್ತಿ ಆ ಸಮುದಾಯದ ಸಾಂಸ್ಕೃತಿಕ ನಾಯಕ ಅಥವಾ ನಾಯಕಿಯಾಗಿ ಗುರುತಿಸಿಕೊಂಡಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಸಾಂಸ್ಕೃತಿಕ ನಾಯಕರಾಗಿ ಗುರುತಿಸಿಕೊಂಡ ವ್ಯಕ್ತಿಗಳು ಕಾಲಾಂತರದಲ್ಲಿ ಅಲ್ಲಿಯ ಜನಮನದಲ್ಲಿ ದೈವಿಕ ಸ್ಥಾನವನ್ನು ಪಡೆಯುತ್ತಾರೆ. ಹೀಗೆ ದೈವತ್ವವನ್ನು ಪಡೆದುಕೊಂಡಾಗ ಆ ಸಮುದಾಯ ಅವರನ್ನು ಅರಾಧನೆ ಮಾಡಲು ಪ್ರಾರಂಭಿಸುತ್ತದೆ, ಹೀಗೆ ಒಬ್ಬ ವ್ಯಕ್ತಿ ಸಾಮಾನ್ಯನಾಗಿ ಹುಟ್ಟಿ ಅಸಾಮಾನ್ಯ ಪವಾಡ/ಕೆಲಸವನ್ನು ಸಮುದಾಯಕ್ಕೋಸ್ಕರ ಮಾಡಿ ಮಡಿದಾಗ ಅವನು ಆ ಸಮುದಾಯದ ಸಾಂಸ್ಕೃತಿಕ ನಾಯಕನಾಗಿ, ದೈವವಾಗಿ ಆರಾಧನೆಗೊಳ್ಳುತ್ತಾನೆ. ರಾಮ, ಬುದ್ದ, ಬಸವ, ಕ್ರಿಸ್ತ ಮುಂತಾದವರು ಇದೇ ರೀತಿ ದೈವತ್ವಕ್ಕೇರಿದವರು. ಅವರಂತೆಯೇ ಬೇಡಸಮುದಾಯದಲ್ಲಿ ಹುಟ್ಟಿ ಪಶುಪಾಲನೆ ಮಾಡಿ ಸಮುದಾಯದ ಕಲ್ಯಾಣಕ್ಕೆ, ಪಶುಗಳ ರಕ್ಷಣೆಗೆ ಶ್ರಮಿಸಿ ಮಡಿದ ಜಗಳೂರು ಪಾಪನಾಯಕ, ಗಾದರಿ ಪಾಲನಾಯಕ, ದಡ್ಡಿಕಾಮನಾಯಕ ಮುಂತಾದವರು ಇಂದು ಈ ಸಮುದಾಯದ ದೈವಗಳಾಗಿ ಆರಾಧನೆಗೊಳ್ಳುತ್ತಿದ್ದಾರೆ. ಇವರ ಬಗೆಗೆ ನಾವು ಸಮಗ್ರವಾಗಿ ಅರಿಯಬೇಕಾದರೆ. ಅವರ ಬಗೆಗೆ ಲಭ್ಯವಿರುವ ಮೌಖಿಕ ಕಥನಗಳನ್ನು ಅರ್ಥಮಾಡಿಕೊಳ್ಳುವುದರೊಂದಿಗೆ ಅರಾಧಿಸುವ ಆಚರಣೆಗಳನ್ನು ಗಮನಿಸಿ ಗ್ರಹಿಸುವುದು ಅಗತ್ಯವಾಗಿದೆ. ಆಗ ಅವರ ಮತ್ತು ಸಮುದಾಯದ ಪರಂಪರೆಯ ಸಮಗ್ರ ಚಿತ್ರಣ ಗ್ರಹಿಸಲು ಸಾಧ್ಯ. "ಪುರಾಣ ಮತ್ತು ಆಚರಣೆಗಳು ದೇವತೆಯ ಅಧ್ಯಯನದಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ದೇವತೆಗೆ ಸಂಬಂಧಿಸಿದ ಸೈದ್ಧಾಂತಿಕ ಭಾಗ ಪುರಾಣವಾದರೆ, ಅದಕ್ಕೆ ಸಂಬಂಧಿಸಿದ ಕ್ರಿಯಾ ಭಾಗವೇ ಆಚರಣೆ ಆಗುತ್ತದೆ ಎಂದು ಹೇಳುತ್ತಾರೆ"[೨೧]. ಯಾವುದೇ ವ್ಯಕ್ತಿ/ಸಾಂಸ್ಕೃತಿಕ ನಾಯಕರ ಕಥನಗಳನ್ನು ಕೇವಲ ಮೌಖಿಕ ಕಥೆಯಲ್ಲಿ ತಿಳಿಯದೇ ಆಚರಣೆಯಲ್ಲಿ ಅರಿಯುವುದು ಸೂಕ್ತ. ಸಾಂಸ್ಕೃತಿಕ ನಾಯಕರ ಬಗೆಗಿನ ಕಥೆಗಳು ಹೇಳಲ್ಪಡುತ್ತಿರುವಾಗ ಆ ಕಥೆನಗಳಲ್ಲಿ ಮೂಲ ಯಾವುದು ನಂತರದ್ದು ಯಾವುದು ಎಂಬ ಜಿಜ್ಞಾಸೆ ಸಹಜವಾಗಿಯೇ ಮೂಡುತ್ತದೆ. ಆದರೆ ಆಚರಣೆ ಆರಾಧನೆಗಳ ಮೂಲಕ ಕಥೆಯ ಮೂಲವನ್ನು ಹಿಡಿದಿಡಲು ಸಾಧ್ಯವಾಗುತ್ತದೆ. ಅಲ್ಲದೆ ಈ ಆಚರಣೆಗಳ ಮೂಲಕ ಆಯಾ ಸಾಂಸ್ಕೃತಿಕ ನಾಯಕನ, ಸಮುದಾಯದ ಸಾಂಸ್ಕೃತಿಕ ಲಕ್ಷಣಗಳನ್ನು ಅರ್ಥೈಸಿಕೊಳ್ಳಲು ಇದು ಅನುವು ಮಾಡಿ ಕೊಡುತ್ತದೆ. ಇಡಿ ಸಮುದಾಯವೇ ಇಲ್ಲಿ ಪಾಲ್ಗೊಳ್ಳುವುದರ ಮೂಲಕ ತಮ್ಮ ಸಾಂಸ್ಕೃತಿಕ, ಸಾಮುದಾಯಿಕ ಒಗ್ಗಟ್ಟನ್ನು ಕಾಪಾಡಿಕೊಂಡು ಬರಲೂ ಸಾಧ್ಯವಾಗುತ್ತದೆ.

ಎಲ್ಲಾ ಮ್ಯಾಸಬೇಡರಲ್ಲಿ ಪ್ರಚಲಿತವಿರುವ ಸಾಂಸ್ಕೃತಿಕ ನಾಯಕರೇ ಕಂಪಳದೇವರ ಹಟ್ಟಿಯಲ್ಲಿಯೂ ಸಹ ಆರಾಧನೆಗೊಳ್ಳುತ್ತಿದ್ದಾರೆ. ಅವುಗಳೆಂದರೆ ಜಗಳೂರು ಪಾಪನಾಯಕ, ಗಾದ್ರಿಪಾಲನಾಯಕ, ದಡ್ಡಿಕಾಮನಾಯಕ ಮುಂತಾದ ದೈವಗಳು ಆಚರಣೆಗೆ ಒಳಪಡುತ್ತವೆ. ಈ ಸಾಂಸ್ಕೃತಿಕ ನಾಯಕರ ಆಚರಣೆಯಲ್ಲಿ ಇಡಿ ಸಮುದಾಯ ಸಂಭ್ರಮ ಭಕ್ತಿಯಿಂದ ಪಾಲ್ಗೊಳ್ಳುತ್ತದೆ. ಈ ಆಚರಣೆಗಳಲ್ಲಿರುವ ವಿಶಿಷ್ಟತೆ ಹಾಗೂ ವೈರುಧ್ಯ ಹಾಗೂ ಅದಕ್ಕಿರುವ ಕಾರಣಗಳನ್ನು ಅರ್ಥಮಾಡಿಕೊಳ್ಳುವುದು ಅಗತ್ಯ. ಕಂಪಳದೇವರ ಹಟ್ಟಿಯಲ್ಲಿರುವ ಸಾಂಸ್ಕೃತಿಕ ನಾಯಕರ/ದೈವಗಳಲ್ಲಿ ಗಾದ್ರಿಪಾಲನಾಯಕ, ದಡ್ಡಿಕಾಮನಾಯಕ ಮತ್ತು ಜಗಳೂರು ಪಾಪನಾಯಕರುಗಳಲ್ಲಿ ಪ್ರಸ್ತುತ ನಾನು ಜಗಳೂರು ಪಾಪನಾಯಕನ ಆಚರಣೆಯ ಕುರಿತು ಚರ್ಚಿಸಲು ಹೊರಟಿದ್ದೇನೆ.

**೧ ಜಗಳೂರು ಪಾಪನಾಯಕನ ಆಚರಣೆ**

ಪ್ರತಿಯೊಂದು ಬುಡಕಟ್ಟು ಸಮುದಾಯವು ತಮ್ಮದೇ ಆದ ದೈವಗಳಿಗೆ, ಸಾಂಸ್ಕೃತಿಕ ನಾಯಕರುಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಕಥನ ಕಾವ್ಯಗಳನ್ನು ಹೊಂದಿರುತ್ತವೆ. ಹಟ್ಟಿಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯದ ಹಿರಿಯ ಮಹಿಳೆಯರು, ಪುರುಷರು ಇಂತಹ ಕಾವ್ಯಗಳನ್ನು ಸುದೀರ್ಘವಾಗಿ ಹಾಡುತ್ತಾರೆ. ಇಂದು ಬುಡಕಟ್ಟುಗಳ ಕಾವ್ಯ ಅಥವಾ ಕಥನಗಳನ್ನು ಕೇವಲ ಮನೋರಂಜನಾ ದೃಷ್ಟಿಯಿಂದ ನೋಡದೆ ಅವರು ಆಚರಿಸುವ ಆಚರಣೆಗಳಲ್ಲಿ ತಮ್ಮ ಸಾಂಸ್ಕೃತಿಕ ನಾಯಕರ ಚರಿತ್ರೆ ಅನಾವರಣಗೊಳ್ಳುವುದನ್ನು ಅರ್ಥೈಸಿಕೊಳ್ಳುವುದರ ಅಗತ್ಯತೆ ಇದೆ. ಆಚರಣೆಗಳನ್ನು ಅರ್ಥೈಸಿಕೊಳ್ಳುವುದರ ಮೂಲಕ ಆಯಾ ಬುಡಕಟ್ಟು ಸಮುದಾಯದ ಇತಿಹಾಸ, ಪುರಾಣ, ಸಮಾಜಶಾಸ್ತ್ರ ಮತ್ತು ಮಾನವ ಶಾಸ್ತ್ರಗಳನ್ನು ಪ್ರವೇಶ ಮಾಡಬಹುದು. ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡರಲ್ಲಿ ಅನೇಕ ಮೌಖಿಕ ಕಾವ್ಯಗಳು ದೊರೆಯುತ್ತವೆ. ಈ ಬುಡಕಟ್ಟು ಮಹಾಕಾವ್ಯಗಳು ಆದಿಮ ಸಂಸ್ಕೃತಿಯ ಹಲವು ಮಜಲುಗಳನ್ನು ನಮ್ಮ ಮುಂದೆ ತೆರೆದಿಡುತ್ತವೆ.

ಪ್ರಾಚೀನ ಮಾನವನ ಆಹಾರ ಸಂಗ್ರಹಣೆ ಪದ್ದತಿ, ಬೇಟೆ, ಪಶುಸಂಗೋಪನೆ ನಂತರ ಕೃಷಿ ಮುಂತಾದವುಗಳನ್ನು ಮತ್ತು ಸಮುದಾಯಗಳ ಮಧ್ಯ ನಡೆದ ಆರ್ಥಿಕ ಮತ್ತು ಸಾಂಸ್ಕೃತಿಕ ಘರ್ಷಣೆಗಳು ಇವರ ಕಾವ್ಯಗಳಲ್ಲಿ ಪ್ರಸ್ತಾಪವಾಗುತ್ತವೆ, ಮಾತ್ರವಲ್ಲ ಈ ಎಲ್ಲಾ ಕಥನದ ಸಾರಾಂಶದ ತುಣುಕುಗಳು ಇವರು ಆಚರಿಸುವ ದೈವಾಚರಣೆಗಳಲ್ಲಿ ಅಭಿವ್ಯಕ್ತಿಗೊಳ್ಳುವುದನ್ನು ಗಮನಿಸಬಹುದು. ಅಂದಿನ ಕಥನದ ವಸ್ತುಸ್ಥಿತಿಯನ್ನು ಇಂದಿನ ಆಚರಣೆಗಳಿಂದ ಅರಿಯಬಹುದು. ಪ್ರಸ್ತುತ ಮ್ಯಾಸಬೇಡರಲ್ಲಿ ಪ್ರಚಲಿತವಿರುವ ಜಗಳೂರು ಪಾಪನಾಯಕನ ಕಥೆಗೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರ ಹಟ್ಟಿ ಮತ್ತು ಜಗಳೂರು ತಾಲ್ಲೂಕು ಜಗಳೂರಿನಲ್ಲಿ ಹದಿನೈದು ವರ್ಷಗಳ ನಂತರ ನಡೆದ ಆಚರಣೆಯಲ್ಲಿ ಅನಾವರಣಗೊಳ್ಳುವುದನ್ನು ವಿವರಿಸಲು ಹೊರಟಿದ್ದೇನೆ. ಮ್ಯಾಸಬೇಡರ ಸಾಂಸ್ಕೃತಿಕ ನಾಯಕನಾದ ಜಗಳೂರು ಪಾಪನಾಯಕನ ಕುರಿತಾದ ಸುದೀರ್ಘ ಕಥನ ಬಳಕೆಯಲ್ಲಿದೆ. ಈ ಪಾಪನಾಯಕನ ದೇವಸ್ಥಾನಗಳು/ಪೌಳಿಗಳು ಕರ್ನಾಟಕದಾದ್ಯಂತ

ಹಲವು ಕಡೆ ಇವೆ. ಈತನ ಕುರಿತಾದ ಕಥೆಯನ್ನು ಸೂಕ್ಷ್ಮವಾಗಿ ತಿಳಿಸಿ ನಂತರ ಈ ಕಥೆ ಆಚರಣೆಯಲ್ಲಿ ಅನಾವರಣಗೊಳ್ಳುವುದನ್ನು ತಿಳಿಸುವ ಪ್ರಯತ್ನಮಾಡುವೆ. ಅನೇಕ ಬುಡಕಟ್ಟುಗಳಲ್ಲಿ ಲಭ್ಯವಿರುವ ಕಥನ ಕಾವ್ಯಗಳು ಆಯಾ ಸಮುದಾಯದ ಚಿತ್ರಣವನ್ನು ಸೂಚಿಸುವಂತವುಗಳೆಂದು ಹೇಳಬಹುದು. ಕಾಡುಗೊಲ್ಲರಲ್ಲಿ ಜುಂಜಪ್ಪನಕಾವ್ಯ, ಅಲೆಮಾರಿ ಕುರುಬರ ಮಾಳಿಂಗರಾಯನ ಕಾವ್ಯ, ಸೋಲಿಗರ ಬಿಳಿಗಿರಿ ರಂಗಯ್ಯನ ಕಾವ್ಯ ಮುಂತಾದ ಕಾವ್ಯಗಳಂತೆ ಮ್ಯಾಸಬೇಡರಲ್ಲಿ ಹಲವಾರು ಕಥನ ಕಾವ್ಯಗಳು ಲಭ್ಯವಿದ್ದು ಅವುಗಳಲ್ಲಿ ಜಗಳೂರು ಪಾಪನಾಯಕನ ಕಾವ್ಯವೂ ಒಂದು. ಜಗಳೂರು ಪಾಪನಾಯಕ ಈ ಸಮುದಾಯದಲ್ಲಿ ಹುಟ್ಟಿ ಪವಾಡಗಳನ್ನು ಮಾಡಿ ಇವರ ದೈವವಾಗಿ ಇಂದು ಆರಾಧನೆಗೊಳ್ಳುತ್ತಿದ್ದಾನೆ ಎಂಬುದಕ್ಕೆ ಅನೇಕ ಪುರಾವೆಗಳು ಮೌಖಿಕವಾಗಿ ದೊರೆಯುತ್ತವೆ. ಅಲ್ಲದೆ ಅವನು ಸಂಚರಿಸಿದ ಸ್ಥಳಗಳು, ಹಟ್ಟಿಗಳು ಇಂದಿಗೂ ಇರುವುದರಿಂದ ಪಾಪನಾಯಕ ದೇವರೆಂದು ಪೂಜೆಗೊಳ್ಳುತ್ತಿರುವ ಈತ ಒಂದು ಕಾಲದಲ್ಲಿ ಬೇಡಸಮುದಾಯದಲ್ಲಿ ಹುಟ್ಟಿ ಪಶುಪಾಲನೆ ಮಾಡುತ್ತಾ ಕರ್ನಾಟಕದ ಅನೇಕ ಕಡೆ ಪಶುಗಳನ್ನು ಮೇಯಿಸುತ್ತಾ ಹಲವಾರು ಪವಾಡಗಳನ್ನು ಮಾಡಿ ಸೋದರ ಸಮುದಾಯವಾದ ಕಾಡುಗೊಲ್ಲರ ಜೊತೆ ಸಂಘರ್ಷ ಕಟ್ಟಿಕೊಂಡು ಕೊನೆಗೆ ಜಗಳೂರಿನಲ್ಲಿ ಮರಣ ಹೊಂದಿರುವ ಕಥೆಯನ್ನು ತುಂಬಾ ಸುದೀರ್ಘವಾಗಿ ಇವರು ಹಾಡು, ಕಥೆಗಳ ಮೂಲಕ ಹೇಳುತ್ತಾರೆ. "ಒಂದು ಸಮುದಾಯದಲ್ಲಿ ಅದರ ಸಾಕ್ಷಿ ಪ್ರಜ್ಞೆಯಂತೆ ಕಾಣಿಸಿಕೊಳ್ಳುವ ಒಬ್ಬ ನಾಯಕನ ಹುಟ್ಟು ಆ ಸಮುದಾಯದ ಒಳಗೆ ಒಂದು ವೈಚಾರಿಕ ಆವರಣವನ್ನು ಸೃಷ್ಟಿಸುತ್ತದೆ ಆ ಮೂಲಕ ಅದು ಪ್ರಭುತ್ವವು ಹುಟ್ಟು ಹಾಕಿದ ಬೌದ್ಧಿಕ ಶೂನ್ಯತೆಯನ್ನು ಸ್ಫೋಟಿಸಲು ಯತ್ನಿಸುತ್ತದೆ"[೨]. ಎಂಬ ಮಾತಿನಂತೆ ಒಬ್ಬ ವ್ಯಕ್ತಿಯ ಕಥನದಿಂದ ಅಂದಿನ ಸಾಮಾಜಿಕ ಸ್ಥಿತಿ, ಪ್ರಭುತ್ವದ ಅರಿವು ನಮಗಾಗುತ್ತದೆ. ಜಗಳೂರಜ್ಜನ ಕಾವ್ಯ ಅಥವಾ ಪಾಪನಾಯಕನ ಕಾವ್ಯದಲ್ಲಿ ಪಾಪನಾಯಕನು ಮೂಲತಃ ಶೈವನಾಗಿದ್ದು ಬೇಡ ಸಮುದಾಯದ ಪಶುಪಾಲಕನಾಗಿರುತ್ತಾನೆ. ಪಶುಪಾಲಕರಾದ ಕೊರಿಮಲ್ಲನಾಯಕ ಮತ್ತು ಬಾಳಾರಪಟ್ಟಮ್ಮ ದಂಪತಿಗಳ ಮಗನಾಗಿ ಕಾಲುಮುಂದುಮಾಡಿ ಹುಟ್ಟಿದ ಮಗನೇ ಈ ಪಾಪನಾಯಕ. ಇವನು ಕಾಲು ಮುಂದುಮಾಡಿ ಹುಟ್ಟಿದ್ದರಿಂದ ಹೆರಿಗೆಯಾದ ಆ ಕಾವಲು ಪ್ರದೇಶಕ್ಕೆ ಕಾಡ್ಲಕುಂಟೆ ದಿಬ್ಬ(ಕಾಲಿನಕುಂಟೆ ದಿಬ್ಬ) ಎಂದು ಕರೆಯುತ್ತಾರೆ. ಅದು ಈಗಲೂ ಇದೆ. ಇವನು ತಾಯಿಯ ಗರ್ಭದಲ್ಲಿ ಇದ್ದಾಗಲೇ ಮಾತಾಡಿದ್ದರಿಂದ ಪಿಶಾಚಿಯೆಂದು ತಿಳಿದು ತಂದೆ ತಾಯಿಗಳು ಇವನನ್ನು ಹೆರಿಗೆಯಾದ ಸ್ಥಳದಲ್ಲೇ ಬಿಟ್ಟು ಹೋಗುತ್ತಾರೆ. ನಂತರ ಶಿವ ಪಾರ್ವತಿಯರು ಅಲ್ಲಿ ಬಂದು ತೊಟ್ಟಿಲು ಕಟ್ಟಿ ಜೇನು ತುಪ್ಪ ಬಾಯಿಗೆ ಬೀಳುವಂತೆ ಮಾಡಿ ಹೋಗುತ್ತಾರೆ. ನಂತರ ಅವನು ಬೆಳೆದು ದೊಡ್ಡವನಾಗುತ್ತಾನೆ ಎಂದು ಕಥೆಯಿದೆ. ಹೀಗೆಯೇ ದೈವಪ್ರೇರಣೆಯಿಂದ ಕಾಡಿನಲ್ಲಿ ಬೆಳೆದ ಪಾಪನಾಯಕನು ಹಾವಿನ ಸ್ನೇಹ ಮಾಡಿ ನಾಗಮುರಿಬೆತ್ತವನ್ನು ಪಡೆಯುತ್ತಾನೆ.

ನಾಗಮುರಿಬೆತ್ತವೇ ಅವನ ಆಯುಧವಾಗಿರುತ್ತದೆ. ಪಶುಪಾಲನೆ ಮಾಡುತ್ತಾ ಇಡಿ ಕರ್ನಾಟಕವನ್ನು ಸುತ್ತುತ್ತಾನೆ. ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚು ಸುತ್ತಿದ್ದಾನೆ ಎಂಬುದಕ್ಕೆ ಸಾಕ್ಷೀಭೂತವಾಗಿ ಅವನ ಬಗ್ಗೆ ಹೇರಳ ಕಥೆಗಳು ದೊರೆಯುತ್ತವೆ. ಅಲ್ಲದೆ ಈ ಭಾಗದಲ್ಲಿ ಮ್ಯಾಸಬೇಡರ ಹಟ್ಟಿಗಳು ಹೆಚ್ಚಾಗಿವೆ.

ಅನೇಕ ಸಾಹಸ ಪವಾಡಗಳನ್ನು ಮಾಡುತ್ತಾ ಪಶುಪಾಲನೆ ಮಾಡುತ್ತಿದ್ದ ಇವನು ಕಾಡುಗೊಲ್ಲರೊಡನೆ ಸಂಘರ್ಷ ಮಾಡಿ ನಂತರ ಹೊಂದಾಣಿಕೆ ಮಾಡಿಕೊಂಡಿರುತ್ತಾನೆ. ಅವನು ತಿರುಪತಿಗೆ ನಡೆದು ಹೋಗಿ ವೆಂಕಟೇಶ್ವರನನ್ನು ಒಲಿಸಿಕೊಂಡು ಒಪ್ಪಂದಮಾಡಿಕೊಂಡು ಭಾವ ಮೈದುನನಂತೆ ಸಂಬಂಧ ಬೆಳೆಸಿಕೊಂಡು ತಿಮ್ಮಪ್ಪನಿಗೆ ಪಾಪನಾಯಕನು ನಮ್ಮ ಸಮುದಾಯದವರು ನನಗೆ ಮಾಡುವ ಮೊದಲ ಪೂಜೆ ನನಗೆ ಅರ್ಪಿಸುವ ಮೊದಲ ಕಾಸು ಮೀಸಲನ್ನು ನಿನಗೆ ಅರ್ಪಿಸುವಂತೆ ಮಾಡಿ ನಂತರದ ಪೂಜೆಯನ್ನು ನಾನು ಸ್ವೀಕರಿಸುತ್ತೇನೆಂದು ಮಾತು ನೀಡಿ ವೆಂಕಟೇಶ್ವರನನ್ನು ಕಂಪಳದೇವರ ಹಟ್ಟಿಗೆ ತಂದು ಪ್ರತಿಷ್ಠಾಪನೆ ಮಾಡಿದ್ದಾನೆ ಎಂಬ ಕಥೆಯಿದೆ. ಅಲ್ಲದೆ ಇಂದಿಗೂ ಹಟ್ಟಿಯಲ್ಲಿ ನಡೆದ ಪ್ರತಿ ಹಬ್ಬ ಜಾತ್ರೆಯಲ್ಲೂ ಪಾಪನಾಯಕ ಮತ್ತು ಕಂಪಳರಂಗಸ್ವಾಮಿಯ ಪೂಜೆಯನ್ನು ಒಟ್ಟೊಟ್ಟಿಗೇ ಮಾಡುತ್ತಾರೆ.

ಹೀಗೆ ಪಶುಪಾಲನೆ ಮಾಡಿಕೊಂಡು ಶಿವನನ್ನು ಪೂಜಿಸಿಕೊಂಡಿದ್ದ ಇವನಿಗೆ ಒಂದು ದಿನ ಶಿವನು ಸ್ವಪ್ನದಲ್ಲಿ ಬಂದು ನೀನು ನಿಮ್ಮ ಜನಗಳಿಗೆ ಒಳ್ಳೆಯದು ಮಾಡಬೇಕಾಗಿದೆ ನಿಮ್ಮ ಪೂರ್ವಜರು ಸಂಪಾದಿಸಿಕೊಂಡಿದ್ದಂತಹ ಮೂರು ಕಠಾರಿ ತಂದು ಭೂಮಿಯಲ್ಲಿ ಹೂಳಬೇಕು ಎಂದು ಆಜ್ಞೆ ಮಾಡುತ್ತಾನೆ ಆ ಕಠಾರಿಗಳೆಂದರೆ ೧. ಸೂರ್ಯನಂದನ ಕಠಾರಿ, ೨. ಮುಕ್ಕಣನ ಕಠಾರಿ, ೩. ಸಿಡಿಲು ಮಿಂಚಿನ ಕಠಾರಿ ಇವುಗಳನ್ನು ತಂದು ಪ್ರತಿಷ್ಠಾಪನೆ ಮಾಡು ಆಗ ನಿನಗೆ ಮುಕ್ತಿ ಕೊಡುತ್ತೀನಿ ಎಂದು ದೇವರು ಹೇಳುತ್ತಾನೆ. ಅಚಲ ದೈವಭಕ್ತನಾದ ಪಾಪನಾಯಕನು ಕಠಾರಿಗಳನ್ನು ತರಲು ಹೊರಡುತ್ತಾನೆ. ಈ ಮೂರು ಕಠಾರಿಗಳಲ್ಲಿ ಎರಡು ಕಠಾರಿ ತಮ್ಮ ಬಂಧುಗಳಾದ ತಂದೆ ಕೋರಲಮಲ್ಲನಾಯಕನ ಹತ್ತಿರ ಒಂದು, ಮತ್ತೊಂದು ಮಾವ ಕ್ಯಾಸಯ್ಯನ ಹತ್ತಿರ ಇರುತ್ತದೆ ಇವುಗಳನ್ನು ತಂದು ಅವುಗಳಲ್ಲಿ ಒಂದನ್ನು ಕಂಪಳದೇವರ ಹಟ್ಟಿಯಲ್ಲಿ ಮತ್ತೊಂದು ಬೇರೆ ಕಡೆ ಪ್ರತಿಷ್ಠಾಪನೆ ಮಾಡುತ್ತಾನೆ.

ಮೂರನೇ ಕಠಾರಿ ಇವನ ಬಂಧುಗಳಾದ ಬಗ್ಗಲೋರು ಬೆಡಗಿನ ಬಗ್ಗುಲು ದೊರೆಯಿಂದ ಜಗಳೂರು ದೊರೆ ಕಿತ್ತುಕೊಂಡು ಹೋಗಿರುತ್ತಾನೆ ಆಗ ಅದನ್ನು ತರಲು ಹೋದಾಗ ಜಗಳೂರು ದೊರೆ ಮತ್ತು ಪಾಪನಾಯಕನಿಗೆ ಸಂಘರ್ಷ ನಡೆದು ಪಾಪನಾಯಕನನ್ನು ಸಾಯಿಸಲು ದೊರೆಗಳು ಎಷ್ಟೇ ಪ್ರಯತ್ನ ಪಟ್ಟರೂ ಆಗದಿರುವಾಗ ತಮ್ಮ ಮನೆಗೆ ನಿತ್ಯ ಹಾಲು ಮೊಸರು ಕೊಡಲು ಬರುತ್ತಿದ್ದ ಕಾಡು ಗೊಲ್ಲರಿಂದ ಸಾಯಿಸಲು ಉಪಾಯ ಮಾಡುತ್ತಾರೆ. ಗೊಲ್ಲರಿಂದ ಪಾಪನಾಯಕ ಮತ್ತು ಅವನ ಸಂಬಂಧಿಕರು ಏಳು ಜನರನ್ನು ಊಟಕ್ಕೆ ಕರೆದು ಏಳು ಹೊಸ ಮಗಿಗಳಲ್ಲಿ ಅಂಬಲಿಯನ್ನು ಹಾಕಿ ಅದರಲ್ಲಿ ಒಂದು ಸೋರೆಯಲ್ಲಿ ವಿಷದ ಅಂಬಲಿಯಿದ್ದು ಅದನ್ನು ಗೊಲ್ಲರ ಹೆಣ್ಣು ಮಕ್ಕಳಿಂದ ಇವರಿಗೆ ಬೊಗಸೆಯಲ್ಲಿ ಹಾಕುತ್ತಾರೆ. ಇದನ್ನು ಅರಿತ ಪಾಪನಾಯಕ ತಮ್ಮವರಿಗೆ ಮೊದಲ ಬೊಗಸೆ ಅಂಬಲಿಯನ್ನು ನೆಲಕ್ಕೆ ಚೆಲ್ಲಿ ನಂತರದ ಅಂಬಲಿಯನ್ನು ಕುಡಿಯಿರಿ ಎಂದು ಸನ್ನೆ ಮಾಡುತ್ತಾನೆ, ಅವರು ಹಾಗೆಮಾಡಲು ಯಾರು ಸಾಯುವುದಿಲ್ಲ. ಕೊನೆಗೆ ಜಗಳೂರು ದೊರೆಗೂ ಪಾಪನಾಯಕನಿಗೂ

ಘೋರ ಯುದ್ಧ ಆಗುತ್ತದೆ ಆಗ ಉಗ್ರರೂಪ ತಾಳಿದ ಪಾಪನಾಯಕ ಎಲ್ಲರನ್ನೂ ಸಂಹರಿಸುತ್ತಿರುತ್ತಾನೆ ಅದರಲ್ಲಿ ತಮ್ಮವರೂ ಇವನಿಂದ ಹತರಾಗುತ್ತಿದ್ದು ಅವರು ವೆಂಟಕೇಶ್ವರನನ್ನು ಪ್ರಾರ್ಥಿಸುತ್ತಾರೆ ಆಗ ವೆಂಕಟೇಶ್ವರ ಹೆಣ್ಣಿನ ವೇಷ ಧರಿಸಿ ಹಿಂದಿನಿಂದ ಪಾಪನಾಯಕನ ಕಾಲಿಗೆ ಬಾಣ ಹೊಡೆದು ಸಾಯಿಸುತ್ತಾನೆ. ಈಗಲೂ ಜಗಳೂರಿನಲ್ಲಿ ಅವನ ಸಮಾಧಿ ಇದೆ. ಇನ್ನೂ ಸುದೀರ್ಘ ಕಾವ್ಯವಿದೆ ಆದರೆ ನಾನು ಆಚರಣೆಯಲ್ಲಿ ಗಮನಿಸಿದ ಕಥೆಗೆ ಬೇಕಾದಷ್ಟನ್ನು ಮಾತ್ರ ಹೇಳಿದ್ದೇನೆ. ಹದಿನೈದು ವರ್ಷಗಳ ನಂತರ ನಡೆದ ಪಾಪನಾಯಕನ ಆಚರಣೆ ಕಂಪಳದೇವರ ಹಟ್ಟಿ ಮತ್ತು ಜಗಳೂರಿನಲ್ಲಿ ನಡೆದದ್ದು ಹೀಗೆ.

ಈ ಕಥೆಯಲ್ಲಿ ಪಾಪನಾಯಕ ಸಮುದಾಯದ ಏಳಿಗೆಗಾಗಿ ಪೂರ್ವಜರು ಸಂಪಾದಿಸಿದ ಕಠಾರಿಗಳನ್ನು ತರಲು ಹೋರಾಟ ಮಾಡುವುದು ಒಂದು ಬಗೆಯಾದರೆ ಪಶುಪಾಲಕನಾದ ಈತ ತನ್ನ ದನಕರುಗಳಿಗೆ ಮೇವು ನೀರು ಅರಸುತ್ತಾ ಅಲೆಯುತ್ತಿರುವುದು ಮತ್ತು ದನಕರುಗಳು ಅಂದಿನ ಕಾಲಕ್ಕೆ ಸಂಪತ್ತಾಗಿದ್ದದ್ದರಿಂದ ಅವುಗಳಿಗಾಗಿ ಬೇರೆ ಬೇರೆ ಸಮುದಾಯದವರೊಡನೆ ಸಂಘರ್ಷ ಮಾಡುತ್ತಾ ಹೊರಟ ಚಿತ್ರಣವಿದು. ಕಾವಲಿನ ವಿಷಯಕ್ಕೆ ಅಥವಾ ದನಕರುಗಳ ವಿಷಯಕ್ಕೆ ಸೋದರ ಸಂಬಂಧಿಯಾದ ಕಾಡುಗೊಲ್ಲರೊಡನೆ ಕೆಲಕಾಲ ಸಂಘರ್ಷ ನಂತರ ಹೊಂದಾಣಿಕೆ ಮಾಡಿಕೊಂಡು ಹೋಗುತ್ತಾನೆ. ಹಾಗೆ ಜಗಳೂರು ದೊರೆಗಳ(ಪ್ರಭುತ್ವ/ಭೂಮಾಲಿಕರು) ವಿರುದ್ಧ ಪ್ರತಿಭಟಿಸುತ್ತಾನೆ. ಪ್ರಭತ್ವದ ವಿರುದ್ಧ ಬುಡಕಟ್ಟಿನವರೂ ಹೋರಾಡುವುದನ್ನು ಬ್ರಿಟೀಷ್ ಕಾಲದಲ್ಲಿ ಮಾತ್ರವಲ್ಲದೆ ಪುರಾತನ ಕಾಲದಿಂದಲೂ ನೋಡಬಹುದಾಗಿದೆ. ಜಗಳೂರು ಪ್ರದೇಶದ ದೊರೆ ಪಾಪನಾಯಕನಿಗೆ ಅವನ ಸೋದರ ಸಂಬಂದಿಗಳಿಂದ ವಿಷ ಹಾಕಿಸುವುದು, ಅದೇ ಬೇಡ ಸಮುದಾಯದ ವ್ಯಕ್ತಿಯಿಂದ ಪಾಪನಾಯಕನ್ನು ಸಾಯುವಂತೆ ಮಾಡುವುದು ಪ್ರಭುತ್ವದ ರಾಜಕಾರಣ. ಈ ಎಲ್ಲಾ ರಾಜಕಾರಣ ಇಂದಿಗೂ ಪ್ರಸ್ತುತ. ೧೦-೧೫ ವರ್ಷಗಳಿಗೊಮ್ಮೆ ಕಂಪಳದೇವರ ಹಟ್ಟಿಯಿಂದ ಕಠಾರಿಯನ್ನು ಹಿಡಿದುಕೊಂಡು ಸುತ್ತಮುತ್ತಲ ಬೇಡರ ಸಾವಿರಾರು ಜನ ಬರಿಗಾಲಿನಲ್ಲಿ ನಡೆದು ಜಗಳೂರಿಗೆ ಬಂದು ಪಾಪನಾಯಕನ ದಿವಸ ಕಾಲ ಮಾಡಿಕೊಂಡು ಹೋಗುತ್ತಾರೆ. ಈ ವರ್ಷ ೧೨-೩-೧೬ ರಿಂದ ೧೫-೩-೧೬ ರ ವರೆಗೆ ನಡೆದ ಈ ಆಚರಣೆಯಲ್ಲಿ ಪಾಲ್ಗೊಂಡು ಗಮನಿಸಿದ ಅಂಶವೆಂದರೆ.

ಪ್ರಾರಂಭ ದಿನಾಂಕ: ೧೨-೩-೨೦೧೬ ರಂದು ಬೇರೆ ಬೇರೆ ಹಟ್ಟಿಗಳಿಂದ ಸಾವಿರಾರು ಮ್ಯಾಸಬೇಡರು ಕಂಪಳದೇವರ ಹಟ್ಟಿಯ ಪಾಪನಾಯಕ ದೇವರ ಗುಡಿಯ ಹತ್ತಿರ ಸೇರಿ ಅಂದು ರಾತ್ರಿ ಅಲ್ಲೇ ಉಳಿದು ರಾತ್ರಿಯೆಲ್ಲಾ ಪೂಜೆ ಸಲ್ಲಿಸಿ ಮರುದಿನ ಬೆಳಗಿನ ಜಾವ ಐದು ಗಂಟೆಗೆ ಜಗಳೂರಿಗೆ ಪ್ರಯಾಣ ಬೆಳೆಸುತ್ತಾರೆ.

ಬೇಡಗಂಪಣ ಮತ್ತು ದೇವರ ಎತ್ತುಗಳು ಪ್ರಯಾಣ ಬೆಳೆಸುವ ಮಾರ್ಗ ಎರಡನೆಯ ದಿನ ೧೩-೩-೧೬ ರಂದು ಬೆಳಗಿನ ಜಾವ ಐದು ಗಂಟೆಗೆ ದೇವರನ್ನು ಹೊರಡಿಸಿ ಪೂಜಾರಿಯು ದೇವರ ಸ್ವರೂಪಿಯಾದ ಕತ್ತಿ ಯನ್ನು ಕರಿಕಂಬಳಿಯಲ್ಲಿ ಸುತ್ತಿಕೊಂಡು ತನ್ನ ಕಂಕುಳಲ್ಲಿ

ಹಿಡಿದುಕೊಂಡಿರುತ್ತಾನೆ. ಮುಂದೆ ಮುಂದೆ ದೇವರ ಎತ್ತುಗಳು ಹಿಂದೆ ಹಿಂದೆ ದೇವರು ಅದರ ಹಿಂದೆ ಮಟ್ಟಿಗಳನ್ನು ಹೊತ್ತ ಬೇಡಗಂಪಣ ಹಟ್ಟಿಯ ದಕ್ಷಿಣ ದಿಕ್ಕಿಗೆ ಹೊರಟು ಹಟ್ಟಿ ಪ್ರವೇಶದ್ವಾರದಲ್ಲಿ ಮಾರಮ್ಮಗೆ ಪೂಜೆಮಾಡಿ ಪ್ರಯಾಣ ಬೆಳೆಸುತ್ತಾರೆ. ಇವರು ಹಾದು ಹೋಗುವ ಊರುಗಳೆಂದರೆ ಚಿನ್ನೋಬನಹಳ್ಳಿ, ತಾಯಕನಹಳ್ಳಿ, ಹೂಡೇಂ(ಹೊಡೇಂ ಇಲ್ಲಿ ತಿಂಡಿಯ ವ್ಯವಸ್ತೆ ಮಾಡಲಾಗಿತ್ತು), ಮ್ಯಾಸರ ಹಟ್ಟಿ, ಕಾತ್ರಿಕೇನ ಹಟ್ಟಿ, ತಿಪ್ಪಳ್ಳಿ, ಕಲ್ಲಳ್ಳಿ(ಇಲ್ಲಿ ಊಟದ ವ್ಯವಸ್ತೆ), ಚಿಕ್ಕಮಲ್ಲನಹೊಳೆ, ತಾಯಿಟೋಣಿ, ಮುಷ್ಟೂರು ಮುಂತಾದ ಊರುಗಳ ಮೂಲಕ ಪ್ರಯಾಣ ಮಾಡಿ ಸಂಜೆ ಐದು ಗಂಟೆಯ ವೇಳೆಗೆ ಜಗಳೂರು ಹತ್ತಿರದ ಸಲ್ಲಗಟ್ಟ ಎಂಬ ಬಯಲಿನಲ್ಲಿ ತಂಗುತ್ತಾರೆ. ಅಂದು ರಾತ್ರಿ ಅಲ್ಲೇ ವಿಶ್ರಾಂತಿ ಪಡೆಯುತ್ತಾರೆ. ಪಾಪನಾಯಕನ ಸಮಾಧಿ ಅಲ್ಲಿಂದ ೩ ಕಿ ಮೀ ದೂರದಲ್ಲಿ ಇರುತ್ತದೆ. ಅಲ್ಲಿಯೇ ಕೆಲವು ಆಚರಣೆಗಳು ನಡೆಯುತ್ತವೆ.

ಮೂರನೇದಿನ ಬೆಳಗಿನ ಜಾವ ಎರಡು ಗಂಟೆಯಿಂದಲೇ ಆಚರಣೆಗಳು ನಡೆಯುತ್ತವೆ ಕಂಪಳದೇವರ ಹಟ್ಟಿಯಿಂದ ಬಂದಿರುವ ಪಾಪನಾಯಕ ದೇವರು ಮತ್ತು ಪೂಜಾರಿಯು ಪಾಪನಾಯಕನ ಸಮಾಧಿಯ ಬಳಿಗೆ ಹೋಗುತ್ತದೆ, ಅದನ್ನು ಯಾರೂ ನೋಡುವುದಿಲ್ಲ. ಅಲ್ಲಿ ಸಮಾಧಿಯ ಎದುರು ಗೋನೂರು ಬೆಡಗಿನವರು ತಾವು ತಂದ ಕುರಿ ಅಥವಾ ಮೇಕೆ ಮರಿಯನ್ನು ವಾಸೆ ಕೊಯ್ಯುತ್ತಾರೆ.

**ವಾಸೆ ಎಂದರೆ**

ದೇವರ ಎದುರು ದುಂಡಾದ ಕಲ್ಲು ಇದ್ದು ಅದರ ಸುತ್ತಾ ಮಡುವಿನ ರೀತಿ ಇರುತ್ತದೆ ಆ ಗುಂಡಿನ ಮೇಲೆ ಕುರಿಮರಿಯನ್ನು ಅಂಗಾತ ಹಿಡಿದು ಅದರ ಕತ್ತನ್ನು ಕೊಯ್ಯುತ್ತಾರೆ. ಈ ಪದ್ದತಿಗೆ ವಾಸೆಕೊಯ್ಯುವುದು ಎನ್ನುತ್ತಾರೆ. ಈ ವಾಸೆ ಆಚರಣೆಯು ಮಾನವನ ಆದಿಮ ಸ್ಥಿತಿಯನ್ನು ನೆನಪಿಸುವ ರೀತಿಯಿದೆ. ಹೀಗೆ ಗೋನೂರಿನವರು ವಾಸೆಕೊಯ್ಯುವ ವೇಳೆಗೆ ಬೆಳಗಿನಜಾವವಾಗಿರುತ್ತದೆ, ಆಗ ಸಲ್ಲಗಟ್ಟೆಯಲ್ಲಿದ್ದ ಬೇಡರು ಮೂರುಮಂದಿ ನಾಯಕರು, ಏಳುಮಂದಿ ಹಿರಿಯರು, ದೇವರ ಎತ್ತುಗಳು, ಕುಲಸಾವಿರ ಎಲ್ಲಾ ಅಲ್ಲಿಂದ ದೇವರ ಸಮಾಧಿಯ ಕಡೆ ಮೆರವಣಿಗೆ ಹೊರಡುತ್ತಾರೆ. ಆಗ ದಾರಿಯ ಮಧ್ಯದಲ್ಲಿ ಗೊಲ್ಲರಹಟ್ಟಿಯಿಂದ ಗೊಲ್ಲರು ಹೊಸ ಕೊಳಗದಲ್ಲಿ ಅಂಬಲಿ ತರುತ್ತಾರೆ. ಆಗ ಬಸಗೆ ಅಂಬಲಿ ಆಚರಣೆ ನಡೆಯುತ್ತದೆ.

**ಬಸಗೆ ಅಂಬಲಿ ಆಚರಣೆ**

ಬಸಗೆ ಅಂಬಲಿ ಎಂದರೆ ಗೋಧಿಯ ಅಂಬಲಿಯನ್ನು ಬೊಗಸೆಯಲ್ಲಿ ಸೇವಿಸುವುದು ಎಂದರ್ಥ. ಈ ಅಂಬಲಿಯನ್ನು ಕಾಡುಗೊಲ್ಲರ ಹೆಣ್ಣುಮಕ್ಕಳು ಮ್ಯಾಸಬೇಡರ ಏಳು ಮಂದಿ ಹಿರಿಯರಿಗೆ ಬಗಸೆಯಲ್ಲಿ ಹಾಕುತ್ತಾರೆ. ಪಶುಪಾಲಕ ಸೋದರ ಸಮುದಾಯಗಳಾದ ಮ್ಯಾಸಬೇಡ ಮತ್ತು ಕಾಡುಗೊಲ್ಲರಿಗೆ ಪ್ರಾಚೀನ ಕಾಲದಲ್ಲಿ ನಡೆದ ಸಂಘರ್ಷದ ಪ್ರತೀಕ ಈ ಬಸಗೆ ಅಂಬಲಿ ಆಚರಣೆ. ಪಾಪನಾಯಕನು ತನಗೆ ಸಾಕಲು ದನಕರುಗಳು ಇಲ್ಲವೆಂದು ಕಾಡುಗೊಲ್ಲರ ರಾಸುಗಳನ್ನು ಹೊಡೆದುಕೊಂಡು ಬಂದಿರುತ್ತಾನೆ ಎಂಬ ಕಥೆಯಿದೆ, ಅಲ್ಲದೆ ಕಾವಲಿನ ವಿಷಯಕ್ಕೆ ಗೊಲ್ಲರಿಗೂ

ಮತ್ತು ಪಾಪನಾಯಕನಿಗೂ ತಕರಾರು ಇರುತ್ತದೆ ಎಂದು ಹೇಳುತ್ತಾರೆ. ಮುಖ್ಯವಾದ ವಿಷಯವೆಂದರೆ ಪಾಪನಾಯಕನ ಕಥೆಯಲ್ಲಿ ಪ್ರಸ್ತಾಪವಾಗುವಂತೆ ಜಗಳೂರು ದೊರೆ ಗೊಲ್ಲರಿಂದ ಪಾಪನಾಯಕನಿಗೆ ವಿಷ ಆಕಿಸಿ ಸಾಯಿಸುವ ಪ್ರಯತ್ನಮಾಡಿರುತ್ತಾನೆ. ಕಾಡುಗೊಲ್ಲರ ಸಹಾಯದಿಂದ ಪಾಪನಾಯಕನನ್ನೂ ಒಳಗೊಂಡಂತೆ ಬೇಡರ ಏಳು ಮಂದಿಯನ್ನು ಗೊಲ್ಲರ ಮೂಲಕ ಊಟಕ್ಕೆ ಕರೆಯಿಸಿ ಏಳು ಸೋರೆ ಅಂಬಲಿಯಲ್ಲಿ ಒಂದರಲ್ಲಿ ವಿಷ ಹಾಕಿ ಬೇಡರಿಗೆ ಬಡಿಸುತ್ತಾರೆ. ಇದನ್ನು ಅರಿತ ಪಾಪನಾಯಕ ತನ್ನವರಿಗೆ ಮೊದಲ ಬಗಸೆ ಅಂಬಲಿಯನ್ನು ನೆಲಕ್ಕೆ ಚೆಲ್ಲಿ ನಂತರದ ಅಂಬಲಿಯನ್ನು ಕುಡಿಯಿರಿ ಎಂದು ಸನ್ನೆಮಾಡುತ್ತಾನೆ, ಸಾಲಾಗಿ ಊಟಕ್ಕೆ ಕುಕ್ಕುರುಗಾಲಿನಲ್ಲಿ ಕುಳಿತ ಅವರು ಪಾಪನಾಯಕ ಹೇಳಿದಂತೆಯೇ ಮಾಡುತ್ತಾರೆ ಆಗ ಯಾರೂ ಸಾಯುವುದಿಲ್ಲ. ಈ ಪವಾಡವನ್ನು ಪಾಪನಾಯಕ ಮಾಡಿದ ಪ್ರತೀಕವಾಗಿ ಅವನ ದಿವಸ ಕಾಲ ಮಾಡುವ ಈ ಸಂದರ್ಭದಲ್ಲಿ ಬಸಗೆ ಅಂಬಲಿ ಆಚರಣೆ ಆಚರಿಸುತ್ತಾರೆ. ಗೊಲ್ಲರು ಏಳು ಹೊಸ ಮಣ್ಣಿನ ಸೋರೆಗಳಲ್ಲಿ ಅಂಬಲಿ ತಂದು ಏಳು ಮಂದಿ ಹಿರಿಯರಿಗೆ ಗೊಲ್ಲರ ಏಳು ಜನ ಹೆಣ್ಣುಮಕ್ಕಳು ಅಂಬಲಿಯನ್ನು ಬಗಸೆಯಲ್ಲಿ ಹಾಕುತ್ತಾರೆ. ಈ ಆಚರಣೆಯಿಂದ ಮ್ಯಾಸಬೇಡರು ಮತ್ತು ಕಾಡುಗೊಲ್ಲರು ಮೂಲತಃ ಸೋದರ ಸಂಬಂಧಿ ಸಮುದಾಯಗಳು, ದನಕರುಗಳ ಸಂಬಂಧವಾಗಿ ಇವರ ನಡುವೆ ಸಂಘರ್ಷ ನಡೆದು ಬೇರೆಯಾದರೆಂದು ತಿಳಿದು ಬರುತ್ತದೆ. ಈ ಎರಡೂ ಸಮುದಾಯಗಳಲ್ಲಿ ಜಮೀನಿಗಿಂತ ಪಶುಸಂಪತ್ತೇ ಹೆಚ್ಚು ಎಂದು ಹೇಳಬಹುದು.

**ಮುತ್ತಿನ ಕಳಸ ತರುವುದು**

ಬಸಗೆ ಅಂಬಲಿಯ ಆಚರಣೆ ಮುಗಿದ ನಂತರ ಬೇಡಗಂಪಣ ಮೆರವಣಿಗೆ ಮುಂದುವರಿಯುತ್ತದೆ. ಇನ್ನೇನು ಪಾಪನಾಯಕನ ಸಮಾಧಿ ಒಂದು ಕಿಲೋಮೀಟರ್ ಇದೆ ಎನ್ನುವಷ್ಟರಲ್ಲಿ ಜಗಳೂರು ಗೌಡರ ಮನೆಯಿಂದ ಮುತ್ತೈದೆಯರು ಮುತ್ತಿನ ಆರತಿ/ಕಳಸ ತರುತ್ತಾರೆ. ಬೇಡಗಂಪಣದ ಎದುರು ಬಂದು ಪಾಪನಾಯಕ ದೇವರಿಗೆ ಮತ್ತು ಪೂಜಾರಿಗೆ ಪೂಜೆ ಮಾಡಿ ಹೋಗುತ್ತಾರೆ. ಹಿಂದೆ ಪಾಪನಾಯಕ ಜಗಳೂರು ಗೌಡರಿಗೆ ತುಂಬಾ ತೊಂದರೆ ಕೊಟ್ಟಿರುತ್ತಾನೆ ಅದಕ್ಕಾಗಿ ಈ ಆಚರಣೆಯಲ್ಲಿ ಅವನಿಗೆ ಮುತ್ತಿನ ಕಳಸ ಹಿಡಿಯುತ್ತಾರೆ ಎಂದು ಕೆಲವರು ಹೇಳುತ್ತಾರೆ. ಆದರೆ ಜಗಳೂರು ಪಾಪನಾಯಕನ ಕಥೆಯಲ್ಲಿ ಪ್ರಸ್ತಾಪವಾಗುವಂತೆ ಇವನ ಸಾವಿಗೆ ಕಾರಣರಾದ ಜಗಳೂರು ದೊರೆಗಳು ತಮ್ಮ ಪಾಪದ ಪ್ರಾಯಶ್ಚಿತ್ತವಾಗಿ ಈ ಆಚರಣೆ ಮಾಡಬಹುದು ಎನ್ನಿಸುತ್ತದೆ, ಇದರ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯ ಇದೆ.

**ನೀಲ್ ಮರ ಸುತ್ತುವುದು**

ಹಾಗೆಯೇ ಮುಂದೆ ಹೋದರೆ ಒಂದು ಮರವಿದ್ದು ಅದರ ಬುಡದಲ್ಲಿ ಒಂದು ವೀರಗಲ್ಲಿದೆ. ಆ ಮರವನ್ನು ಪಾಪೇದೇವರು ಮತ್ತು ಇಡೀ ಬೇಡಗಂಪಣ ಸುತ್ತುತ್ತದೆ. ಇದರ ಕಾರಣ ತಿಳಿದಿಲ್ಲ ಬಹುಶಃ ಹಿಂದೆ ಪಶುಪಾಲನೆ ಮಾಡುವ ಸಂದರ್ಭದಲ್ಲಿ ಪಾಪನಾಯಕ ಈ ಮರದ ನೆರಳಲ್ಲಿ

ವಿಶ್ರಾಂತಿ ಪಡೆಯಲು ತನ್ನ ರಾಸುಗಳನ್ನು ತರುಬುತ್ತಿದ್ದನು ಎಂದು ಊಹಿಸಬಹುದು(ತೆಲುಗಿನಲ್ಲಿ ನೀಲ/ನೀಲ್ ಎಂದರೆ ನೆರಳು ಎಂದು ಅರ್ಥ). ಹಿಂದೆ ಈ ಮರವನ್ನು ದೇವರು ಮತ್ತು ದೇವರ ಎತ್ತುಗಳು ಸುತ್ತುವಾಗ ಆ ಮರವೂ ಸಹ ಸುತ್ತುತ್ತಿತ್ತು ಎಂದು ಜನರು ಹೇಳುತ್ತಾರೆ.

**ವಾಸೆಕೊಯ್ಯುವುದು**

ಪಾಪನಾಯಕನ ಸಮಾಧಿಯ ಮುಂದಿನ ವಾಸೆಕಲ್ಲಿನ ಮೇಲೆ ಅಂದು ಬೆಳಗಿನ ಜಾವ ಗೊನೂರಿನವರು ಮೊದಲ ವಾಸೆ ಕೊಯ್ದುಕೊಂಡು ಹೋಗಿರುತ್ತಾರೆ, ನಂತರ ಇಡೀ ಸಮುದಾಯದವರು ಅದರಲ್ಲೂ ಏಳುಮಂದಿ ಹಿರಿಯರು ತಾವು ತಂದಿದ್ದ ಕುರಿ ಮತ್ತು ಮರಿಗಳಲ್ಲಿ ಮರಿಯನ್ನು ಬಿಟ್ಟು ಕುರಿಯನ್ನು ವಾಸೆಕಲ್ಲಿನ ಮೇಲೆ ಕೊಯ್ಯುತ್ತಾರೆ ಅದರಲ್ಲೂ ನಿಯಮವಿದೆ. ಮೊದಲ ವಾಸೆ ಕುರಿಕಿಲಾರಿ ಮನೆಯವರು, ಎರಡನೆಯ ವಾಸೆಯನ್ನು ಬೆಲ್ಲದಾರು ಬೆಡಗಿನವರು ನಂತರ ಉಳಿದವರು ಕೊಯ್ದುಕೊಂಡು ಹೋಗಬಹುದು. ವಾಸೆ ಕೊಯ್ದ ನಂತರ ಅಲ್ಲಿ ಇರದೆ ಮರಳಿ ಸಲ್ಲಗಟ್ಟೆ ಬಯಲಿಗೆ ಬಂದು ಅಲ್ಲಿ ಮಾಂಸದ ಅಡುಗೆ ಮಾಡಿಕೊಂಡು ಊಟಮಾಡಿ ಅಂದು ಅಲ್ಲೇ ಉಳಿಯುತ್ತಾರೆ.

ಕೊನೆಯ ದಿನ: ಕೊನೆಯ ದಿನ ಬೆಳಗಿನ ಜಾವ ಐದು ಗಂಟೆಗೆ ಕಂಪಳದೇವರ ಹಟ್ಟಿಗೆ ಯಥಾಪ್ರಕಾರ ಪ್ರಯಾಣ ಬೆಳೆಸುತ್ತಾರೆ. ಒಟ್ಟಾರೆಯಾಗಿ ಪಾಪನಾಯಕನ ಪಶುಪಾಲನಾ ವೃತ್ತಿ ಅಲೆದಾಟ, ಅಂದಿನ ಸಮುದಾಯ ಸಂಘರ್ಷ, ಪ್ರಭುತ್ವ ಬುಡಕಟ್ಟುಗಳನ್ನು ಹಿಂಸಿಸುವ ಮತ್ತು ಪಶುಪಾಲಕ ಜನಪದರ ಅಂದಿನ ಸಾಮಾಜಿಕ ಜೀವನ ಈ ಆಚರಣೆಯಿಂದ ತಿಳಿಯಬಹುದಾಗಿದೆ.

**೨ ಪೆಡೆಗಟ್ಟು ಪಂಡುವ/ಪೆದಗಟ್ಟು ಪಂಡುವ**

ಮ್ಯಾಸಬೇಡರ ಕಂದೆಲುಗು ಭಾಷೆಯಲ್ಲಿ ಪೆದಗಟ್ಟು ಪಂಡುವ/ಪೆಡೆಗಟ್ಟು ಪಂಡುವ ಎಂದು ಕರೆಯುವ ಈ ಹಬ್ಬವನ್ನು ಕನ್ನಡದಲ್ಲಿ ಹೆಡೆಕಟ್ಟಿನ ಹಬ್ಬ ಎಂದು ಕರೆಯುತ್ತಾರೆ(ಪೆಡೆ=ಹೆಡೆ). ಈ ಹಬ್ಬವನ್ನು ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಚಿಕ್ಕುಂತಿ(ಕಂಪಳದೇವರ ಹಟ್ಟಿ) ಎಂಬ ಗ್ರಾಮದಲ್ಲಿ ಮಾತ್ರ ೧೨ ವರ್ಷಗಳಿಗೊಮ್ಮೆ ಆಚರಿಸುತ್ತಾರೆ. ಇಡೀ ಕರ್ನಾಟಕದಾದ್ಯಂತ ಇರುವ ಎಲ್ಲಾ ಮ್ಯಾಸಬೇಡರು ಈ ಹಬ್ಬಕ್ಕೆ ಕಂಪಳದೇವರ ಹಟ್ಟಿಗೆ ಸಾವಿರಾರು ಸಂಖ್ಯೆಯಲ್ಲಿ ಬಂದು ಸೇರುತ್ತಾರೆ. ಈ ಹಿಂದೆ ದಿನಾಂಕ: ೧೨-೧೨-೧೯೭೫ ರಲ್ಲಿ ಈ ಹಟ್ಟಿಯಲ್ಲಿ ನಡೆದ ಈ ಹಬ್ಬ ೪೦ ವರ್ಷಗಳ ನಂತರ ದಿನಾಂಕ: ೦೨-೧೨-೨೦೧೬ ರಿಂದ ೧೧-೧೨-೨೦೧೬ ರ ವರೆಗೆ ಕಂಪಳದೇವರ ಹಟ್ಟಿಯಲ್ಲಿ ನಡೆಯಿತು. ಈ ಸಂದರ್ಭದಲ್ಲಿ ನಾನು ಹಬ್ಬದಲ್ಲಿ ಭಾಗವಹಿಸಿ ಗ್ರಹಿಸಿದ ಮತ್ತು ಹಿರಿಯರನ್ನು ಸಂದರ್ಶಿಸಿ ಪಡೆದ ಮಾಹಿತಿಯ ಆಧಾರದ ಮೇಲೆ ಹೆಡೆಕಟ್ಟಿನ ಹಬ್ಬದ ಬಗ್ಗೆ ತಿಳಿಸಬಯಸುತ್ತೇನೆ. ಕಂಪಳದೇವರ ಹಟ್ಟಿಯು (ಬಯಲುಸೀಮೆಯ/ಮ್ಯಾಸಮಂಡಲದ) ಮ್ಯಾಸಬೇಡರ ಗುರುಸ್ಥಾನವಾಗಿದೆ. ಮತ್ತು ಎಲ್ಲಾ ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರವಾಗಿದೆ. ಅಲ್ಲದೆ ಮ್ಯಾಸಬೇಡರ ಮೂಲ ದೈವ ಕಂಪಳರಂಗಸ್ವಾಮಿಯು ಇರುವುದು ಈ ಹಟ್ಟಿಯಲ್ಲೇ, ಅದ್ದರಿಂದ ಕಂಪಳದೇವರ ಹಟ್ಟಿಯು

ಮ್ಯಾಸಬೇಡರಿಗೆ ಪವಿತ್ರ ಕ್ಷೇತ್ರವಾಗಿದೆ. ಅದ್ದರಿಂದ ಇಲ್ಲಿ ಮಾತ್ರ ಈ ಹೆಡೆಕಟ್ಟಿನ ಹಬ್ಬವನ್ನು ಮಾಡುತ್ತಾರೆ. ಈ ಹಬ್ಬದಲ್ಲಿನ ಪ್ರಮುಖ ಆಚರಣೆಗಳೆಂದರೆ ಹುತ್ತದ ಮೇಲೆ ಬೆಳೆದಿರುವ, ಯಾರು ಮುಕ್ಕು ಮಾಡಿರದ ೨೦-೩೦ ಅಡಿ ಎತ್ತರದ ಎರಡು ಹಾಸಿನ ಮರಗಳನ್ನು ಮೊಳಕಾಲ್ಮೂರು ಹತ್ತಿರದ ನೇರ್ಲಳ್ಳಿ ಮತ್ತು ಮರ್ಲಳ್ಳಿಯ ಬೇಡರ ಗುಂಪು ಕಡಿದು ಹೊತ್ತು ತರುತ್ತಾರೆ. ಈ ಮರಗಳನ್ನು ನೆಲದ ಮೇಲೆ ಇಡಬಾರದು ಎಂಬ ನಂಬಿಕೆಯಿಂದ ಅವುಗಳಿಗೆ ಕರಿ ಕಂಬಳಿಗಳನ್ನು ಸುತ್ತಿಕೊಂಡು ಹೊತ್ತುಕೊಂಡು ಸುಮಾರು ೮-೧೦ ಕಿ.ಮೀ ಗಳಿಂದ ತರುತ್ತಾರೆ. ಆ ಮರಗಳನ್ನು ಅನುಭವಿಗಳು ಎರಡೂ ಮರಗಳ ಕೊನೆಗಳನ್ನು ಸೇರಿಸಿ ಏಳು ಹೆಡೆಯ ಸರ್ಪದ ಹಾಗೆ ಹೆಣೆದು ಏಳೂ ಹೆಡೆಗಳಿಗೆ ೭ ತೆಂಗಿನಕಾಯಿಗಳನ್ನು ಕಟ್ಟಿ ಹೂವಿನಿಂದ ಅಲಂಕರಿಸುತ್ತಾರೆ. ಅದೇ ಸಮಯಕ್ಕೆ ಅಲ್ಲೇ ಕಂಪಳರಂಗಸ್ವಾಮಿ ಪೌಳಿಯ ಬಲಬದಿಗೆ ಆ ಮರಗಳನ್ನು ಹೂಳಲು ಎರಡು ಗುಂಡಿಗಳನ್ನು ೬-೭ ಅಡಿ ಆಳವಾಗಿ ತೋಡುತ್ತಾರೆ. ಆ ಸಮಯದಲ್ಲಿ ಗುಂಡಿ ತೋಡುವ ಮೊದಲಿಗೆ ಹಟ್ಟಿನಾಯಕರು/ ಪೆದ್ದಾಳ ನಾಯಕರು ಎಂಬ ಕೋಮಿನವರು ಮೊದಲು ಭೂಮಿ ಪೂಜೆ ಮಾಡುತ್ತಾರೆ. ನಂತರ ಗುಂಡಿಗಳನ್ನು ತೋಡಿ ೭ ಹೆಡೆ ಸರ್ಪದ ಹಾಗೆ ಸಿದ್ದಗೊಂಡ ಹಾಸಿನ ಮರಗಳನ್ನು ಕೆಂಪು ಬಿಳಿ ಹಸಿರು ಬಣ್ಣದ ದೊಡ್ಡ ಬಟ್ಟೆಯನ್ನು ಸುತ್ತಿ ಆ ಗುಂಡಿಗಳಲ್ಲಿ ನಿಲ್ಲಿಸುತ್ತಾರೆ ನಂತರ ಗುಂಡಿಗಳನ್ನು ಮುಚ್ಚುತ್ತಾರೆ. ನಂತರ ಆ ಮರಗಳಿಗೆ ಹಣ್ಣು ಕಾಯಿ ಮಾಡಿಸುತ್ತಾರೆ.

ಮತ್ತೊಂದು ಪ್ರಮುಖ ಆಚರಣೆ ಎಂದರೆ ಈ ಹಬ್ಬದಲ್ಲಿ ಕಂಪಳರಂಗಸ್ವಾಮಿಯ ಮತ್ತು ಭಾಗ್ಯದ ಲಕ್ಷ್ಮಿಯ(ಲಕ್ಷ್ಮಿ-ಚಂಚವ್ವ, ಲಸ್ಮವ್ವ, ಲಕ್ಷ್ಮಿ) ವಜ್ರ ಖಚಿತವಾದ ಮುತ್ತಿನ ಕಾಲು ಪೆಂಡೆಯನ್ನು ಭಕ್ತಾದಿಗಳಿಗೆ ತೋರಿಸುತ್ತಾರೆ. ಮತ್ತು ಈ ಹಬ್ಬದಲ್ಲಿ ಮಾತ್ರ ಕಂಪಳರಂಗಸ್ವಾಮಿ ಪಾಪೇದೇವರುಗಳಿಗೆ ತೆಂಗಿನ ಕಾಯಿಯನ್ನು ಒಡೆಯಲಾಗುತ್ತದೆ. ಹೆಡೆಕಟ್ಟಿನ ಹಬ್ಬ ಆದ ನಂತರ ಶಿವರಾತ್ರಿ ಕಳೆದಾಗ ಇಡಿ ಮ್ಯಾಸಬೇಡರು ತಮ್ಮ ಪೆಟ್ಟಿಗೆ ದೇವರಾದ ಕಂಪಳರಂಗಸ್ವಾಮಿಯ ಪೆಟ್ಟಿಗೆಯನ್ನು ಪೂಜಾರಿಯಿಂದ ಹೋರಿಸಿಕೊಂಡು ದೇವರ ಎತ್ತುಗಳನ್ನು ಹೊಡೆದುಕೊಂಡು ಹಂಪಿಯ ಹೊಳೆಗೆ ಬಂದು ಪೂಜಿಸಿಕೊಂಡು ಮತ್ತೆ ಮರಳಿ ನಡದೇ ಹೋಗಿ ಹಟ್ಟಿ ಸೇರುತ್ತಾರೆ. ಈ ಎಲ್ಲಾ ವಿಶೇಷ ಆಚರಣೆಯಿಂದಾಗಿ ಈ ಹಬ್ಬ ಮ್ಯಾಸಬೇಡರಲ್ಲಿ ಪ್ರಮುಖ ಆಚರಣೆಯಾಗಿದೆ.

### ಹಬ್ಬದ ಹಿನ್ನೆಲೆ

ಹೆಡೆಕಟ್ಟು ಹಬ್ಬವನ್ನು ಮ್ಯಾಸಬೇಡರು ಮಾತ್ರ ಅದರಲ್ಲೂ ಕಂಪಳದೇವರ ಹಟ್ಟಿಯಲ್ಲಿ ಮಾತ್ರ ಆಚರಿಸಲು ಕಾರಣ ಏನು? ಎಂದು ತಿಳಿಯುವ ಸಲುವಾಗಿ ಅಲ್ಲಿನ ಹಿರಿಯರನ್ನು ಕೇಳಿದಾಗ ಹಲವು ಕಥೆಗಳನ್ನು ಹೇಳಿದರು. ಹಿರಿಯರು ಹೇಳಿದ ಕಥೆಗಳಿಗೂ ಮತ್ತು ಹಬ್ಬದ ಆಚರಣೆಗೂ ಒಂದಲ್ಲಾ ಒಂದು ರೀತಿಯ ಸಂಬಂಧ ಇದೆ ಎಂದು ತಿಳಿದು ಬರುತ್ತದೆ. ಆದ್ದರಿಂದ ಹೆಡೆಕಟ್ಟು ಹಬ್ಬದ ವಿವರಣೆ ತಿಳಿಯುವ ಮೊದಲು ಅದರ ಹಿನ್ನೆಲೆ ತಿಳಿದು ನಂತರ ಹಬ್ಬದ ವಿವರಣೆ ತಿಳಿಯುವುದು ಸೂಕ್ತ.

ಕಥೆ-೧

"ಹಿಂದೆ ಶ್ರೀ ಕೃಷ್ಣನು(ವಿಷ್ಣುವು) ಹಲವು ಅವತಾರಗಳನ್ನು ಎತ್ತಿದ ಸಂದರ್ಭದಲ್ಲಿ ನರನಾಗಿ ಭೂಮಿಯ ಮೇಲೆ ಜನಿಸಿದಾಗ ಭಾಗ್ಯದ ಲಸ್ಮವ್ವ ಎಂಬ ಬೇಡರ ಕನ್ಯೆಯನ್ನು ನೋಡಿ ಮೋಹಿಸಿ ಅವಳನ್ನು ಪಡೆಯಲು ಹಲವು ವೇಷಗಳನ್ನು ಧರಿಸಿ ಅವಳ ಬಳಿ ಹೋಗುತ್ತಾನೆ. ಭಿಕ್ಷುಕನಾಗಿ, ದಾಸಯ್ಯನಾಗಿ ಹೀಗೆ ಹಲವು ಬಾರಿ ಹೋಗಿ ಅವಳನ್ನು ವರಿಸಿಕೊಂಡು ಮದುವೆ ಆಗುತ್ತಾನೆ. ಇವರಿಬ್ಬರ ಮದುವೆಯ ಘಟನೆಯನ್ನು ಸ್ಮರಿಸುವ ನೆಪದಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ ಎನ್ನುತ್ತಾರೆ."(ಮಾಹಿತಿ; ಗೊಂಚಿಗಾರ್ ಬೋರಯ್ಯ, ೬೦, ಕಂಪಳದೇವರ ಹಟ್ಟಿ)

ಕಥೆ-೨

ಡಾ.ಎ.ಎಸ್.ಪ್ರಭಾಕರ ಅವರು ತಮ್ಮ ಮ್ಯಾಸಬೇಡರ ಕಥನಗಳು ಎಂಬ ಗ್ರಂಥದಲ್ಲಿ ಹೇಳಿರುವಂತೆ ಒಮ್ಮೆ ಹಟ್ಟಿಯಲ್ಲಿ ಕಂಪಳ ರಂಗಸ್ವಾಮಿಯ ಒಡವೆಗಳನ್ನು ಕಳ್ಳರು ಕದ್ದುಕೊಂಡು ಹೋಗಿರುತ್ತಾರೆ. ಈ ವಿಷಯ ಎಲ್ಲಿಯೋ ಇದ್ದ ಬೇಡರ ಸಾಂಸ್ಕೃತಿಕ ನಾಯಕ ಪಾಪನಾಯಕನಿಗೆ ಸ್ವಪ್ನದಲ್ಲಿ ಕಂಡುಬರುತ್ತದೆ. ಆಗ ತನ್ನ ಕೈಯಲ್ಲಿದ್ದ ನಾಗಮುರಿ ಬೆತ್ತವನ್ನು ಕಳುಹಿಸುತ್ತಾನೆ. ಆ ನಾಗಮುರಿ ಬೆತ್ತ ಕಳ್ಳರನ್ನು ಹೊಡೆದೋಡಿಸಿ ಒಡವೆಗಳನ್ನು ತಂದು ಕೊಡುತ್ತದೆ. ಆಗ ಅಲ್ಲಿಗೆ ಬಂದ ಪಾಪನಾಯಕ ತಮ್ಮ ದೇವರ ಒಡವೆಗಳನ್ನು ತಂದು ಕೊಟ್ಟ ನಾಗಮುರಿ ಬೆತ್ತವನ್ನು ಹನ್ನೆರಡು ವರ್ಷಗಳಿಗೊಮ್ಮೆ ಹೆಡೆಕಟ್ಟಿನ ಹಬ್ಬ ಮಾಡಿ ಪೂಜಿಸಿ ಎಂದು ಹೇಳುತ್ತಾನೆ. ಅಂದಿನಿಂದ ಈ ಹಬ್ಬವನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಈ ಕಥೆಗೆ ಸಂಬಂಧಿಸಿದಂತೆ ಹೇಳುವುದಾದರೆ "ಹಂಪಿ ಪರಿಸರದಲ್ಲಿನ ಒಂದು ಜನಪ್ರಿಯ ಕಥೆಯ ಪ್ರಕಾರ ಹಂಪಿ ಹೊಳೆಯ ಸುತ್ತಮುತ್ತ ಏಳು ಮಲೆಗಳಿದ್ದವು ಅವುಗಳಲ್ಲಿ ದೋಣಿಮಲೆ, ಎರ್ರಮಲೆ, ಸಿಂಗಮಲೆ, ನಲ್ಲಮಲೆಗಳು ಪ್ರಸಿದ್ಧವಾಗಿದ್ದವು. ಈ ಮಲೆಗಳ ಒಡೆಯ ಮಲ್ಲಿನಾಯಕ, ಇವನ ಮಗನೇ ಪಾಪನಾಯಕ"[೨]. ಇವನದು ಅಸಹಜ ಜನನ(ತಾಯಿಯ ಬೆನ್ನಿನಿಂದ ಕಾಲು ಮುಂದುಮಾಡಿ ಹುಟ್ಟುತ್ತಾನೆ) ಆದ್ದರಿಂದ ಇವನನ್ನು ಪಿಶಾಚಿ ಎಂದು ತಿಳಿದ ತಂದೆ ತಾಯಿಗಳು ಮಗುವನ್ನು ಕಾಡಿಗೆ ಬಿಟ್ಟು ಬರುತ್ತಾರೆ. ಮುಂದೆ ಅವನೊಬ್ಬ ಸಂತನಾಗುತ್ತಾನೆ. ಈ ಮೇಲೆ ವಿವರಿಸಿದಂತೆ ಕಂಪಳದೇವರ ಹಟ್ಟಿ ಪರಿಸರದಲ್ಲಿನ ಜನಪ್ರಿಯ ಕಥೆಯ ನಾಯಕ ಪಾಪನಾಯಕ ಹುಟ್ಟಿದ ಸ್ಥಳ ಹಂಪಿಯ ಪರಿಸರ ಆದ್ದರಿಂದ ಈ ಹಬ್ಬದ ನಂತರ ಬೇಡರು ಹಂಪಿಗೆ ಬಂದು ಹೋಗುತ್ತಾರೆ ಎಂದು ಊಹಿಸಬಹುದು.

ಕಥೆ-೩

ಹಿಂದೆ ಕಾಡಿನಲ್ಲಿ ಚೆಂಚಮ್ಮ ಚಂಚಯ್ಯ ಎಂಬ ಅಣ್ಣ ತಂಗಿ ಬೇಟೆ, ಆಹಾರ ಸಂಗ್ರಹಣೆ, ಪಶುಪಾಲನೆ ಮಾಡುತ್ತಾ ನೆಲೆಸಿದ್ದರು. ಒಂದು ದಿನ ಚೆಂಚಯ್ಯ ಕಾಡಿಗೆ ಬೇಟೆಗೆ ಹೋದಾಗ ಅದೇ ಸಂದರ್ಭದಲ್ಲಿ ವಿಷ್ಣುವು(ಕೃಷ್ಣನು) ಲೋಕ ಸಂಚಾರಕ್ಕೆ ಬಂದನು. ಆಗ ಕೃಷ್ಣನು ಚೆಂಚಮ್ಮಳನ್ನು ನೋಡಿ ಮೋಹಗೊಂಡು ಅವಳನ್ನು ವರಿಸಲು ಹಲವು ವೇಷಗಳನ್ನು ಧರಿಸಿ ಬರುತ್ತಾನೆ. ಕೊನೆಗೆ

ಹುಲಿಯ ವೇಷ ಧರಿಸಿ ಅವಳನ್ನು ಹೊತ್ತೊಯ್ದು ತನ್ನ ಗುಹೆಯಲ್ಲಿಟ್ಟುಕೊಳ್ಳುತ್ತಾನೆ. ಅವಳಿಗೆ ಅವನು ವಿಷ್ಣು ಎಂದು ತಿಳಿದು ಒಲಿಯುತ್ತಾಳೆ. ಸಂಚಯ್ಯ/ಚೆಂಚಯ್ಯ ಬೇಟೆಯಿಂದ ತಮ್ಮ ಗುಡಿಸಲಿಗೆ ಬರುತ್ತಾನೆ. ಅಲ್ಲಿ ತಂಗಿ ಚೆಂಚವ್ವ ಇಲ್ಲದ್ದನ್ನ ನೋಡಿ ಗಾಬರಿಯಿಂದ ಹುಡುಕಾಡುತ್ತಾನೆ. ಹೀಗೆ ಚೆಂಚವ್ವಳನ್ನು ಹುಡುಕಿಕೊಂಡು ಹೋದಾಗ ಅವಳು ಪರಪುರುಷನೊಂದಿಗೆ ಗುಹೆಯಲ್ಲಿರುವುದನ್ನು ಕಂಡು ಚೆಂಚಯ್ಯ ತಂಗಿಯು ಯಾರೊಡನೆಯೋ ಅನೈತಿಕ ಸಂಬಂಧ ಹೊಂದಿದ್ದಾಳೆ ಎಂದು ತಿಳಿದು ಆ ವ್ಯಕ್ತಿಯ ತಲೆಗೆ ದೊಣ್ಣೆಯಿಂದ ಹೊಡೆಯುತ್ತಾನೆ. ಆಗ ಅವನ ತಲೆ ೭ ತುಂಡುಗಳಾಗುತ್ತದೆ. ಇದನ್ನು ನೋಡಿದ ಚಂಚವ್ವ ತನ್ನ ಅಣ್ಣನಿಗೆ ನೀನು ಎಂಥ ತಪ್ಪು ಮಾಡಿದೆ ನನ್ನನ್ನು ಮದುವೆಯಾದವನು ವಿಷ್ಣುವು ಎಂದು ಸತ್ಯ ಹೇಳುತ್ತಾಳೆ. ಆಗ ಚೆಂಚಯ್ಯ ತನ್ನ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿ ಹುತ್ತದ ಮೇಲೆ ಬೆಳೆದ ಎರಡು ಹಾಸಿನ ಮರಗಳನ್ನು ಕಡಿದು ತಂದು ೭ ಹೆಡೆಯ ಸರ್ಪದ ಹಾಗೆ ಹೆಣೆದು ಪೂಜಿಸಿ ಪ್ರಾರ್ಥಿಸಿಕೊಳ್ಳುತ್ತಾನೆ ಅಂದಿನಿಂದ ಈ ಹೆಡೆಕಟ್ಟಿನ ಹಬ್ಬ ಮ್ಯಾಸಬೇಡರಲ್ಲಿ ರೂಢಿಗೆ ಬಂದಿದೆ ಎಂದು ಹೇಳುತ್ತಾರೆ."(ಜಗಳೂರಯ್ಯ, ೩೫, ಕಂಪಳದೇವರ ಹಟ್ಟಿ)

**ಕಥೆ–೪**

ಬೇಡರ ಗುಂಪು ಹಿಂದೆ ಕಾಡಿನಲ್ಲಿ ಹಟ್ಟಿಕಟ್ಟಿಕೊಂಡು ತಮ್ಮ ಪೆಟ್ಟಿಗೆ ದೇವರನ್ನು ಪೂಜಿಸಿಕೊಂಡು ದೇವರ ಎತ್ತುಗಳೊಂದಿಗೆ ಜೀವಿಸುತ್ತಿರುವಾಗ ಒಂದು ದಿನ ಬೆಂಕಿಯ ಮಳೆ ಸುರಿಯಿತು. ಆಗ ಬೇಡರು ಹೆದರುತ್ತಾರೆ ಮತ್ತು ತಮ್ಮ ದೇವರನ್ನು ನಾವು ಕಾಪಾಡಿಕೊಳ್ಳದಾದೇವು ಎಂದು ಬೇಡರ ಒಬ್ಬ ವ್ಯಕ್ತಿ ತನ್ನ ಕೈಯಲ್ಲಿದ್ದ ಕತ್ತಿಯಿಂದ ಹೊಟ್ಟೆಗೆ ಹೊಡೆದುಕೊಂಡು ಸಾಯಲು ಮುಂದಾಗುತ್ತಾನೆ. ಆಗ ಒಂದು ಸರ್ಪವು ತನ್ನ ೭ ಹೆಡೆಗಳನ್ನು ಬಿಚ್ಚಿ ಬೇಡರ ಗುಂಪು ಮತ್ತು ಅವರ ಪೆಟ್ಟಿಗೆ ದೇವರ ಮೇಲೆ ಕೊಡೆಯ ತರಹ ನೆರಳಾಗಿ ನಿಲ್ಲುತ್ತದೆ ಹೀಗೆ ತಮ್ಮನ್ನು, ತಮ್ಮ ದೈವವನ್ನು ಕಾಪಾಡಿದ ೭ ಹೆಡೆಯ ಸರ್ಪಕ್ಕೆ ಕೃತಜ್ಞತೆ ಸಲ್ಲಿಸುವ ಭಾವನೆಯಿಂದ ಈ ಹೆಡೆಕಟ್ಟಿನ ಹಬ್ಬವನ್ನು ಮಾಡುತ್ತಾರೆ.

**ಹಬ್ಬದ ವಿಶೇಷತೆ/ಹಬ್ಬದಲ್ಲಿ ವಿಶೇಷವಾಗಿ ಬೇಕಾದ ವಸ್ತುಗಳು**

ಈ ಹಬ್ಬದಲ್ಲಿ ಕೆಲವೊಂದು ವಸ್ತುಗಳು ವಿಶೇಷವಾಗಿ ಬೇಕಾಗುತ್ತವೆ. ಅವುಗಳನ್ನು ಇಂತಿಂಥಹ ಕೋಮುದಾರರೇ ತರಬೇಕು ಎಂಬ ನಿಯಮ ಇವರಲ್ಲಿದೆ. ಹೆಡೆಕಟ್ಟು ಹಬ್ಬದಲ್ಲಿ ಪ್ರಮುಖವಾಗಿ ಬೇಕಾಗುವ ವಸ್ತುಗಳು ಅವುಗಳನ್ನು ತರುವವರು ಮತ್ತು ಹಬ್ಬದ ಪ್ರಮುಖ ವಿಶೇಷತೆಗಳೆಂದರೆ.

- ಈ ಹಬ್ಬದಲ್ಲಿ ಕಂಪಳರಂಗಸ್ವಾಮಿಯ ಪೌಳಿಯ ಪಕ್ಕದಲ್ಲಿ ಬಿದಿರಿನ ಅಥವಾ ಕೌಂಸಿ ಹುಲ್ಲಿನ ೭ ಚಿಕ್ಕ ಗುಡಿಸಲುಗಳನ್ನು ಹಾಕಿ ಅವುಗಳಿಗೆ ಎಳ್ಳುಚಿಗಳಿ, ಹಸಿ ಹಿಟ್ಟಿನ ಉಂಡೆಗಳನ್ನು ಬಾಳೆಹಣ್ಣನ್ನು ಎಡೆಯಾಗಿ ಇಡುತ್ತಾರೆ.
- ಹುತ್ತದ ಮೇಲೆ ಬೆಳೆದಿರುವ ಎರಡು ಹಾಸಿನ ಮರಗಳನ್ನು ಕಡಿದು ತರುತ್ತಾರೆ ಮತ್ತು ಅವುಗಳನ್ನು ಹಾವಿನ ಹೆಡೆಯ ಆಕಾರದಲ್ಲಿ ಹೆಣೆಯುತ್ತಾರೆ.

• ತುಮಕೂರ್ಲಹ್ಳಿಯ ಪೆದ್ದಾಳ ನಾಯಕನವರು ಎಂಬ ಕೋಮುದಾರರು ಹಬ್ಬಕ್ಕೆ ಬೇಕಾದ ೯ ವಸ್ತುಗಳನ್ನು ತರುತ್ತಾರೆ ಅವುಗಳೆಂದರೆ

೧. ಬಾಗುನೂರು-ಬಾಳೆಹಣ್ಣು (ಬಾಳೆಪಂಡು)

೨. ನಿಡುಗಲ್ಲು-ನಿಚ್ಚೆಮಲ್ಲೆ

೩. ಮರುಮಲೆ-ಕ್ಯಾದಿಗೆ

೪. ಆಕುನೂರು- ಆಕು/ವಿಳ್ಯೆದೆಲೆ

೫. ಗುಂಟೂರು-ಅಡಿಕೆ ಮತ್ತು ಬೆಲ್ಲ

೬. ನಗರಮ್ಮಗೆರೆ-ತೆಂಗಿನಕಾಯಿ

೭. ಶರಣಲು ಬೆಟ್ಟ(ಗುಡೇಕೋಟೆ ಹತ್ತಿರ) - ಬಿಲ್ವಪತ್ರೆ

೮. ಪಾವಗಡ- ಪಚ್ಚೆನ್ನು ಎಣ್ಣೆ

೯. ನಾಯಕನ ಹಟ್ಟಿ-ಹೊಂಬಾಳೆ

ಈ ವಸ್ತುಗಳು ಅಲ್ಲದೇ ಅದೇ ತುಮಕೂರ್ಲಹ್ಳಿಯ ಮಾಸೇಲಾರು ಎಂಬ ಕೋಮುದಾರರು ಹೂವಿನ ಅಚ್ಚಡ ಮತ್ತು ರತ್ನ ಗಂಬಳಿ ತರುತ್ತಾರೆ ಇವುಗಳನ್ನು ದೇವರ ಮೇಲೆ ಹೊದಿಸಲು ವಿಶೇಷವಾಗಿ ತಯಾರಿಸಿರುತ್ತಾರೆ. ದಾವಣಗೆರೆಯಿಂದ ಈ ವಸ್ತು, ಹೊದಿಕೆಗಳನ್ನು ತಂದಿರುತ್ತಾರೆ.

**ಹೆಡೆಕಟ್ಟು ಹಬ್ಬದ ವಿವರಣೆ**

ಹಿಂದೆ ದಿನಾಂಕ: ೧೨-೧೨-೧೯೭೫ ರಲ್ಲಿ ನಡೆದ ಈ ಹಬ್ಬ ಈ ಬಾರಿ ದಿನಾಂಕ: ೦೨-೧೨-೨೦೧೬ ರಿಂದ ೧೧-೧೨-೨೦೧೬ ರ ವರೆಗೆ ಹಟ್ಟಿಯಲ್ಲಿ ನಡೆಯಿತು. ಮೊದಲ ದಿನ ಅಂದರೆ ೦೨-೧೨-೨೦೧೬ ರಂದು ಶುಕ್ರವಾರ ಕಂಪಳರಂಗಸ್ವಾಮಿ ಮತ್ತು ಪಾಪನಾಯಕ ಸ್ವಾಮಿ ದೇವರುಗಳನ್ನು ಮೂಲ ಗುಡಿಯಿಂದ ಹೊರಡಿಸಿ ಜಾತ್ರೆ ನಡೆಯುವ ಬಯಲಿನಲ್ಲಿನ ಪಾಪನಾಯಕ ದೇವರ ಪೌಳಿ ಮತ್ತು ಕಂಪಳರಂಗಸ್ವಾಮಿ ಪೌಳಿಗಳಲ್ಲಿ ಆಯಾ ದೇವರುಗಳನ್ನು ತಂದು ಇರಿಸಲಾಗುತ್ತದೆ. ಎರಡನೆಯ ದಿನ ೦೩-೧೨-೨೦೧೬ ರಂದು ಹಿರೇಶನಿವಾರ ಎಂದು ವಿಶೇಷವಾಗಿ ಪೂಜೆ ಮಾಡುತ್ತಾರೆ. ಅಂದು ದೇವರಿಗೆ ಬೆಣ್ಣೆಯ ಮೀಸಲು ನೀಡುತ್ತಾರೆ. ಅಲ್ಲದೆ ಇಂದು ಕಂಪಳರಂಗನಿಗೆ ಮತ್ತು ಪಾಪೇದೇವರಿಗೆ ಹೊಸ ಪೌಳಿಗಳನ್ನು ನಿರ್ಮಿಸುತ್ತಾರೆ. ಮೂರನೇ ದಿನ ೦೪-೧೨-೨೦೧೬ ಭಾನುವಾರ ಬೆಳಗಿನ ಜಾವ ಮಹಾಪೂಜೆ ನಡೆಯುತ್ತದೆ. ನಂತರ ಪ್ರಸಾದ ವಿನಿಯೋಗವಿರುತ್ತದೆ ಅಂದು ಬೆಳಿಗ್ಗೆ ೯.೦೦ ಗಂಟೆಯಿಂದ ೧೦.೦೦ ಗಂಟೆವರೆಗೆ ದೇವರ ಎತ್ತುಗಳು ಆಗಮಿಸುತ್ತವೆ. (ದೇವರ ಎತ್ತುಗಳನ್ನು ಕಿಲಾರಿಗಳು ಅಡವಿಯಲ್ಲಿ ಮೇಯಿಸುತ್ತಾ ಸಂಚರಿಸುತ್ತಿರುತ್ತಾರೆ. ಹಬ್ಬದ ದಿನ ಮಾತ್ರ ಅವುಗಳನ್ನು ಹೊಡೆದುಕೊಂಡು ಬರುತ್ತಾರೆ). ಸೋಮವಾರ ಮತ್ತು ಮಂಗಳವಾರ ಹಟ್ಟಿಯಲ್ಲಿ

ವಿಶೇಷವೇನೂ ಇರುವುದಿಲ್ಲ ಬುಧವಾರ ಬೆಳಗಿನ ಜಾವ ಮೊಳಕಾಲ್ಮೂರು ಹತ್ತಿರದ ನೆರ್ಲಳ್ಳಿ ಮತ್ತು ಮರ್ಲಳ್ಳಿಯ ಮ್ಯಾಸಬೇಡರು ಹುತ್ತದ ಮೇಲೆ ಬೆಳೆದಿರುವ ಯಾರು ಕೊಡಲಿ-ಮಚ್ಚಿನಿಂದ ಪೆಟ್ಟು ಮಾಡದಿರುವ ಎರಡು ಹಾಸಿನ ಮರಗಳನ್ನು ಕಡಿದು ಅವುಗಳನ್ನು ನೆಲಕ್ಕೆ ಇಡದಂತೆ ಕರಿಕಂಬಳಿಯಲ್ಲಿ ಸುತ್ತಿಕೊಂಡು ಹೊತ್ತುಕೊಂಡು ಬರುತ್ತಾರೆ. ಬರುವ ದಾರಿಯ ಮದ್ಯದಲ್ಲಿ ಅಂದು ಸಂಜೆ ಮರಗಳನ್ನು ಕರಿ ಕಂಬಳಿಗಳ ಮೇಲೆ ಇಟ್ಟು ೨೧ ಕುರಿಗಳನ್ನು ಕಡಿದು ಬೇಟೆಮಾಡಿ ಎಲ್ಲರೂ ಸೇರಿ ಅಂದು ಮಾಂಸದ ಊಟ ಮಾಡಿ ಮರುದಿನ ಅಂದರೆ ಗುರುವಾರ ಬೆಳಗಿನ ಜಾವ ಮರಗಳನ್ನು ಹೊತ್ತು ಹೊರಡುತ್ತಾರೆ.

ಒಟ್ಟಾರೆ ಈ ಮರಗಳನ್ನು ೮-೧೦ ಕಿ.ಮೀ ಗಳಿಂದ ಹೊತ್ತು ತರುತ್ತಾರೆ. ಗುರುವಾರ ಬೆಳಗಿನ ಜಾವ ೮:೦೦ ಗಂಟೆಗೆ ಜಾತ್ರೆ ನಡೆಯುವ ಸ್ಥಳಕ್ಕೆ ಮರಗಳನ್ನು ಹೊತ್ತು ತರುತ್ತಾರೆ ಆ ಮರಗಳನ್ನು ತಂದು ಕಂಪಳರಂಗಸ್ವಾಮಿ ಪೌಳಿಯ ಮುಂದೆ ಇಟ್ಟು ಎರಡೂ ಮರಗಳನ್ನು ಸೇರಿಸಿ ೭ ಹೆಡೆಯ ಸರ್ಪದ ಹಾಗೆ ಹೆಣೆದು ಎರಡು ತಗ್ಗು ತೋಡಿ ಪೂರ್ವಾಭಿಮುಖವಾಗಿ ಎರಡು ಮರಗಳನ್ನು ನೆಡುತ್ತಾರೆ. ಆ ಗುಂಡಿಗಳನ್ನು ತೋಡುವ ಮೊದಲು ಭೂಮಿ ಪೂಜೆಯನ್ನು ಮೊದಲು ಹಟ್ಟಿನಾಯಕರು ಎಂಬ ಕೋಮುದಾರರು ಮಾಡುತ್ತಾರೆ. ನಂತರ ೬-೭ ಅಡಿ ಆಳಕ್ಕೆ ಎರಡು ಕುಣಿಗಳನ್ನು ತೋಡುತ್ತಾರೆ ಆ ಕುಣಿಗಳಲ್ಲಿ ಹೆಡೆಯ ಆಕಾರಕ್ಕೆ ಹೆಣೆದ ಜೋಡಿ ಮರಗಳನ್ನು ನೆಡುತ್ತಾರೆ. ಏಳು ಹೆಡೆಯ ಆಕಾರ ಹೆಣೆದ ಹೆಡೆಗಳಿಗೆ ೭ ತೆಂಗಿನಕಾಯಿ(ಅಂತರಗಾಯಿ) ಕಟ್ಟುತ್ತಾರೆ ಮತ್ತು ಹೂವುಗಳಿಂದ ಅಲಂಕರಿಸಿರುತ್ತಾರೆ.

ಅಂದು ಸಂಜೆ ೫:೦೦ ಗಂಟೆಯಿಂದ ಪಚ್ಚೆತೆನೆ ಹೂವಿನ ಅಚ್ಚಡವನ್ನು ದೇವರಿಗೆ ಹೊದಿಸುತ್ತಾರೆ. ಈಗಾಗಲೇ ಹೇಳಿದಂತೆ ಇವುಗಳನ್ನು ತುಮಕೂರ್ಲಳ್ಳಿಯ ಮಾಸೇಲಾರು ಎಂಬ ಕೋಮುದಾರರು ತಂದಿರುತ್ತಾರೆ. ಪಚ್ಚೆತೆನೆ ಎಂದರೆ ಹಸಿರು ಎಲೆಗಳಿಂದ ಮಾಡಿದ ಹೊದಿಕೆ ಹಾಗೆ ಹೂವಿನ ಅಚ್ಚಡ ಎಂದರೆ ಹೂವುಗಳಿಂದ ಹೆಣೆದ ಹೊದಿಕೆ ಇವುಗಳನ್ನು ಕಂಪಳರಂಗ ಸ್ವಾಮಿಗೆ ಹೊದಿಸುತ್ತಾರೆ.

ಮರುದಿನ ೯-೧೨-೧೬ ರಂದು ಶುಕ್ರವಾರ ಬೆಳಗಿನ ಜಾವ ೪:೩೦ ರಿಂದ ಮಹಾ ಪೂಜೆಯಾಗುತ್ತದೆ(೧೦೧ ಪೂಜೆ ನಡೆಯುತ್ತದೆ) ಈ ಹಿಂದಿನ ದಿನದಿಂದ ಉಪವಾಸವಿದ್ದ(ಒಂದೊತ್ತು ಇದ್ದ) ಪೂಜಾರಿಯು ಮಹಾ ಪೂಜೆಯಾದ ನಂತರ ಭಕ್ತರು ತಂದಿರುವ ಮೊಸರು, ಬೆಣ್ಣೆಯ ಮೀಸಲು, ಮತ್ತು ಅನ್ನದ ಮಿಶ್ರಣದ ಪ್ರಸಾದವನ್ನು ಸ್ವೀಕರಿಸಿ ಒಂದೊತ್ತನ್ನು ಬಿಡುತ್ತಾರೆ. ನಂತರ ಏಳು ಮಂದಿ ಹಿರಿಯರು, ಮೂರು ಮಂದಿ ನಾಯಕರು, ದಾಸಯ್ಯಗಳು, ಹೀಗೆ ವಿವಿಧ ಕೋಮುದಾರರು ಹಂತ ಹಂತವಾಗಿ ಕುಳಿತು ಪ್ರಸಾದವನ್ನು ಸ್ವೀಕರಿಸುತ್ತಾರೆ. ನಂತರ ಎಲ್ಲರೂ ದಾಸೋಹ ಮಾಡುತ್ತಾರೆ. ಮೊದಲು ಕಂಪಳರಂಗಸ್ವಾಮಿಯ ಗುಡಿಯ ಹತ್ತಿರ ದಾಸೋಹ ನಡೆಯುತ್ತದೆ, ನಂತರ ಪಾಪನಾಯಕ ಸ್ವಾಮಿಯ ಗುಡಿಯ ಹತ್ತಿರ ದಾಸೋಹ ನಂತರ ಹಟ್ಟಿ ನಾಯಕರು/ಕರಿನಾರಿನವರು ಎಂಬುವರು ಕಂಪಳರಂಗಸ್ವಾಮಿಯ ಗುಡಿಯ ಹತ್ತಿರ ದಾಸೋಹ ಮಾಡುತ್ತಾರೆ. ಅವರು ಈ ಹಬ್ಬದಲ್ಲಿ

ಹಿರೇರನ್ನು(ಹಿರಿಯರ ಹಬ್ಬವನ್ನು) ಮಾಡುತ್ತಾರೆ. ಮಣ್ಣಿನ ಮಗಿಗಳನ್ನಿಟ್ಟು ಅವಕ್ಕೆ ಹೊಸ ಬಟ್ಟೆಯನ್ನು ಹೊದಿಸಿ ಕಾಯಿ ಹೊಡೆದು ಪೂಜೆ ಮಾಡುತ್ತಾರೆ.

**ಬೋಡೇಪಾಲನಾಯಕರಿಂದ ಬುಡಕಟ್ಟು ಕುಣಿತ**

ನಂತರ ಮಧ್ಯಾಹ್ನ ೨:೦೦ ಗಂಟೆಯಿಂದ ಬೋಡೇಪಾಲನಾಯಕರು ಎಂಬ ಬೆಡಗಿನವರಿಂದ ಬುಡಕಟ್ಟು ಕುಣಿತ ವಿರುತ್ತದೆ. ಇವರು ಕಂಪಳದೇವರ ಹಟ್ಟಿ ಹತ್ತಿರದ ಮುತ್ತಿಗಾರ ಹಳ್ಳಿ ಎಂಬ ಗ್ರಾಮದವರಾಗಿರುತ್ತಾರೆ. ಇವರು ಈ ಮೊದಲೇ ಹಾಸಿನ ಮರದ ೭ ತೊಗಟೆಗಳನ್ನು ಕಡಿದುಕೊಂಡು ದೋಣಿಯ ಆಕಾರದಲ್ಲಿ(ತಟ್ಟೆಯ) ಮಾಡಿಕೊಂಡು ಆ ಮರದ ತೊಗಟೆಯನ್ನು ಕರಿ ಕಂಬಳಿಯಲ್ಲಿ ಸುತ್ತಿಕೊಂಡು ಬಂದಿರುತ್ತಾರೆ. ಉರುಮೆ ವಾದ್ಯಗಳೊಂದಿಗೆ ಈ ಬೊಡೇಪಾಲನಾಯಕರು ಹಟ್ಟಿಯ ಪಕ್ಕ ಇರುವ ಚಿನ್ನಹಗರಿ ನದಿಗೆ ಗಂಗೆಗೆ ಹೋಗುತ್ತಾರೆ. ಅಲ್ಲಿ ನದಿಯಲ್ಲಿ ನೀರು ಇಲ್ಲದಿದ್ದರೆ ಚಿಲುಮೆಯನ್ನು ತೋಡಿ ನೀರು ಬರಿಸಿ ಆ ನೀರಿನಿಂದ ಚಿಲುಮೆಯ ದಂಡೆಯ ಮೇಲೆ ೭ ಸಣ್ಣ ಕಲ್ಲುಗಳನ್ನು ಇಟ್ಟು ಬಾಳೆಹಣ್ಣು, ಎಲೆ ಅಡಿಕೆ ಇಟ್ಟು ಅವರು ತಂದಿರುವ ೭ ಹಾಸಿನ ಮರದ ದೋಣಿಗಳನ್ನಿಟ್ಟು ಮುಖಕ್ಕೆ ಕಣ್ಣು ಮಾತ್ರ ಕಾಣುವಂತೆ ಬಟ್ಟೆ ಕಟ್ಟಿಕೊಂಡು ಪೂಜಿಸಿ ನಂತರ ೭ ಜನ ಬೋಡೆ ಪಾಲನಾಯಕರು ಬರಿ ಮೈಗೆ ವಿಭೂತಿ ಕುಂಕುಮ ಬಳಿದುಕೊಂಡು ಸೊಂಟಕ್ಕೆ ಕರಿಕಂಬಳಿ ಕಟ್ಟಿಕೊಂಡು ನೋಡಿದವರು ಭಯಗೊಳ್ಳುವಂತೆ ಸಿದ್ದರಾಗುತ್ತಾರೆ. ನಂತರ ಅಲ್ಲಿಂದ ಮೆರವಣಿಗೆಯಲ್ಲಿ ಆ ೭ ದೋಣಿಗಳನ್ನು ಒಬ್ಬೊಬ್ಬ ವ್ಯಕ್ತಿ ಹೆಗಲ ಮೇಲೆ ಅಥವಾ ತಲೆಯ ಮೇಲೆ ಹೊತ್ತುಕೊಂಡು ಜಾತ್ರೆ ನಡೆಯುವ ಸ್ಥಳಕ್ಕೆ ಬಂದು ಕಂಪಳರಂಗಸ್ವಾಮಿ ಗುಡಿಯ ಮುಂದೆ ಕುಣಿಯುತ್ತಾರೆ. ಆಗ ಪೂಜಾರಿಯು ಬಾಳೆಹಣ್ಣು ತುಪ್ಪದಿಂದ ತಯಾರಿಸಿರುವ ಬಾನವನ್ನು ಆ ದೋಣಿ ಅಥವಾ ಮರದ ತಟ್ಟೆಯಲ್ಲಿ ಹಾಕುತ್ತಾರೆ. ಬೋಡೇಪಾಲನಾಯಕರು ಆ ಬಾನವನ್ನು ಕೈಯಿಂದ ಮುಟ್ಟದೇ ಮಂಡಿಯೂರಿ ಕುಳಿತು ಬಾಗಿ ತಿನ್ನುತ್ತಾರೆ. ಈ ಆಚರಣೆಯನ್ನು ನೋಡಿದರೆ ಇದೊಂದು ಆದಿಮ ಸಂಸ್ಕೃತಿಯ ಪ್ರತೀಕ ಎಂದು ಅನಿಸುತ್ತದೆ ಈ ಆಚರಣೆಯಿಂದ ಬೇಡ ಬುಡಕಟ್ಟು ಎಷ್ಟು ಪ್ರಾಚೀನತೆಯ ಸಮುದಾಯ ಎಂದು ತಿಳಿಯ ಬಹುದಾಗಿದೆ.

**ಮುತ್ತಿನ ಕಾಲುಪೆಂಡೆ ತೋರಿಸುವುದು**

ಆ ದಿನ ಸಂಜೆ ಪೂಜಾರಿ ತನ್ನ ಕೈಗೆ ದೇವರ ಪವಿತ್ರ ಒಡವೆಯಾದ ಮುತ್ತಿನ ಕಾಲುಪಂಡೆಯನ್ನು ಧರಿಸಿ ಎತ್ತರವಾದ ಸ್ಥಳದಲ್ಲಿ ನಿಂತು ಎಲ್ಲಾ ಭಕ್ತಾದಿಗಳಿಗೆ ಕಾಣುವಂತೆ ತೋರಿಸುತ್ತಾನೆ. ಅದನ್ನು ನೋಡಿದ ಜನರು ಹರ್ಷೋದ್ಗಾರ ಮಾಡುತ್ತಾರೆ. ಎಲ್ಲರೂ ಮುತ್ತಿನ ಕಾಲಪಂಡೆ ದರ್ಶನ ಪಡೆದು ಸಂತೋಷಿಸುತ್ತಾರೆ ಇವಿಷ್ಟು ಈ ಹಬ್ಬದ ವಿಶೇಷತೆಗಳು.

ಮರುದಿನ ೧೦-೧೨-೧೬ ಶನಿವಾರ ಸಂಜೆ ೫:೦೦ ಗಂಟೆಯಿಂದ ರಾತ್ರಿ ೯:೩೦ರ ವರೆಗೆ ಮರುದೀಪ ಪೂಜಾ ಕಾರ್ಯಕ್ರಮವಿರುತ್ತದೆ. ನಂತರ ಪ್ರಸಾದ ವಿನಿಯೋಗ ಕೊನೆಯ ದಿನ ೧೧-೧೨-೧೬ ರಂದು ಭಾನುವಾರ ಸಂಜೆ ೪:೦೦ ಗಂಟೆಗೆ ಪಾಪನಾಯಕದೇವರು ಮತ್ತು ಕಂಪಳರಂಗಸ್ವಾಮಿ

ದೇವರುಗಳನ್ನು ಪೌಳಿಯಿಂದ ಹಟ್ಟಿಯ ಒಳಗಿರುವ ಮೂಲ ಗುಡಿಗಳಿಗೆ ಗುಡಿದುಂಬಿಸಲಾಗುತ್ತದೆ. ಇದನ್ನು ದೇವರು ಗುಡಿದುಂಬುವ ಶಾಸ್ತ್ರ ಎಂದು ಕರೆಯುವರು. ಹೀಗೆ ೪ ದಿನಗಳ ಕಾಲ ನಡೆಯುವ ಈ ಹಬ್ಬದಲ್ಲಿ ಸಾವಿರಾರು ಭಕ್ತರು ಬಂದು ಸೇರುತ್ತಾರೆ ಕಾರಣ ಈ ಹಬ್ಬದಲ್ಲಿ ಮಾತ್ರ ದೇವರಿಗೆ ತೆಂಗಿನಕಾಯಿ ಒಡೆಯುವುದು ಮತ್ತು ದೇವರ ಮುತ್ತಿನ ಕಾಲುಪೆಂಡೆ ದರ್ಶನವಾಗುವುದು ಆದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಬರೀ ಮ್ಯಾಸಬೇಡರೆ ಈ ಹೆಡೆಕಟ್ಟಿನ ಹಬ್ಬಕ್ಕೆ ಕಂಪಳದೇವರ ಹಟ್ಟಿಯಲ್ಲಿ ಸೇರುತ್ತಾರೆ.

**ದೇವರೊಡನೆ ಹಂಪಿಗೆ ಬರುವುದು/ಗಂಗೆಗೆ/ ಜಲಧಿಗೆ ಬರುವುದು**

ಹಟ್ಟಿಯ ಹಿರಿಯರು ಹೇಳುವ ಪ್ರಕಾರ ಹೆಡೆಕಟ್ಟಿನ ಹಬ್ಬ ಮಾಡಿದ ನಂತರ ತಪ್ಪದೇ ಹಂಪಿಯ ಹೊಳೆಗೆ ಕಂಪಳರಂಗಸ್ವಾಮಿ ಮತ್ತು ಭಾಗ್ಯದ ಲಕ್ಷ್ಮಿ ಮತ್ತು ಪಾಪನಾಯಕ ದೇವರುಗಳನ್ನು ಹೊತ್ತುಕೊಂಡು ಇಡೀ ಬೇಡಗಂಪಣ ಹಂಪಿಯ ಹೊಳೆಗೆ ಬರಬರಕು. ತುಂಗಭದ್ರ ನದಿ/ಚಕ್ರತೀರ್ಥ/ತಿರುವಿನ ಮಡುವಿಗೆ ಬಂದು ಅಲ್ಲಿನ ಹೊಳೆಯ ದಂಡೆಯಲ್ಲಿ ಒಂದು ಬಂಡೆಯ ಮೇಲೆ ಪಾದಗಳ ಕೆತ್ತನೆಯ ಚಿತ್ರಗಳಿದ್ದು ಅಲ್ಲಿ ತಮ್ಮ ಪೆಟ್ಟಿಗೆ ದೇವರುಗಳನ್ನು ಇಟ್ಟು ಪೂಜಿಸಿಕೊಂಡು ಬರುವುದು ಪದ್ಧತಿ. ಇದು ಪರಂಪರೆಯಿಂದ ನಡೆದುಕೊಂಡು ಬಂದಿದೆ ಆ ಪಾದಗಳ ಕೆತ್ತನೆ ವೃತ್ತಾಕಾರವಾಗಿದ್ದು ಮಧ್ಯದಲ್ಲಿ ಶಿವಲಿಂಗದ ಕೆತ್ತನೆ ಇದೆ ಇದನ್ನು ಪಾದಗಟ್ಟೆ ಎಂದು ಕರೆಯುತ್ತಾರೆ. ಈ ಸ್ಥಳ ಮ್ಯಾಸ ಬೇಡರಿಗೆ ಪವಿತ್ರ, ಪುಣ್ಯ ಸ್ಥಳವಾಗಿದೆ.

ಹೆಡೆಕಟ್ಟಿನ ಹಬ್ಬದಲ್ಲಿ ಕಂಪಳರಂಗಸ್ವಾಮಿ ಮತ್ತು ಲಸ್ಮವ್ವಳಿಗೆ ಮದುವೆ ಮಾಡುತ್ತೇವೆ ನಂತರ ಶಿವರಾತ್ರಿ ಕಳೆದ ಮೇಲೆ ಅವರನ್ನು ಗಂಗೆ ಪೂಜೆಗೆ/ಜಲಧಿಗೆ ಹಂಪಿಗೆ ಕರೆತರುತ್ತೇವೆ. ಎಂದು ಹೇಳುತ್ತಾರೆ. ಇಡೀ ಮ್ಯಾಸ ಬೇಡರು ಕಂಪಳರಂಗಸ್ವಾಮಿಯ ಪೆಟ್ಟಿಗೆ/ಒಡವೆಗಳ ಪೆಟ್ಟಿಗೆಯನ್ನು ಹೊತ್ತುಕೊಂಡು ತಮ್ಮ ದೇವರ ಎತ್ತುಗಳನ್ನು ಹೊಡೆದುಕೊಂಡು ನಡೆದು ಹಂಪಿಗೆ ಹೋಗಿ ಅಲ್ಲಿನ ಚಕ್ರತೀರ್ಥದಲ್ಲಿ ತಮ್ಮ ಪೆಟ್ಟಿಗೆ ದೇವರುಗಳನ್ನು ಒಡವೆಗಳನ್ನು ಶುದ್ಧಿಗೊಳಿಸಿ ಪೆಟ್ಟಿಗೆಗಳಲ್ಲಿ ಅವುಗಳನ್ನಿರಿಸಿ ಪೂಜೆ ಮಾಡಿಕೊಂಡು ಮರಳಿ ಕಂಪಳದೇವರ ಹಟ್ಟಿಗೆ ನಡೆದುಕೊಂಡು ಬರುತ್ತಾರೆ.

ಕಂಪಳದೇವರ ಹಟ್ಟಿಯಿಂದ ಹೊರಟ ಬೇಡಗಂಪಣವನ್ನು ದಾರಿಯುದ್ದಕ್ಕೂ ಮ್ಯಾಸಬೇಡರೇ ಹೆಚ್ಚಾಗಿ ನೆಲೆಸಿರುವ ಕೆಲವು ಊರುಗಳಲ್ಲಿ ಇವರನ್ನು ಎದುರುಗೊಂಡು ಇವರಿಗೆ ಊಟ ನೀರು, ದೇವರ ಎತ್ತುಗಳಿಗೆ ಮೇವು ನೀರು ನೀಡಿ ಕಳುಹಿಸುತ್ತಾರೆ. ಮತ್ತು ಅಲ್ಲಿ ದಣಿವಾರಿಸಿಕೊಂಡು ಮರುದಿನ ಪ್ರಯಾಣ ಮುಂದುವರೆಸುತ್ತಾರೆ. ಪ್ರಯಾಣದಲ್ಲಿ ಬೇಡಗಂಪಣ ನಡೆದು ಬರುವ(ವಿಶ್ರಾಂತಿ ಪಡೆದು ಬರುವ) ಊರುಗಳೆಂದರೆ ವಲಸೆ, ನಡುವುಲಳ್ಳಿ, ಗುಡೇಕೋಟೆ, ರಾಮದುರ್ಗ, ಬಂಡ್ರಿ, ರಾಮಸಾಗರ ಹಟ್ಟಿ, ಬಣವಿಕಲ್ಲು, ಚಿಲುಕನಹಟ್ಟಿ, ಮರಿಯಮ್ಮನಹಳ್ಳಿ, ಹೊಸಪೇಟೆ, ಕಮಲಾಪುರ ನಂತರ ಹಂಪಿ ಹೀಗೆ ಈ ಎಲ್ಲಾ ಊರುಗಳಲ್ಲಿ ಮ್ಯಾಸಬೇಡರೇ ಹೆಚ್ಚಾಗಿದ್ದು ಈ ಊರುಗಳಲ್ಲಿ ರಾತ್ರಿ ಹೊತ್ತು ಉಳಿದು ಊಟ ವಸತಿ ಮಾಡಿ ಮರುದಿನ ಹೊರಡುತ್ತಾರೆ. ಕಾರಣ ದೇವರ ಪೆಟ್ಟಿಗೆಯನ್ನು

ಪಟ್ಟದ ಪೂಜಾರಿ ಒಬ್ಬರೇ ತಲೆಯ ಮೇಲೆ ಹೊರುವುದರಿಂದ ತುಂಬಾ ದಣಿಯುವುದರಿಂದ ವಿಶ್ರಾಂತಿ ಪಡೆಯಲು ತಂಗುತ್ತಾರೆ. ದೇವರನ್ನು ಬೇರೆಯವರು ಯಾರು ಹೋರುವಂತಿಲ್ಲ ಹಾಗೇನಾದರೂ ಅನಿವಾರ್ಯ ಬಂದರೆ 'ನಗರಿ ಪೂಜಾರಿ'(ನಗರಿ ಮನೆತನದ ಪೂಜಾರಿ ಕಂಪಳರಂಗಸ್ವಾಮಿಗೆ ಪಟ್ಟದ ಪೂಜಾರಿ ಮುಂಡಾಸು ದಾಸರು ಎಂಬ ಬೆಡಗಿನವರು ಮತ್ತು ನಗರಿ ಪೂಜಾರಿ ಎಂಬ ಮೊತ್ತೊಂದು ಬೆಡಗಿನ ಪೂಜಾರಿ ೨ ಬಗೆಯ ಪೂಜಾರಿಗಳಿರುತ್ತಾರೆ) ದೇವರ ಪೆಟ್ಟಿಗೆಯನ್ನು ಹೆಗಲಮೇಲೆ ಹೋರಬಹುದು. ಇವರು ತಲೆಯ ಮೇಲೆ ದೇವರ ಪೆಟ್ಟಿಗೆಯನ್ನು ಹೋರುವಂತಿಲ್ಲ ಪಟ್ಟದ ಪೂಜಾರಿ ಮಾತ್ರ ದೇವರನ್ನು ತಲೆಯ ಮೇಲೆ ಹೋರಬಹುದು.

ಹೀಗೆ ಹಂಪಿಗೆ ಬಂದ ಬೇಡರು ಹಂಪಿಯ ತಿರುವಿನ ಮಡುವು/ಚಕ್ರತೀರ್ಥದಲ್ಲಿ ಪೂಜೆಮಾಡಿಕೊಂಡು ಮರಳಿ ನಡೆದು ಹಟ್ಟಿಗೆ ಹೋಗುತ್ತಾರೆ. ಈ ಆಚರಣೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಬಯಲು ಸೀಮೆಯ ಮ್ಯಾಸಬೇಡರು ಮೂಲತಃ ಹಂಪಿ ಪರಿಸರದವರು ವಿಜಯನಗರದ ಪತನದ ನಂತರ ಇಲ್ಲಿನ ಬೇಡರು ತಮ್ಮ ದನಕರುಗಳು, ಮಕ್ಕಳು ಮರಿ, ದೇವರುಗಳ ಪೆಟ್ಟಿಗೆಯೊಂದಿಗೆ ವಲಸೆ ಹೋಗಿ ಮೊಳಕಾಲ್ಮುರು ತಾಲ್ಲೂಕಿನ ಚಿನ್ನಹಗರಿ ನದಿಯ ದಂಡೆಯ ಕಾಡಿನಲ್ಲಿ ಹಟ್ಟಿಕಟ್ಟಿಕೊಂಡು ನೆಲೆಸಿ(ಕಂಪಳದೇವರ ಹಟ್ಟಿಯಲ್ಲಿ) ಅಲ್ಲಿ ತಮ್ಮ ಮೂಲ ದೈವಗಳನ್ನು ಆರಾಧಿಸುತ್ತಾ ನೆಲೆನಿಂತು ನಂತರ ಬೇರೆ ಬೇರೆ ಕಡೆ ಚದುರಿದರು ಎಂದು ತಿಳಿದು ಬರುತ್ತದೆ. ಹಾಗಾಗಿ ಇವರು ಈ ಹಬ್ಬದಿಂದ ತಮ್ಮ ಮೂಲ ನೆಲೆಯಾದ ಹಂಪಿ ಪರಿಸರದೊಂದಿಗೆ ಗುರುತಿಸಿಕೊಳ್ಳಲು ಹಂಪಿಗೆ ತಮ್ಮ ದೈವ ಮತ್ತು ದೇವರ ಎತ್ತುಗಳೊಂದಿಗೆ ಬಂದು ಹೋಗುತ್ತಾರೆ. ಇವರು ಕಂಪಳದೇವರ ಹಟ್ಟಿಯಿಂದಿ ಹಂಪಿಗೆ ಬರುವ ಮಾರ್ಗ ಮತ್ತು ಗುಂಪುಗೂಡಿ ದೇವರ ಪೆಟ್ಟಿಗೆಯನ್ನು ಹೊತ್ತುಕೊಂಡು ದನ ಕರುಗಳನ್ನು ಹೊಡೆದುಕೊಂಡು ಬಂದು ಮತ್ತೆ ಅದೇ ಮಾರ್ಗವಾಗಿ ನಡೆದು ಹೋಗುವ ರೀತಿಯನ್ನು ನೋಡಿದರೆ ಹಿಂದೆ ಇವರ ಪೂರ್ವಿಕರು ಹಂಪಿಯ ಪತನದ ನಂತರ ಇದೇ ರೀತಿಯಾಗಿ ಇದೇ ಮಾರ್ಗವಾಗಿ ಹಂಪಿಯಿಂದ ಕಂಪಳದೇವರ ಹಟ್ಟಿಗೆ ವಲಸೆ ಹೋಗಿರಬಹುದು ಎಂದು ಊಹಿಸಬಹುದಾಗಿದೆ. ಹಾಗಂತ ಖಚಿತವಾಗಿ ಹೇಳಲೂ ಬರದು ಕಾರಣ ಅವರೇ ಹೇಳುವಂತೆ ತಾವು ಅಂಧ್ರದ ಶ್ರೀಶೈಲ ಪರ್ವತದಿಂದ ಬಂದವರು ಎಂದು ಹೇಳುತ್ತಾರೆ. ಈ ಹಬ್ಬವು ಬಹು ಕಷ್ಟ ಮತ್ತು ಖರ್ಚಿನ ಹಬ್ಬವಾದ್ದರಿಂದ ಇದನ್ನು ಪ್ರತಿವರ್ಷ ಮಾಡದೆ ೧೨-೨೦ ವರ್ಷಕ್ಕೊಮ್ಮೆ ಮಾಡುತ್ತಾರೆ.

೧೯೭೫ರಲ್ಲಿ ಹಬ್ಬದ ಖರ್ಚನ್ನು ಅಂದಿನ ಮೊಳಕಾಲ್ಮೂರು ಶಾಸಕ ಪಾಪನಾಯಕ ಅವರು ಬರಿಸಿದ್ದರು ಈ ಬಾರಿ ೨೦೧೬ ರಲ್ಲಿ ನಡೆದ ಹೆಡೆಕಟ್ಟಿನ ಹಬ್ಬದ ಖರ್ಚನ್ನು ಇಂದಿನ ಮೊಳಕಾಲ್ಮೂರು ತಾಲೂಕು ಶಾಸಕ ತಿಪ್ಪೇಸ್ವಾಮಿ ಅವರು ವಹಿಸಿಕೊಂಡಿದ್ದರು. ಇಂತಹ ವಿಶಿಷ್ಟ ಆಚರಣೆಗಳು ಇಂದು ಕಣ್ಮರೆಯಾಗುತ್ತಿದ್ದು ಕೆಲವೇ ಕೆಲವು ಹಟ್ಟಿಗಳಲ್ಲಿ ಮಾತ್ರ ಉಳಿದುಕೊಂಡಿವೆ. ಹಾಗಾಗಿ ಪ್ರಸ್ತುತ ದಿನಮಾನಗಳಲ್ಲಿ ಸಮುದಾಯಗಳ ಅಧ್ಯಯನಕ್ಕೆ ಹಟ್ಟಿಯ ಸಂಸ್ಕೃತಿಯ ಅಧ್ಯಯನ

ಅವಶ್ಯಕವಾದುದು. ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಕರ್ನಾಟಕದಲ್ಲಿ ಇಂತಹ ವಿಶಿಷ್ಟ ಸಾಂಸ್ಕೃತಿಕ ಆಚರಣೆಯ ಹಲವಾರು ಹಟ್ಟಿಗಳಿವೆ ಅವುಗಳಲ್ಲಿ ವಿಶಿಷ್ಟವೂ ಮ್ಯಾಸಬೇಡರ ಗುರುಸ್ಥಾನವೂ ಅಗಿರುವ ಕಂಪಳದೇವರ ಹಟ್ಟಯ ಸಂಸ್ಕೃತಿ, ಆಚರಣೆ, ನಂಬಿಕೆ, ರಾಸುಗಳ ಹಬ್ಬಗಳ ಕುರಿತು ನನ್ನ ತಿಳುವಳಿಕೆಗೆ ತಕ್ಕಂತೆ ಲಭ್ಯ ಮಾಹಿತಿಯ ಆಧಾರದ ಮೇಲೆ ವಿಷಯವನ್ನು ಇಲ್ಲಿ ಚರ್ಚಿಸಿದ್ದೇನೆ.

ಮೊದಲು ಅಲೆಮಾರಿಯಾಗಿದ್ದ ಆದಿಮಾನವನು ಸಂಘಜೀವನಕ್ಕೆ ಕಾಲಿಟ್ಟ ನಂತರ ಸಮಾನ ಮನಸ್ಥಿತಿಯ ಅಥವಾ ರಕ್ತಸಂಬಂಧಗಳ ಗುಂಪು ಒಂದೆಡೆ ಸೇರಿ ಹಟ್ಟಿ ಕಟ್ಟಿಕೊಂಡು ನೆಲೆಸತೊಡಗಿದರು. ಆಗ ತಮ್ಮದೇ ಆದ ಸಂಸ್ಕೃತಿಯನ್ನು ರೂಢಿಸಿಕೊಂಡು ಸೀಮಿತ ಪ್ರದೇಶದಲ್ಲಿ ಜೀವಿಸತೊಡಗಿದರು. ಈ ರೀತಿಯಾಗಿ ಹಟ್ಟಿ ಜೀವನವನ್ನು ಆರಂಭಿಸಿದ ಬುಡಕಟ್ಟು ಜನರು ಇತರ ನಾಗರೀಕ ಸಮಾಜದಿಂದ ದೂರ ಉಳಿದು ತಮ್ಮದೇ ಆದ ಸಂಸ್ಕೃತಿಯನ್ನು ಉಳಿಸಿಕೊಂಡು ಬರತೊಡಗಿದರು. ಒಂದು ಸಮುದಾಯದ ಮೂಲವನ್ನು ತಿಳಿಯಬೇಕಾದರೆ ಹಟ್ಟಿಯ ಆಚರಣೆ ಅವಲೋಕಿಸುವುದು ಅವಶ್ಯಕ ಎಂಬ ಅಂಶವನ್ನು ಈಗಾಗಲೇ ಚರ್ಚಿಸಿದ್ದೇವೆ. ಬೇಡ ಬುಡಕಟ್ಟಿನ ಕುರಿತು ಹಾಗೇ ಕರ್ನಾಟಕದ ಬಯಲು ಸೀಮೆಯ ಕಂಪಳದೇವರ ಹಟ್ಟಿಯ ಕುರಿತು ಈ ಮೇಲೆ ಚರ್ಚಿಸಿರುವಂತೆ ಬೇಡಸಮುದಾಯವು ತನ್ನ ಹಟ್ಟಿಜೀವನದಿಂದ ಇಂದಿನ ಆಧುನಿಕತೆಯ ಸಂದರ್ಭದಲ್ಲೂ ತಮ್ಮ ಪರಂಪರೆಯನ್ನು ಉಳಿಸಿ ಬೆಳಸಿಕೊಂಡು ಬಂದಿರುವುದು ಸೋಜಿಗದ ಸಂಗತಿ. ಇದಕ್ಕೆ ಕಾರಣ ಇವರಲ್ಲಿನ ಸಮಾನ ಮನೋಭಾವನೆ ಹಾಗೂ ಹಟ್ಟಿ ಆಚರಣೆಗಳಲ್ಲಿನ ಅವರ ನಂಬಿಕೆಯಾಗಿದೆ. ಮತ್ತು ಹಟ್ಟಿ ಜೀವನದಲ್ಲಿನ ನೀತಿ ನಿರ್ಬಂಧಗಳು ವಿಧಿ ನಿಷೇಧಗಳೇ ಕಾರಣವಾಗಿವೆ. ಪ್ರಸ್ತುತ ಜಾಗತೀಕರಣದ ಪ್ರಭಾವ ಹಟ್ಟಿಗಳ ಮೇಲೆ ಆಗುತ್ತಿದ್ದು ಜನರು ನಗರಗಳಿಗೆ ವಲಸೆ ಹೋಗುವ ಪ್ರಕ್ರಿಯೆ, ಕುಲಕಸುಬುಗಳಲ್ಲದೆ ಪರ್ಯಾಯ ವೃತ್ತಿಗಳನ್ನು ಅನುಸರಿಸುತ್ತಿರುವುದು ಸಹ ಕಂಡುಬರುತ್ತದೆ, ಆದರೆ ಗಮನಿಸಬೇಕಾದ ಸಂಗತಿಯೆಂದರೆ ಇವರು ಬದಲಾವಣೆಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಲೇ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬರುತ್ತಿದ್ದಾರೆ. ಎಂಬುದು ಅವರ ಹಟ್ಟಿ ಆಚರಣೆಗಳನ್ನು ಅವಲೋಕಿಸಿದಾಗ ಅರ್ಥವಾಗುತ್ತದೆ. ಆದ್ದರಿಂದ ಸಂಶೋಧಕರು ಯಾವುದೇ ಒಂದು ಸಮುದಾಯದ ಸ್ಥಿತಿಗತಿಯನ್ನು ತಿಳಿಯಬೇಕಾದರೆ ಆ ಸಮುದಾಯದ ಆಚರಣೆಗಳನ್ನು ಅಧ್ಯಯನ ಮಾಡುವ ಪ್ರಯತ್ನ ಮಾಡಬೇಕು ಏಕೆಂದರೆ ಯಾವುದೇ ಒಂದು ಸಮುದಾಯದ ಸಮಗ್ರ ಸಂಸ್ಕೃತಿಯ ಪರಿಚಯ ನಮಗೆ ಆಗುವುದು ಅವರ ಆಚರಣೆಗಳಿಂದ ಹಾಗಾಗಿ ಕರ್ನಾಟಕದಲ್ಲಿನ ಮ್ಯಾಸಬೇಡರ ಹಬ್ಬಾಚರಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಅಗತ್ಯತೆ ಇದೆ.

**ಅಡಿಟಿಪ್ಪಣಿ**


೧. ದಾಸೇಗೌಡ ಎ ಜೆ, ೨೦೦೦, ಮಂಡ್ಯ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೪–೫.

೨. ಹಿರೇಮಠ ಎಸ್ ಎಸ್, ೨೦೦೦, ಕೊಪ್ಪಳ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಧಿಕಾರ, ಬೆಂಗಳೂರು, ಪುಟ–೨೨.

೩. ಲೋಕೇಶ ಜಿ ಎಂ, ೨೦೧೩, ಕರ್ನಾಟಕದ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು: ಒಂದು ಚಾರಿತ್ರಿಕ ಅಧ್ಯಯನ, ಪಿಎಚ್ ಡಿ ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೪೮.

೪. ಸಿದ್ದಲಿಂಗಯ್ಯ, ೧೯೯೭, ಗ್ರಾಮದೇವತೆಗಳು, ಅಂಕಿತ ಪ್ರಕಾಶನ, ಬೆಂಗಳೂರು, ಪುಟ-೭೧.

೫. ಅದೇ, ಪುಟ-೯೩.

೬. ಜಯಪ್ರಕಾಶ ಶೆಟ್ಟಿ, ಚಿಕ್ಕ ಮಂಗಳೂರು ಗಣೇಶ, ೨೦೧೪, ನೆಲದ ನೆನಪು, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಪುಟ-೭.

೭. ಗುರುಮೂರ್ತಿ ಕೆ ಜಿ, ೨೦೧೧, ಕರ್ನಾಟಕದ ಜಾನಪದ ಹಬ್ಬಗಳು ಮತ್ತು ಅವುಗಳ ಸಾಂಸ್ಕೃತಿಕರಣ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ಪುಟ-೯೮.

೮. ಅದೇ, ಪುಟ-೭೦.

೯. ಅದೇ, ಪುಟ-೭೩.

೧೦. ಈಶ್ವರಪ್ಪ ಎಂ ಜಿ, ೧೯೯೯, ಜಾನಪದ ಇಬ್ಬನಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೪೯.

೧೧. ಅದೇ, ಪುಟ-೮೨.

೧೨. ಅದೇ, ಪುಟ-೮೫.

೧೩. ಗುರುಮೂರ್ತಿ ಕೆ ಜಿ, ೨೦೧೧, ಕರ್ನಾಟಕದ ಜಾನಪದ ಹಬ್ಬಗಳು ಮತ್ತು ಅವುಗಳ ಸಾಂಸ್ಕೃತಿಕರಣ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ಪುಟ-೯೯.

೧೪. ಮಲ್ಲಿಕಾರ್ಜುನ ಹೊಸಪಾಳ್ಯ, ೨೦೦೪, ಕೃಷಿ ಆಚರಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೫೧.

೧೫. ವೀರೇಂದ್ರ ಶೀಲವಂತ, ೨೦೧೦, ಕೃಷಿ ಆಚರಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೩೦.

೧೬. ಅದೇ, ಪುಟ-೩೧.

೧೭. ಅದೇ, ಪುಟ-೩೧.

೧೮. ಅದೇ, ಪುಟ-೩೩.

೧೯. ಸಂಪಟೂರು ವಿಶ್ವನಾಥ, ೨೦೦೭, ಹಬ್ಬಗಳು ಮತ್ತು ದಿನಾಚರಣೆಗಳು, ಅಂಕಿತ ಪ್ರಕಾಶನ, ಬೆಂಗಳೂರು, ಪುಟ-೧೩.

೨೦. ಸಣ್ಣ ಓಬಯ್ಯ ಎಸ್ ಕೆ, ೨೦೦೨, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಪಿಎಚ್ ಡಿ ಅಪ್ರಕಟಿತ ಮಹಾ ಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೬೬.

೨೧. ಸಿದ್ದಲಿಂಗಯ್ಯ, ೧೯೯೭, ಗ್ರಾಮದೇವತೆಗಳು, ಅಂಕಿತ ಪ್ರಕಾಶನ, ಬೆಂಗಳೂರು, ಪುಟ-೨.

೨೨. ಪ್ರಭಾಕರ ಎ ಎಸ್, ೧೯೯೯, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೫.

೨೩. ಪುರಷೋತ್ತಮ ಬಿಳಿಮಲೆ, ಚಲುವರಾಜು(ಸಂ), ೧೯೯೬, ಹಂಪಿ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೦೭.

# ಅಧ್ಯಾಯ: ಐದು
# ಹಟ್ಟಿಯ ಮ್ಯಾಸಬೇಡರ ಮೌಖಿಕ ಜ್ಞಾನಪರಂಪರೆ

೫.೧ ಪ್ರಾಕೃತಿಕ ಜ್ಞಾನಪರಂಪರೆ

೫.೨ ಭಾಷಿಕ ಜ್ಞಾನಪರಂಪರೆ

- ಜನಪದ ಸಾಹಿತ್ಯ
- ಜನಪದ ಕಲೆಗಳು
- ಜನಪದ ಕ್ರೀಡೆಗಳು

# ಅಧ್ಯಾಯ: ಐದು
# ಕಂಪಳದೇವರ ಹಟ್ಟಿಯ ಮೌಖಿಕ ಜ್ಞಾನಪರಂಪರೆ

## ೫.೧ ಪ್ರಾಕೃತಿಕ ಜ್ಞಾನ ಪರಂಪರೆ

ಕಂಪಳದೇವರ ಹಟ್ಟಿಯ ಮ್ಯಾಸಬೇಡರು ತಾವು ವಾಸಿಸುವ ಪರಿಸರ, ಭೂಮಿ, ನಕ್ಷತ್ರ, ಗುಡಿಸಲು, ಹಟ್ಟಿ, ಬೆಟ್ಟ ಗುಡ್ಡ, ಸಸ್ಯಗಳು, ಸಮುದ್ರ, ಮಳೆ ಮುಂತಾದುವುಗಳ ಬಗ್ಗೆ ಸಾಕಷ್ಟು ಜ್ಞಾನವುಳ್ಳವರಾಗಿದ್ದಾರೆ. ತಮ್ಮ ಸುತ್ತ ಮುತ್ತಲಿನ ಪರಿಸರದಲ್ಲಿರುವ ಕೆಲವು ವೃಕ್ಷ, ಸಸ್ಯಾದಿಗಳನ್ನು ಕುರಿತು ಧಾರ್ಮಿಕ, ಬೌದ್ಧಿಕ ನಂಬಿಕೆ, ತಿಳುವಳಿಕೆಗಳನ್ನು ಬೆಳೆಸಿಕೊಂಡಿದ್ದಾರೆ. ಕೆಲವು ಸಸ್ಯ, ಪ್ರಾಣಿ, ಪಕ್ಷಿಗಳ ಚಲನ ವಲನಗಳನ್ನು ಗುರುತಿಸಿ ಪ್ರಕೃತಿಯಲ್ಲಿ ಸಂಭವಿಸುವ ಘಟನೆಗಳನ್ನು ಮುಂಚಿತವಾಗಿಯೇ ಗ್ರಹಿಸುವ ಜ್ಞಾನ ಇವರದು, ಹಾಗೆಯೇ ಇವರಲ್ಲಿ ಪ್ರಕೃತಿ ವಿಕೋಪದ ಸಂದರ್ಭದಲ್ಲಿ ಅದರ ಪರಿಹಾರೋಪಾಯದ ತಿಳುವಳಿಕೆಗಳೂ ಕೆಲವಿವೆ. ಅಂಥಹ ಕೆಲವು ನಂಬಿಕೆಗಳನ್ನು ಪ್ರಕೃತಿ ಬಗೆಗಿನ ಜ್ಞಾನಪರಂಪರೆ ಎಂದು ಕರೆಯಬಹುದು. ಅಥವಾ ಪ್ರಕೃತಿಯ ಕುರಿತಾದ ತಿಳುವಳಿಕೆ, ನಂಬಿಕೆ ಎನ್ನಬಹುದು ಅವುಗಳನ್ನು ಅವರೇ ಹೇಳುವ ಕಥೆಗಳ ಮೂಲಕ ತಿಳಿಯುವುದು ಸೂಕ್ತ.

### ೫.೧.೧ ಆಕಾಶದ ಕುರಿತಾದ ನಂಬಿಕೆ

ಹಟ್ಟಿಯ ಜನರಲ್ಲಿ ಆಕಾಶ ಏಕೆ ಅಷ್ಟು ಮೇಲಿದೆ ಎಂಬುದಕ್ಕೆ ಅವರ ತಿಳುವಳಿಕೆಯಲ್ಲಿ ಹೇಳುವ ಕಥೆಯೊಂದು ಹೀಗಿದೆ "ಹಿಂದಿನ ಕಾಲದಲ್ಲಿ ಆಕಾಶ ತುಂಬಾ ಕೆಳಗೆ ಇತ್ತಂತೆ ಆಗಿನ ಮಹಿಳೆ ಬತ್ತ ಕುಟ್ಟುವಾಗ ಒನಕೆ ಪದೇ ಪದೇ ಆಕಾಶಕ್ಕೆ ತಗುಲುತ್ತಿತ್ತಂತೆ ಆಗ ಆ ಮಹಿಳೆ ಆಕಾಶ ಇಷ್ಟು ಕೆಳಗೆ ಯಾಕಿದೆ ಹಾಳಾಗಿ ಮೇಲಕ್ಕಾದರೂ ಹೋಗಬಾರದಾ ಎಂದು ಶಪಿಸಿದಳಂತೆ ಅವಳು ಹಾಗೆ ಅಂದ ತಕ್ಷಣ ಆಕಾಶ ಮೇಲಕ್ಕೆ ಹೋಯಿತಂತೆ. ಅಂದಿನಿಂದ ಆಕಾಶ ಮೇಲಿದೆ ಎಂದು ಹೇಳುತ್ತಾರೆ."(ಮಾಹಿತಿ: ಪಾಲಮ್ಮ, ೪೫, ಕಂಪಳದೇವರ ಹಟ್ಟಿ) ಖಗೋಳದಲ್ಲಿನ ಗ್ರಹಗಳು, ಭೂಮಿ, ಆಕಾಶಗಳನ್ನು ಇವರು ಗ್ರಹಗಳೆಂದು ಬಗೆಯದೆ ಸಾಮಾನ್ಯವಾಗಿ ತಿಳಿಯುತ್ತಾರೆ. ಇಂದಿಗೂ ಸಹ ಎಂತಹ ವಿಜ್ಞಾನಿಗಳಿಗೂ

ಪ್ರಕೃತಿಯ ಸೃಷ್ಟಿ, ಅದರ ರಹಸ್ಯದ ಬಗ್ಗೆ ತಿಳಿಯಲು ಆಗದಿದ್ದರೂ ಸಹ ನಮ್ಮ ಜನಪದರು ಅವರ ತಿಳುವಳಿಕೆಯಲ್ಲೇ ಪ್ರಕೃತಿಯನ್ನು ಅರ್ಥೈಸುವ, ತಿಳಿಯುವ ಕೆಲಸ ಮಾಡಿದ್ದಾರೆ.

**೫.೧.೨ ಸಿಡಿಲಿನ ಕುರಿತಾದ ನಂಬಿಕೆ**

ಗ್ರಾಮೀಣ ಜನರಲ್ಲಿ ಯಾರಾದರೂ ಅಕಾಲಿಕ ಮರಣಕ್ಕೆ ತುತ್ತಾದರೆ ಅಥವಾ ಪ್ರಕೃತಿ ವಿಕೋಪಕ್ಕೆ ಬಲಿಯಾದರೆ ಅವರು ಹೇಳುವ ಮಾತು ಸತ್ತವರು ಏನೋ ಪಾಪ ಮಾಡಿದ್ದಾರೆ. ಅದಕ್ಕೆ ಪ್ರಕೃತಿ ಅವರನ್ನು ಬಲಿ ತೆಗೆದುಕೊಂಡಿದೆ ಎನ್ನುತ್ತಾರೆ. ಅದರಂತೆಯೇ ಹಟ್ಟಿಯ ಮ್ಯಾಸಬೇಡರಲ್ಲಿಯೂ ಸಹ ಸಿಡಿಲು ಹೊಡೆದು ಯಾರಾದರೂ ಸತ್ತರೆ ಅವನು ಪಾಪ ಮಾಡಿದ್ದಾನೆ ಎಂದು ನಂಬುತ್ತಾರೆ. ಸಿಡಿಲು ಅವರು ಸಾಕಿದ ದನಕರುಗಳಿಗೆ ಹೊಡೆದು ಅವು ಸತ್ತರೆ ಅವನ ಪಾಪವು ಅವನು ಸಾಕಿದ ದನಕರುಗಳಿಗೆ ತಟ್ಟಿದೆ ಎಂದು ಭಾವಿಸುತ್ತಾರೆ. "ಸಿಡಿಲು ಹೊಡೆಯುವುದು ಪ್ರಕೃತಿಯ ಧರ್ಮವಾದರೂ ಅದರ ಹೊಡೆತದಿಂದ ಮನುಷ್ಯ ಸಾಯುವುದು ದುರಂತ ಆದರೆ ಮಾನವನ ಅಸಹಾಯಕತೆಯನ್ನು ಈ ರೀತಿ ವ್ಯಕ್ತಪಡಿಸಲಾಗುತ್ತದೆ"[೧]. ಮನುಷ್ಯನ ಪಾಪ ಕೃತ್ಯದಿಂದ ಪ್ರಕೃತಿಯಿಂದ ಅವನಿಗೆ ಅಪಾಯ ಸಂಭವಿಸುತ್ತದೆ ಎಂಬುದು ಇವರ ತಿಳುವಳಿಕೆಯಾಗಿದೆ. ಇದರಿಂದ ಮನುಷ್ಯ ಸ್ವಲ್ಪವಾದರೂ ಭಯಗೊಂಡು ಪಾಪಮಾಡುವುದನ್ನು ಕಡಿಮೆ ಮಾಡುತ್ತಾನೆ, ಹಾಗೆಯೇ ಸಿಡಿಲು ಹೊಡೆದಾಗ ಸಾಮಾನ್ಯವಾಗಿ ಕಬ್ಬಿಣದ ತುಂಡನ್ನು ಮನೆಯಿಂದ ಹೊರಗಡೆ ಹಾಕುತ್ತಾರೆ. ಕಾರಣ ಕಬ್ಬಿಣದ ತುಂಡು ಇದ್ದಲ್ಲಿ ಸಿಡಿಲು ಬಡಿಯುವುದಿಲ್ಲ ಎಂಬುದು ಅವರ ತಿಳುವಳಿಕೆಯಾಗಿದೆ.

**೫.೧.೩ ಸೂರ್ಯ ಚಂದ್ರರ ಕುರಿತಾದ ತಿಳುವಳಿಕೆ**

ಖಗೋಳ ಗ್ರಹಗಳಾದ ಸೂರ್ಯ, ಚಂದ್ರರಲ್ಲಿ ಸೂರ್ಯ ಬೆಂಕಿಯಾಗಿರಲು ಮತ್ತು ಚಂದ್ರ ತಂಪಾಗಿರಲು ಕಾರಣ ಇವರು ಹೇಳುವ ಪ್ರಕಾರ ಸೂರ್ಯ ಚಂದ್ರರ ತಾಯಿ ಅವರಿಗೆ ನೀಡಿದ ಶಾಪ ಮತ್ತು ವರ ಕಾರಣ ಎನ್ನುತ್ತಾರೆ. ಅದರ ಕುರಿತ ಕಥೆಯೊಂದು ಹೀಗಿದೆ "ಒಂದು ದಿನ ಸೂರ್ಯ ಮತ್ತು ಚಂದ್ರರು ಬಂಧುಗಳ ಮನೆಗೆ ಹೋಗಿ ಊಟ ಮಾಡಿ ಬರಬೇಕಾದರೆ ಸೂರ್ಯನು ತಾನು ಹೊಟ್ಟೆ ತುಂಬ ಊಟ ಮಾಡಿ ತಾಯಿಗೆ ಏನೂ ತರದೆ ಹಾಗೇ ಬಂದ. ಚಂದ್ರನು ತಾನು ಉಣ್ಣುವ ಊಟದಲ್ಲಿ ಅರ್ಧ ಊಟವನ್ನು ತಾಯಿಗೆ ತನ್ನ ಬೆರಳ ಉಗುರಿನಲ್ಲಿ ತಂದಿದ್ದನಂತೆ, ಆಗ ತಾಯಿ ಸೂರ್ಯನಿಗೆ ನೀನು ಸದಾ ಬೆಂಕಿಯಾಗಿ ಉರಿಯಬೇಕು ಎಂದು ಶಾಪ ಕೊಟ್ಟಳು ಹಾಗೆ ಚಂದ್ರನಿಗೆ ನೀನು ಯಾವಾಗಲೂ ತಣ್ಣಗಿರು ಎಂದು ವರ ನೀಡಿದಳಂತೆ ಅಂದಿನಿಂದ ಸೂರ್ಯ ಉರಿಯುವ ಬೆಂಕಿಯಾಗಿ ಚಂದ್ರ ತಣ್ಣನೆಯ ಬೆಳದಿಂಗಳಾಗಿ ರೂಪಗೊಂಡವು"(ಮಾಹಿತಿ: ಓಬಮ್ಮ ಡಿ, ೫೫, ಕಂಪಳದೇವರ ಹಟ್ಟಿ) ಎಂಬುದು ಇವರ ತಿಳುವಳಿಕೆಯಾಗಿದೆ. ಈ ನಂಬಿಕೆಯು ಇವರಲ್ಲಿ ತುಂಬಾ ಹಿಂದಿನಿಂದಲೂ ಇದೆ. ಪ್ರಕೃತಿಯ ಬಗೆಗಿನ ಅಥವಾ ಖಗೋಳದ ಸೂರ್ಯ ಚಂದ್ರ ಗ್ರಹಗಳ ಕುರಿತಾದ ಇವರ ಜ್ಞಾನ ಅಂತಹದ್ದು ಸೂರ್ಯ ಚಂದ್ರರನ್ನು ತಮ್ಮಂತೆ ಮನುಷ್ಯರು ಎಂದು ಹೇಳುವಂತಹ ಅಮಾಯಕತೆ, ಮುಗ್ದತೆ ಇವರದು.

### ೫.೧.೪ ಗ್ರಹಗಳ ಕುರಿತಾದ ತಿಳುವಳಿಕೆ

ಗ್ರಹಗಳ ಕುರಿತು ಸಹ ಇವರಲ್ಲಿನ ನಂಬಿಕೆ ವಿಶಿಷ್ಟವಾದುದು. ಸಂಕರ್ವ ಸರ್ಪ ಚಂದ್ರನ ಮೇಲಿನ ಸಿಟ್ಟಿನಿಂದ ಚಂದ್ರನನ್ನು ವರ್ಷಕ್ಕೊಮ್ಮೆ ಅಟ್ಟಿಸಿಕೊಂಡು ಹೋಗಿ ನುಂಗುವುದರಿಂದ ಚಂದ್ರಗ್ರಹಣವಾಗುತ್ತದೆ ಎಂಬುದಾಗಿ ನಂಬುತ್ತಾರೆ. ಇದಕ್ಕೆ ಒಂದು ಕಥೆಯನ್ನು ಸಹ ಹೇಳುತ್ತಾರೆ, "ಒಂದು ದಿನ ಸಂಕವಳ/ಸಂಕರ್ವ (ಸರ್ಪ) ಮೊಲವನ್ನು ಬೆನ್ನಟ್ಟುವಾಗ ಚಂದ್ರ ಅದನ್ನು ಕಂಡು ಒಂದು ನೂಲು ಕೆಳಕ್ಕೆ ಬಿಟ್ಟನು ಅದರಲ್ಲಿ ಮೊಲ ಹತ್ತಿಕೊಂಡು ಹೋಯಿತು ಆಗ ಚಂದ್ರ ಆ ನೂಲನ್ನು ತುಂಡು ಮಾಡಿದ ಇದೇ ಸಿಟ್ಟಿನಿಂದ ಸಂಕವಳ/ಸಂಕರ್ವ ವರ್ಷಕ್ಕೊಮ್ಮೆ ಚಂದ್ರನನ್ನು ನುಂಗಲು ಹೋಗುತ್ತದೆ ಆಗ ಚಂದ್ರಗ್ರಹಣವಾಗುತ್ತದೆ" ಎಂದು ಹೇಳುತ್ತಾರೆ.

### ೫.೧.೫ ನಕ್ಷತ್ರಗಳ ಬಗೆಗಿನ ನಂಬಿಕೆ

ಸಾಮಾನ್ಯವಾಗಿ ಆಕಾಶದಲ್ಲಿನ ನಕ್ಷತ್ರಗಳು ರಾತ್ರಿಯ ಕತ್ತಲಿನಲ್ಲಿ ಆಕಾಶದಿಂದ ಜಾರಿ ಬಿದ್ದಂತೆ ಕಾಣುತ್ತವೆ. ಇದಕ್ಕೆ ಹಟ್ಟಿಯ ಜನರು ನಕ್ಷತ್ರ ಬಿದ್ದ ದಿಕ್ಕಿಗೆ ಅಥವಾ ಆ ಬಾಗದ ಊರಿನ ಕಡೆಗೆ ಯಾರಾದರೂ ಸಾಯುತ್ತಾರೆ ಸಾವಿನ ಸುದ್ದಿ ಕೇಳುತ್ತೇವೆ ಎನ್ನುತ್ತಾರೆ. ಹೀಗೆ ನಕ್ಷತ್ರಗಳ ಚಲನವಲನಗಳಿಂದ ತಮ್ಮ ನಿತ್ಯ ಜೀವನದ ಕೆಲವು ಸೂಚನೆಗಳನ್ನು ಅರಿಯುವ ಜ್ಞಾನ ಇವರದು, ಹೀಗೆ ಪ್ರಕೃತಿಯ ಕುರಿತು ಅಪಾರ ಜ್ಞಾನ ಹಟ್ಟಿಯ ಮ್ಯಾಸಬೇಡರಲ್ಲಿದೆ. ಇಂಥಹ ಜ್ಞಾನಪರಂಪರೆಯ ಕುರಿತು ಇವರಲ್ಲಿ ಮೌಖಿಕವಾಗಿ ಆಚರಣೀಯವಾಗಿ ಅಪಾರ ತಿಳುವಳಿಕೆ ಇರುವುದನ್ನು ಕಾಣಬಹುದು.

### ೫.೨ ಭಾಷಿಕ ಜ್ಞಾನಪರಂಪರೆ

ಹಟ್ಟಿಯಲ್ಲಿನ ಮ್ಯಾಸಬೇಡರು ಅಥವಾ ಕರ್ನಾಟಕದಲ್ಲಿನ ಮ್ಯಾಸಬೇಡರ ಮಾತೃಭಾಷೆ ತೆಲುಗು ಇವರ ಬಹುತೇಕ ಸಾಹಿತ್ಯಗಳು ಅಂದರೆ ಗಾದೆಗಳು, ಒಗಟುಗಳು, ಹಾಡುಗಳು, ಕಥೆಗಳು ತೆಲುಗಿನಲ್ಲಿ ದೊರೆಯುತ್ತವೆ. ಕಾರಣ ಆಂಧ್ರಪ್ರದೇಶದವರಾದ ಇವರು ಶ್ರೀಶೈಲ, ಕದಿರೆ, ತಿರುಪತಿ, ಅಹೋಬಲದ ಕಡೆಯಿಂದ ಪಶುಪಾಲಕರಾಗಿ ಕರ್ನಾಟಕದ ಕಡೆಗೆ ವಲಸೆ ಬಂದವರಾದ್ದರಿಂದ ಇವರ ಮಾತೃಭಾಷೆ ತೆಲುಗಾಗಿದೆ. ಇಂದಿಗೂ ಸಹ ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಹಟ್ಟಿಯ ಬೇಡರು ತಮ್ಮ ಮನೆಗಳಲ್ಲಿ ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಹೊರಗಡೆ ವ್ಯವಹಾರಿಕ ಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ಇವರು ಮಾತನಾಡುವ ತೆಲುಗು ಭಾಷೆಯಲ್ಲಿ ಕನ್ನಡ ಪದಗಳು, ಕನ್ನಡ ಬಾಷೆಯಲ್ಲಿ ತೆಲುಗು ಪದಗಳು ಸೇರಿಕೊಂಡಿರುತ್ತವೆ. ಇತ್ತ ಕನ್ನಡವೂ ಅಲ್ಲದ ಅತ್ತ ಸಂಪೂರ್ಣ ಆಂಧ್ರದ ತೆಲುಗೂ ಅಲ್ಲದ ವಿಶಿಷ್ಟ ತೆಲುಗು(ಕಂದೆಲುಗು) ಭಾಷೆಯನ್ನು ಮಾತನಾಡುತ್ತಾರೆ. ಹಟ್ಟಿಯ ಮ್ಯಾಸಬೇಡರಲ್ಲಿ ಸಾಕಷ್ಟು ಮೌಖಿಕ ಸಾಹಿತ್ಯವಿದ್ದು ತಮ್ಮ ಸಾಂಸ್ಕೃತಿಕ ನಾಯಕ, ನಾಯಕಿಯರ ಕುರಿತು ಕಥೆ, ಹಾಡು ಅಲ್ಲದೆ ಸೋಬಾನೆ ಪದಗಳು, ಕೋಲಾಟದ ಪದಗಳು, ಒಗಟುಗಳು, ಒಡಪುಗಳು, ಗಾದೆಗಳು ಇನ್ನೂ ಮುಂತಾದ ಮೌಖಿಕ ಸಾಹಿತ್ಯ ತೆಲುಗಿನಲ್ಲೂ ಮತ್ತು ಕನ್ನಡದಲ್ಲೂ ದೊರೆಯುತ್ತವೆ.

### ೫.೨.೧ ಕಂಪಳದೇವರ ಹಟ್ಟಿಯ ಜನಪದ ಸಾಹಿತ್ಯ

ಯಾವುದೇ ಪ್ರದೇಶ, ದೇಶ, ಸಮುದಾಯದ ಸಾಹಿತ್ಯವನ್ನು ಎರಡು ಬಗೆಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಒಂದು ಶಿಷ್ಟಸಾಹಿತ್ಯ, ಅಂದರೆ ಬರವಣಿಗೆಯ ರೂಪದಲ್ಲಿ ಇರುವಂತಹದ್ದು, ಎರಡು ಗ್ರಂಥಸ್ಥವಲ್ಲದ್ದು ಜನಪದರ ಸ್ಮೃತಿ ಸ್ಮರಣೆಯಲ್ಲಿದ್ದು ಅವರ ಮೌಖಿಕ ಸಾಹಿತ್ಯದಲ್ಲಿ ಪ್ರಚಲಿತದಲ್ಲಿರುವುದು. ಇದು ಗ್ರಾಮೀಣ ಜನಪದರ, ಕೃಷಿಕರ, ಕೂಲಿಕಾರ್ಮಿಕರ ದಿನ ದಿನದ ಬದುಕಿನ ನಿರ್ವಹಣೆಯಲ್ಲಿ ಮೂಡಿ ಬಂದ ಸಹಜ ಸಾಹಿತ್ಯವಾಗಿದೆ. ಜನಪದರ ನಿತ್ಯದ ಬದುಕೇ ಹಾಡು, ಕಥೆಯಾಗಿ ಇಲ್ಲಿ ಬಿಂಬಿತವಾಗುತ್ತದೆ. ಜಗತ್ತಿನಲ್ಲಿನ ಯಾವುದೇ ಶಿಷ್ಟ ಸಾಹಿತ್ಯ ಈ ಜನಪದ ಸಾಹಿತ್ಯದಿಂದ ರಚನೆಯಾಗಿರುತ್ತದೆ. ಆದ್ದರಿಂದ ವಿದ್ವಾಂಸರು ಜನಪದರ ಮೌಖಿಕ ಸಾಹಿತ್ಯವನ್ನು ಕುರಿತು 'ಜನವಾಣಿ ಬೇರು, ಕವಿವಾಣಿ ಹೂವು' ಎಂದು ಕರೆದಿದ್ದಾರೆ. ಜನಪದ ಸಾಹಿತ್ಯದಿಂದಲೇ ಇಂದಿನ ಶಿಷ್ಟ ಸಾಹಿತ್ಯ ಹುಟ್ಟಿಕೊಂಡಿದೆ ಎಂಬುದು ಖಚಿತ ಆದ್ದರಿಂದ ಜನಪದ ಸಾಹಿತ್ಯವನ್ನು ಬೇರು ಎನ್ನುವುದು. ಕನ್ನಡಿಗರು 'ಕುರಿತೋದದೆಯೂ ಕಾವ್ಯ ಪ್ರಯೋಗ ಪರಿಣಿತ ಮತಿಗಳ್' ಎಂದು ಹೆಸರಾಗಿದ್ದೇ ಈ ಜನಪದರು ತಮ್ಮ ಬಾಳಿನ ಬಗೆ ಬಗೆಯ ಅನುಭವಗಳನ್ನು ಅನೇಕ ರೀತಿಯಲ್ಲಿ ವ್ಯಕ್ತಪಡಿಸಿದ್ದರಿಂದ ಎಂದು ಹೇಳಬಹುದು. ಅನೇಕ ರೀತಿಯಲ್ಲಿ ಎಂದರೆ ಹಾಡು, ಕಥೆ, ಗಾದೆ, ಒಗಟು, ಒಡಪು, ನುಡಿಗಟ್ಟು, ಭಜನೆ, ನಾಟಕ ಮುಂತಾದ ಜನಪದ ಸಾಹಿತ್ಯದ ರೂಪದಲ್ಲಿ ಅವರ ಅನುಭವವನ್ನು ವಿಸ್ತಾರವಾಗಿ ಬಿಂಬಿಸುತ್ತಾರೆ. ಅದೇರೀತಿಯಾಗಿ ಕಂಪಳದೇವರ ಹಟ್ಟಿಯ ಜನಪದರಲ್ಲಿ ಅನೇಕ ಬಗೆಯ ಜನಪದ ಸಾಹಿತ್ಯ ಅಡಗಿದ್ದು ಅವುಗಳಲ್ಲಿ ಅತ್ಯಂತ ಮುಖ್ಯವಾದವು ಹಾಡುಗಳು, ಕಥೆಗಳು, ಗಾದೆಗಳು, ಒಗಟುಗಳು, ಒಡಪುಗಳು, ನುಡಿಗಟ್ಟುಗಳು, ಕೋಲಾಟದ ಪದಗಳು ಮುಂತಾದುವನ್ನು ಈ ಅಧ್ಯಾಯದಲ್ಲಿ ವಿವರವಾಗಿ ತಿಳಿಸಲಾಗುವುದು.

#### ಜನಪದ ಹಾಡುಗಳು

ಕಂಪಳದೇವರ ಹಟ್ಟಿಯ ಬೇಡರಲ್ಲಿ ಜನಪದ ಹಾಡುಗಳು ಸಮೃದ್ಧವಾಗಿ ದೊರೆಯುತ್ತವೆ. ಬೇಟೆ, ಪಶುಪಾಲನೆ, ಕೃಷಿ ವೃತ್ತಿಗಳಲ್ಲಿ ತೊಡಗಿದ್ದ ಬೇಡರು ತಮ್ಮ ಈ ಜೀವನಕ್ಕೆ ಹೊಂದಿಕೊಂಡಂತೆ ಅನೇಕ ಹಾಡುಗಳನ್ನು ಹಾಡುತ್ತಾರೆ. ನಾಟಕ, ಕೋಲಾಟ, ಭಜನೆ, ಲಾವಣಿ, ಕಥನಗೀತೆ ಮತ್ತು ಗಣೆಪದ ಮೊದಲಾದವುಗಳನ್ನು ಹಟ್ಟಿಯ ಗಂಡಸರು ಹಾಡುತ್ತಾರೆ. ನಾಮಕರಣ, ಋತುಮತಿ, ಮದುವೆ, ಸೋಬಾನೆ ಪದ, ದೇವರ ಪದ ಮೊದಲಾದ ಹಾಡುಗಳನ್ನು ಮಹಿಳೆಯರು ಹಾಡುತ್ತಾರೆ. ಕಂಪಳದೇವರ ಹಟ್ಟಿಯಲ್ಲಿನ ಮ್ಯಾಸಬೇಡರು ತಮ್ಮ ಸಾಂಸ್ಕೃತಿಕ ನಾಯಕರಾದ ಜಗಳೂರು ಪಾಪನಾಯಕ, ಗಾದ್ರಿ ಪಾಲನಾಯಕರ ಕುರಿತು ಅವರ ಹುಟ್ಟು, ಬೆಳವಣಿಗೆ, ಪಶುಪಾಲನೆ, ಬೇಟೆ, ಸಮುದಾಯ ಸಂಘರ್ಷ ಮೊದಲಾದ ಕಥನಗೀತೆಗಳನ್ನು ಹಾಡುತ್ತಾರೆ. ಅಲ್ಲದೆ ತಮ್ಮ ದೈವಗಳಾದ ಅಹೋಬಲ ನರಸಿಂಹಸ್ವಾಮಿ, ಕಂಪಳರಂಗಸ್ವಾಮಿ, ಬೊಮ್ಮಲಿಂಗೇಶ್ವರ, ನಾಯಕನಹಟ್ಟಿ ತಿಪ್ಪೇಸ್ವಾಮಿ, ದಡ್ಲು ಮಾರಮ್ಮ, ದಡ್ಡಿಸೂರನಾಯಕ, ಗೌರಸಮುದ್ರದ ಮಾರಮ್ಮ ಮುಂತಾದ ದೈವಗಳ ಕುರಿತ ಹಾಡುಗಳು ಇವರಲ್ಲಿ ದೊರೆಯುತ್ತವೆ.

**ಗಣೆಪದಗಳು**

ಪ್ರತಿವರ್ಷ ಆಗಸ್ಟ್ ತಿಂಗಳಲ್ಲಿ ಮೂರನೇ ಶನಿವಾರ(ಮೂರನೇ ಶ್ರಾವಣ ಶನಿವಾರ) ಕಂಪಳರಂಗಸ್ವಾಮಿ ಗುಡಿಯ ಮುಂದೆ ಹಟ್ಟಿಯ ಹಿರಿಯರೆಲ್ಲಾ ಸೇರಿ ಗಣೆ ಊದುತ್ತಾ ಕಂಪಳರಂಗಸ್ವಾಮಿ, ಭಾಗ್ಯದ ಲಸುಮವ್ವ, ಪಾಪನಾಯಕ ಮುಂತಾದ ಸಾಂಸ್ಕೃತಿಕ ನಾಯಕ, ನಾಯಕಿಯರ ಕುರಿತಾಗಿ ಕಾವ್ಯಗಳನ್ನು ಹಾಡುತ್ತಾರೆ. ಶ್ರಾವಣದಲ್ಲಿ ಗಣೆ ಊದುವ ಉದ್ದೇಶ ಇವರೇ ಹೇಳುವಂತೆ ಮಳೆ ಬಾರದಿದ್ದರೆ ಗಣೆ ಊದುವುದರಿಂದ ಮಳೆ ಬರುತ್ತದೆ, ಅಲ್ಲದೆ ಆ ವರ್ಷದ ಮಳೆ ಬೆಳೆಯನ್ನು ಗಣೆ ನುಡಿಯುವುದರಿಂದ ನಿರ್ಧರಿಸುತ್ತಾರೆ. ಗಣೆ ಸರಾಗವಾಗಿ ಸ್ವರ ಹೊರಡಿಸಿದರೆ ಈ ವರ್ಷ ಚೆನ್ನಾಗಿ ಮಳೆ ಆಗುತ್ತದೆ, ಸ್ವರ ಸರಾಗವಾಗಿ ಬಾರದಿದ್ದರೆ ಮಳೆ ಸರಿಯಾಗಿ ಆಗುವುದಿಲ್ಲ ಎಂದು ನಂಬುತ್ತಾರೆ.

ಅರ್ಥ: ಗಣೆ ಎಂದರೆ ದೊಡ್ಡ ಅಥವಾ ಸಾಧಾರಣ ಒಂದು ಬಡಗಿಯ ಅಥವಾ ಕೋಲಿನ ಅಳತೆಯ ಬಿದಿರಿಗೆ ಮಧ್ಯೆ ಮಧ್ಯೆ ಸಣ್ಣ ಸಣ್ಣ ಕಂಡಿ ಕೊರೆದು ಕೊಳಲಿನ ರೀತಿ ಮಾಡಿರುತ್ತಾರೆ. ಇದರ ಎರಡೂ ತುದಿಗಳು ಮುಚ್ಚಲ್ಪಟ್ಟಿರುತ್ತವೆ. ಇದನ್ನೇ ಗಣೆ ಎನ್ನುತ್ತಾರೆ. ಕಾಡುಗೊಲ್ಲರಲ್ಲಿಯೂ ಸಹ ಇವನ್ನು ಕಾಣಬಹುದು. ಬಹುಶಃ ಪಶುಪಾಲಕರಾದ ಈ ಎರಡು ಬುಡಕಟ್ಟುಗಳಲ್ಲಿ ಬಿಟ್ಟರೆ ಬೇರೆ ಯಾವ ಸಮುದಾಯದವರಲ್ಲೂ ಈ ಗಣೆಗಳು ಕಂಡುಬರುವುದಿಲ್ಲ.

**ಹಿನ್ನೆಲೆ**

ಈ ಸಮುದಾಯದವರಿಗೆ ಗಣೆಗಳು ಹೇಗೆ ದೊರೆತವು ಎಂದು ಕೇಳಿದರೆ ಅವರು ಹೇಳುವ ಕಥೆ ಹೀಗಿದೆ, ಸುಮಾರು ವರ್ಷಗಳ ಹಿಂದೆ ಜಗಳೂರು ಪಾಪನಾಯಕ ಮತ್ತು ಎತ್ತಿನ ಕಿಲಾರಿಗಳು ತಮ್ಮ ದೇವರ ಎತ್ತುಗಳನ್ನು ಮೇಯಿಸುತ್ತಾ ಕಾಡುಮೇಡು ಅಲೆಯುತ್ತಿರುವಾಗ, ಸೊಂಡೂರಿನ ಕುಮಾರಸ್ವಾಮಿ ಬೆಟ್ಟದಲ್ಲಿನ ರಾಮನ ಮಡುವು, ಭೀಮನ ಮಡುವು ಎಂಬ ಎರಡು ಹಳ್ಳಗಳ ಮಧ್ಯೆ ಇರುವ ಬೆಟ್ಟದಲ್ಲಿ ಗೂಡು ಕಟ್ಟಿಕೊಂಡು ಇರುತ್ತಾರೆ. ಅಲ್ಲಿ ಇದ್ದ ಪಟುಮುರಾತಿ ಬಿದಿರಮ್ಮಾ ಎಂಬ ಬಿದಿರನ್ನು ಗುಂಗಾಡಿಗಳು ಕಂಡಿ ಕೊರೆದು ರಾತ್ರಿ ಹೊತ್ತು ಗಾಳಿ ಬೀಸಿದಾಗ ಆ ಗಾಳಿಗೆ ಬಿದಿರು ಸದ್ದು ಮಾಡುತ್ತಿತ್ತು. ಅದನ್ನು ಕಂಡ ಪಾಪನಾಯಕ ಮತ್ತು ಕಿಲಾರಿಗಳು ಆಶ್ಚರ್ಯರಾಗಿ ಅದನ್ನು ಪೂಜಿಸಿ ಕಡಿದುಕೊಂಡುಬಂದು ಅಂದಿನಿಂದ ಇಂದಿನವರೆಗೆ ಅವನ್ನು ಪ್ರತಿವರ್ಷ ಶ್ರಾವಣ ಮಾಸದಲ್ಲಿ ಊದುತ್ತಾ ದೇವರ ಕಾವ್ಯಗಳನ್ನು ಹಾಡುತ್ತಾರೆ. ಇವರ ಬಹುತೇಕ ಕಾವ್ಯಗಳು ತೆಲುಗಿನಲ್ಲಿದ್ದು ಇವರು ಆಂಧ್ರದಿಂದ ವಲಸೆ ಬಂದ ಪಶುಪಾಲಕ ಸಮುದಾಯ ಎಂಬುದನ್ನು ದೃಢಪಡಿಸುತ್ತವೆ.

**ಕಂಪಳ ರಂಗಸ್ವಾಮಿ ಪದ**

ಎಂಡಾಗಾಲಾನು ಬಂಡಾಮೀದಾ ತಪಸುಂಡಾಡೇ...
ಎಡೇಡೇನೇ ಪದ್ನಾಗ್ಲುನಾಡ್ಲು ಸ್ವಾಮಿ.
ತಾಲಾತೇನೇ ಕಿಂದಿಕಿ ಸೇಸಿ ಕಾಡ್ಲನ್ನು ಪೈಕಿ ಸೇಸೀ...
ಪಾರೂವತೀ ದೇವಮ್ಮಾನೇ ಪಲ್ಲಾಜಲ್ಲಲು ಸ್ವಾಮಿ.
ಈ ತ್ರಪಸೂಲೂ ನೀವ್ವೆನಾನೇ ಯಾಲಾಸೇಸ್ತವು ಸ್ವಾಮೀ...

ತಾಲಾತೇನೇ ಕಿಂದಿಕಿಸೇಸಿ ಕಾಡ್ಲನ್ನು ಪೈಕಿ ಸೇಸೀ...
ಪಾರೂವತೀ ದೇವಮ್ಮಾನೇ ಪಲ್ಲಾಜಲ್ಲಲು ಸ್ವಾಮಿ.
ಈ ತ್ರಪಸೂಲೂ ನೀವೈನಾನೇ ಯಾಲಾಸೇಸ್ತವು ಸ್ವಾಮೀ...
ತ್ರಪಸುಲೂ ನೀವೈನಾನೇ ಸೇಸುತಾವೇ ಸ್ವಾಮಿ...
ಪಲ್ಲಾ ಜಲ್ಲುಲ್ಲು ಸ್ವಾಮೈನಾನೇ ಪಾರೂವತಿ ದೇವಮ್ಮ.
ನಂದಿವಾನಮು ಮರಿಪಿಕ್ಕಿನೇ ದೇಶಮು ಸಂಚಾರ ಮಾಡೇ...
ಪಾರೂವತೀ ದೇವಮ್ಮನೇ ಪಲ್ಲಾಜಲ್ಲುಲು ಸ್ವಾಮೀ...

ದ್ವಾರಾವತಿ ಪಟ್ನಮುನಾನಾ ದೊರಕೂತುರುಂಡಾದಿ
ದೊರಕೂತುರುಂಡಾದೇನೇ ಭಾಗ್ಯಾದಾ ಲಸುಮವ್ವೇ...
ಪಟ್ವನೇ ಮಂಚಮುಮೀದಾ ಪಗಡೇಲೇ ಆಡೇದೇ...
ತೂಗಾನೇ ಮಂಚಮುಮೀದಾ ತೂಗಾತಿದೆ ಲಸುಮವ್ವೇ...

ದ್ವಾರಾವತೀ ಪಟ್ನಮುಮಿದಾ ಸೂಸ್ಯಾಡೇನೇ ಸ್ವಾಮೀ...
ಗುಲಗಂಜೀನೇ ವರುಣಾನೇನೇ ಗುಲಗಂಜಲು ತೂಕಾಲು.
ತೂಕಾಲೇನಾ ಹೆಣ್ಣುಗೂಡಾ ವಲ್ಲಾನೇನೇ ಸ್ವಾಮೀ...
ಅರಕಾ ಭರಕಾ ಸಲ್ಲಾಡುಲೇನೇ ಪೆಟ್ಟೆಕನ್ನಾಡೆ ಸ್ವಾಮಿ...

ಮುರುಕಾದೇನೇ ಭುವನಾಸಿನೇ ಸೇತಿನಿಕಿ ಪೆಟ್ಟೇಡೇ...
ಬಂಗಾರೇನೇ ಭುವನಾಸಿನೇ ಹೆಗಲಾಕಿ ಪೆಟ್ವಾಡೇ...
ಪ್ಯಾಟೈನಾನೇ ರುಮಾಲಾನೇ ಸುತ್ತಾಡೇನೇ ಸ್ವಾಮಿ.
ಅರುಕಾ ಭರುಕಾ ಸಲ್ಲಾಡುಲೇನೇ ಪೆಟೇಕನ್ನಾಡೆ ಸ್ವಾಮೀ...
ಜೋಳಿಗೇನೇ ಹೆಗಲಾ ಎಸಿಕೆನಿ ಪೊಯಾಡೆನೆ ಸ್ವಾಮಿ...
ದ್ವಾರಾವತಿ ಪಟ್ನಮುಕನೇ ದೊರಕೂತುರಿಂಟೀಕಿ
ತೂಗು ಮಂಚಮುಮೀದ್ಯೆಯನೇ ತೂಗುತಿದೇ ಲಸುಮವ್ವೆ...
ಪಟ್ವಾಲನೇ ಮಂಚಮುಮೀದಾ ಪಗಡೇನೇ ಆಡೇ...
ದ್ವಾರಾವತೀ ಕೂತುರುನೇ ದೊರಕೂತುರುಂಡಾದಿ.
ಭಾಗ್ಯಾದೇನೇ ಲಸುಮವ್ವಾನೇ ದಮ್ಮವ್ವನೇ ನೀಡೇ...

ಏಡುಗೂರೂ ಗೌಡೇರಾಡ್ಲುತಾ ಅಂಶಿದಿ ಲಸುಮವ್ವೇ...
ದ್ವಾರಾವತೀ ಊರ್ವಾಕಲಿಕಿ ವಚ್ಚಾಡೇ ದಾಸಯ್ಯೇ...
ಜಾಗಟನ್ನೇ ಅಡುಸುತಾಡೇ ಗೊವಿಂದಲು ಸೆಪ್ಪುತಾಡೇ.
ನೂಟಾಒಕ್ಕು ನಾಮಧಾರಣೆ ಸೇಸ್ಯಾಡೇನೇ ಸ್ವಾಮೀ...
ಔಡಯ್ಯೆನೇನೇ ಗೌಡರಾಲುತಾ ವಂಶಾದಿ ಆ ಯವ್ವೇ...

ಯಾವಾ ಊರು ದಾಸಾರಯ್ಯಾ ಯಾವ ಭೂಮಿ ನೀದೀ...
ನಾಗಿರಿಕೈನಾ ನೀವೈನಾನೇ ಯಾಲಾನೇ ವಸ್ತುವೇ...
ಪಲ್ಲಾ ಜಡ್ಲು ಸ್ವಾಮಿವಾರೂ ಪಾರೂವತೀ ದೇವಮ್ಮ.
ತ್ರಪಸೂಲ್ಯೆನೆ ಸೇಸುತಾದೇ ಆವೈದೈನಾನೇ ನೀಡೇ...

ಗುಲುಗಂಜನೇ ವರುಣಾನೇನೆ ಗುಲಗುಂಜಲು ತೂಕಮು
ಹೆಣ್ಣು ಆವುಲು ನಾನೆಂಟನೆ ವಚ್ಚೇನೇಗಮ್ಮವ್ವೇ...
ರೇಪುಟೇನೇ ದಿನಮುನಾನಾ ಪೆದೋಬಳೇಶ್ವವರಡು
ದ್ವಾರಾವತಿ ಕೂತುರುತೋನೇ ಲಗ್ನಮು ಅವುತಾಡೇ...

ಸಿರಿಪಲ್ಲೇನೇ ಒಕ್ಕಾಲೇನೇ ಗೊನೆಬಾಳೆ ಪಂಡುಲು...
ತಿರುಮಲ್ಲೇಟೆ ಆಕುಲೇನೇ ಸಿರಿಪಲ್ಲಿವಕ್ಕಲೇ...
ರೇಪುಟೇನೇ ದಿನಮುನಾನಾ ಆವಲಂಟಾನೇಡು.
ಸ್ವಾಮ್ಮೆನಾನೇ ಲಗ್ನಮನೆ ಐಯ್ಯಾಡೇನೇ ಸ್ವಾಮೀ...

ಆಶಾರನ ಪಾಲೂನೇಯೇ ಈಶಾರಕಿ ಮೊಸ್ಯಾಡೆ...
ಈಶಾರನ ಪಾಲೂನೇಯೇ ಆಶಾರಕೆ ಮೊಸ್ಯಾಡೇ...
ಆಮೂರ್ಥಲೂ ತಾಗೇನೇನೇ ಸಂತೋಷಮುಮಿದ ಮಲಗಿ.
ಕಾರಯ್ಯನೇ ನೀವೈನಾನೇ ಪಲ್ಲಾಜಲ್ಲುಲು ಸ್ವಾಮೀ...
ಏಡುಗುರೂ ಗೌಡೆರಾಡ್ಲು ಗುಲುಗುಂಜಲು ವರುಣಾಲೂ...
ಗಂಗೈಸುಲೋನೇ ಕಸವುಲೇನೇ ಉಂಡಾನೆರೈಯ್ಯೇ...
ಏಡುಗುರೂ ಗೌಡೆರಾಡ್ಲು ನೀರೈನಾನೇ ಪೀಮೂಲೇಯಿಲುಮೀ...
ತಾನೈನಾನೇ ನಾಸ್ವಾಮೀನೇ ಪಲ್ಲಾ ಜಲ್ಲುಲು ಸ್ವಾಮೀ...

ಮೀರೈನಾನೇ ನೇಡೈನಾವೇ ಸೂಡಾವಲ್ಲೆನ್ನಾಡೇ.
ನಾ ಸುತ್ತಾ ಮುತ್ತಾ ನೀರೈನಾನೇ ಪೀಮುಲೇವಲ್ಲೇ...
ನಾ ಸುತ್ತಾ ಮುತ್ತಾನಂತಾ ಮೀರೂ ಸೂಡಾವಲ್ಲೇ ಸ್ವಾಮೀ...
ಭಾಗ್ಯದೇನೇ ಲಸುಮವ್ವೇನೇ ತೂಗಾಮಂಚಮುಮೀದಾ...
ತೂಗಾದೇನೇಗಾರಯ್ಯನೇ ನೇಡೈನಾನೇ ಸ್ವಾಮೀ...

ಕಂಪಳರಂಗಸ್ವಾಮಿ ದ್ವಾರಾವತಿ ಪಟ್ಟಣದ ದೊರೆಯ ಮಗಳಾದ, ಸುರಸುಂದರಿಯಾದ ಭಾಗ್ಯದ ಲಸುಮವ್ವಳನ್ನು ವರಿಸಲು ದಾಸಯ್ಯನ ವೇಷಧರಿಸಿ ಅವಳ ಮನೆಗೆ ಭಿಕ್ಷೆಗೆ ಹೋಗುವ ಸನ್ನಿವೇಶ. ರಂಗಸ್ವಾಮಿ ಮೊದಲೇ ಪ್ರತಿಜ್ಞೆ ಮಾಡಿರುತ್ತಾನೆ. ಗುಲುಗಂಜಿ ಬಣ್ಣದ ಮತ್ತು ಗುಲುಗಂಜಿ ತೂಕದ ಹೆಣ್ಣನ್ನೇ ಮದುವೆಯಾಗಲು ನಿರ್ಧರಿಸಿದ್ದು, ಭಾಗ್ಯದ ಲಸುಮವ್ವ ಗುಲುಗಂಜಿ ವರ್ಣ ಮತ್ತು

ಗುಲುಗಂಜಿ ತೂಕ ಹೊಂದಿರುತ್ತಾಳೆ ಹಾಗಾಗಿ ಅವಳನ್ನು ವರಿಸುತ್ತಾನೆ. ಅರುಕು ಚೆಲ್ಲಾಣ ರುಮಾಲು ಧರಿಸಿ ಶಂಖ ಊದುತ್ತಾ ಜಾಗಟೆ ಬಾರಿಸುತ್ತಾ ಗೋವಿಂದಾ ಗೋವಿಂದಾ ಎಂದು ಭಿಕ್ಷೆಗೆ ಹೋದಾಗ ಲಸುಮವ್ವ ಗೌಡರ ಏಳು ಜನ ಹೆಂಡತಿಯರನ್ನು ಕಳಿಸಿ ಅವನನ್ನು ವಿಚಾರಿಸಲು ಹೇಳುತ್ತಾಳೆ. ಆ ಏಳು ಜನ ಹಾಗೆಯೇ ಮಾಡಲು ಕಂಪಳ ರಂಗನು ನಾನು ತಿರುಪತಿ ಗಿರಿಯವನು ನನ್ನಲ್ಲಿ ಏಳು ಪಲ್ಲ ಕಾಳು ಇವೆ ನನಗೆ ಬೇಕಾಗಿರುವುದು ನೀವು ನೀಡುವ ಕಾಳಲ್ಲಾ ಗುಲುಗಂಜಿ ತೂಕದ, ಗುಲುಗಂಜಿ ಬಣ್ಣದ ಹೆಣ್ಣು, ಆ ಹೆಣ್ಣು ಭಾಗ್ಯದ ಲಸುಮವ್ವ, ನಾನು ಅವಳನ್ನು ಮದುವೆಯಾಗಲು ಬಂದಿದ್ದೇನೆ ಎನ್ನುತ್ತಾನೆ. ಹಾಗೆಯೇ ಲಸುಮವ್ವಳನ್ನು ವರಿಸುತ್ತಾನೆ. ಹೀಗೆ ಇಡಿ ಕಾವ್ಯದಲ್ಲಿ ಕಂಪಳರಂಗಸ್ವಾಮಿ ಮತ್ತು ಭಾಗ್ಯದ ಲಸುಮವ್ವ, ಪಾಪನಾಯಕ, ಬೇಡ ಸಮುದಾಯದ ಹಿನ್ನೆಲೆ, ಸಾಂಸ್ಕೃತಿಕ ನಾಯಕರ ಕುರಿತಾಗಿ ವಿವರಿಸುತ್ತಾ ಸಾಗುತ್ತದೆ.

**ಕೂರಲೇ ಮಲ್ಲಯ್ಯನ ಪದ/ಕಾವ್ಯ**

ಘಟ್ಟುಕಾಲಾಲೂ ಗಾರಯ್ಯನೇ ಕೂರೆಲೇ ಮಲ್ಲಯ್ಯೇ...
ಅಡವಿಮೀದಾ ಸೂಸಿತೇನೇ ಅಡ್ಡ ಗಡ್ಡೇ ನೇದೇ...
ಬಡದಿನ ಮುಲೇಗಾರಯ್ಯನೇ ಕೂರಲೇ ಮಲ್ಲಯ್ಯೇ...

ಮಿತ್ತಿಗಾರೇ ವಚ್ಚಿನ್ನಾದೇ ಕಷ್ಟಮನೇ ಸೂಡೀ...
ಕೂರಲೇನೇ ಮಲ್ಲಯ್ಯನೇ ಉಂಡಾಡೇನೇರಯ್ಯೇ...
ಅಡವಿಮೀದಾ ಸೂಸಿತೇನೇ ಅಡ್ಡ ಗಡ್ಡೇನೇದೇ
ಅಡವಿಮೀದಾ ಸೂಸಿತೇನೇ ಕೂಗೂಕೂತಿನೇ

ಮಿತ್ತೀಗಾರೇ ಕಷ್ಟಮೈನಾ ಸೂಡಾವಲ್ಲೇ... ನೇ...
ಬುಟ್ಟಾನ ಕೊಡುಕೂ ಪವರಾಗಿನೋ ಮನೇ
ತದ್ದು ಪಡರಾಗಿನೇ ಸ್ವಾಮಿನೇನೇ.
ಎನ್ನಮನೆ ವಸಸಿದನೆ ಮಿತ್ತಿಗಾರಯ್ಯ ಸ್ವಾಮಿ
ಕುರಲೇನೇ ಮಲ್ಲಯ್ಯನೇ ಉಂಡಾಡೇನೇರಯ್ಯೇ...

ಏಡೇಡೇನೇ ಪದ್ನಾಲ್ಗು ನಾಡ್ಲು ತ್ರಪಸೂಲು ತ್ಯಾಡೇಡೇ...
ಒಕು ಪಕ್ಕನೇ ಪೆದುಲೆಂದೇ ಒಕು ಪಕ್ಕ ಉಂಡಾದಿ
ಅಡವಿಮೀದಾ ಸೂಸಿತನೇ ಅಡ್ಡಗಡ್ಡೇ ಲೇದೇ...
ಅಡವಿಮೀದಾ ಸೂಸಿತೇನೇ ಕೂಗೂತೇನೇದೇ...

ಮಿತ್ತಿಗಾರಿಕೇ ವಚ್ಚಿನ್ನಾದಿ ಕಷ್ಟಮೈನಾರೈಯ್ಯೇ...
ಕೋರಿಲೇನೇ ಮಲ್ಲಯ್ಯನೇ ಬಾಳಾವರಿ ಪಾಟ್ಟಮ್ಮ
ಪಾಲವ್ವನೇ ಕೂತುರೇ ಒಚ್ಚಿನ್ನಾದಿ...

ವಾರವ್ವನೇ ವಾರಯ್ಯನೇ ಉಂಡಾರೇನೇರಯ್ಯಾ.
ಧಡ್ಡಿನ್ನಾನೇ ಧಘಮಡಿಸಿನೇ
ಧಡ್ಡಿನೇನೇ ಧಗಮಡಿಸಿನೇ ಬ್ಯಾರೆ
ಮಕ ಮಕನೇನೇ ಕಾಪಕಂಪಳಮು
ಎನಕೆನಕ ಮೇ ಪೋಯೇ...

ಕ್ಯಾಸವ್ವ ಪಲ್ಲಿ ಕಾವುಲಿಕಿನೇಪೊವಲ್ಲೇನೇರಯ್ಯೇ...
ಗೋದಿಮಕಾಳು ಅಂಥನಾನೂ ಇವರಾನೇ ಬಾರದೇ
ಪಡಿರಾಗಿನೇ ಮಾನಿಕೇನೇ... ಮುಕ್ಕೇರೇನೇ ಸ್ವಾಮಿ

ಅಡವಿಮೀದಾ ಸೂಸಿತೀನೇ ಅಡ್ಡಾಗಡ್ಡೇನೇದೇ...
ಮಿತಿಗಾರೈಕಿ ವಚ್ಚಿನ್ನಾದಿ ಕಷ್ಟಮನೇರಯ್ಯೇ...
ಕ್ಯಾಸವ್ವಪಲ್ಲಿ ಕಾವುಲೇನೆ ಪೋವಲ್ಲಂಟೇರಯ್ಯೇ...

ನಾಕಿರಾಲೇ ಓಬವ್ವಾನೇ... ಭೂಮಿಕೋರೀ ವಚ್ಚೇ...
ದಡ್ಡನೇನೇ ನಾಕಿಡೇನೇ ವಚ್ಚಾಡೇನೇರಯ್ಯೇ...
ಕೊರಿಲೇನೇ ಮಲ್ಲಯ್ಯನೇ ಉಂಡಾಡೇಲೇರಯ್ಯೇ...

ಬದುವಂಪುಲೇ ಕ್ಯಾಸಾಲಾಡನೇ ಹಳ ಪುತ್ಯಾಸದಡೇ
ದಂಡಯ್ಯನೇ ಮೀರಯ್ಯನೇ ನೀರಾಚರಿನೇನೆಡೆ.
ಮೀಕಾವುಲಿಕೇನೇರಯ್ಯೇ
ಗೂಡಯ್ಯಾನಾನೇ ಸೆಸೆಡೇನೇ ಗಾರಯ್ಯಾಡೇ...ಸ್ವಾಮಿ...

ಈ ಸಂದುನಲ್ಲಿ ಕೋರಲೇ ಮಲ್ಲನಾಯಕನ ಹುಟ್ಟು ಮತ್ತು ಅವನ ಪಶುಪಾಲನಾ ವೃತ್ತಿಯನ್ನು ತಿಳಿಸಿ ನಂತರ ಅವನ ಸಾಕುದನಗಳಿಗೆ ಮೇವು ನೀರು ಇಲ್ಲದೇ ಬರಗಾಲ ಬಂದಾಗ ಪಡರಾಗಿ ಮರ ಎಂಬ ಒಂದು ಜಾತಿಯ ಮರವಿದ್ದು ಆ ಮರದಲ್ಲಿ ಗೋಧಿಯ ಕಾಳಿನ ರೂಪದ ಕಾಳು ಯಾವ ದಿಕ್ಕಿಗೆ ಮುಖಮಾಡಿಕೊಂಡಿರುತ್ತವೆಯೋ ಆ ದಿಕ್ಕಿಗೆ ಮೇವು ನೀರು ಸಿಗುತ್ತದೆ ಎಂದು ಹೇಳುತ್ತಾರೆ. ಕೂರೇ ಮಲ್ಲಯ್ಯ ಆ ಪಡರಾಗಿ ಮರದ ಗೋಧಿಕಾಳನ್ನು ನೋಡಿ ತಮ್ಮ ಮುತ್ತೈಗಳು/ದೇವರ ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾನೆ. ಪ್ರಕೃತಿಯಲ್ಲಿನ ಗಿಡಮರಗಳನ್ನು ನೋಡಿ ಮಳೆ ಬೆಳೆಯನ್ನು ತಿಳಿಯುವ ಈ ರೀತಿಯಾದಂತಹ ಪಾರಂಪರಿಕ ಜ್ಞಾನ ಹಟ್ಟಿಯವರಲ್ಲಿ ಇಂದಿಗೂ ಸಹ ಇರುವುದನ್ನು ಕಾಣಬಹುದು.

**ಕಂಪಳ ರಂಗಸ್ವಾಮಿಯ ಪದ**

ಹೋಯ್ ಬಾಲುಬಲ್ಯೆಯ್ಯಾ.
ಉಂಡವುನಾ ಲೇವುರಾ ಜಾಥ ಬಂಥುಲ ಸ್ವಾಮಿ

ಉಂಡವುನಾ ಲೇವುರಯ್ಯೇ..

ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ

ಉಂಡವುನಾ ಲೇವುರಯ್ಯೇ...

ಧಡ್ಡನೆ ಧಘಮಡಿಸಿ ಧಡ್ಡಿಲೇಸಿನೆ ಸ್ವಾಮಿ

ಉಂಡವುನಾ ಲೇವುರಯ್ಯೇ...

ದಡ್ಡನೆ ಧಗಮಡಿಸಿ ದಡ್ಡಿಲೇಸಿನಿ ಸ್ವಾಮಿ

ಉಂಡವುನಾ ಲೇವುರಯ್ಯೇ...

ದಮ್ಮಾಲೇವುರಾ ಜಾಡಿಬಂತುಲ ಸ್ವಾಮಿ

ಉಂಡವುನೇ ಲೇವುರಯ್ಯ

ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ

ಉಂಡವುನಾ ಲೇವುರಯ್ಯೇ...

ಗಿಳ್ಳಿಯ ಗುಡ್ಡಕ್ಕೆ ದಡ್ಡಿಪೆಟ್ಟಿನಿ ಸ್ವಾಮಿ

ಉಂಡವುನಾ ಲೇವುರಯ್ಯ

ಗಿಳ್ಳಿಯ ವಲಮುಲು ಸೀಳನಾದಲೇ ಸ್ವಾಮಿ

ಉಂಡವುನಾ ಲೇವುರಯ್ಯೇ...

ಬೋರಯ್ಯ ಗುಡ್ಡಕ್ಕೆ ದಡ್ಡಿಪೆಟ್ಟಿನಿ ಸ್ವಾಮಿ...

ಉಂಡವುನಾ ಲೇವುರಯ್ಯ.

ಬೋರಯ್ಯ ಗನವೋಮೊಲ ವಾಟವಾಡಿನಿ ಸ್ವಾಮಿ

ಉಂಡವುನಾ ಲೇವುರಯ್ಯೇ...

ಎರಹೊಳ್ಳಿ ಗಡ್ಡಕ್ಕೆ ದಡ್ಡಿಪಟ್ಟಿನಿ ಸ್ವಾಮಿ

ಉಂಡವುನಾ ಲೇವುರಯ್ಯ.

ಎರಹೊಳ್ಳಿ ಗಡ್ಡಲೋ ಯಾಟವಾಡಿನೆ ಸ್ವಾಮಿ

ಉಂಡವುನಾ ಲೇವುರಯ್ಯ...

ಉಂಡವುನಾ ಲೇವುರಯ್ಯೇ...

ಆಕು ಮಂಚಲಮೀದ ಲೋಕವೆಳ್ಳಿನ ಸ್ವಾಮಿ

ಉಂಡವುನಾ ಲೇವುರಯ್ಯ.

ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ

ಉಂಡವುನಾ ಲೇವುರಯ್ಯೇ...

ದಿಕ್ಕನೆ ವಾರಿಥಾ ಸುಕ್ಕಲೇಸಿನ ಸ್ವಾಮಿ
ಉಂಡವುನಾ ಲೇವುರಯ್ಯ.
ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ
ಉಂಡವುನಾ ಲೇವುರಯ್ಯೇ...

ಯರ್ರ ಮಾನ(ಲೆ) ನಲ್ಲಮಾನ(ಲೆ)ನಿ ಯಾಟಲಾಡಿನ ಸ್ವಾಮಿ
ಉಂಡವುನಾ ಲೇವುರಯ್ಯ.
ಯರ್ರ ಮಾನ(ಲೆ) ನಲ್ಲಮಾನ(ಲೆ)ನಿ ಯಾಟ ತಿರುಗಿನ ಸ್ವಾಮಿ
ಉಂಡವುನಾ ಲೇವುರಯ್ಯೇ...

ಒಂಬಾಳೆ ವನದಿಲಾ ಉಂಡು ಬಂಡಗೆ ಸ್ವಾಮಿ
ಉಂಡವುನಾ ಲೇವುರಯ್ಯ.
ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ
ಉಂಡವುನಾ ಲೇವುರಯ್ಯೇ...
ಪಟ್ಟ ಮಂಚಲ ಮೀದ ಪಗಡೆಯಾಡಿನೇ ಸ್ವಾಮಿ
ಉಂಡವುನಾ ಲೇವುರಯ್ಯ.
ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ
ಉಂಡವುನಾ ಲೇವುರಯ್ಯೇ...

ಯರೆಯಂಗ ರಾಯಥಾ ರಂಗಲ್ಲಿನೆ ಸ್ವಾಮಿ
ಉಂಡವುನಾ ಲೇವುರಯ್ಯ.
ಉಂಡವುನಾ ಲೇವುರ ರತ್ನಭಂತುಲ ಸ್ವಾಮಿ
ಉಂಡವುನಾ ಲೇವುರಯ್ಯೇ...
ಹೋಯ್ ಬಾಲುಬಲ್ಯೆಯ್ಯಾ..

**ಗಾದೆಗಳು**

ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಗಾದೆ ಅತ್ಯಂತ ಪ್ರಾಚೀನವಾದ ಪ್ರಕಾರವಾಗಿದೆ. ಗಾದೆ ಸಂಸ್ಕೃತದ ಗಾಥಾ ಪದದಿಂದ ಬಂದಿದೆ. ಜನಪದರು ತಮ್ಮ ಜೀವನದಲ್ಲಿ ಅನುಭವಿಸಿದ ಅನುಭವಗಳನ್ನು ಬೇರೆಯವರಿಗೆ ತಿಳಿಸುವಾಗ ಆ ವಿಷಯಕ್ಕೆ ಮಹತ್ವ ಬರಲು ಗಾದೆಗಳನ್ನು ಬಳಸಿ ಮಾತನಾಡುತ್ತಾರೆ. "ಗಾದೆಗಳನ್ನು ಕುರಿತು ಬ್ರಿಟಾನಿಕಾ ವಿಶ್ವಕೋಶ ಹೀಗೆ ಹೇಳುತ್ತದೆ, ಗಾದೆಗಳು ಆಡುನುಡಿಯ ಅಂಗಾಂಶಗಳು; ಜನ್ಮತಃ ಜನಪದ ಲಾವಣಿ ಗಿತೆಗಳು, ಹುಟ್ಟಿದಂತಹ ಜನಾಂಗಿಕ ಇತಿಹಾಸದ ಘಟಕಕ್ಕೆ ಸೇರತಕ್ಕವು, ಅವು ದೈನಂದಿನ ಜೀವನದ ಘಟನೆಗಳನ್ನು ಪ್ರತಿಮೆಗಳನ್ನಾಗಿ ಬಳಸುತ್ತವೆ"[೨]. ಜನಪದರು ತಾವು ಮಾತನಾಡುವ ಪ್ರತಿ ಸಂದರ್ಭದಲ್ಲಿ ತಮ್ಮ ಅನುಭವದ ಮತ್ತು ಹಿಂದಿನಿಂದಲೂ

ಬಂದಿರುವ ಅನುಭವಜನ್ಯ ಗಾದೆ ಮಾತುಗಳನ್ನು ಬಳಸಿ ಮಾತನಾಡುತ್ತಾರೆ. ಊಟಕ್ಕೆ ಉಪ್ಪಿನಕಾಯಿ ಹೇಗೆ ರುಚಿಕೊಡುತ್ತದೋ ಅದೇ ರೀತಿ ನಮ್ಮ ಗ್ರಾಮೀಣರ ಮಾತಿಗೆ ಗಾದೆಗಳು ಸವಿಕೊಡುತ್ತವೆ. ಗಾದೆಗಳು ಕೇವಲ ಮಾತಿನ ಮಧ್ಯದಲ್ಲಿ ಮಾತಿನ ಅಂದಗಾರಿಕೆಗೆ ಮಾತ್ರ ಬಳಸುವಂತಹವಲ್ಲ ಅವುಗಳಲ್ಲಿ ಜೀವನದ ಎಲ್ಲಾ ಕ್ಷೇತ್ರದ ಎಲ್ಲಾ ಸಂದರ್ಭಕ್ಕೂ ಸಂದೇಶ, ತಿಳುವಳಿಕೆ ನೀಡುವ ಅಂಶಗಳಿರುತ್ತವೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಗಾದೆಯೇ ಗಾದೆಗಳ ಮಹತ್ವವನ್ನು ತಿಳಿಸುತ್ತದೆ. ಗಾದೆಗಳಿಲ್ಲದ ದೇಶ, ಸಮುದಾಯ, ಇಲ್ಲವೆಂದೇ ಹೇಳಬಹುದು. ಹಟ್ಟಿಯ ಜನಪದರು ಬಳಸುವ ಗಾದೆಗಳಲ್ಲಿ ಮುಂದಿನ ತಲೆಮಾರುಗಳಿಗೆ ನೀತಿ ಸಂದೇಶವನ್ನು ತಿಳಿಸುವಂತಹ ಸೂಕ್ಷ್ಮ ಮಾತುಗಳಿರುತ್ತವೆ. ದೇವರು, ಧರ್ಮ, ಜಾತಿ, ಹುಟ್ಟು, ಸಾವು, ಮಳೆ, ಬೆಳೆ, ಬದುಕು, ದನಕರುಗಳು, ಕುಲ, ವೃತ್ತಿ, ಸಂಪ್ರದಾಯ, ಆಚರಣೆಗಳಿಗೆ ಸಂಬಂಧಿಸಿದಂತೆ ನೀತಿ ಗಾದೆಗಳಿವೆ ಅಲ್ಲದೆ ಸಾಂಸಾರಿಕ ಜೀವನಕ್ಕೆ. ಹೆಂಗಸರಿಗೆ, ಸೋಮಾರಿ ಗಂಡಸರಿಗೆ ಅವರ ಗುಣ ಸ್ವಭಾವಗಳನ್ನು ತಿದ್ದಿ ಬುದ್ಧಿ ಹೇಳುವ ಚಾಟಿಯ ಏಟಿನಂತಹ ಗಾದೆಗಳೂ ಸಹ ಇವೆ. ಹೀಗೆ ಹಟ್ಟಿಯ ಜನಪದರಲ್ಲಿ ಎಲ್ಲಾ ಕ್ಷೇತ್ರ, ಸಂಸ್ಥೆ, ವಿಷಯಗಳಿಗೆ ಸಂಬಂಧಿಸಿದಂತೆ ಸಂದೇಶ ನೀಡುವ ಗಾದೆಗಳು ದೊರೆಯುತ್ತವೆ. ಹಟ್ಟಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅವರಿಂದ ಸಂಗ್ರಹಿಸಿದ ಗಾದೆಗಳನ್ನು ವಿಂಗಡಿಸಿಕೊಂಡು ಈ ಕೆಳಗಿನಂತೆ ತಿಳಿಸಲಾಗಿದೆ.

**ಜಾತಿಗಳ ಗುಣ ಸ್ವಭಾವದ ಕುರಿತ ಗಾದೆಗಳು**

ಜನಪದರು ತಾವು ಬಳಸುವ ಗಾದೆಗಳಲ್ಲಿ ತಮ್ಮ ಮತ್ತು ಸುತ್ತಲಿನ ಜಾತಿಗಳ ಸ್ವಭಾವದ ಕುರಿತು ಕೆಲವು ಗಾದೆಗಳನ್ನು ಬಳಸುತ್ತಾರೆ. ಇವು ಇಂದಿನವರಲ್ಲಿ ಪರಂಪರೆಯಿಂದ ಅನುಭವದ ಮೂಲಕ ರೂಢಿಗೆ ಬಂದವುಗಳಾಗಿವೆ ಅವುಗಳೆಂದರೆ, ಬೇಡ ಕಳ್ಳ ಮಾದಿಗ ಸುಳ್ಳ ಎಂಬ ಗಾದೆಯನ್ನು ಜನರು ದಿನನಿತ್ಯ ಬಳಸುತ್ತಾರೆ. ಜನಪದರು ಹೇಳುವಂತೆ ಮಾದಿಗರು ಸುಳ್ಳು ಹೇಳುತ್ತಿದ್ದರು, ಬೇಡರು ಕದಿಯುತ್ತಿದ್ದರು ಆದ್ದರಿಂದ ಈ ಗಾದೆ ಹುಟ್ಟಿಕೊಂಡಿದೆ. ಅದರಂತೆಯೇ, ಬೆಲ್ಲದಂಗಿದ್ದರೂ ಬೇಡನನ್ನು ನಂಬಬೇಡ, ಜಾಲಿ ಸಾಕಿದರೆ ಕಾಲಿಗೆ ಮೂಲ ಬೇಡನನ್ನು ಸಾಕಿದರೆ ಜೀವಕ್ಕೆ ಮೂಲ, ಗೊಲ್ಲ ಗೆಣೆಯನಲ್ಲ ತುರುಕ ದಾಸನಲ್ಲ, ಗೊಲ್ಲ ಮಾಯದಂತ ಮಾಯವಿಲ್ಲ ನಗ್ಗಲಿ ಮುಳ್ಳಿನಂಥ ಮುಳ್ಳಿಲ್ಲ, ಬ್ಯಾಡ್ರ ಸುಗ್ಗಿ ಬೇಲೀಲಿ, ಶೆಟ್ಟಿ ಬಿಟ್ಟಲ್ಲೇ ಪಟ್ಟಣ, ಕೂಡಿ ಕುರುಬ ಕೆಟ್ಟ ಅಗಲಿ ದೊಂಬ ಕೆಟ್ಟ, ಮುಂತಾದುವು ಜಾತಿಯ ಗುಣ ಸ್ವಭಾವವನ್ನು ತಿಳಿಸುವ ಗಾದೆಗಳಾಗಿವೆ.

**ಮಳೆ–ಬೆಳೆಗೆ ಸಂಬಂಧಿಸಿದ ಗಾದೆಗಳು**

ಕೃಷಿಕರು ತಮ್ಮ ಕೃಷಿ ಬದುಕಿಗೆ ಮಳೆಯನ್ನೇ ನಂಬಿದವರು. ಯಾವ ಯಾವ ಮಳೆಗಳು ಹೇಗೆ ಸುರಿಯುತ್ತವೆ ಅವುಗಳ ಗುಣ ಸ್ವಭಾವವೇನು ಮತ್ತು ಯಾವ ಯಾವ ಮಳೆಗಳಿಗೆ ಯಾವ ಯಾವ ಬೆಳೆಗಳು ಚೆನ್ನಾಗಿ ಬೆಳೆಯುತ್ತವೆ ಎಂದು ಅನುಭವದಿಂದ ಅರಿತು ಗಾದೆಕಟ್ಟಿದ್ದಾರೆ. ಅಂತಹ ಗಾದೆಗಳೆಂದರೆ,

ಮಳೆ ಬಂದ್ರೆ ಸೊಬಗು ಇಲ್ಲದಿದ್ರೆ ಕೊರಗು, ಎನ್ನುವಂತಹ ಗಾದೆ ಮಾತಿನಲ್ಲಿ ಶ್ರಮಿಕ ಜನರಿಗೆ ಮಳೆಯು ಎಷ್ಟು ಅವಶ್ಯಕ ಎಂಬುದನ್ನು ತಿಳಿಸಿದ್ದಾರೆ. ಮಳೆ ಬಂದರೆ ಉತ್ತಮ ಬೆಳೆಯಾಗುತ್ತದೆ ದನಕರುಗಳು ಚೆನ್ನಾಗಿರುತ್ತವೆ, ಮನೆತುಂಬಾ ಕಾಳು ಕಡಿ ತುಂಬಿ ಎಲ್ಲಾ ಜನರೂ ಸುಖವಾಗಿರುತ್ತಾರೆ. ಒಂದು ವೇಳೆ ಮಳೆ ಬಾರದೇ ಇದ್ದರೆ ದನಕರುಗಳು ಮೇವು ನೀರಿಲ್ಲದೆ, ಜನರು ಆಹಾರವಿಲ್ಲದೆ ಕೊರಗಬೇಕಾಗುತ್ತದೆ ಎಂಬುದನ್ನು ಒಂದೇ ಒಂದು ಗಾದೆಮಾತಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಅದರಂತೆಯೇ ಮಳೆಗಳ ಬರುವಿಕೆ ಅವುಗಳ ಸ್ವಭಾವದ ಮೇಲೆ ಕಟ್ಟಿರುವ ಗಾದೆಗಳೆಂದರೆ,

**'ಸ್ವಾತೀ ಮಳೆ ಹೇತೇನೆಂದ್ರು ಬಿಡ್ದು'**

ಸ್ವಾತೀ ಮಳೆಯು ಒಂದೇ ಸಮನೆ ಹಗಲೂ ರಾತ್ರಿ ಸುರಿಯುವುದರಿಂದ ಹೊರಗಡೆ ಹೋಗಿ ಯಾವ ಕೆಲಸ ಮಾಡಲು ಆಗುವುದಿಲ್ಲ ಎಂದು ತಿಳಿಸುವ ಮಾತು ಈ ಗಾದೆ.

**'ಸ್ವಾತಿ ಮಳೆಯಲ್ಲಿ ಕಾಸಿಗೊಂದು ಕುರಿ'**

ಸ್ವಾತಿ ಮಳೆ ಜಿನಿ ಜಿನಿ ಅಂತ ಒಂದೇ ಸಮನೆ ಹತ್ತಿಕೊಂಡು ಬರುವುದರಿಂದ ಕುರಿಗಳು ಸರಿಯಾಗಿ ಮೇಯದೇ ಕಾಯಿಲೆ ಬಿದ್ದು ಸಾಯುತ್ತವೆ. ಅಥವಾ ಸರಿಯಾಗಿ ಬೆಳವಣಿಗೆಯಾಗುವುದಿಲ್ಲ ಮಾರಾಟ ಮಾಡಿದರೆ ಅವುಗಳಿಗೆ ತಕ್ಕ ಬೆಲೆ ಸಿಗುವುದಿಲ್ಲ ಆದ್ದರಿಂದ ಈ ಮಳೆಗೆ ಇಂತಾ ಗಾದೆ ಕಟ್ಟಿದ್ದಾರೆ.

**'ರೋಣೀ ಮಳೆಗೆ ಓಣೆಲ್ಲಾ ಕಾಳು'**

ರೋಹಿಣಿ ಮಳೆಗೆ ಜೋಳ ಬಿತ್ತಿದರೆ ಉತ್ತಮ ಬೆಳೆಯಾಗುತ್ತದೆ ಎಂಬುದನ್ನು ಸಾವಿರಾರು ವರ್ಷಗಳಿಂದ ಅನುಭವದಿಂದ ತಿಳಿದ ಜನಪದರು 'ರೋಣೀ ಮಳೆಗೆ ಓಣೆಲ್ಲಾ ಜೋಳ' ಎಂಬ ಗಾದೆ ಕಟ್ಟಿದ್ದಾರೆ. ಈ ಮಳೆಗೆ ಜೋಳ ಬಿತ್ತಿದರೆ ಜೋಳ ಉತ್ತಮ ಇಳುವರಿ ಬರುತ್ತದೆ.

**'ಆರಿದ್ರೆ ಮಳೆಗೆ ಅದ್ದೂರಿ ಬೆಳೆಯಂತೆ'**

ಬಿತ್ತನೆ ಆಗಿ ಕಳೆ ಎಲ್ಲಾ ಮುಗಿದ ಸಂದರ್ಭದಲ್ಲಿ ಬರುವ ಮಳೆ, ಈ ಮಳೆ ಬಂದರೆ ಉತ್ತಮ ಫಸಲು ಬರುತ್ತದೆ. ಅದರಂತೆಯೇ ಉತ್ತರಿ ಮಳೆಯ ಕುರಿತು ಹೇಳುವ ಗಾದೆಗಳು ಹೀಗಿವೆ,

ಆದ್ರೆ ಉತ್ತರಿ ಆಗದಿದ್ದರೆ ಸತ್ರಿ, ಆದ್ರೆ ಹಸ್ತ ಅಗದಿದ್ದರೆ ಹಲ್ಲು ಕಿಸ್ತ ಇವುಗಳು ಮಾತ್ರವಲ್ಲದೆ ಮಳೆ ಬೆಳೆಗಳಿಗೆ ಸಂಬಂಧಿಸಿದಂತೆ ಹಲವು ಗಾದೆಗಳಿವೆ.

ಅಸಲಿಲ್ಲದೆ ಬಡ್ಡಿಯಿಲ್ಲ, ಮಳೆಯಿಲ್ಲದೆ ಬೆಳೆಯಿಲ್ಲ, ಹದನೋಡಿ ಹರಗು ಬೆದ ನೋಡಿ ಬಿತ್ತು, ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆ ಮೇಲು ಇನ್ನು ಮುಂತಾದ ಗಾದೆಗಳು ಹಟ್ಟಿಯ ಜನಪದರಲ್ಲಿ ರೂಢಿಯಲ್ಲಿದ್ದು ಅವುಗಳೆಲ್ಲಾ ಮಳೆ, ಬೆಳೆ, ಕಷ್ಟ, ಸುಖ, ರೈತನ ಕರ್ತವ್ಯಗಳ ಬಗ್ಗೆ ಎಚ್ಚರಿಸುತ್ತವೆ. ಹುಬ್ಬೆ ಮಳೆಗೆ ಗುಬ್ಬಿ ತಲೆಯೂ ನೆನೆಯದು ಎಂಬ ಗಾದೆಯಲ್ಲಿ ಹುಬ್ಬೆ ಮಳೆಯು ಜೋರಾಗಿ ಬಾರದೆ ಜಿನಿ ಜಿನಿ ಮಂಜಿನಂತೆ ಸುರಿಯುವ ಅದರ ಸ್ವಭಾವವನ್ನು ಹೇಳುತ್ತಾರೆ.

### ಸಾಮಾಜಿಕ ನೀತಿ ನಿಯಮಗಳನ್ನು ತಿಳಿಸುವ ಗಾದೆಗಳು

ನಮ್ಮ ಜನಪದರು ತಾವು ಬಳಸುವ ಗಾದೆಮಾತುಗಳಲ್ಲಿ ಸಮಾಜಕ್ಕೆ ಸಂದೇಶ ನೀಡುವಂತಹ ಗಾದೆಗಳೇ ಹೆಚ್ಚು. ಸಾಮಾಜಿಕ ನಿಯಮಗಳು, ನಿರ್ಬಂಧಗಳು ಮುಂತಾದುವುಗಳ ಬಗ್ಗೆ ಗಾದೆಮಾತುಗಳಲ್ಲಿ ತಿಳಿಸಿದ್ದಾರೆ. ಉದಾಹರಣೆಗೆ ಕುರಿ ಕೊಟ್ಟೊರಿಗೆ ಮರಿ ಕೊಡಬೇಕು, ಎಂಬ ಒಂದು ಗಾದೆ ಮಾತು ಕೇವಲ ಕುರಿ–ಮರಿಗಳ ಲೆಕ್ಕಾಚಾರದ ಮಾತಲ್ಲ ಆ ಸಮಾಜದ, ಸಮುದಾಯದ ಜನರ ಸಾಮಾಜಿಕ ಜೀವನದಲ್ಲಿನ ಒಂದು ಪದ್ಧತಿಯನ್ನು ತಿಳಿಸುವಂತಹದ್ದು ಆಗಿದೆ. ಅಂದರೆ ಯಾರಾದರೂ ಒಬ್ಬ ವ್ಯಕ್ತಿ ಒಂದು ಮನೆಯಿಂದ ಹೆಣ್ಣನ್ನು ಮದುವೆಯಾದರೆ ಆ ಮನೆಯಲ್ಲಿ ಹುಟ್ಟಿದ ಹಣ್ಣು ಮಗುವನ್ನು ತವರು ಮನೆಯ ಗಂಡಿಗೆ ಮದುವೆ ಮಾಡಿ ಕೊಡಬೇಕು ಎಂಬುದು ಇವರಲ್ಲಿನ ಸಾಮಾಜಿಕ ನಿಯಮ. ಅ ನಿಯಮವನ್ನು ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸುವ ಸಲುವಾಗಿ ಇಂತಹ ಗಾದೆ ಕಟ್ಟಿಕೊಂಡಿರಬೇಕು.

### ಹೊಟ್ಟೆ ತುಂಬಿದ ಮ್ಯಾಲೆ ಹುಗ್ಗಿ ಮುಳ್ಳು ಮುಳ್ಳು

ಅಂದರೆ ವ್ಯಕ್ತಿಗೆ ಏನಾದರೂ ಅವಶ್ಯಕತೆ ಇದ್ದಾಗ ಅಥವಾ ಹಸಿವಾಗಿದ್ದಾಗ ಅವನಿಗೆ ಅಗತ್ಯ ವಸ್ತು ಅಥವಾ ಊಟ ಸಿಕ್ಕರೆ ಅದನ್ನು ಪ್ರೀತಿಸುತ್ತಾನೆ, ಗೌರವಿಸುತ್ತಾನೆ, ಹೊಗಳುತ್ತಾನೆ. ಹಸಿದವನಿಗೆ ಹುಗ್ಗಿ ಸಿಹಿ ಆದರೆ ಹೊಟ್ಟೆ ತುಂಬಿದವನಿಗೆ ಹುಗ್ಗಿ ನೀಡಿದರೆ ಊಟಮಾಡುವುದಿಲ್ಲ ಅದರಂತೆ ಅವಶ್ಯಕತೆ ತೀರಿದಾಗ ಆ ವಸ್ತುವಿಗೆ ಬೆಲೆಕೊಡುವುದಿಲ್ಲ ಎಂಬುದನ್ನು ಮಾರ್ಮಿಕವಾಗಿ ಈ ಗಾದೆಮಾತಿನಲ್ಲಿ ಬುದ್ದಿ ಹೇಳುವ ಕೆಲಸ ಮಾಡಿದ್ದಾರೆ.

### ಉಪ್ಪು ತಿಂದವ ನೀರು ಕುಡಿಯಲೇ ಬೇಕು

ಈ ಗಾದೆಯು ತಪ್ಪು ಮಾಡಿದವನಿಗೆ ಶಿಕ್ಷೆ ತಪ್ಪುವುದಿಲ್ಲ  ದೇವರು ತಕ್ಕ ಶಾಸ್ತಿ ಮಾಡುತ್ತಾನೆ ಎಂಬುದರ ಒಳಾರ್ಥ ಒಳಗೊಂಡಿದೆ.

'ಇಲಿ ಹೋದ್ರೆ ಹುಲಿ ಹೋಯ್ತು ಅಂದ್ರು' ಎಂಬ ಗಾದೆ ಮಾತಿನಲ್ಲಿ ಸಣ್ಣ ವಿಷಯವನ್ನು ದೊಡ್ಡದು ಮಾಡಿ ಇಲ್ಲ ಸಲ್ಲದ ಚಾಡಿ ಹೇಳುವವರ ಕುರಿತಾದ ಗಾದೆಯಿದು. ಹಾಸಿಗೆ ಇದ್ದಷ್ಟು ಕಾಲು ಚಾಚು, ಹನಿ ಹನಿ ಕೂಡಿದರೆ ಹಳ್ಳ ತೆನೆ ತೆನೆ ಕೂಡಿದರೆ ಬಳ್ಳ, ಎತ್ತು ಏರಿಗೆ ಕ್ವಾಣ ನೀರಿಗೆ, ಗುಡ್ಡಕ್ಕೆ ಬೆಂಕಿ ಬಿದ್ದಾಗ ಬಾವಿತೋಡಿದರು, ಮಾತು ಮನೆಕೆಡಿಸಿತು ತೂತು ಒಲೆ ಕೆಡಿಸಿತು ಎಂಬ ಗಾದೆ ಮಾತು ನುಡಿದರೆ ಮುತ್ತಿನ ಹಾರದಂತಿರಬೇಕು ಎಂಬ ವಚನಕ್ಕಿಂತಲೂ ಪೂರ್ವದಲ್ಲಿ ಜನಪದರು ಹೇಳಿದ ಮಾತಾಗಿದೆ. ಅಂದರೆ ನಾವು ಮಾತನಾಡುವ ಮಾತು ತೂಕದಿಂದ ಕೂಡಿರಬೇಕು, ನಯವಾಗಿರಬೇಕು, ಮೊತ್ತೊಬ್ಬರಿಗೆ ಅದರಿಂದ ನೋವು ಆಗುವಂತಿರಬಾರದು. ಹೇಗೆ ಒಲೆಯ ಮೇಲೆ ಇಟ್ಟ ಪಾತ್ರೆ ತೂತಾಗಿದ್ದರೆ ಅದರಿಂದ ನಿರು ಸೋರಿ ಒಲೆ ಆರುತ್ತದೋ ಅದೇರೀತಿ ನಾವು ಆಡುವ ಪೊಳ್ಳು ಮಾತು ನಮ್ಮನ್ನು ಹಾಳುಮಾಡುತ್ತದೆ ಎಂಬುದು ಈ ಗಾದೆಮಾತಿನ ಅರ್ಥ.

ಇದ್ದದ್ದು ಇದ್ದಂಗೆ ಹೇಳಿದರೆ ಎದ್ದು ಬಂದು ಎದೆಗೊದ್ದಂಗೆ, ಹಾಲಿನದು ಹಾಲಿಗೆ ನೀರಿನದು ನೀರಿಗೆ, ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ, ನಡಕೊಂಡವರು ಪಡಕೊಂಡರು. ಬರಿಗೈಗಿಂತ ಹಿತ್ತಾಳೆ ಕಡಗ ಲೇಸು, ಜ್ಯೋತಿ ಉರಿದ ಮನೆ ನೀತಿ ಹೆಚ್ಚು, ಅನ್ನ ಹಾಕಿದ ಮನೆ ಕೆಡಲ್ಲ ಗೊಬ್ಬರ ಹಾಕಿದ ಹೊಲ ಕೆಡಲ್ಲ, ಅಟ್ಟ ಮೇಲೆ ಒಲೆ ಉರಿತು ಕೆಟ್ಟ ಮೇಲೆ ಬುದ್ಧಿ ಬಂತು, ಗಾಳಿಬಂದಾಗ ತೂರಿಕೊ, ತುಂಬಿದ ಕೊಡ ತುಳಿಕುವುದಿಲ್ಲ, ತಳಿನೊಡಿ ದನ ತತ್ತ ಸುಳಿನೊಡಿ ಹೆಣ್ಣುತತ್ತಾ, ಎದ್ದೋಗೊ ಮಾತು ಬಿದ್ದೋಗ್ಲಿ, ಮುಂತಾದ ನೀತಿ ತತ್ವ ಪ್ರಾಮಾಣಿಕ ಅಂಶಗಳನ್ನು ಒಳಗೊಂಡ ಗಾದೆಗಳು ಹಟ್ಟಿಯ ಮ್ಯಾಸಬೇಡರು ಅಥವಾ ಎಲ್ಲಾ ಜನಪದರು ದಿನ ನಿತ್ಯ ತಮ್ಮ ಮಾತುಗಳಲ್ಲಿ ಬಳಸುತ್ತಾರೆ.

**ಮಹಿಳೆಯರಿಗೆ ನೀತಿ ಹೇಳುವ ಮತ್ತು ಗುಣಸ್ವಭಾವ ತಿಳಿಸುವ ಗಾದೆಗಳು**

ಹಟ್ಟಿಯ ಜನಪದರು ಅದರಲ್ಲೂ ಮಹಿಳೆಯರು ಹೆಚ್ಚಾಗಿ ತಾವು ಮಾತನಾಡುವ ಮಾತುಗಳಲ್ಲಿ ಗಾದೆಗಳನ್ನು ಬಳಸುತ್ತಾರೆ. ಅದರಲ್ಲಿ ಹೆಣ್ಣುಮಕ್ಕಳಿಗೆ ಸಂಬಂಧಿಸಿದ ಗಾದೆಗಳೇ ಹೆಚ್ಚು ಈ ಗಾದೆಗಳಲ್ಲಿ ಸಮಾಜದಲ್ಲಿ ಹೆಣ್ಣಿನ ಸ್ಥಾನ ಏನು, ಹೇಗಿರಬೇಕು ಎಂಬುದರ ಕುರಿತಾಗಿ ಗಾದೆಗಳಿವೆ.

ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ, ತಾಯಿಯಂತೆ ಮಗಳು ನೂಲಿನಂತೆ ಸೀರೆ, ಎಂಬ ಗಾದೆಗಳಲ್ಲಿ ಮನೆಯ ಹೆಣ್ಣಮಗಳು ಅಥವಾ ತಾಯಿ ಯಾವ ತರಹದ ಸ್ವಭಾವದವಳಾಗಿರುತ್ತಾಳೋ ಅವಳಂತೆ ಉಳಿದವರೂ ಕಲಿಯುತ್ತಾರೆ ಎಂಬುದು ಈ ಗಾದೆಯ ಅರ್ಥ.

ಮಾತ್ಗಿತ್ತಿ ಮಗಳಲ್ಲ ತಾಟಗಿತ್ತಿ ಸೊಸೆಯಲ್ಲ, ಹೆಣ್ಣು ಹೆಚ್ಚಿದ ಮನೆಹಾಳು ಏಡಿ ಹೆಚ್ಚಿದ ಕೆರೆಹಾಳು, ಹೆಣ್ಣಿಗೆ ಹಿಡಿತ ಹಿಟ್ಟಿಗೆ ಜಡಿತ, ಹಗಲೆಲ್ಲಾ ಹಾರಾಟ ಗಂಡ ಬಂದಾಗ ಗೂರಾಟ. ಗರತಿ ಅಡುಗೆ ಚಂದ ಹಾದರಗಿತ್ತಿ ಮಾತು ಚಂದ, ಪೋಲಿದನಕ್ಕೆ ಹಾಲು ಹೆಚ್ಚು ಕೂಲಿ ಮುಂಡೆಗೆ ಮಾತು ಹೆಚ್ಚು, ಮಲಗಿ ಮಗ ಕೆಟ್ಟ ತಿರುಗಿ ಸೊಸೆ ಕೆಟ್ಳು, ಸೊಸೆ ಸತ್ರೆ ಸೋಬಾನ ಮಗ ಸತ್ರೆ ಮನೆಹಾಳು, ಇನ್ನು ಮುಂತಾದ ಗಾದೆಗಳು ಹೆಣ್ಣಿಗೆ ಸಂಬಂಧಿಸಿದಂತೆ ಹಟ್ಟಿಯ ಜನಪದರಲ್ಲಿ ರೂಢಿಯಲ್ಲಿವೆ.

ಹುಟ್ಟುಗುಣ ಸುಟ್ಟರೂ ಹೋಗದು, ನಾಯಿ ಬಾಲ ಡೊಂಕು, ಹುಚ್ಚು ಮುಂಡೆ ಮದುವೆಯಲ್ಲಿ ಉಂಡೋನೇ ಜಾಣ, ಗಟ ಇದ್ದರೆ ಮಠ ಕಟ್ಟಬಹುದು, ಗಾಳಿಬಂದಾಗ ತೂರಿಕೊ, ಬೆಳ್ಳಗಿರೋದೆಲ್ಲಾ ಹಾಲಲ್ಲ, ಹೊತ್ತುಬಂದಾಗ ಕೊಡೆ ಹಿಡಿ, ಎದ್ದೋಗೊ ಮಾತು ಬಿದ್ದೋಗ್ಲಿ, ಬಿಸೋ ದೊಣ್ಣೆ ತಪ್ಪಸ್ಕೊಂಡ್ರೆ ಸಾವಿರ ವರ್ಷ ಆಯಸ್ಸು, ಇದ್ದದ್ದು ಇದ್ದಂಗೆ ಹೇಳಿದರೆ ಎದ್ದು ಬಂದು ಎದೆಗೊದ್ದಂಗಾತು, ಮೂರುವರ್ಷದ ಬುದ್ಧಿ ನೂರು ವರ್ಷದವರೆಗೆ, ಬಾಳೆ ಬಗೆದು ಹಾಕು ತೆಂಗು ತೇಲಿಸಿ ಹಾಕು, ಕೆಸರಾಗೆ ಕಲ್ಲು ಹಾಕಿ ಮುಖಕ್ಕೆ ಸಿಡಿಸಿಕೊಂಡಹಾಗೆ, ಅರಮನೆ ಇದ್ದರೂ ನೆರೆಮನೆ ಇರಬೇಕು, ಪೂಜೆಗೆ ತಕ್ಕ ಗಂಡ ಪುಣ್ಯಕ್ಕೆ ತಕ್ಕ ಮಕ್ಕಳು, ಮೂರೂ ಬಿಟ್ಟೋನು ಊರಿಗೆ ದೊಡ್ಡೋನು, ಕುಂಬಳಕಾಯಿ ಕಳ್ಳ ಎಂದರೆ ಹೆಗಲ ಮುಟ್ಟಿ ನೋಡ್ಕೊಂಡ, ಮಂಗನ ಕೈಲಿ ಮಾಣಿಕ್ಯ ಕೊಟ್ಟಂಗೆ, ವರ ಕೊಟ್ಟ ದೇವರಿಗೆ ಶಿರಕೊಡೋದು ದೊಡ್ಡದೇ, ಮುಂತಾದ ಗಾದೆಗಳು ಸಾರ್ವಜನಿಕ ನೀತಿ

ನಿಯಮ ಧರ್ಮ, ಅಧರ್ಮ, ಸತ್ಯ ಅಸತ್ಯ ಮುಂತಾದ ಮಹತ್ವವನ್ನು ತಿಳಿಸುವಂತಹ ಗಾದೆಗಳಾಗಿವೆ. ಇವುಗಳು ಅಲ್ಲದೆ ಸಮಾಜದಲ್ಲಿನ ಸೋಮಾರಿಗಳನ್ನು ಟೀಕಿಸುವ ಗಾದೆಗಳೂ ಸಹ ಇವೆ ಅವುಗಳೆಂದರೆ, ಕೆಲಸಕ್ಕೆ ಕರಿಬ್ಯಾಡ ಊಟಕ್ಕೆ ಮರೀಬ್ಯಾಡ, ಕೂತು ಉಂಡ್ರೆ ಕುಡಿಕೆ ಹೊನ್ನು ಸಾಲ್ದು, ಹಚ್ಚಗಿದ್ದಕಡೆ ಉಂಡ ಬೆಚ್ಚಗಿದ್ದಕಡೆ ಮಲಗಿದೆ, ಏಳಲಾರದವನಿಗೆ ಏಳು ಜನ ಹೆಂಡ್ತೀರು, ಮುಂತಾದ ಗಾದೆಗಳು ಆಲಸ್ಯದಿಂದ ಮನುಷ್ಯ ಹಾಳಾಗುತ್ತಾನೆ, ಸೋಮಾರಿಯಾಗಿ ಬಾಳಿದರೆ ಜೀವನಸಾಗುವುದಿಲ್ಲ ಎಂಬ ನೀತಿಯನ್ನು ಈ ಗಾದೆಗಳು ತಿಳಿಸುತ್ತವೆ.

**ಒಗಟುಗಳು**

ಜನಪದ ಸಾಹಿತ್ಯದ ಒಂದು ಪ್ರಕಾರವಾದ ಒಗಟು ಮಾನವನ ಅನುಭವದ ಮೂಲಕ ಹುಟ್ಟಿಕೊಂಡುದುದಾಗಿದೆ. ಒಗಟುಗಳು ಒಂದೇ ಸಾಲಿನಲ್ಲಿರಬಹುದು ಅಥವಾ ಹತ್ತಾರು ಸಾಲುಗಳಲ್ಲಿರಬಹುದು, ಆದರೆ ಅವುಗಳ ಗೂಢಾರ್ಥ ತುಂಬಾ ಅನುಭವದ ಸಾರವಾಗಿರುತ್ತದೆ. "ಸಾಮಾನ್ಯವಾಗಿ ಒಗಟುಗಳು ಬುದ್ಧಿ ಪ್ರಧಾನವಾಗಿರುತ್ತವೆ, ಅನುಭವಗಳ ಆಧಾರದ ಮೇಲಿಂದ ಹಿರಿ–ಕಿರಿಯರು ಒಗಟುಗಳನ್ನು ರೂಪಿಸಿಕೊಳ್ಳುತ್ತಾರೆ ವಿಶಿಷ್ಟ ವಸ್ತುಗಳ ಗೌಪ್ಯವನ್ನು ಬಳಸಿಕೊಂಡು ಒಗಟು ರಚಿಸಿಕೊಳ್ಳುತ್ತಾರೆ. ಒಗಟುಗಳು ಕೇಳಿದ ತಕ್ಷಣವೇ ದಿಗ್ಭ್ರಮೆಯನ್ನುಂಟು ಮಾಡುತ್ತವೆ, ಸಮಸ್ಯೆಗಳನ್ನು ಸುಲಭವಾದ ರೀತಿಯಲ್ಲಿ ಬಿಡಿಸಲು ಬರದಂತೆ ಹೆಣೆಯಲ್ಪಟ್ಟಿರುತ್ತವೆ"[3]. ಒಗಟುಗಳನ್ನು ಕೇಳಿದ ತಕ್ಷಣವೇ ಬಿಡಿಸಲಾರದ ಕಗ್ಗಂಟುಗಳಾಗಿರುತ್ತವೆ. ಆದರೆ ನಿಧಾನವಾಗಿ ಯೋಚಿಸಿದಾಗ ಸಮಸ್ಯೆಗಳಿಗೆ ಉತ್ತರ ಸಿಗುತ್ತದೆ. ಇಂಥ ಅನೇಕ ಒಗಟುಗಳು ಕಂಪಳದೇವರ ಹಟ್ಟಿಯ ಮ್ಯಾಸಬೇಡರಲ್ಲಿ ಬಳಕೆಯಲ್ಲಿವೆ. ಒಗಟುಗಳನ್ನು ನಮ್ಮ ಜನಪದರು ಹೊಲಗದ್ದೆಗಳಲ್ಲಿ, ಕಣಗಳಲ್ಲಿ ಕೆಲಸಮಾಡುವಾಗ ಬೇಸರ ಕಳೆಯಲು ಮತ್ತು ಪರಸ್ಪರ ಬುದ್ಧಿವಂತಿಕೆ ತಿಳಿಯಲು ಒಗಟು ಹಾಕುವುದನ್ನು ಮಾಡುತ್ತಾರೆ. ಇವು ತುಂಬಾ ಸೂಕ್ಷ್ಮವಾಗಿರುವ ಮತ್ತು ಆ ಪ್ರಶ್ನೆಯಲ್ಲೇ ಉತ್ತರವಿರುವ ಪ್ರಶ್ನೆಗಳಾಗಿರುತ್ತವೆ. ಹುಡುಗರು, ವಯಸ್ಕರು, ಹೆಂಗಸರು, ಗಂಡಸರೂ ಎಲ್ಲರೂ ಬಳಸುವಂಥಹವು ಈ ಒಗಟುಗಳು. ಬೇಸಿಗೆಯ ಕಾಲದಲ್ಲಿ ಸಂಜೆಯ ವೇಳೆ ಊಟವಾದ ಬಳಿಕ ಅಂಗಳದಲ್ಲಿ ಹಾಗೇ ಮಲಗಿಕೊಂಡು ಅಥವಾ ಕುಳಿತುಕೊಂಡು ಪರಸ್ಪರ ಒಗಟುಗಳನ್ನು ಕೇಳುವುದು ಅವಕ್ಕೆ ಉತ್ತರಿಸುವುದನ್ನು ಮಾಡುತ್ತಾರೆ. ಹಟ್ಟಿಯ ಜನಪದರಲ್ಲಿ ಬಳಕೆಯಲ್ಲಿರುವ ಒಗಟುಗಳೆಂದರೆ,

ಜಡೆಯುಂಟು ಜಂಗಮನಲ್ಲ
ಹೆಡೆಯುಂಟು ಹಾವಲ್ಲ
ಮೂರು ಕಣ್ಣುಂಟು ಮುಕ್ಕಣ್ಣನಲ್ಲ.. (ಉತ್ತರ: ತೆಂಗಿನಕಾಯಿ)
ಅಕ್ಕನ ಮನೆಗೆ ತಂಗಿ ಹೋಗಬಹುದು
ತಂಗಿ ಮನೆಗೆ ಅಕ್ಕ ಹೋಗೋಕಾಗಲ್ಲ .. (ಉತ್ತರ: ಸೇರು, ಪಾವು)

ಸಂತೆಯಿಂದ ತರೋದು
ಮುಂದೆ ಕುತ್ಕೊಂಡು ಅಳೋದು.. (ಉತ್ತರ: ಈರುಳ್ಳಿ)

ತಳ ತಾಮ್ರ ನಡು ಪಚ್ಚೆ
ಕೊನೆ ಮುತ್ತು.. (ಉತ್ತರ: ತೊಗರಿ)

ಕೃಷಿಕ ಜನಪದರು ತಾವು ಬೆಳೆವ ಬೆಳೆಗಳನ್ನು ಅವುಗಳ ಸ್ವರೂಪದ ಆಧಾರದ ಮೇಲೆ ಒಗಟು ಕಟ್ಟಿ ಹೇಳುತ್ತಾರೆ ತಳ ತಾಮ್ರ ಅಂದರೆ ತೊಗರಿಗಿಡದ ಬುಡದ ಬಣ್ಣ ತಾಮ್ರದ ಬಣ್ಣದಲ್ಲಿರುತ್ತದೆ, ನಡು ಪಚ್ಚೆ ಅಂದರೆ ಮಧ್ಯದ ಭಾಗ ಹಸಿರಾಗಿರುತ್ತದೆ ಮತ್ತು ಕೊನೆಯಲ್ಲಿ ತೊಗರಿಯ ಕಾಯಿ ಅದರಲ್ಲಿನ ಬೀಜ ದುಂಡಾಗಿ ಮುತ್ತಿನಂತೆ ಇರುವುದರಿಂದ ಕೊನೆ ಮುತ್ತು ಎಂದು ಹೇಳಿದ್ದಾರೆ.

ಅಕ್ಕನ ಕೈಗೆ ಪಚ್ಚೆಯ ಕಡಗ
ಹಾಕುವರುಂಟು ತೆಗೆವವರಿಲ್ಲ.. (ಉತ್ತರ: ಹಚ್ಚೆ)

ಹಸಿರು ಗಿಡದಾಗೆ
ಮೊಸರು ಚಲ್ಲೈತಿ.. (ಉತ್ತರ: ಮಲ್ಲಿಗೆ, ಹತ್ತಿ)

ಅಜ್ಜನ ದುಡ್ಡು ಎಣಿಸೋಕೆ ಆಗಲ್ಲ
ಅಜ್ಜಿ ಸೀರೆ ಮಡಿಸೋಕೆ ಆಗಲ್ಲ.. (ಉತ್ತರ: ಆಕಾಶ, ನಕ್ಷತ್ರ)

ಎದೆಮ್ಯಾಗೆ ಹಿಡ್ತ
ಹೊಕ್ಕಳ ಕೆಳಗೆ ಹೊಡ್ತ.. (ಉತ್ತರ: ತಪ್ಪಡಿ)

ಬಗ್ಗಿದರೆ ಬಾಯಿಗೆ ಬರತ್ತೈತೆ
ಎದ್ದರೆ ಎದಿಗೆ ಬಡೀತ್ತೈತೆ.. (ಉತ್ತರ: ತಾಳಿ)

ಮೋಟು ಮರಕ್ಕೆ
ಗುದ್ದಲಿ ಸಿಕ್ಕಿಸಾರೆ.. (ಉತ್ತರ: ಮೂಗುತಿ)

ಇಟೇ ಹುಡುಗ
ಚೂಟಿಗಾರ.. (ಉತ್ತರ: ಸೂಜಿ)
ಗಿಡ್ಡ ಹುಡುಗನ್ನ
ಅಡ್ಡ ಹಾಕ್ಕೊಂಡು ಬಡೀತಾರೆ.. (ಉತ್ತರ: ಉರುಮೆ)

ನಮ್ಮ ಮನೇಲಿ ಒಬ್ಬ ಅಜ್ಜಿ ಇದ್ದಾಳೆ
ದಿನಾ ಮುಂಜಾನೆ ಸಿಂಗಾರ ಆಗ್ತಾಳೆ.. (ಉತ್ತರ: ಹೊಸ್ತಿಲು)

ಅಂಗಣ್ಣ ಮಂಗಣ್ಣ
ಅಂಗಿ ಬಿಚ್ಕೊಂಡು ನುಂಗಣ್ಣ.. (ಉತ್ತರ: ಬಾಳೇಹಣ್ಣು)

ದಪ್ಪಂತ ಬಿದ್ಯಲ್ಲೊ ಬೆಪ್ ಮುಂಡೆಮಗನೆ

ಬಟ್ಟೆಲ್ಲಾ ಅರ್ಕೊಂಡ್ಯಲ್ಲೋ ಮಂಗ್ ಮುಂಡೆಮಗನೆ. (ಉತ್ತರ: ಹುಣುಸೆ ಹಣ್ಣು)

ತಾಯಿ ತರಕಿ

ಮಗಳು ಬೋಡಿ

ಮೊಮ್ಮಗಳು ಅಚ್ಚ ಕಡ್ಲೆ.. (ಉತ್ತರ: ತೆಂಗಿನ ಕಾಯಿ)

ತೆಂಗಿನಕಾಯಿ ಸುಲಿದಾಗ ತೊರಗು ಇರುತ್ತದೆ ಅದನ್ನು ಪೂರ್ಣ ಸುಲಿದಾಗ ಬೋಡಾಗುತ್ತದೆ ನಂತರ ಅದರ ಕೊಬ್ಬರಿ ನುಣುಪಾಗಿರುತ್ತದೆ ಆದ್ದರಿಂದ ತಾಯಿ ತರಕಿ, ಮಗಳು ಬೋಡಿ, ಮೊಮ್ಮಗಳು ಅಚ್ಚಕಡ್ಲೆ ಎಂದು ಜನಪದರು ಮಾರ್ಮಿಕವಾಗಿ ಹೇಳುತ್ತಾರೆ.

ಅಕ್ಕ ಅಕ್ಕ ಬಾವಿ ನೋಡು

ಬಾವಿ ಒಳಗೆ ನೀರು ನೋಡು

ನೀರಿನೊಳಗೆ ಬಳ್ಳಿ ನೋಡು

ಬಳ್ಳಿಮ್ಯಾಲೆ ಜ್ಯೋತಿ ನೋಡು... (ಉತ್ತರ:ದೀಪ/ಚಿಮಣಿ ದೀಪ/ಬತ್ತಿ ದೀಪ)

ರಾಜಗಿರಿ ಮೇಲೊಂದು ಬೀಜವಿಲ್ಲದ ಮರ

ರಾಜ ರಾಜರಿಗೆಲ್ಲ ಬೇಕು ಇದರ ಫಲ. (ಉತ್ತರ: ಬಾಳೇಹಣ್ಣು)

ಹಿಡಿದರೆ ಹಿಡಿತುಂಬ

ಬಿಟ್ಟರೆ ಮನೆ ತುಂಬ.. (ಉತ್ತರ: ಮನಸ್ಸು)

**ಒಡಪುಗಳು**

ಜನಪದರ ಮೌಖಿಕ ಸಾಹಿತ್ಯ ಮತ್ತು ಭಾಷೆಯ ದೃಷ್ಟಿಯಿಂದ ಗಮನಾರ್ಹವೆನಿಸಿಕೊಂಡ ಗಾದೆ, ಒಗಟುಗಳಂತೆ ಒಡಪು ಸಹ ಒಂದು ಪ್ರಮುಖ ಜನಪದ ಸಾಹಿತ್ಯ ಪ್ರಕಾರವಾಗಿದೆ. ಒಡಪುಗಳು ಭಾರತದಾದ್ಯಂತ ಎಲ್ಲಾ ಕಡೆ ಪ್ರಚಲಿತದಲ್ಲಿರುವುವು. 'ಮದುವೆಗಳಲ್ಲಿ ಅಥವಾ ಇತರ ಶುಭಕಾರ್ಯಗಳಲ್ಲಿ ಗಂಡ ಅಥವಾ ಹೆಂಡತಿ ತಮ್ಮ ತಮ್ಮ ಸಂಗಾತಿಗಳ ಹೆಸರು ಹೇಳಬೇಕಾದಾಗ ತನ್ನ ಪರಿಸರ ಇತ್ಯಾದಿಗಳೊಡನೆ ಸಂಬಂಧಿಸಿದ ವ್ಯಕ್ತಿಯ ಬಗ್ಗೆ ವಿಶೇಷಣಗಳನ್ನು ಸೇರಿಸಿ ವರ್ಣನಾತ್ಮಕವಾಗಿ ತಮ್ಮ ಅನುಭವ ಅನಿಸಿಕೆಗಳನ್ನು ಸೇರಿಸಿ ಕೊನೆಯಲ್ಲಿ ಸಂಗಾತಿಯ ಹೆಸರು ಹೇಳುವ ವಿಧಾನವೇ ಒಡಪು'. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ಹೆಂಗಸರಾಗಲಿ ಗಂಡಸರಾಗಲಿ, ಮಕ್ಕಳಾಗಲಿ, ಕಿರಿಯರು ಹಿರಿಯರ ಹೆಸರಿಡಿದು ಕರೆಯುವುದಿಲ್ಲ. ಹಾಗೆ ಕರೆದರೆ ಅವರಿಗೆ ಅಗೌರವ ಸೂಚಿಸಿದಂತೆ ಎಂದು ಭಾವಿಸುತ್ತಾರೆ. ಹೆಂಗಸರು ತಮ್ಮ ಗಂಡನ ಹೆಸರನ್ನು ನೇರವಾಗಿ ಹೇಳಬಾರದೆಂಬ ಸಂಪ್ರದಾಯವೂ ಇರುವುದರಿಂದ ಹಾಗೆ ಹೇಳುವುದಿಲ್ಲ. ಬಹುಶಃ ಇದೇ ಕಾರಣದಿಂದ ಒಡಪುಗಳು ಹುಟ್ಟಿಕೊಂಡಿರಬಹುದು.

ಹಳ್ಳಿಗಳಲ್ಲಿ ಇಂದಿಗೂ ಸಹ ಗಂಡ ಹೆಂಡತಿಯರು ಪರಸ್ಪರ ನೇರವಾಗಿ ಮಾತನಾಡುವುದು ಕಡಿಮೆ. ದಂಪತಿಗಳು ತಮ್ಮ ಮಕ್ಕಳ ಮೂಲಕ ಮಾತನಾಡುತ್ತಾರೆ. ಹಟ್ಟಿಯಲ್ಲಿ ಮಹಿಳೆಯರು ತಮ್ಮ ಗಂಡಂದಿರನ್ನು ಮಾತನಾಡಿಸುವಾಗ ಅಥವಾ ಹುಡುಕುವಾಗ ಅಲ್ಲಿರುವ ವ್ಯಕ್ತಿಗಳನ್ನು ಹೀಗೆ ಕೇಳುವಳು 'ನಿಮ್ಮಣ್ಣನ್ನ ನೋಡಿದ್ರ', ತಮ್ಮಾ ನಿಮ್ ಮಾವನ್ನ ನೋಡಿದ್ಯ', ನಿಮ್ ಚಿಕ್ಕಪ್ಪ್ ಈ ಕಡೆ ಏನಾದ್ರು ಬಂದ್ರ ಇನ್ನೂ ಮುಂತಾಗಿ ಕೇಳುತ್ತಾರೆ. ಅಂದರೆ ನೇರವಾಗಿ ನನ್ನ ಗಂಡನನ್ನು ನೋಡಿದ್ರ ಎನ್ನುವುದಿಲ್ಲ ಅಲ್ಲದೆ ತಮ್ಮ ಮಕ್ಕಳ ಹೆಸರು ಹೇಳಿ ಅವರಪ್ಪ ಈ ಕಡೆ ಬಂದ್ರ ಎಂದು ಕೇಳುತ್ತಾಳೆ. ಗಂಡಸಾದರೆ ನಿಮ್ಮ ಅಕ್ಕನನ್ನು ನೋಡಿದ್ರಾ, ನಮ್ಮ ಮನೇಳು ಇತ್ಲಾಗ್ ಬಂದ್ಲಾ ಎಂದು ಕೇಳುತ್ತಾರೆ. ಅದು ಅಲ್ಲದೆ ಮಾತನಾಡಿಸುವಾಗ ಎಲ್ಲರೂ ಅಣ್ಣ, ತಮ್ಮ, ಅಕ್ಕ, ಅತ್ತಿಗೆ, ಚಿಕ್ಕಪ್ಪ, ದೊಡ್ಡಪ್ಪ ಎಂದು ಸಂಬೋಧಿಸುತ್ತಾರೆ.

ಗಂಡ ಹೆಂಡಿರು ಪರಸ್ಪರ ಹೆಸರು ಹೇಳುವುದು, ಕೇಳುವುದು ಎಲ್ಲಕಡೆ ಇರುವಂತೆ ಕಂಪಳದೇವರ ಹಟ್ಟಿಯಲ್ಲೂ ಇದೆ. ಹಟ್ಟಿಯ ಜನಪದರಲ್ಲಿ ಮದುವೆ, ಒಸಗೆ, ಸೀಮಂತ, ಮಗುವನ್ನು ತೊಟ್ಟಿಲಿಗೆ ಹಾಕುವಾಗ ಹೆಸರೇಳಿಸುವ ಸಂಪ್ರದಾಯವಿದೆ. ವಿಧವೆಯರು ಮದುವೆ ಮುಂತಾದ ಕಾರ್ಯಗಳಲ್ಲಿ ಭಾಗವಹಿಸುವುದಿಲ್ಲ ಆದ್ದರಿಂದ ಅವರು ಗಂಡಂದಿರ ಹೆಸರು ಹೇಳುವ ಸಂದರ್ಭಗಳೇ ಬರುವುದಿಲ್ಲ. ಹಟ್ಟಿಯ ಬೇಡರ ಮದುವೆ ಸಂದರ್ಭದಲ್ಲಿ ನವ ದಂಪತಿಗಳನ್ನು ಕುಳ್ಳರಿಸಿ ಸಾಸಿವೆ/ಅಕ್ಕಿ ಇಡುವ ಶಾಸ್ತ್ರವನ್ನು ಮುತ್ತೈದೆಯರು, ಮತ್ತು ಗಂಡಸರು ಮಾಡುತ್ತಾರೆ. ಮದುಮಕ್ಕಳ ಎದುರಿಗೆ, ದೀವಟಿಗೆ ಮಣೆ ಮೇಲೆ ಇರಿಸಿದ ಕಳಸ ಕನ್ನಡಿಗಳಿಗೆ ಅವನ್ನು ಇರಿಸಿದ ತಟ್ಟೆಯಲ್ಲೇ ಇರುವ ಅರಿಶಿಣ, ಕುಂಕುಮ, ವಿಭೂತಿ ಹಚ್ಚಿ ಅಕ್ಕಿ ಇಟ್ಟು ಅದೇ ರೀತಿ ಮದುಮಕ್ಕಳಿಗೂ ಮಾಡುತ್ತಾರೆ. ಕುಳಿತಿರುವ ಗಂಡು ಹೆಣ್ಣುಗಳಿಗೆ ಮುತ್ತೈದೆಯರು ಎರಡೂ ಕೈಲಿ ಅಕ್ಕಿ ಹಿಡಿದು ಗಂಡಿನ ಮಂಡಿ, ಭುಜಗಳನ್ನು ಬಲವಾಗಿ ಅದುಮಿ ಗಂಡಿನ ಸಾಮರ್ಥ್ಯ ಪರೀಕ್ಷಿಸುವ ಕೆಲಸವು ಈ ಸಂದರ್ಭದಲ್ಲಿ ನಡೆಯುತ್ತದೆ. ಮುತ್ತೈದೆಯರು ಅಕ್ಕಿ ಇಡುವಾಗ ಎಷ್ಟೇ ಜೋರಾಗಿ ಅದುಮಿದರೂ ಅಲುಗಾಡದಂತೆ ಕೂರುವ ಗಂಡುಗಳಿರುವಂತೆ ವಾಲಾಡುವ ಗಂಡುಗಳೂ ಇರುತ್ತಾರೆ. ಇದರಿಂದ ಅವರ ಸಾಮರ್ಥ್ಯ ತಿಳಿಯಲಾಗುತ್ತದೆ. ಹೀಗೆ ಅಕ್ಕಿ ಇಟ್ಟ ಮುತ್ತೈದೆಯರು ತನ್ನ ಎಡಗೈಲಿದ್ದ ಅಕ್ಕಿಯನ್ನು ಬಲಗೈಗೆ ತೆಗೆದುಕೊಂಡು ಎಡಗೈಯನ್ನು ಗಂಡಿನ ತಲೆಯ ಮೇಲಿಟ್ಟು ಬಲಗೈಲಿರುವ ಅಕ್ಕಿಯನ್ನು ಮೂರು ಸಲ ಎಸೆಯುತ್ತಾಳೆ.

ಮುತ್ತೈದೆ ಶಾಸ್ತ್ರ ಮಾಡುವಳು ಅಕ್ಕಿ ಇಟ್ಟಮೇಲೆ ಒಂದು ವೀಳೆದೆಲೆಯಲ್ಲಿ ಅಡಿಕೆ ಇಟ್ಟು ದುಂಡಗೆ ಸುತ್ತಿ ತನ್ನ ಎರಡು ಬೆರಳುಗಳಲ್ಲಿ ಹಿಡಿದು ಕಣ್ಣು ಮುಚ್ಚಿ ಮುಗಿದು ಬಲಮುಂದಾಗಿ ಒಂದು ಸುತ್ತು ತಿರುಗುತ್ತಾ ದೇವರಿಗೆಲ್ಲಾ ಕೈಮುಗಿದು ಅದನ್ನು ತುದಿಮುಂದಾಗಿ ಗಂಡಿಗೆ ಕೊಡುತ್ತಾಳೆ. ಅದನ್ನು ತೆಗೆದುಕೊಂಡ ಗಂಡು ಮತ್ತೆ ಅವಳಿಗೆ ತಿರುಗಿಸಿ ಕೊಡಬೇಕು ಆಗ ಅವಳು ತೆಗೆದುಕೊಳ್ಳದೆ ನಿನ್ನ ಹೆಂಡತಿಯ ಹೆಸರನ್ನು ಹೇಳಿದರೆ ತೆಗೆದುಕೊಳ್ಳುತ್ತೇನೆ ಎನ್ನುತ್ತಾಳೆ ನಂತರ ಅವನು ಹೆಂಡತಿಯ ಹೆಸರನ್ನು ಒಡಪಿನಲ್ಲಿ ಹೇಳುತ್ತಾನೆ, ನಂತರ ಅದೇ ರೀತಿ ಅವನು ಹೆಂಡತಿಗೆ ಮಾಡುತ್ತಾನೆ ಅವಳೂ ಸಹ ಒಡಪಿನಲ್ಲಿ ಗಂಡನ ಹೆಸರೇಳಿ ಎಲೆಯನ್ನು ಹಿಂದಿರುಗಿಸುತ್ತಾಳೆ. "ಕೆಲವರು ನೇರವಾಗಿ ಗಂಡನ

ಹೆಸರು ಹೇಳುವ ಬದಲು ತಮ್ಮ ಸುತ್ತಮುತ್ತಲಿನ ಪರಿಸರ, ಗಂಡ, ಅತ್ತೆ, ಮಾವ, ಮೈದುನ, ನಾದಿನಿಯರ ಗುಣದೋಷಗಳನ್ನೊಳಗೊಂಡ ಸಾಂಸಾರಿಕ ವಿಷಯ ಇತ್ಯಾದಿಗಳನ್ನು ಪ್ರಾಸಕೂಡಿದ ಸಾಲುಗಳಿಂದ ಆಕರ್ಷಕವಾಗಿ ವರ್ಣಿಸಿ ಗಂಡನನ್ನು ಹೊಗಳಿ ಅಥವಾ ತೆಗಳಿ ನೆರೆದ ಜನರ ಗಮನವನ್ನು ಅತ್ತ ಸೆಳೆದು ಕೊನೆಯಲ್ಲಿ ಹೆಸರು ಸೇರಿಸಿ ಹೇಳುತ್ತಾರೆ”[೪]. ಇದೇ ರೀತಿಯಾಗಿ ಗಂಡು ಹೆಣ್ಣುಗಳಿಬ್ಬರಿಂದಲೂ ಸಹ ಮಾಡಿಸುತ್ತಾರೆ. ಮುತ್ತೈದೆಯರು ಅಕ್ಕಿ ಇಡುವ ಶಾಸ್ತ್ರ ಮುಗಿದ ಮೇಲೆ ಗಂಡು ಹೆಣ್ಣುಗಳು ಪರಸ್ಪರ ಒಬ್ಬರಿಗೊಬ್ಬರು ಅಕ್ಕಿ ಇಡಬೇಕು, ಮೊದಲಿಗೆ ಹೆಣ್ಣು ಗಂಡಿಗೆ ಅಕ್ಕಿ ಇಡುತ್ತಾಳೆ ಇದಕ್ಕಾಗಿ ಅವಳು ಮೇಲೆ ಎದ್ದಾಗ ಗಂಡು ಅವಳ ಜಾಗದಲ್ಲಿ ಕೂರುತ್ತಾನೆ. ಅಕ್ಕಿ ಇಟ್ಟ ಮೇಲೆ ವಧು ತನ್ನ ಜಾಗವನ್ನು ಬಿಟ್ಟುಕೊಡು ಎಂದು ಕೇಳುತ್ತಾಳೆ ಆಗ ಗಂಡು ನಿನ್ನ ಗಂಡನ ಹೆಸರೇಳು ಆಮೇಲೆ ಬಿಡುತ್ತೇನೆ ಎನ್ನುತ್ತಾನೆ ಆಗ ಅವಳು ಒಡಪಿನ ಮೂಲಕ ಗಂಡನ ಹೆಸರೇಳುತ್ತಾಳೆ.

**ಉದಾಹರಣೆ**

ಮಾವನ ಮಗನೆ ಮಲ್ಲಿಗೆ ಹರಳೆ
ನನ್ನ ಬೆಳ್ಳಿ ಸದರ ಬಿಟ್ಟು
ನಿಮ್ಮ ಚಿನ್ನದ ಸದರಕ್ಕೆ ಹೋಗಿ......

ಅನ್ನುತ್ತಾಳೆ ಕೊನೆಯಲ್ಲಿ ತನ್ನ ಗಂಡನ ಹೆಸರನ್ನು ಸೇರಿಸಿ ಹೇಳುತ್ತಾಳೆ. ಗಂಡ ತನ್ನ ಜಾಗಕ್ಕೆ ಹೋಗಿ ಕುಳಿತುಕೊಂಡ ನಂತರ ಗಂಡು ಹೆಣ್ಣಿಗೆ ಅಕ್ಕಿ ಇಡಬೇಕು ಆಗ ಅವಳು ಅವನ ಜಾಗದಲ್ಲಿ ಕೂರುತ್ತಾಳೆ ತನ್ನ ಜಾಗ ಬಿಟ್ಟುಕೊಡು ಎಂದು ಗಂಡು ಕೇಳಿದಾಗ ನಿನ್ನ ಹೆಂಡತಿಯ ಹೆಸರೇಳು ಎನ್ನುತ್ತಾಳೆ ಆಗ ಅವನು,

ಅತ್ತೆಯ ಮಗಳೆ ಮುತ್ತಿನ ಚಂಡೆ
ಮಾವನ ಮಗಳೆ ಮಲ್ಲಿಗೆ ಹರಳೆ
ನನ್ನ ಚಿನ್ನದ ಸದರ ಬಿಟ್ಟು
ನಿನ್ನ ಬೆಳ್ಳಿ ಸದರಕ್ಕೆ ಹೋಗೆ.....
ಎಂದು ಕೊನೆಯಲ್ಲಿ ಹೆಂಡತಿಯ ಹೆಸರನ್ನು ಸೇರಿಸಿ ಹೇಳುತ್ತಾನೆ.

**ಹೆಂಗಸರು ಹೇಳುವ ಒಡಪುಗಳು**

ಹಳ್ಳಿಗಳಲ್ಲಿ ಒಡಪುಗಳನ್ನು ಹೆಚ್ಚಾಗಿ ಹೆಂಗಸರು ಹೇಳುತ್ತಾರೆ. ಸಾಮಾನ್ಯವಾಗಿ ಹೆಂಗಸರ ಒಡಪುಗಳಲ್ಲಿ ಹೆಚ್ಚಿನವು ಗಂಡನನ್ನು ಹೊಗಳುವ ಅಥವಾ ತೆಗಳುವ ನುಡಿಗಳಿಂದಲೇ ಕೊನೆಗೊಳ್ಳುತ್ತವೆ.

ಗುಣದಲ್ಲಿ ಹೇಳುವೆ ಗುರುವಿನ ಹೆಸರು
ಮನದಲ್ಲಿ ಹೇಳುವೆ ಮೈದುನನ ಹೆಸರು
ನಗುತಾ ಹೇಳುವೆ ನಾದಿನಿಯ ಹೆಸರು

ಹತ್ತು ಮಂದೀಲಿ ಹೇಳುವೆ ತಂದೆ ತಾಯಿಯರ ಹೆಸರು
ಸಾವಿರ ಮಂದೀಲಿ ಹೇಳುವೆ ನಮ್ಮವರು........ರ ಹೆಸರು

ಹೀಗೆ ಕೆಲವು ಮಹಿಳೆಯರು ತನ್ನ ಗಂಡ, ಅತ್ತೆ, ಮಾವ, ನಾದಿನಿ, ಮೈದುನ, ತಂದೆ, ಗುರು ಎಲ್ಲರನ್ನು ಹೊಗಳಿ ಗೌರವದಿಂದ ನೆನೆದು ನಂತರ ಗಂಡನ ಹೆಸರನ್ನು ಹೇಳುವ ಒಡಪು ಇದು.

ಅತ್ತೆ ಹೆಸರು ಅತ್ತಿ ಹೂವು
ಮಾವನ ಹೆಸರು ಮಲ್ಲಿಗೆ ಹೂವು
ನನ್ನೆಸ್ರು ಸುಗಂಧರಾಜ
ಸುಗಂಧರಾಜ ಹೂವಿನ ಸುತ್ತ ಸುಳಿದಾಡ್ತಾರೆ......

ಇಲ್ಲಿ ಹೆಣ್ಣು ತನ್ನ ಅತ್ತೆ ಮಾವ ತನ್ನನ್ನು ಹೂವುಗಳಿಗೆ ಹೋಲಿಸಿಕೊಂಡು ತನ್ನ ಗಂಡನನ್ನು ದುಂಬಿಗೆ ಹೋಲಿಸಿ ಕೊನೆಗೆ ಅವನ ಹೆಸರನ್ನು ಹೇಳುತ್ತಾಳೆ.

ಅರ್ಕ ಹಗ್ಗ ಮುರ್ಕ ನೊಗ
ಎತ್ತು ಎಳೆಯಲ್ಲ ಅಂತ
ಎದೆ ಎದೆ ಬಡ್ಕೋತಾರೆ......

ಕೃಷಿ ಪರಂಪರೆಯ ಹೆಣ್ಣು ತನ್ನ ಗಂಡನ ಕೃಷಿ ಬದುಕನ್ನು ತಮಾಷೆಯಾಗಿ ಲೇವಡಿ ಮಾಡಿ ಕೊನೆಗೆ ಅವನ ಹೆಸರನ್ನು ಹೇಳುತ್ತಾಳೆ. ಹರಿದೋದ ಹಗ್ಗಗಳು, ಬಡಕಲು ಎತ್ತುಗಳನ್ನು ಕಟ್ಟಿಕೊಂಡು ವ್ಯವಸಾಯ ಮಾಡುವ ತನ್ನ ಗಂಡನ ಹೆಸರನ್ನು ಹೇಳುವ ಜೊತೆಗೆ ಅವನ ಕೌಟುಂಬಿಕ ಸ್ಥಿತಿಯನ್ನೂ ತಮಾಷೆಯಾಗಿ ಜಾಣ್ಮೆಯಿಂದ ಹೇಳುತ್ತಾಳೆ.

ಅಳ್ಳಿ ಎಲೆ
ಒಳ್ಳೆ ಹೋರಣ
ಅಳ್ಳೆಬಿಗಿಯಂಗೆಉಂಡು
ಹಳ್ಳದ ಕಡೆ ಹೋಗ್ತಾರೆ.....

ಉದ್ರುದ್ರು ಅನ್ನ
ಗಮ್ಮನ್ನೋ ತುಪ್ಪ
ಒಬ್ಬಟ್ಟಿನೂಟ
ಸುಮ್ಕುಂಡು
ಸೂಳೆಮನೆಗೋದ್ರು
ನೆರ್‍ಮನೆ ಮಗ್ಳು ನಾನೇನು ಬಲ್ಲೆ.......

ಒಡಕ ತಂಬಿಗೆ
ಅರಕ ಚಪ್ಪಲಿ

ಮುರುಸೊತ್ತಿಲ್ಲದೆ
ಹೊರಗಡಿಕೆ ಹೋಗತಾರೆ......

ಗುಲಾಬಿ ಗುಂಪು
ಮಲ್ಲಿಗೆ ತಂಪು
ನಮ್ಮ ರಾಜ ನಮಗಿಂತ ಕಪ್ಪು......

ಬಳ್ಳಾರಿ ತನ್ನ ಬೆಳ್ಳಗಿರಬೇಕು
ಮೈಸೂರು ತನ್ನ ಮಾತಿರಬೇಕು
ಕುರ್ಚಿ ಮೇಲೆ ಕುಂತಿರಬೇಕು
ಸೂಳೇರ ಮೇಲೆ ಕಣ್ಣಿರಬೇಕು
ನಮ್ಮ ಮೇಲೆ ಪ್ರೀತಿ ಇರಬೇಕು......

ರಾಗಿ ಉಣವಲ್ಲ
ಗೋದಿ ತರವಲ್ಲ
ಮನಿಯಾಗೆ ಇರವಲ್ಲ
ಮಾತು ಕೇಳವಲ್ಲ.......

ಸಣ್ಣಕ್ಕಿ ಅನ್ನ
ಉದ್ದಿನ ಬ್ಯಾಳೆ ಸಾರು
ಗಮ್ಮನ್ನ ತುಪ್ಪ
ಸುಮ್ಮನೆ ಉಂಡೆದ್ರು ನಮ್ಮ.....

ಹತ್ತು ರೂಪಾಯಿ ಹಸಿರು ಅಂಗಿ
ಮೂವತ್ತು ರೂಪಾಯಿ ಮುತ್ತಿನಂಗಿ
ಉಟ್ಕಂಡು ಹೋಗಂದ್ರೆ ಸೆಟ್ಕಂಡು ಹೋಗ್ತಾರೆ...

ಸಾವಕ್ಕಿ ಸರಿ
ಈರುಳ್ಳಿ ಪೊರಿ
ಹೆಸರು ಕೇಳ್ದೋರ ಮುಕ್ಳಿಗೆ
ಮೂರು ಬರಿ.......
ಸಣ್ಣಕ್ಕಿ ತರವಲ್ಲ
ದಪ್ಪಕ್ಕಿ ಉಣವಲ್ಲ
ಇದ್ದುದ್ದು ನೀಡಿದ್ರೆ
ಎದ್ದೆದ್ದು ಹೋಗ್ತಾನೆ......

ಬೆಳ್ಳಿ ಹಗ್ಗ
ಬಂಗಾರ್ದ ತೊಟ್ಲು
ಕಂದನ್ ತೂಗಿ
ಮುಂದಕೆ ಬರ್ತಾರೆ......
ಬಾಗಿಲಲ್ಲಿ ನಿಂತಾರ
ಬಾಳಿಗೊನಿ ಹಿಡಿದಾರ
ಸರಿರಿ ಎಂದರೆ ಸೆರಗ ಹಿಡಿದಾರ........

ಕಡೂರಿನತ್ತಾಗೆ ನಾನು
ಕಡುವುನ ಸ್ವಾರೆನಾಗೆ ಅವ್ರು
ಕಡುಬಿಗೆ ಚಟ್ನಿ ಹಚ್ಚಿಲ್ಲ ಅಂತೇಳಿ
ಕೆಡಿಕೆಡಿಕೊಂಡು ಒದಿತಾರೆ......

ಎಡಕೆ ಎತ್ತಿಲ್ಲ
ಬಲಕೆ ಬಾರುಕೋಲಿಲ್ಲ
ಕೂರಿಗೆ ಹೊತ್ಕೊಂಡು ಕುಣಿದಾಡ್ತಾರೆ.......

ಆರುಸೇರು ಎಳ್ಳು
ಮೂರು ಸೇರು ಜಳ್ಳು
ನಮ್ಮ ರಾಯ್ರು ಹೇಳೋದೆಲ್ಲಾ ಸುಳ್ಳು......

ಗಂಡಸರು ಹೇಳುವ ಒಡಪುಗಳು
ಅಂಚಿನಾಗ್ಳ ರೊಟ್ಟಿ
ಅರರ್ಕಂಡು ತಿಂತಾಳೆ......

ಅಂಡೇವ್ ಮೆಣಸಿನಕಾಯಿ
ಕುಂಡೀಲರಿತಾಳೆ......

ಆರ್ಮರ ಎಳ್ಳು
ಮೂರ್ಮರ ಜೊಳ್ಳು
ಹದ ಮಾಡಂದ್ರೆ
ಕದ ಹಿಡ್ಕಂಡು ನಿಂತಗಂತಾಳೆ......

ತೂತು ಗಡಿಗೇಲಿ
ತೂಗುಡಿಸಿಕೊಂಡು
ನೀರು ತತ್ತಾಳೆ......

ಹಗ್ಗದ ಸೀರೆ
ಮೊಗ್ಗಿನ ರವಿಕೆ
ಹಗ್ಗದಲ್ಲಿ ಹೊಡೆದ್ರೆ
ಮಗ್ಗಲಿಗೆ ಬತ್ತಾಳೆ......

ತರಕು ತಲೆ ಬಿಟ್ಕೊಂಡು
ಹರಕು ಸ್ಯಾಲೆ ಉಟ್ಕಂಡು
ಇಣಕಿ ಇಣಕಿ ನೋಡ್ತಾಳೆ......

ಹಟ್ಯಾಳ ಸಗಣಿ
ಗ್ವಾಡೆ ಮ್ಯಾಗ್ಳ ತಗ್ಣಿ
ತಿಕ್ಕಿ ನೋಡಂದ್ರೆ
ನೆಕ್ಕಿ ನೋಡ್ತಾಳೆ.....

ಹಂಡೇ ಸಂದೀಲಿ
ಉಂಡೆ ತಿಂತಾಳೆ.....

### ೫.೨.೨ ಜನಪದ ಕಲೆಗಳು

ಹಟ್ಟಿಯ ಮ್ಯಾಸಬೇಡರಲ್ಲಿ ಜನಪದ ಕಲೆಗಳು ತುಂಬಾ ಶ್ರೀಮಂತವಾಗಿವೆ. ಯಾವುದೇ ಒಂದು ಸಮುದಾಯದ ಸಾಂಸ್ಕೃತಿಕ ಅಧ್ಯಯನಕ್ಕೆ ಆ ಸಮುದಾಯದಲ್ಲಿನ ಜನಪದ ಕಲೆಗಳು ತುಂಬಾ ಮಹತ್ವವುಳ್ಳವಾಗಿರುತ್ತವೆ. ಕಲೆ, ಸಾಹಿತ್ಯದ ಆಧಾರದ ಮೇಲೆ ಆ ಸಮುದಾಯದ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಗುರುತಿಸಬಹುದಾಗಿದೆ. ಪ್ರತಿಯೊಂದು ಬುಡಕಟ್ಟು ಸಮೂಹ ತನ್ನದೇ ಆದ ಜನಪದ ಕಲೆ, ಸಾಹಿತ್ಯವನ್ನು ಹೊಂದಿರುತ್ತದೆ. "ಒಂದು ಜನಾಂಗದ ಸಾಂಸ್ಕೃತಿಕ ಅಭೀಪ್ಸೆಯ ಒತ್ತಡದಿಂದಾಗಿ ಕಲೆಗಳು ಹುಟ್ಟಿ ಬೆಳೆಯುತ್ತವೆ. ದೇಶ, ಕಾಲ ಪರಿಸರಗಳಿಗೆ ತಕ್ಕಂತೆ ಅವು ಬೆಳೆಯುತ್ತಾ, ಬದಲಾಯಿಸುತ್ತಾ, ಕರಗುತ್ತಾ ಸಾಗುತ್ತವೆ. ಹೀಗೆ ಸಾಗುವುದೇ ಅವುಗಳ ಜೀವಂತಿಕೆಗೆ ಸಾಕ್ಷಿ"[೫]. ಒಂದೊಂದು ಸಮುದಾಯದಲ್ಲಿ ಅನೇಕ ಜನಪದ ಕಲಾವಿದರು ಇರುತ್ತಾರೆ. ಪ್ರಸ್ತುತ ಕಂಪಳದೇವರ ಹಟ್ಟಿಯಲ್ಲಿನ ಮ್ಯಾಸಬೇಡರಲ್ಲಿ ಕೋಲಾಟದ ಪದಗಳನ್ನು ಹಾಡುವವರು, ಗಣೆ ಊದುವವರು ಮತ್ತು ಗಣೆ ಪದಗಳನ್ನು ಹಾಡುವವರು, ಭಜನೆ, ನಾಟಕ ಮಾಡುವವರು ಸಾಕಷ್ಟು ಜನರಿದ್ದಾರೆ, ಅದರಂತೆಯೇ ಹಟ್ಟಿಯಲ್ಲಿ ರಂಗೋಲಿ, ಹಚ್ಚೆ, ಜನಪದ ಕ್ರೀಡೆಗಳು ಹೀಗೆ ಹತ್ತಾರು ಕಲೆಗಳು ಹಟ್ಟಿಯ ಜನರ ಜೀವನದ ಅಂಗವಾಗಿ, ಅವರ ಬದುಕಿನೊಂದಿಗೆ ನಿಕಟ ಸಂಬಂಧ ಹೊಂದಿಕೊಂಡು ಬಂದಿವೆ. ಕಂಪಳದೇವರ ಹಟ್ಟಿಯಲ್ಲಿನ ಜನಪದ ಕಲೆಗಳನ್ನು ಒಂದೊಂದಾಗಿ ಕೆಳಗಿನಂತೆ ನೋಡೋಣ.

### ೧ ಕೋಲಾಟ

ಕಂಪಳದೇವರ ಹಟ್ಟಿಯಲ್ಲಿ ಇಂದಿಗೂ ಪ್ರಚಲಿತವಿರುವ ಒಂದು ಪ್ರಮುಖ ಜನಪದ ಕಲೆ ಕೋಲಾಟ. ಹಬ್ಬ ಜಾತ್ರೆಗಳಲ್ಲಿ, ಬಿಡುವಿನ ವೇಳೆಯಲ್ಲಿ ದೇವರ ಗುಡಿಯ ಮುಂದೆ ಕೋಲಾಟದ ಪ್ರದರ್ಶನ

ಮಾಡುತ್ತಾರೆ. ಸಾಮಾನ್ಯವಾಗಿ ಚಿಕ್ಕ ಚಿಕ್ಕ ಹುಡುಗ, ಹುಡುಗಿಯರು ಕೋಲಾಟ ಆಡುತ್ತಾರೆ. ವಿಶೇಷವೆಂದರೆ ಈ ಹಟ್ಟಿಯಲ್ಲಿ ಹುಡುಗಿಯರೇ ಹೆಚ್ಚಾಗಿ ಕೋಲಾಟ ಆಡುತ್ತಾರೆ. ಅವರಿಗೆ ಪೂಜಾರಿ ಮಲ್ಲಯ್ಯ ಮತ್ತು ಗೋಲು ಪಾಪಯ್ಯ ಅವರು ತಮ್ಮ ಬಿಡುವಿನ ವೇಳೆಯಲ್ಲಿ ನಿರಂತರವಾಗಿ ಕೋಲಾಟ ಕಲಿಸುತ್ತಿರುತ್ತಾರೆ. ಹಟ್ಟಿಯ ಕಂಪಳರಂಗಸ್ವಾಮಿ ಜಾತ್ರೆಯಲ್ಲಿ ಸುತ್ತಮುತ್ತಲಿನ ಊರುಗಳಿಂದ ಬೇಡರು ಬಂದು ಕೋಲಾಟ ಪ್ರದರ್ಶನ ಮಾಡುತ್ತಾರೆ. ಕೋಲಾಟದಲ್ಲಿ ಕೋಲುಗಳೇ ಪ್ರಧಾನವಾಗಿದ್ದು ಹಾಡು ಮತ್ತು ಕುಣಿತವೂ ಇದರಲ್ಲಿ ಸೇರಿರುವುದರಿಂದ ಈ ಕಲೆಗೆ ಮತ್ತಷ್ಟು ಶೋಭೆ ಬರುತ್ತದೆ. ಕೋಲಾಟದ ಕಲಾವಿದರು ಪ್ರತಿಯೊಬ್ಬರು ಒಂದೊಂದು ಅಡಿ ಉದ್ದದ ಎರಡು ಕೋಲುಗಳನ್ನು ಹಿಡಿದು, ಕಾಲಿಗೆ ಗೆಜ್ಜೆಕಟ್ಟಿಕೊಂಡಿರುತ್ತಾರೆ. ಪ್ರಾರ್ಥನೆಯೊಂದಿಗೆ ಕೋಲಾಟ ಪ್ರಾರಂಭವಾಗಿ ಹಿಮ್ಮೇಳ ಮತ್ತು ಮುಮ್ಮೇಳದೊಂದಿಗೆ ಬರುವ ಕೋಲಾಟದ ಪದಗಳು ಪ್ರೇಮ, ಹಾಸ್ಯ, ಕರುಣ, ಭಕ್ತಿ ಮೊದಲಾದ ರಸ ಪ್ರಕಾರಗಳಿಂದ ಕೂಡಿರುತ್ತವೆ. ಎಲ್ಲಾ ಕೋಲಾಟದ ಕಲಾವಿದರು ವೃತ್ತಾಕಾರವಾಗಿ ನಿಂತು ಸುತ್ತುತ್ತಾ ಪ್ರತಿಯೊಬ್ಬರೂ ಒಬ್ಬರ ಕೋಲಿಗೆ ಮತ್ತೊಬ್ಬರು ಕೋಲನ್ನು ತಾಕಿಸುತ್ತಾ ಸುತ್ತುತ್ತಾ ಗೆಜ್ಜೆ ಕಾಲಿನ ಹೆಜ್ಜೆಗಳನ್ನು ಸದ್ದುಮಾಡುತ್ತಾ ಕುಣಿಯುತ್ತಾರೆ. ಕೋಲಾಟದ ಕುಣಿತ ಜನಪದ ಕಲೆಯಾದರೆ, ಕೋಲಾಟದ ಪದ ಜನಪದ ಸಾಹಿತ್ಯದಲ್ಲಿ ಬರುತ್ತದೆ.

ಹಟ್ಟಿಯ ಜನರು ತಾವು ಹಾಡುವ ಕೋಲಾಟದ ಪದಗಳಲ್ಲಿ ಜಗಳೂರು ಪಾಪನಾಯಕ ಮತ್ತು ಗಾದ್ರಿಪಾಲನಾಯಕ ದೇವರುಗಳ ಕಥೆಯನ್ನು ಹೆಚ್ಚಾಗಿ ಹಾಡುತ್ತಾರೆ. ಕೋಲಾಟ ಆಡುವಾಗ ಕಲಾವಿದರು ಉತ್ಸಾಹಭರಿತರಾಗಿ ಹಾಡಿನ ಮಧ್ಯೆ 'ಥೈಯ್ಯ ಉಡದೈಯ್ಯ' ಎಂಬೆರಡು ಶಬ್ದಗಳನ್ನು ಕಲಾವಿದರಲ್ಲಿ ಯಾರಾದರೂ ಒಬ್ಬರು ದನಿ ಮಾಡುತ್ತಾರೆ. ಪ್ರತಿ ಹಾಡು ಮತ್ತು ಕೋಲಾಟದ ಗತ್ತು ಮುಗಿಯುತ್ತಿದ್ದಂತೆ ಮುಕ್ತಾಯದ ನುಡಿ ಹಾಡುತ್ತಾರೆ. ಇವರಿಗೆ ಕೋಲಾಟದ ಕುಣಿತ ಬಿಟ್ಟರೆ ಬೇರೆ ನೃತ್ಯ ಬರುವುದಿಲ್ಲ. ಕಂಪಳದೇವರ ಹಟ್ಟಿಯಲ್ಲಿ ವಿಶೇಷವಾಗಿ ಪೂಜಾರಿ ಮಲ್ಲಯ್ಯ ಮತ್ತು ಗೋಲು ಪಾಪಯ್ಯ ಸಾಕಷ್ಟು ಕೋಲಾಟದ ಕುಣಿತ ಮತ್ತು ಕೋಲು ಪದಗಳನ್ನು ಕಲಿಸಿಕೊಡುತ್ತಾರೆ ಇವರಲ್ಲಿ ನೂರಾರು ಕೋಲಾಟದ ಪದಗಳಿದ್ದು ಅವುಗಳನ್ನು ನಾನು ಸಂಗ್ರಹಿಸಿ ಕೆಲವನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ಹಟ್ಟಿಯಲ್ಲಿ ಲಭ್ಯವಾದ ಕೋಲಾಟದ ಪದಗಳೆಂದರೆ.

**ಕೋಲಾಟದ ಪದಗಳು**

ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೇ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಕಲ್ಲು ಕೊಡವ ಮಾಡಿ ಮುಳ್ಳು ಸಿಂಬೆಯ ಮಾಡಿ
ಬಾವಿ ನೀರಿಗೆ ಹೊರಟಿದ್ದಳುಡುಗೀ...
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಬಾವಿ ನೀರಿಗೆ ಹೊರಟಿರೋ ಹೊತ್ತೀಗೆ
ಬಾವಿ ಗಡ್ಡೀಗೆ ಕುಂತಿದ್ದನುಡುಗಾ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಬಾವಿಗಡ್ಡೀಗೆ ಕುಂತೀರೊ ಹೊತ್ತಿಗೇ
ಬಾಳೆಮೀನಾಗಿ ಸುರುಗಿದ್ದಳುಡುಗೀ...
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಬಾಳೆಯಾ ಮೀನಾಗಿ ಸುರುಗಿರೋ ಹೊತ್ತೀಗೆ
ಮೂಳ್ಳು ಗಾಣವನಾಕಿ ಸೆಳೆದಿದ್ದನುಡುಗಾ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಮೂಳ್ಳುಗಾಣವನಾಕಿ ಸೆಳೆದೀರೋ ಹೊತ್ತಿಗೆ
ನಶಿಯ ಮೀನಾಗಿ ನಗುತ್ತಿದ್ದಳುಡುಗೀ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ನಶಯ ಮೀನಾಗಿ ನಗುತಿರೋ ಹೊತ್ತಿಗೆ
ಬಲೆಯವನಾಕಿ ದೇವಿದ್ದನುಡುಗಾ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಬಲೆಯವನಾಕಿ ದೇವಿರೋ ಹೊತ್ತಿಗೆ
ನವಣೆಯಾ ಕಾಳಾಗಿ ಸಿಡಿದ್ದಿದ್ದಳುಡುಗೀ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ನವಣೆಯ ಕಾಳಾಗಿ ಸಿಡಿದಿರೋ ಹೊತ್ತಿಗೆ
ಕೋಳಿಯ ಮರಿಯಾಗಿ ಕುಕ್ಕಿದ್ದಳುಡುಗೀ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಕೋಳಿಯ ಮರಿಯಾಗಿ ಕುಕ್ಕಿರೋ ಹೊತ್ತಿಗೆ
ನವಲೆಯ ಮರಿಯಾಗಿ ನಡೆದಿದ್ದಳುಡುಗೀ...
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ನವಲೆಯ ಮರಿಯಾಗಿ ನಡೆದೀರೋ ಹೊತ್ತೀಗೆ
ಬೇಟೇಗಾರಾನಾಗಿ ಹೊಡೆದಿದ್ದನುಡುಗಾ...
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಬೇಟೇಗಾರಾನಾಗಿ ಹೊಡೆದೀರೋ ಹೊತ್ತೀಗೆ
ಅಡಿಕೆಯ ಮರವಾಗಿ ನಿಂತಿದ್ದಳುಡುಗೀ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಅಡಿಕೆಯ ಮರವಾಗಿ ನಿಂತಿರೋ ಹೊತ್ತೀಗೆ
ಮುಡಿವಾ ಹೊಂಬಾಳೆಯಾಗಿ ಮುಡಿದಿದ್ದಳುಡುಗೀ
ನೌಲೆ ನೌಲೆನ್ನರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಮುಡಿವಾ ಒಂಬಾಳಾಗಿ ಮುಡಿದಿರೋ ಹೊತ್ತೀಗೆ
ಊರಾ ಮಾರಮ್ಮಾಗಿ ಕುಂತಿದ್ದಳುಡುಗೀ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಊರೇ ಮಾರಮ್ಮಾಗಿ ಕುಂತೀರೋ ಹೊತ್ತೀಗೆ
ಮಾರಮ್ಮನ ಕ್ವಾಣಾಗಿ ನಿಂತಿದ್ದನುಡುಗಾ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಮಾರಮ್ಮನ ಕ್ವಾಣಾಗಿ ನಿಂತಿರೋ ಹೊತ್ತಿಗೇ
ಗೆಜ್ಜೇ ಕುಡುಗೋಲಾಕಿ ಕಡಿಸಿದ್ದಳುಡುಗೀ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

ಗೆಜ್ಜೆ ಕುಡುಗೋಲಾಗಿ ಕಡಿಸಿರೋ ಹೊತ್ತೀಗೆಸ
ಗಂಡೇ ದೀಪಾವಾಗಿ ಉರಿಸಿದ್ದನುಡುಗಾ

ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ
ನೌಲೆ ನೌಲೆನ್ನಿರೋ ಈ ರನ್ನಾದ ನೌಲೇ ಗರಿಯೆನ್ನಿರೋ ॥ ॥

**ಕೋಲುಪದ–೨**

ಹುಣ್ಣಿಮೆ ಹೋಗಲೊಂದಮಾಸೆ ಬಂದರೆ
ಮಾಡಿರಿ ಮಾರಿಯನಾ...
ಮಾಡಿರಿ ಮಾರಿಯನಾ ಗೋಸಂದ್ರ ಮಾರಮ್ಮ ಜಾತ್ರೆಯನ...

ಈ ಊರ ಗೌಡರೂ ಗೊಂಚಿಗಾರರೂ ಎಂಥ ಜಾಣರಣ್ಣಾ...
ಎಂಥ ಜಾಣರಣ್ಣಾ ಮಾಡುತಾರೆ ಎಂಟುದೀನ ಸಂತೆ...
ಕ್ವಾಣನಿಡುದರೇ ವಂಕಿಗಾಕೆರೇ ಒಂಬತ್ತೇದೀನಾ...
ಒಂಬತ್ತೇದಿನಾ ಎಸನವ ಮಾಡುತ್ತೈತ್ರೈ ಕ್ವಾಣ.

ತಳವನಿಡಿದರೇ ಮಾದಿಗ ಕಡಿದನೆ ಬಲಕೆ ಬಿತ್ರೇ ಕ್ವಾಣ...
ಬಲಕೆ ಬಿತ್ರೆ ಕ್ವಾಣಾ... ತಕ್ಷಣ ಚೆಲ್ಲಿರೆ ಸರಗವನಾ..

**ಕೋಲುಪದ–೩**

ದಾಳಿಂಬ್ರು ನೋಡಿ ನಗುತಿರಲು ತಿಪ್ಪಯ್ಯ ಲಿಂಗ
ದಾಳಿಂಬ್ರು ನೋಡಿ ನಗುತಿರಲು ವಿರುಪಯ್ಯ ಲಿಂಗ
ಒಂದೇ ಕಂಬಾದೊಳಗೆ ಹದಿನಾರು ಕಾಂಬವು
ಕಾಂಬ ಕಾಂಬೆಲ್ಲಾ ಗೋಪುರವು ತಿಪ್ಪಯ್ಯ ಲಿಂಗ
ದಾಳಿಂಬ್ರು ನೋಡಿ ನಗುತಿರಲು ತಿಪ್ಪಯ್ಯ ಲಿಂಗ
ದಾಳಿಂಬ್ರು ನೋಡಿ ನಗುತಿರಲು ವಿರುಪಯ್ಯ ಲಿಂಗ
ಹಂಪೇಯ ಹೋಳೆಯಾಗೆ ಹಂಪೇಯ ಹೊಳೆಯಾಗೆ
ಪಂಪಾ ಮೂಗಿನ ಪಕ್ಷಿ ನಾಳೆ ಬಂದ್ರೆ
ಶ್ರಾವಣ್ ಸ್ವಾಮಾರ ವಿರುಪಯ್ಯ ಲಿಂಗ

ದಾಳಿಂಬ್ರು ನೋಡಿ ನಗುತಿರಲು ತಿಪ್ಪಯ್ಯ ಲಿಂಗ
ದಾಳಿಂಬ್ರು ನೋಡಿ ನಗುತಿರಲು ವಿರುಪಯ್ಯ ಲಿಂಗ

ಈ ಕೋಲು ಪದದ ಅರ್ಥವನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ಮೂಲತಃ ಹಂಪಿ ಪರಿಸರದವರಾದ ಈ ಹಟ್ಟಿಯ ಬೇಡರು ಹಂಪಿಯ ಕುರಿತಾಗಿ ಈ ಹಾಡಿನಲ್ಲಿ ಹೇಳುವುದು ತಿಳಿದುಬರುತ್ತದೆ. ಇವರು ತಮ್ಮ ಚರಿತ್ರೆ, ಸಾಮಾಜಿಕ ಹಿನ್ನೆಲೆ, ದುರಂತ ಕಥನಗಳು, ಸಾಂಸ್ಕೃತಿಕ ಕಥಾನಾಯಕರ ಕಥೆಗಳನ್ನು ಮೌಖಿಕವಾಗಿ ಹಾಡುತ್ತಾ ಕಥೆಗಳಾಗಿ ಹೇಳುತ್ತಾ ಉಳಿಸಿಕೊಂಡು

ಬರುತ್ತಿರುವುದು ಸಾಮಾನ್ಯ, ಅದರಂತೆಯೇ ಮೂಲತಹ ಹಂಪಿಯಲ್ಲಿದ್ದ ಇವರು ಹಂಪಿಯ ದಾಳಿಯಿಂದ ಹೊರಬಂದು ಇಲ್ಲಿ ನೆಲೆಸಿದ್ದರೂ ಹಂಪಿಯೊಂದಿಗಿನ ತಮ್ಮ ಸಾಂಸ್ಕೃತಿಕ ಅನನ್ಯತೆ ಬಿಡಬಾರದು ಎಂದು ಆಚರಣೆ ಮತ್ತು ಹಾಡುಗಳಲ್ಲಿ ಹಂಪಿಯನ್ನು ನೆನಪುಮಾಡಿಕೊಳ್ಳುತ್ತಾರೆ. ದಾಳಿಂಬ್ರು ನೋಡಿ ನಗುತಿರಲು ಎಂಬ ಈ ಕೋಲು ಪದವೂ ಸಹ ಹಂಪಿಗೆ ಧಾಳಿಕಾರರು ಮುತ್ತಿಗೆ ಹಾಕಿದುದರ ಕಥೆಯನ್ನೇ ಹೇಳುತ್ತದೆ. ಧಾಳಿಕಾರರು ನೋಡಿ ನಗುತ್ತಿರುವರು ಹೇ ಹಂಪಿಯ ವಿರುಪಯ್ಯನೇ ನಿನ್ನ, ಎಂದು ಧಾಳಿಕಾರರು ಯಾವ ರೀತಿ ಮುತ್ತಿಗೆ ಹಾಕಿದರು, ಹಂಪಿಯ ಹೊಳೆ, ಅಲ್ಲಿನ ವಿಗ್ರಹಗಳು, ದೇವಸ್ಥಾನಗಳನ್ನು ನಾಶಮಾಡಿದುದನ್ನು ಕೋಲು ಪದದಲ್ಲಿ ಹಾಡುತ್ತಾರೆ, ಪ್ರತಿ ವರ್ಷ ಶ್ರಾವಣ ಸೋಮವಾರದ ದಿನ ಹಂಪಿಗೆ ತಮ್ಮ ದೇವರೊಡನೆ ಇಡೀ ಸಮುದಾಯ ಬಂದು ಹೋಗುತ್ತದೆ.

**ಕೋಲುಪದ ೪**

ಯಾಗಿರಿ ಬೀಗಿರಿ ಯಾಗಿರ ಬೇಕು
ಯಾಗಿರಿ ಬೀಗಿರಿ ಯಾಗಿರ ಬೇಕು
ಲೆಕ್ಕಿಲಿ ಪೆದಿಯಾಗ್ ಜೇನಿರಬೇಕು
ಜೇನ್ ತಿಂದ್ ಹುಡುಗ ಹೆಂಗಿರಬೇಕು
ನಡುಕಟ್ ಪಡುಕಟ್ ಸುತ್ತಿರಬೇಕು
ನಡುಕಟ್ಯಾಗೊಂದ್ ದುಡ್ಡಿರಬೇಕು
ದುಡ್ಡಿನ ಸೂಳೆ ಬಿದ್ದಿರಬೇಕು
ಕಾಸಿನ ಸೂಳೆ ಕಡದಾಡ್ ಬೇಕು

ಲೇ...ಪ್ಪ್...ಲೇ ಯಾಗಿರಿ ಬೀಗಿರಿ ಯಾಗಿರಬೇಕು
ಯಾಗಿರಿ ಬೀಗಿರಿ ಯಾಗಿರಬೆಕು ॥ ॥
ಛೇ...ಛೇ...ಯಾಗಿರಿ ಬೀಗಿರಿ ಯಾಗಿರಬೇಕು

ಯಾಗಿರಿ ಬೀಗಿರಿ ಯಾಗಿರ ಬೆಕು
ಲೆಕ್ಕಿಲಿ ಪೆದಿಯಾಗ್ ಜೇನಿರಬೇಕು
ಜೇನ್ ತಿಂದ್ ಹುಡುಗ ಹೆಂಗಿರಬೇಕು
ನಡುಕಟ್ ಪಡುಕಟ್ ಸುತ್ತಿರಬೇಕು
ನಡುಕಟ್ಯಾಗೊಂದ್ ದುಡ್ಡಿರಬೇಕು
ದುಡ್ಡಿನ ಸೂಳೆ ಬಿದ್ದಿರಬೇಕು
ಕಾಸಿನ ಸೂಳೆ ಕಡದಾಡ್ ಬೇಕು

ಲೇ...ಪ್ಪ್...ಲೇ ಯಾಗಿರಿ ಬೀಗಿರಿ ಯಾಗಿರಬೇಕು
ಯಾಗಿರಿ ಬೀಗಿರಿ ಯಾಗಿರಬೆಕು ॥ ॥

ಗೋವಿಂದಡಮ್ಮ ಗೋಪಾಲಡಮ್ಮ
ಗೋವಿಂದಡಮ್ಮ ಗೋಪಾಲಡಮ್ಮ
ಘೇ...ಘೇ... ಗೋವಿಂದಡಮ್ಮ ಗೋಪಾಲಡಮ್ಮ
ಗೋವಿಂದಡಮ್ಮ ಗೋಪಾಲಡಮ್ಮ
ಯಾಡದಿಕೊಕಸಾರಿ ವಾಡೊಸ್ತಾಡಮ್ಮಾ
ಕಡ್ಲಾಲು ಬೆಲ್ಲಾಲು ಕೊನಿಪೆಟ್ಟಾಡಮ್ಮಾ
ಲೇ...ಪ್ಪ್ ಲೇ..
ತೀನ್ ತೀನ್ ಅಂಟಡೇ ತಿಂಟೆ ತಗಲಿಕಂಟಡೇ
ತೀನ್ ತೀನ್ ಅಂಟಡೇ ತಿಂಟೆ ತಗಲಿಕಂಟಡೇ

ಯಾಗಿರಿ ಬೀಗಿರಿ ಯಾಗಿರ ಬೇಕು
ಯಾಗಿರಿ ಬೀಗಿರಿ ಯಾಗಿರ ಬೇಕು
ಲೆಕ್ಕಿಲಿ ಪೆದಿಯಾಗ್ ಜೇನಿರಬೇಕು
ಜೇನ್ ತಿಂದ್ ಹುಡುಗ ಹೆಂಗಿರಬೇಕು
ನಡುಕಟ್ ಪಡುಕಟ್ ಸುತ್ತಿರಬೇಕು
ನಡುಕಟ್ಟ್ಯಾಗೊಂದ್ ದುಡ್ಡಿರಬೇಕು
ದುಡ್ಡಿನ ಸೂಳೆ ಬಿದ್ದಿರಬೇಕು
ಕಾಸಿನ ಸೂಳೆ ಕಡದಾಡ್ ಬೇಕು
ಲೇ...ಪ್ಪ್...ಲೇ ಯಾಗಿರಿ ಬೀಗಿರಿ ಯಾಗಿರಬೇಕು
ಯಾಗಿರಿ ಬೀಗಿರಿ ಯಾಗಿರಬೆಕು ॥ ॥

ಹೇಯ್ ವಂಕನಾನಾ ಸೂರಮ್ಮ ವಂಕೊಂಕಿ ಸುಸ್ತುದೆ
ಕ್ವಾಟ್ವಾಲು ಸೂರಮ್ಮ ಕುರಿಗೆಲು ಸೂಸ್ತದೆ.
ಲೇ...ಪ್ಪ್...ಲೇ ಯಾಗಿರಿ ಬೀಗಿರಿ ಯಾಗಿರಬೇಕು
ಯಾಗಿರಿ ಬೀಗಿರಿ ಯಾಗಿರಬೆಕು (ಪೂಜಾರಿ ಮಲ್ಲಯ್ಯ, ೫೨)

**ಭಜನೆ ಪದಗಳು**

ಹಟ್ಟಿಯಲ್ಲಿ ಭಜನೆ ಮಾಡುವವರು, ಭಜನೆ ಪದ ಹಾಡುವವರು ಸಾಕಷ್ಟು ಜನ ಇದ್ದಾರೆ. ಚಿಕ್ಕವರು, ದೊಡ್ಡವರು ಸೇರಿ ದೇವಸ್ಥಾನಗಳಲ್ಲಿ ಸಂಜೆಯ ವೇಳೆ ಭಜನೆ ಮಾಡುತ್ತಾರೆ. ಶ್ರಮ ಸಂಸ್ಕೃತಿಯ ಜನರಾದ ಇವರು ತಮಗೆ ಬಿಡುವು ಸಿಕ್ಕಾಗ ಹಿರಿಯರು ಕಿರಿಯರು ಸಾಮೂಹಿಕವಾಗಿ ಕುಳಿತು ಸಂಜೆಯ ಹೊತ್ತಿನಲ್ಲಿ ದಡ್ಡಿಕಾಮನಾಯಕ ಮತ್ತು ಕಂಪಳರಂಗಸ್ವಾಮಿ ಗುಡಿಗಳಲ್ಲಿ ಭಜನೆ ಮಾಡುತ್ತಾರೆ. ಭಜನೆಗಾಗಿಯೇ ವಿಶೇಷ ಉಡುಪು, ವೇಷವೇನೋ ಧರಿಸುವುದಿಲ್ಲ ಸರಳವಾದ

ಉಡುಪಿನಲ್ಲಿ ಕೈ ಕಾಲು ಮುಖ ತೊಳೆದುಕೊಂಡು ಹಣೆಗೆ ವಿಭೂತಿ ಇಟ್ಟುಕೊಂಡು ಕುಳಿತು ಭಜನೆ ಮಾಡುತ್ತಾರೆ ಭಜನೆ ಪದಗಳಲ್ಲಿ ಹೆಚ್ಚಾಗಿ ದೇವರ ವಿಷಯವಾಗಿ ಹಾಡುತ್ತಾರೆ, ಅಲ್ಲದೆ ತಮ್ಮ ಕೃಷಿ ಬದುಕಿಗೆ ನೆರವಾದ ದನಕರುಗಳು ಅಂದರೆ ಬಸವಣ್ಣನ ಬಗ್ಗೆ, ಮಳೆ ಬೆಳೆ ಬಗ್ಗೆಯೂ ಸಹ ಹಾಡುತ್ತಾರೆ. ಭಜನೆಗೆ ಬೇಕಾದ ಅತಿ ಮುಖ್ಯ ಪರಿಕರಗಳೆಂದರೆ ತಾಳ, ತಂಬೂರಿ, ಡಕ್ಕೆ, ಗೆಜ್ಜೆ ಮುಂತಾದವುಗಳನ್ನು ಬಳಸಿಕೊಂಡು ಹಾಡಿಗೆ ತಕ್ಕಂತೆ ಲಯಬದ್ಧವಾಗಿ ಬಾರಿಸುತ್ತಾರೆ. ಇಲ್ಲಿನ ಹಿರಿಯರು ಕೆಲವು ಭಜನೆ ಪದಗಳನ್ನು ತಾವೇ ರಚಿಸಿ ದೇವರ ಮೇಲೆ ಹಾಡುಗಳನ್ನು ಹಾಡುತ್ತಾರೆ. ಭಜನೆ ಹಾಡುಗಳಲ್ಲಿ ಆಧ್ಯಾತ್ಮಿಕ ತತ್ವಗಳು, ಹುಟ್ಟು, ಸಾವು ಮೊದಲಾದ ಪಾರಮಾರ್ಥಿಕ ಅಂಶಗಳನ್ನು ಒಳಗೊಂಡಿರುತ್ತವೆ. ಶಿವರಾತ್ರಿಯ ಸಂದರ್ಭದಲ್ಲಿ ಭಜನೆಗೆ ಬಹಳ ಮಹತ್ವವಿರುತ್ತದೆ. ಶಿವಭಜನೆಗೆ ಹೆಚ್ಚು ಪ್ರಾಧ್ಯಾನ್ಯತೆ ಕೊಡುತ್ತಾರೆ. ಭಜನೆಯ ಪ್ರಾರಂಭದಲ್ಲಿ ಮತ್ತು ಮುಕ್ತಾಯದಲ್ಲಿ ಜಯಾ ಜಯ ನಮಃ ಪಾರ್ವತಿ ಪತಿ ಹರಹರ ಮಹದೇವ ಎಂದು ಹೇಳುತ್ತಾರೆ. ಅಲ್ಲದೆ ವೆಂಕಟರಮಣ 'ಗೋವಿಂದಾ ಗೋವಿಂದ' ಎಂದು ಗೋವಿಂದನನ್ನು ಸಹ ನನೆಯುತ್ತಾರೆ.

ದೇವರನ್ನು ಕುರಿತಾದ ಭಜನೆ ಹಾಡುಗಳಲ್ಲಿ ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ, ಗೌರಸಮುದ್ರದ ಮಾರಮ್ಮ ಮುಂತಾದ ದೈವಗಳ ಕುರಿತಾದ ಹಾಡುಗಳನ್ನು ಹಾಡುತ್ತಾರೆ. ಹಟ್ಟಿಯ ಜನರು ಭಜನೆ ಮಾಡುವಾಗ ಅವರದೇ ಆದ ಕೆಲವೊಂದು ಸಾಮಾಜಿಕ ನಿಯಮಗಳನ್ನು ಪಾಲಿಸುತ್ತಾರೆ. ಜಾತಿ ಭೇದವಿಲ್ಲದೆ ಪ್ರಸಾದ ಸ್ವೀಕರಿಸುತ್ತಾರೆ. ಕಾರ್ತಿಕ, ಶ್ರಾವಣ, ಶಿವರಾತ್ರಿ, ಹಬ್ಬ ಆಚರಣೆಗಳಲ್ಲಿ ಭಜನೆಯನ್ನು ಮಾಡುತ್ತಾರೆ. ಹಟ್ಟಿಯಲ್ಲಿ ಯಾರಾದರೂ ಮರಣ ಹೊಂದಿದರೆ ಬಂಧು ಬಳಗ ಸೇರುವ ತನಕ ಶವದ ಬಳಿ ಭಜನೆ ಮಾಡುತ್ತಾರೆ. ಯಾರಿಗಾದರೂ ಹಾವು ಕಚ್ಚಿದರೆ ಆ ವ್ಯಕ್ತಿ ನಿದ್ದೆಮಾಡಬಾರದು ನಿದ್ದೆಮಾಡಿದರೆ ವಿಷ ಏರುತ್ತದೆ ಹಾಗಾಗಿ ರಾತ್ರಿ ಕಳೆಯುವ ತನಕ ಆ ವ್ಯಕ್ತಿಯ ಸುತ್ತ ಕುಳಿತು ಭಜನೆ ಮಾಡುತ್ತಿದ್ದರು ಆದರೆ ಇತ್ತೀಚೆಗೆ ಯಾರಿಗಾದರೂ ಹಾವು ಕಡಿದರೆ ಮೊದಲು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಾರೆ. ಇತ್ತೀಚಿನ ದಿನಗಳಲ್ಲಿ ಬಿಡುವಿನ ವೇಳೆಯಲ್ಲಿ ದೇವಸ್ಥಾನಗಳಲ್ಲಿ ಮಾತ್ರ ಭಜನೆ ಮಾಡುತ್ತಾರೆ. ಈ ಮೊದಲೇ ಹೇಳಿದಂತೆ ಇವರು ದೇವರ ಕುರಿತಾಗಿ, ಮಳೆ, ಬೆಳೆ, ಬಸವಣ್ಣನ ಕುರಿತಾಗಿ ಮತ್ತು ಸಾಮಾಜಿಕ, ಸಾಂಸಾರಿಕ ಜೀವನದ ಕುರಿತಾಗಿ ತಮ್ಮ ಭಜನೆ ಪದಗಳಲ್ಲಿ ನೀತಿಯನ್ನು ಹೇಳುತ್ತಾರೆ. ಅಂಥಹ ಭಜನೆ ಪದಗಳೆಂದರೆ,

ಹಟಮಾರಿ ಎನಗಂಡ ಸೆಟಗೊಂಡು ತಾ ಹೋದ.
ಊಟಾ ಹುಡುಗಾರ ಬಿಟ್ಟು ಮನೆಮಾರು ಮರೆತೊದ... ಯವ್ವಾ
ಮನೆಮಾರು ಮರೆತೋದಾ.. ॥ ॥
ಹೊಸ ಸೀರೆ ಉಟ್ವಾಗ ಹುಸಿನಗುವೆ ನಗುತ್ತಿದ್ದಾ..
ಹೊಸ ಸೀರೆ ಉಟ್ವಾಗ ಹುಸಿನಗುವೆ ನಗುತ್ತಿದ್ದಾ..
ರಸಬಾಳೇ ಹಣ್ಣು ಸುಲಿದು ಬಾಯೊಳಗೆ ಇಡುತ್ತಿದ್ದ... ಯವ್ವಾ

ಬಾಯೊಳಗೆ ಇಡುತ್ತಿದ್ದ..   ॥ ॥

ಮೈತುಂಬಾ ಡಾಬೀನು ಏನೇನೊ ಮಾಡ್ಸಿದ್ದಾ
ಮೈತುಂಬಾ ಡಾಬೀನು ಏನೇನೊ ಮಾಡ್ಸಿದ್ದಾ
ಕೈ ತುಂಬಾ ಕೆಲಸಿದ್ರೂ ತಗಿಬ್ಯಾಡ ಎನುತಿದ್ದಾ... ಯವ್ವಾ
ತಗಿಬ್ಯಾಡ ಎನುತ್ತಿದ್ದ...  ॥ ॥

ಗಂಡಾ ಹೆಂಡಾರ ಜಗಳಾ ಉಂಡು ಮಲಗುವಾ ತನಕ
ಗಂಡಾ ಹೆಂಡಾರ ಜಗಳಾ ಉಂಡು ಮಲಗುವಾ ತನಕ
ಎಂತಿದ್ದರೆ ಎನಗಂಡಾ ಬಯಬ್ಯಾಡ ಎನುತ್ತಿದ್ದ... ಯವ್ವಾ.
ಬಯಬ್ಯಾಡ ಎನುತ್ತಿದ್ದಾ... ॥ ॥

ಮನೆದೇವರು ಬಸವಣ್ಣ ಕೈ ಜೋಡಿಸಿ ಬೇಡುವೆನಣ್ಣ
ಪತಿರಾಯರು ಬರಲೆಂದು ಹರಕೇ ಹೊತ್ತಿಹೆನಣ್ಣ...
ಹರಕೆ ಹೊತ್ತಿಹೆನಣ್ಣಾ..॥ ॥

ಈ ಭಜನೆಯ ಹಾಡಿನಲ್ಲಿ ಒಂದು ಹೆಣ್ಣಿನ ಅದರಲ್ಲೂ ಗರತಿಯ ಕೌಟುಂಬಿಕ ಜೀವನವನ್ನು ಸೂಕ್ಷ್ಮವಾಗಿ ನಮ್ಮ ಜನಪದರು ಈ ಹಾಡಿನಲ್ಲಿ ಹೇಳಿದ್ದಾರೆ. ತನ್ನ ಮೇಲೆ ಮುನಿಸಿಕೊಂಡು ಮನೆಬಿಟ್ಟು ಹೋಗಿರುವ ಗಂಡನು ಮತ್ತೆ ಮನೆಗೆ ಬರಲೆಂದು ಮನೆದೇವರು ಬಸವಣ್ಣನನ್ನು ಬೇಡುವ ಮೂಲಕ ಗಂಡ ತನ್ನನ್ನು ಪ್ರೀತಿಸುತ್ತಿದ್ದ ರೀತಿಯನ್ನು ಗರತಿ ನೆನೆಯುತ್ತಾಳೆ. ಇಂತಹ ಕೌಟುಂಬಿಕ ಮೌಲ್ಯಗಳಿರುವ ಹಾಡುಗಳನ್ನು ಭಜನೆ ಪದಗಳಲ್ಲಿ ಹಾಡುವುದು ಕಂಡುಬರುತ್ತದೆ.

ನೋಡಿ ನೋಡಿ ಹೋಗಬೇಡಿರೋ.. ನನ್ನ
ಗಂಡ ಬಡಿಯುತಾನೆ ಬಿಡಿಸಿಕೊಳ್ಳಿರೋ ॥ ॥

ಹಳ್ಳಾ ಕೊಳ್ಳಾವ ತಿರುಗಿ ಒಳ್ಳೆ ಒಳ್ಳೆ ಹೂವ ತಂದು
ಮಳ್ಳಿ ನನ್ನ ಸೌತೇರು.. ಮಳ್ಳಿ ನನ್ನ ಸೌತೇರು
ಗಂಡಗೇಳಿ ಬಡಿಸುತಾರು
ನೋಡಿ ನೋಡಿ ಹೋಗಬೇಡಿರೋ.. ನನ್ನ
ಗಂಡ ಬಡಿಯುತಾನೆ ಬಿಡಿಸಿಕೊಳ್ಳಿರೋ ॥ ॥

ಅಡ್ಡಾ ಗುಡ್ಡಾವು ತಿರುಗಿ ದೊಡ್ಡ ದೊಡ್ಡ ಹೂವ ತಂದು
ಅಡ್ಡಾ ಗುಡ್ಡಾವು ತಿರುಗಿ ದೊಡ್ಡ ದೊಡ್ಡ ಹೂವ ತಂದು
ಗೊಡ್ಡು ನನ್ನ ಸೌತೇರು... ಗೊಡ್ಡು ನನ್ನ ಸೌತೇರು...
ಗಂಡಗೇಳಿ ಬಡಿಸುತಾರು..

ನೋಡಿ ನೋಡಿ ಹೋಗಬೇಡಿರೋ.. ನನ್ನ
ಗಂಡ ಬಡಿಯುತಾನೆ ಬಿಡಿಸಿಕೊಳ್ಳಿರೋ ॥ ॥

### ಹಚ್ಚೆ ಕಲೆ

ಕಂಪಳದೇವರ ಹಟ್ಟಿಯಲ್ಲಿ ಹಿರಿಯ ಮಹಿಳೆ, ಪುರುಷರು ತಮ್ಮ ಕೈ, ಹಣೆಗಳ ಮೇಲೆ ಹಚ್ಚೆ ಹಾಕಿಸಿಕೊಂಡಿರುವುದು ಕಂಡು ಬರುತ್ತಿದೆ. ಮತ್ತು ಇಂದಿನವರೂ ಸಹ ಕೆಲವರು ಹಚ್ಚೆ ಹಾಕಿಸಿಕೊಳ್ಳುತ್ತಿದ್ದಾರೆ. ಸಾಮಾನ್ಯವಾಗಿ ಹಚ್ಚೆಯನ್ನು ಸ್ತ್ರೀಯರು ಹಾಕಿಸಿಕೊಳ್ಳುತ್ತಾರೆ. ಹಚ್ಚೆಯನ್ನು ಸೋದರಮಾವ, ಬಂಧುಗಳು, ಸ್ನೇಹಿತರು, ತಮ್ಮ ಪ್ರೀತಿಯ ಕುರುಹಾಗಿ ಹಚ್ಚೆ ಹಾಕಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಗಂಡಸರೇ ಹೆಚ್ಚಾಗಿ ಟ್ಯಾಟೋ, ಹಚ್ಚೆ ಹಾಕಿಸಿಕೊಳ್ಳುತ್ತಿದ್ದಾರೆ. ಹಚ್ಚೆಯ ಕುರಿತು ಹಟ್ಟಿಯ ಜನಪದರ ನಂಬಿಕೆ ಎಂದರೆ, 'ಹಚ್ಚೆ ಹಾಕಿಸಿಕೊಂಡ ಮಹಿಳೆ ಮಾಡಿದ ಅಡುಗೆ ಹಳಸುವುದಿಲ್ಲ, ಹಚ್ಚೆ ಇಲ್ಲದವಳು ಮುದ್ದೆ ಸ್ವಾರ್ಯಾಗೆ ಕೈ ಇಡಬಾರದು ಎಂಬ ನಂಬಿಕೆಯಿದೆ. ಕೈಯ ಮೇಲೆ ಗರುಡ, ಹಾವು, ಕತ್ತಿ ತನ್ನ ಪ್ರೀತಿ ಪಾತ್ರರಾದವರ ಹೆಸರನ್ನು ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಹಣೆಯ ಮಧ್ಯಭಾಗದಲ್ಲಿ ಕುಂಕುಮ ಇಡುವ ಜಾಗದಲ್ಲಿ ದುಂಡಾಗಿ ಹಚ್ಚೆ ಹಾಕಿಸಿಕೊಳ್ಳುವುದರಿಂದ ಹಚ್ಚೆ ಪಿತ್ತ, ವಾತ, ಸಂದು ಇತ್ಯಾದಿ ರೋಗಗಳಿಗೆ ಚಿಕಿತ್ಸೆಯಾಗಿ ಕೆಲಸಮಾಡುತ್ತದೆ. ಹಚ್ಚೆ ಹಾಕುವವರು ಅರಿಶಿಣ ಮತ್ತು ಹಚ್ಚೆಸೊಪ್ಪನ್ನು ಅರೆದು ರಸಮಾಡಿ ದೀಪದಲ್ಲಿ ಕಾಯಿಸಿ ಅದರಲ್ಲಿ ಸೂಜಿಯನ್ನು ಅದ್ದಿ ಚುಚ್ಚುತ್ತಾರೆ. ಚುಚ್ಚುವಾಗ ನೋವು ಕಾಣಿಸಬಾರದು ಎಂದು ಹಾಡನ್ನು ಹಾಡುತ್ತಾರೆ ಸಾಮಾನ್ಯವಾಗಿ ಹಚ್ಚೆ ಹಾಕುವವರು ಕೊರವಂಜಿಗಳು ಮತ್ತು ಕಿಳ್ಳೇಕ್ಯಾತ ಹೆಂಗಸರಾಗಿರುತ್ತಾರೆ. ಮ್ಯಾಸಬೇಡರು ತಾವು ಆರಾಧಿಸುವ ದೇವರುಗಳನ್ನು ಆಧರಿಸಿ ಆ ದೇವರ ಪ್ರತಿರೂಪವಾಗಿರುವ ಪ್ರಾಣಿ, ಪಕ್ಷಿ, ಹೂವು, ತ್ರಿಶೂಲ, ಬಾಣ, ಬಿಲ್ಲು, ಶಂಖ, ಚಕ್ರ ಮುಂತಾದುವುಗಳನ್ನು ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಕೆಲವರು ಹಚ್ಚೆಸೊಪ್ಪಿಗೆ ಬದಲಾಗಿ ಅಗಸೆಯ ಸೊಪ್ಪು, ತುಂಬೆ ಸೊಪ್ಪು ಮುಂತಾದ ಸೊಪ್ಪುಗಳನ್ನು ಬಳಸಿ ಹಚ್ಚೆ ರಸ ತಯಾರಿಸಿ ಒಂದು ಚಿಕ್ಕ ಕುಡಿಕೆಯಲ್ಲಿ ಹಾಕಿ ಬಿಳಿ ಬಟ್ಟೆ ಮುಚ್ಚಿ ದಾರಕಟ್ಟಿ ಇಟ್ಟಿರುತ್ತಾರೆ. ಪ್ರಸ್ತುತ ದಿನಗಳಲ್ಲಿ ಹಚ್ಚೆ ಸಂಸ್ಕೃತಿ ಕಡಿಮೆಯಾಗುತ್ತಿದೆ ಏಕೆಂದರೆ ಒಬ್ಬರಿಗೆ ಚುಚ್ಚಿದ ಸೂಜಿ ಹಲವಾರು ಜನರಿಗೆ ಚುಚ್ಚುವುದರಿಂದ ಹೆಚ್.ಐ.ವಿ ಮುಂತಾದ ರೋಗ ಬರುತ್ತಿವೆ ಎಂಬ ಕಾರಣ. ಆದ್ದರಿಂದ ಇಂದು ಹಚ್ಚೆ ಸಂಸ್ಕೃತಿ ಕಡಿಮೆಯಾಗಿದೆ. ಯುವಕರು ಮಾತ್ರ ಟ್ಯಾಟೋಗಳನ್ನು ಹಾಕಿಸಿಕೊಳ್ಳುತ್ತಿದ್ದಾರೆ.

### ರಂಗೋಲಿ ಕಲೆ

ರಂಗೋಲಿಯು ಒಂದು ಜನಪದ ಕಲೆಯಾಗಿದೆ. ರಂಗೋಲಿ ಎಂದರೆ, ಮನೆಯ ಒಳಗೆ ಮತ್ತು ಹೊರಗೆ ಹಾಕಿರುವ ಕಲಾತ್ಮಕ ಗೆರೆಗಳು. ಕಂಪಳದೇವರ ಹಟ್ಟಿಯ ಜನರು ತಮ್ಮ ಗುಡಿಸಲುಗಳ ಮುಂದೆ, ಮನೆಗಳ ಮುಂದೆ, ಮನೆಯ ತೊಲೆಗಳ ಮೇಲೆ, ಗೋಡೆಗಳ ಮೇಲೆ, ಮೇಜುಕಟ್ಟಿನ ಮೇಲೆ ರಂಗೋಲಿ ಹಾಕಿರುವುದು ಕಂಡುಬರುತ್ತದೆ. ಗುಡಿಸಲುಗಳ ಬಾಗಿಲ ಪಕ್ಕದ ಗೋಡೆಯ ಮೇಲೆ ಸುಣ್ಣದಿಂದ ದೀಪದ ರಂಗೋಲಿ, ಕಮಲದ ಹೂವಿನ ಚಿತ್ರದ ರಂಗೋಲಿಯನ್ನು ಕಾಣಬಹುದು.

ಪ್ರತಿನಿತ್ಯ ಹಟ್ಟಿಯ ಹೆಣ್ಣುಮಕ್ಕಳು ತಮ್ಮ ಮನೆಯ ಮುಂದೆ ಸಗಣಿಯಿಂದ ಅಂಗಳ ಸಾರಿಸಿ ರಂಗೋಲಿ ಹಿಟ್ಟಿನಿಂದ ರಂಗೋಲಿ ಬಿಡಿಸುತ್ತಾರೆ. ಮನೆಯ ಮುಂದೆ ಸಗಣಿಯಿಂದ ಅಂಗಳಸಾರಿಸಿ ರಂಗೋಲಿ ಬಿಡಿಸುವುದರಿಂದ ಮನೆಯ ಒಳಗೆ ಕ್ರಿಮಿಕೀಟಗಳು ಬರುವುದಿಲ್ಲ, ಅದೇ ರೀತಿಯಾಗಿ ದೇವರ ಪೌಳಿಗಳ(ಗುಡಿಗಳ) ಮುಂದೆಯೂ ಸಹ ಪೂಜಾ ವಾರದ ದಿನ ರಂಗೋಲಿ ಹಾಕುತ್ತಾರೆ. ಹಟ್ಟಿಯ ಬೇಡರಲ್ಲಿ ವಿಶೇಷವಾಗಿ ಮದುವೆಯ ಸಂದರ್ಭದಲ್ಲಿ ಕಂಬಳಿ ಹಾಸಿ ಅಕ್ಕಿ ಇಲ್ಲವೆ ಜೋಳದ ರಂಗೋಲಿ ಬರೆಯುತ್ತಾರೆ.

**೫.೨.೩.ಜನಪದ ಆಟಗಳು**

ಮಾನವನ ಮನಸ್ಸಿಗೆ ಆಹ್ಲಾದಕತೆ, ಮಾನಸಿಕ ಮತ್ತು ದೈಹಿಕ ಆರೋಗ್ಯಕ್ಕೆ ಉಪಯುಕ್ತವಾದ ಆಟಗಳೇ ಗ್ರಾಮೀಣ ಆಟಗಳು. ಮಾನವನಿಗೆ ಗಾಳಿ, ನೀರು, ಆಹಾರ, ನಿದ್ರೆ ಎಷ್ಟು ಅವಶ್ಯಕವೋ ಮನೋರಂಜನೆ, ಕ್ರೀಡೆ, ಕಲೆ, ಇವುಗಳೂ ಸಹ ಮನಸ್ಸಿನ ಆಹ್ಲಾದಕತೆ ಅಥವಾ ಮಾನಸಿಕ ಆರೋಗ್ಯಕ್ಕೆ ಅಷ್ಟೇ ಅವಶ್ಯಕವಾದುವು. 'ಸದೃಢ ದೇಹದಲ್ಲಿ ಸದೃಢ ಮನಸ್ಸು' ಎಂಬ ಮಾತಿನಂತೆ ಶಾರೀರಿಕ ಮತ್ತು ಮನಸ್ಸಿನ ದೃಢತೆಗೆ ಕ್ರೀಡೆಗಳು ತುಂಬಾ ಮಹತ್ವವಾದವು ಎನ್ನುವುದನ್ನು ಅನೇಕ ಅಧ್ಯಯನಗಳು ವಿವಿಧ ಆಯಾಮಗಳಲ್ಲಿ ಗುರುತಿಸಿವೆ. ಕಂಪಳದೇವರ ಹಟ್ಟಿಯಲ್ಲಿನ ಜನಪದರ ನಜಪದ ಕ್ರೀಡೆಗಳ ಕುರಿತು ತಿಳಿಯುವುದಾದರೆ ಹಟ್ಟಿಯಲ್ಲಿ  ಮಕ್ಕಳು, ಮಹಿಳೆಯರು, ಯುವಕರು, ವೃದ್ದರು ತಮ್ಮದೇ ಆದ ಆಟ ಮತ್ತು ಕಲೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಮನರಂಜನೆ ಮತ್ತು ದೈಹಿಕ, ಮಾನಸಿಕ, ಬೌದ್ಧಿಕತೆಗೆ ಉಲ್ಲಾಸ ನೀಡುವ ಆಟಗಳು ಮಾನವನಿಗೆ ಸಹಜ ಪ್ರವೃತ್ತಿಯಿಂದ ಬಂದವುಗಳಾಗಿವೆ. ಗ್ರಾಮೀಣ ಆಟಗಳ ಪ್ರಮುಖ ಉದ್ದೇಶ ಕೇವಲ ಸಂತೋಷ ಮತ್ತು ಮನರಂಜನೆಯಾಗಿರುತ್ತದೆ, ಆದರೆ ಈ ಕ್ರೀಡೆಗಳು ಮನರಂಜನೆಯ ಜೊತೆಗೆ ದೈಹಿಕ ಕಸರತ್ತನ್ನು, ಭೌದ್ಧಿಕ ಚಾಣಾಕ್ಷತೆಯನ್ನು ಬೆಳೆಸುವಂತವಾಗಿರುತ್ತವೆ. ಹುಲಿಕಟ್ಟೆ ಆಟ, ಚಾವೆ ಆಟ, ಕುಂಟಾಬಿಲ್ಲೆ, ಚಿನ್ನಿದಾಂಡು, ಮರಕೋತಿ ಆಟ, ಕಬಡ್ಡಿ ಆಟ, ಕ್ರಿಕೆಟ್, ಖೋ-ಖೋ, ಜೂಟಾಟ ಇನ್ನೂ ಇಂತಹ ಅನೇಕ ಕ್ರೀಡೆಗಳು ಹಟ್ಟಿಯಲ್ಲಿ ಮಕ್ಕಳು, ಮಹಿಳೆಯರು, ಪುರುಷರು ಆಡುವುದನ್ನು ಕಾಣಬಹುದು. ಅವುಗಳೆಂದರೆ,

**ಮಕ್ಕಳು ಆಡುವ ಆಟಗಳು**

**ಜೂಟಾಟ**

ಹಟ್ಟಿಯ ಮಕ್ಕಳು ರಜೆಯ ಸಮಯದಲ್ಲಿ ಅಥವಾ ಸಂಜೆಯ ವೇಳೆ ೮-೧೦ ಜನ ಹುಡುಗರು ಸೇರಿ ಒಬ್ಬನನ್ನು ಕಳ್ಳ ಎಂದು ತೀರ್ಮಾನಿಸಿ ಉಳಿದವರಲ್ಲಿ ಒಬ್ಬ ಅವನ ಕಣ್ಣು ಮಚ್ಚಿ ಉಳಿದವರು ಅವಿತುಕೊಂಡಮೇಲೆ ಕಣ್ಣು ಮುಚ್ಚಿರುವವನನ್ನು ಸುತ್ತು ಸುತ್ತಿಸಿ ನಂತರ ಕಣ್ಣು ಬಿಡುತ್ತಾರೆ, ಆಗ ಅವನಿಗೆ ಯಾರೂ ಕಾಣುವುದಿಲ್ಲ ಅವನು ಅವರಲ್ಲಿ ಒಬ್ಬನನ್ನಾದರೂ ಹುಡುಕಿ ಹಿಡಿಯಬೇಕು ಇದನ್ನು ಜೂಟಾಟ ಅಥವಾ ಕಣ್ಣಾ ಮುಚ್ಚಾಲೆಯಾಟ ಎನ್ನುವರು. ಈ ಆಟವು ಮಕ್ಕಳಲ್ಲಿ ಸೌಹಾರ್ದತೆಯನ್ನು ಬೆಳೆಸುತ್ತದೆ. ಮತ್ತು ಮಕ್ಕಳಲ್ಲಿ ಚುರುಕುತನವನ್ನು, ಸೂಕ್ಷ್ಮತೆಯನ್ನು ಬೆಳೆಸುತ್ತದೆ.

### ಚಿನ್ನಿ ದಾಂಡು

ಈ ಆಟವನ್ನು ಸಹ ಮಕ್ಕಳು ೮–೧೦ ಜನ ಸೇರಿ ಆಡುತ್ತಾರೆ. ಒಂದು ಉದ್ದನೆಯ ಕೋಲು(ದಾಂಡು) ಮತ್ತು ಒಂದು ಚಿಕ್ಕ ಕೋಲು(ಚಿನ್ನಿ) ಗಳನ್ನು ತೆಗೆದುಕೊಂಡು ಒಂದು ಬಯಲಿನಲ್ಲಿ ಚಿಕ್ಕ, ಸ್ವಲ್ಪ ಉದ್ದನೆಯ ಕುಣಿಯನ್ನು ತೋಡಿ ಅದರ ಮೇಲೆ ಚಿನ್ನಿಯನ್ನು ಅಡ್ಡಲಾಗಿ ಇಟ್ಟು ಕುಣಿಯ ಒಳಗೆ ದಾಂಡು ಸೇರಿಸಿ ಒಬ್ಬ ಮೇಲೆ ತೂರುತ್ತಾನೆ. ಹೀಗೆ ಒಬ್ಬ ಚಿನ್ನಿಯನ್ನು ತೂರುವಾಗ ಎದುರುಗಡೆ ಸಾಲಾಗಿ ನಿಂತ ಉಳಿದವರು ಆ ಚಿನ್ನಿಯನ್ನು ಹಿಡಿಯುತ್ತಾರೆ ಹಾಗೆ ಹಿಡಿದರೆ ಅವನು ಔಟ್ ಆದಂತೆ, ಒಂದು ವೇಳೆ ಅದು ಅವರ ಕೈಗೆ ಸಿಗದೆ ನೆಲಕ್ಕೆ ಬಿದ್ದರೆ ಚಿನ್ನಿ ತೂರಿದವನು ದಾಂಡುವಿನಿಂದ ಚಿನ್ನಿಯನ್ನು ಮೂರು ಬಾರಿ ಮೇಲೆ ತೂರಿ ಹೊಡೆಯುತ್ತಾನೆ ಅದು ಎಷ್ಟು ದೂರ ಹೋಗುತ್ತದೋ ಅಲ್ಲಿಂದ ಉಳಿದವರು ಕುಂಟುತ್ತಾ ಕುಣಿಯ ಹತ್ತಿರ ಬರಬೇಕು. ಈ ಆಟವೂ ಸಹ ಮಕ್ಕಳ ದೈಹಿಕ ಸದೃಢತೆಗೆ ಸಹಾಯಕ ಆಟವಾಗಿದೆ.

### ಕುಂಟೋಬಿಲ್ಲೆ

೩–೪ ಹುಡುಗಿಯರು ಸೇರಿ ಒಂದು ಬಯಲಿನಲ್ಲಿ ಮರದ ನೆರಳಿನಲ್ಲಿ ಅಥವಾ ಮನೆಯ ಅಂಗಳದಲ್ಲಿ ನೆಲದ ಮೇಲೆ ನಾಲ್ಕು ಚೌಕಗಳನ್ನು ಬರೆದು ಚೌಕದ ಹೊರಗೆ ನಿಂತು ಒಂದು ಬೋಕೀಬಿಲ್ಲೆಯನ್ನು ಒಂದು ಚೌಕದಲ್ಲಿ ಹಾಕಿ ಅದನ್ನು ಒಂದು ಕಾಲಿನಲ್ಲಿ ಕುಂಟುತ್ತಾ ಒಂದು ಚೌಕದಿಂದ ಮತ್ತೊಂದು ಚೌಕಕ್ಕೆ ತಳ್ಳುತ್ತಾ ಕೊನೆಗೆ ನಾಲ್ಕೂ ಚೌಕದಿಂದ ಹೊರಕ್ಕೆ ತಳ್ಳಬೇಕು ಅಲ್ಲಿಯವರೆಗೂ ಮತ್ತೊಂದು ಕಾಲನ್ನು ನೆಲಕ್ಕೆ ಊರಬಾರದು ಈ ಆಟವನ್ನೇ ಕುಂಟೋಬಿಲ್ಲೆ ಎಂದು ಕರೆಯುತ್ತಾರೆ. ಈ ಆಟದಲ್ಲಿ ಇನ್ನೂ ಬೇರೆ ಬೇರೆ ಹಂತಗಳ ಆಟಗಳಿದ್ದು ಎಲ್ಲಾ ಹಂತಗಳನ್ನು ಕುಂಟುತ್ತಾ ಬೋಕಿಬಿಲ್ಲೆಯನ್ನು ದಡ ಸೇರಿಸಿದವರು ಆಟದಲ್ಲಿ ಗೆದ್ದಂತೆ ಎಂದು ನಿರ್ಧರಿಸುತ್ತಾರೆ. ಮಕ್ಕಳಲ್ಲಿ ಏಕಾಗ್ರತೆ, ಮತ್ತು ಒಂದು ಕಾಲಿನ ಮೇಲೆ ಜಿಗಿಯುವ ಮುಂತಾದ ಸಾಮರ್ಥ್ಯವನ್ನು ಉಂಟುಮಾಡುವಂತಹ ಆಟ ಇದು. ಮಕ್ಕಳು ಆಡುವಂತಹ ಆಟಗಳು ಇವಿಷ್ಟು ಮಾತ್ರವಲ್ಲದೆ ಇನ್ನೂ ಅನೇಕ ಆಟಗಳಿವೆ ಅವುಗಳು ಗೋಲಿ ಆಟ, ಲಗೋರಿ ಆಟ, ಬುಗುರಿ ಆಟ, ಚಾವೆ ಆಟ, ಆನೆಕಲ್ಲು ಆಟ, ಉಪ್ಪುಮೂಟೆ ಆಟ, ಮರಕೋತಿ ಆಟ, ಹನ್ನೆರಡುಗಾಳುಶಬ್ದ ಆಟ, ಮುಂತಾದುವು.

### ಮಹಿಳೆಯರು ಆಡುವ ಆಟಗಳು

ಗ್ರಾಮೀಣ ಆಟಗಳಲ್ಲಿ ಹೆಚ್ಚಾಗಿ ಮಕ್ಕಳ ಆಟಗಳೇ ಇದ್ದರೂ ಕೆಲವೊಂದು ಮಹಿಳೆಯರು ಆಡುವ ಆಟಗಳಿವೆ ಹಟ್ಟಿಯಲ್ಲಿ ಕೃಷಿಕೆಲಸವೆಲ್ಲಾ ಮುಗಿದು ಬೇಸಿಗೆಯ ಸಂದರ್ಭದಲ್ಲಿ ಯಾವುದೇ ಕೆಲಸಗಳಿಲ್ಲದೇ ಹಟ್ಟಿಯ ಮಹಿಳೆಯರು ಮನೆಗಳಲ್ಲಿ ಉಳಿದಿರುತ್ತಾರೆ, ಇಂಥಾ ಬಿಡುವಿನ ಸಂದರ್ಭಲ್ಲಿ ಶ್ರಮ ಸಂಸ್ಕೃತಿಯವರಾದ ಇವರು ಸುಮ್ಮನೆ ಮನೆಯಲ್ಲಿ ಕುಳಿತು ಕಾಲ ಕಳೆಯಲು ಇಷ್ಟಪಡುವುದಿಲ್ಲ. ಈ ಸಂದರ್ಭದಲ್ಲಿ ತಮ್ಮ ಬೇಸರವನ್ನು ಕಳೆಯಲು ಅಕ್ಕಪಕ್ಕದ ಮನೆಯ ಮಹಿಳೆಯರು ಸೇರಿ ಮನೆಯ ಜಗಲಿಯ ಕಟ್ಟೆಮೇಲೆ ಅಥವಾ ಪಡಸಾಲೆಯಲ್ಲಿ ಕುಳಿತು ಕೆಲವು ಆಟಗಳನ್ನು ಆಡುತ್ತಾ ಸಮಯ ಕಳೆಯುತ್ತಾರೆ. ಹಟ್ಟಿಯ ಜನಪದರು ಆಡುವ ಆಟಗಳನ್ನು ಈ ಕೆಳಗಿನಂತೆ ಒಂದೊಂದಾಗಿ ನೋಡೋಣ.

**ಹುಲಿಕಟ್ಟೆ ಆಟ**

ಮನೆಯ ಜಗಲಿ ಕಟ್ಟೆಯ ಮೇಲೆ ಅಥವಾ ಪಡಸಾಲೆ ಮೇಲೆ ಇದ್ದಿಲು ಅಥವಾ ಬಳಪದಿಂದ ತ್ರಿಭುಜಾಕೃತಿಯಲ್ಲಿ ಹದಿನೈದು ಮನೆಯ ಚಿತ್ರ ಬರೆದು ಆ ಮನೆಗಳಲ್ಲಿ ಮೂರು ದೊಡ್ಡಗಾತ್ರದ ಕಲ್ಲುಗಳನ್ನು ಇಡುತ್ತಾರೆ ಈ ಮೂರು ಕಲ್ಲುಗಳನ್ನು ಹುಲಿ ಎನ್ನುತ್ತಾರೆ, ಉಳಿದ ಹದಿಮೂರು ಮನೆಗಳಲ್ಲಿ ಹನ್ನೆರಡು ಸಣ್ಣ ಕಲ್ಲುಗಳನ್ನು ಇಡುತ್ತಾರೆ ಮತ್ತು ಒಂದು ಮನೆಯನ್ನು ಕಾಲಿ ಬಿಡುತ್ತಾರೆ ಕಾರಣ ಈ ಕಾಳುಗಳನ್ನು ಅತ್ತ ಇತ್ತ ಚಲಿಸಲು. ಈ ಹನ್ನೆರಡು ಸಣ್ಣ ಕಾಳುಗಳನ್ನು ಕುರಿ, ಹಸು ಎನ್ನುತ್ತಾರೆ. ಹುಲಿಕಟ್ಟೆ ಆಟವನ್ನು ಇಬ್ಬರು ಮಾತ್ರ ಆಡುತ್ತಾರೆ. ಹನ್ನೆರಡು ಕುರಿಗಳು ಮೂರು ಹುಲಿಗಳನ್ನು ಅಡ್ಡಗಟ್ಟಬೇಕು ಇದೇ ಈ ಆಟದ ಚಾಣಾಕ್ಷತೆ. ಸಣ್ಣಕಾಳಿನ ಪಕ್ಕ ಒಂದು ಮನೆ ಖಾಲಿಯಾದರೆ ಹುಲಿಕಾಳು ಸಣ್ಣಕಾಳನ್ನು ಕಡಿದು ಎತ್ತಿಕೊಳ್ಳುತ್ತಾರೆ. ಹುಳಿಕಾಳು ಸಣ್ಣಕಾಳನ್ನು ಕಡಿಯದ ಹಾಗೆ ಬುದ್ಧಿವಂತಿಕೆಯಿಂದ ಆಟ ಆಡಬೇಕು ಮತ್ತು ಹುಲಿಕಾಳುಗಳನ್ನು ಚಲಿಸದಂತೆ ನಿಲ್ಲಿಸಬೇಕು ಹೀಗೆ ಹುಲಿಯನ್ನು ನಿಲ್ಲಿಸಿದರೆ ಆಟ ಮುಕ್ತಾಯವಾಗುತ್ತದೆ ಮತ್ತು ಕುರಿಗಳು ಗೆದ್ದಂತೆ. ಈ ಆಟ ತುಂಬಾ ಚಾಣಾಕ್ಷತೆಯಿಂದ ಆಡುವಂತಹದ್ದಾಗಿದೆ ಇಂದಿನ ಚೆಸ್ ಆಟವನ್ನು ಇದು ಹೋಲುತ್ತದೆ. ಹುಲಿಕಟ್ಟೆ ಆಟವನ್ನು ಮಹಿಳೆಯರು ಮಾತ್ರವಲ್ಲದೆ ಮಕ್ಕಳು, ಪುರುಷರೂ ಆಡುತ್ತಾರೆ.

**ಚೌಕಾಬಾರ ಆಟ**

ಚೌಕಾಬಾರವು ಮಹಿಳೆಯರು ಆಡುವ ಆಟಗಳಲ್ಲೊಂದು. ಇದರಲ್ಲಿ ಅಡ್ಡಲಾಗಿ ಐದು ಮನೆ, ಉದ್ದವಾಗಿ ಐದು ಮನೆ ಬರೆಯುತ್ತಾರೆ. ಇದರ ಮಧ್ಯದಲ್ಲಿ ಒಂದು ಮನೆಗೆ ಇಂಟು ಆಕಾರದ ಗುರುತು ಹಾಕಿರುತ್ತಾರೆ. ಅದನ್ನು ಕಟ್ಟೆಮನೆ ಎಂದು ಕರೆಯುತ್ತಾರೆ. ಮಧ್ಯದಲ್ಲಿ ಹಣ್ಣುಮಾಡುವ ಕಟ್ಟೆ ಇರುತ್ತದೆ. ಇದೂ ಸಹ ಇಬ್ಬರು ಆಡುವ ಆಟವಾಗಿದ್ದು ನಾಲ್ಕು ಕವಡೆಗಳು ಅಥವಾ ಉಣುಸೆ ಬೀಜವನ್ನು ತಿಕ್ಕಿ ಮಾಡಿರುವ ಚಾವೆಗಳು ಮತ್ತು ಎಂಟು ಕಾಳುಗಳು ಬೇಕು. ಕವಡೆ ಹಾಕಿದಾಗ ಕವಡೆ ಮೇಲ್ಮುಖವಾಗಿ ಬಿದ್ದಿರುವುದನ್ನು ಲೆಕ್ಕಹಾಕಿ ಕಾಳುಗಳನ್ನು ಮನೆಗಳಿಗೆ ಇಡಲಾಗುತ್ತದೆ, ಇಬ್ಬರು ಒಬ್ಬರ ನಂತರ ಒಬ್ಬರು ಕವಡೆ ಹಾಕಿ ಕಾಳು ಇಟ್ಟು ಎದುರಾಳಿಯ ಕಾಳನ್ನು ಕಡಿಯುತ್ತಾರೆ. ಕಾಳು ಕಟ್ಟೆಮನೆಯಲ್ಲಿ ಇದ್ದಾಗ ಕಡಿಯುವಂತಿಲ್ಲ ಒಂದೇ ಕಟ್ಟೇಮನೆಯಲ್ಲಿ ಒಬ್ಬ ವ್ಯಕ್ತಿಯ ಕಾಳು ಮೂರಕ್ಕಿಂತ ಹೆಚ್ಚಿಗೆ ಇರುವಂತಿಲ್ಲ. ಇಬ್ಬರ ಕಾಳುಗಳೂ ಸಹ ಕಟ್ಟೆಮನೆಗಳಲ್ಲಿ ಜೊತೆಯಲ್ಲಿ ಇರಬಹುದು. ಎದುರಾಳಿಯ ಕಾಳನ್ನು ಕಡಿಯುವುದೇ ಕಡ್ತ ಸಿಗುವುದು ಎನ್ನುತ್ತಾರೆ. ಕಡ್ತ ಸಿಕ್ಕ ನಂತರ ಒಳಗಿನ ಕಟ್ಟೆಮನೆಗೆ ಸೇರಿಸಿ ತಮ್ಮ ಕಾಳುಗಳನ್ನು ಹಣ್ಣುಮಾಡುತ್ತಾರೆ. ತಮ್ಮ ಎಲ್ಲಾ ಕಾಳುಗಳು ಮೊದಲು ಯಾರವು ಹಣ್ಣಾಗುತ್ತವೋ ಅವರು ಗೆದ್ದಹಾಗೆ ಅಲ್ಲಿಗೆ ಆಟ ಮುಗಿಯುತ್ತದೆ.

**ಪುರುಷರು ಆಡುವ ಆಟಗಳು**

ಹಟ್ಟಿಯ ಜನಪದ ಕ್ರೀಡೆಗಳಲ್ಲಿ ಮಕ್ಕಳ ಆಟಗಳು, ಹೆಣ್ಣು ಮಕ್ಕಳು ಆಡುವ ಆಟಗಳಿರುವಂತೆ ಪುರುಷರೂ ಆಡುವ ಆಟಗಳಿವೆ. ಗಂಡುಮಕ್ಕಳು ಆಡುವ ಕ್ರೀಡೆಗಳಲ್ಲಿ ಶಾರೀರಿಕ ಶ್ರಮ ಮತ್ತು

ಬುದ್ಧಿಯ ಕಸರತ್ತು ಪ್ರಧಾನವಾಗಿರುತ್ತವೆ. ಜಾಣ್ಮೆ, ತಂತ್ರಗಾರಿಕೆ, ಸಾಹಸ, ಶಕ್ತಿ ಪ್ರಧಾನದ ಆಟಗಳು ಪ್ರಮುಖವಾಗಿರುತ್ತವೆ. ಗೂಳಿಕಾಳಗ, ತೆಂಗಿನ ಕಾಯಿಯನ್ನು ಬರಿಗೈಯಲ್ಲಿ ಗುದ್ದುವ ಆಟ, ಬಿಲ್ಲುಗಾರಿಕೆಯ ಆಟ, ಗುಂಡುಕಲ್ಲು ಎತ್ತುವುದು, ಕುಸ್ತಿ, ಕಾಲಿಗೆ ಕಲ್ಲು ಕಟ್ಟಿಕೊಂಡು ಎತ್ತುವುದು ಓಕುಳಿ ಆಟ, ಉಸುಕಿನ ಚೀಲ ಬೆನ್ನಿಗೆ ಕಟ್ಟಿಕೊಂಡು ಎತ್ತುವುದು ಮುಂತಾದ ಕ್ರೀಡೆಗಳನ್ನು ಹಬ್ಬ ಹರಿದಿನಗಳಲ್ಲಿ ಆಡುತ್ತಾರೆ. ಅಲ್ಲದೆ ಪ್ರತಿನಿತ್ಯ ಬಿಡುವಿನ ವೇಳೆಯಲ್ಲಿ ಗೋಲಿಯ ಆಟ, ಕಬ್ಬಡ್ಡಿ ಆಟ, ಪಗಡೆ ಆಟ, ಚದುರಂಗ ಆಟ, ಚಿನ್ನಿ ದಾಂಡು ಆಟ, ಮರಕೋತಿ ಆಟ, ಹುಲಿಮನೆ ಆಟ ಮುಂತಾದ ಆಟಗಳನ್ನು ಆಡುತ್ತಾರೆ. ಹೀಗೆ ಜನಪದ ಕ್ರೀಡೆಗಳು ಮನಸ್ಸಿಗೆ ಆಹ್ಲಾದವನ್ನು ಕೊಡುತ್ತವೆ ಮತ್ತು ಚಿಂತನೆ ಮಾಡಲು ಹಚ್ಚುತ್ತವೆ ಇತ್ತೀಚೆಗೆ ಗ್ರಾಮೀಣ ಕ್ರೀಡೆಗಳಲ್ಲಿ ಜನರಿಗೆ ಆಸಕ್ತಿ ಕಡಿಮೆಯಾಗುತ್ತಿದೆ. ಟಿ ವಿ, ಮೊಬೈಲ್, ಕ್ರಿಕೆಟ್, ವಾಲಿಬಾಲ್ ಇತ್ಯಾದಿ ಆಟಗಳು ಹಟ್ಟಿಯ ಯುವಪೀಳಿಗೆಯ ಆಸಕ್ತಿಗಳಾಗಿವೆ.

**ಬೈಗುಳಗಳು**

ಜನಪದದ ಅನೇಕ ಪ್ರಕಾರಗಳಲ್ಲಿ ಬೈಗುಳ ಕೂಡಾ ಒಂದಾಗಿದೆ. ಜನಪದ ಭಾಷಿಕ ಅಧ್ಯಯನದಲ್ಲಿ ಇದಕ್ಕೆ ಮಹತ್ವದ ಸ್ಥಾನವಿದೆ. ಬೈಗುಳಗಳು ತಲೆಮಾರಿನಿಂದ ತಲೆಮಾರಿಗೆ, ಬಾಯಿಂದ ಬಾಯಿಗೆ ಸಾಗಿ ಬಂದಿರುತ್ತವೆ. ಹಾಗೆ ಬರುವಾಗ ಕೆಲವು ಬದಲಾವಣೆ, ಬೆಳವಣಿಗೆಗಳನ್ನು ಪಡೆದುಕೊಳ್ಳುವುದು ಸಹಜ. ಬೈಗುಳಗಳನ್ನು ಯಾರು ಹುಟ್ಟುಹಾಕಿದರು ಎಂದು ಹೇಳಲಾಗದು, ಇವುಗಳು ಮೂಲದಲ್ಲಿ ಒಬ್ಬ ಅಜ್ಞಾತನೊಬ್ಬನಿಂದ ಸೃಷ್ಟಿಯಾದವುಗಳಾಗಿವೆ. ನಂತರ ಸಾರ್ವಜನಿಕರ ಮಾನ್ಯತೆ ಪಡೆದು ಸಮಾಜದಲ್ಲಿ(ಜನಪದರಲ್ಲಿ) ಬಳಕೆಯಾಗುತ್ತಾ ಎಲ್ಲರ ಸ್ವತ್ತಾಗಿ ಇಂದು ಎಲ್ಲರಲ್ಲೂ ಉಳಿದಿವೆ, ಆದ್ದರಿಂದ ಬೈಗುಳಗಳನ್ನು ಜಾನಪದವೆಂದು ನಮ್ಮ ಸಂಸ್ಕೃತಿಯ ಭಾಗವೆಂದು ಕರೆಯುತ್ತೇವೆ. ಬೈಗುಳಗಳನ್ನು ಯಾರು? ಯಾರಿಗೆ? ಯಾವ ಸಂದರ್ಭದಲ್ಲಿ ಬೈಯುತ್ತಿದ್ದಾರೆಂಬುದನ್ನು ಆಧರಿಸಿ ಅವುಗಳ ಸಾಂದರ್ಭಿಕ ಅರ್ಥ ವ್ಯತ್ಯಾಸಗೊಳ್ಳುತ್ತಾ ಹೋಗುತ್ತವೆ. ಜನಪದರು ಬಳಸುವ ಕೆಲವು ಅಶ್ಲೀಲವಾದ ಬೈಗುಳಗಳು ಎದುರಾಳಿಯನ್ನು ಮಾನಸಿಕವಾಗಿ ದುರ್ಬಲಗೊಳಿಸುವ ಇಲ್ಲವೆ ನೋಯಿಸುವ ಹೋರಾಟದ ಅಸ್ತ್ರವಾಗಿ ಬಳಕೆಯಾದರೆ, ಕೆಲವೊಮ್ಮೆ ಸ್ನೇಹ ಪ್ರೀತಿಯ ಆತ್ಮೀಯತೆ, ಮೆಚ್ಚುಗೆ, ವಿಶ್ವಾಸದ ರೂಪದಲ್ಲಿ ಸ್ನೇಹಿತರಿಗೆ, ಮಕ್ಕಳಿಗೆ ಬಳಕೆಯಾಗುವುದನ್ನು ನೋಡಬಹುದಾಗಿದೆ. ಬೈಗುಳಲ್ಲಿ ವಾಚ್ಯಾರ್ಥಕ್ಕಿಂತ ಅದರ ಸಾಂದರ್ಭಿಕ ಮತ್ತು ನಿಯೋಗಾತ್ಮಕ ಅರ್ಥಗಳೇ ಮುಖ್ಯವಾಗಿವೆ.

ಜನಪದರ ಶಬ್ದಭಂಡಾರದಲ್ಲಿ ಆಕರ್ಷಕ ಭಾಗವೇ ಬೈಗುಳ. ಜನರ ಲಕ್ಷ್ಯವನ್ನು ತಮ್ಮೆಡೆಗೆ ಸೆಳೆಯುವ ಶಕ್ತಿ ಈ ಬೈಗುಳಕ್ಕಿದೆ. ಬೈಗುಳ ಎನ್ನುವುದು ಕೆಟ್ಟ ಮಾತಲ್ಲ. ಕೆಟ್ಟ ಮಾತುಗಳೆಲ್ಲವೂ ಬೈಗುಳಗಳಲ್ಲ, ಬೈಗುಳಗಳನ್ನು ಅವುಗಳ ಅರ್ಥ, ಸಂದರ್ಭ, ಸ್ಥಳಗಳನ್ನಾಧರಿಸಿ ಹಲವು ಪ್ರಕಾರಗಳಾಗಿ ವಿಂಗಡಿಸಿಕೊಳ್ಳಬಹುದು.

* ಪ್ರೀತಿ, ಸ್ನೇಹ, ಸಲುಗೆಯ ಬೈಗುಳಗಳು.
* ಹಗೆತನ, ದ್ವೇಷದ ಬೈಗುಳಗಳು.
* ಲೈಂಗಿಕ ಕ್ರಿಯಾಸಂಬಂಧಿ ಬೈಗುಳಗಳು.

* ಅನೈತಿಕ ಸಂಬಂಧ ಬೈಗುಳಗಳು.
* ಶಾಪರೂಪದ ಬೈಗುಳಗಳು.
* ಮಕ್ಕಳ ಬೈಗುಳಗಳು.
* ಹೆಂಗಸರ ಬೈಗುಳಗಳು.
* ಗಂಡಸರ ಬೈಗುಳಗಳು.
* ಕ್ರಿಯಾತ್ಮಕ ಬೈಗುಳಗಳು.

**ಪ್ರೀತಿ, ಸ್ನೇಹ, ಸಲುಗೆಯ ಬೈಗುಳಗಳು**

ಇಲ್ಲಿ ತಿಳಿಸಹೊರಟ ಬೈಗುಳಗಳು ಅಶ್ಲೀಲ ಮತ್ತು ಕೆಟ್ಟ ಪದಗಳನ್ನು ಹೊಂದಿರುವ ಬೈಗುಳಗಳಾದರೂ ಸಹ ಈ ಬೈಗುಳಗಳನ್ನು ಹೆಚ್ಚಾಗಿ ತಮ್ಮ ಪ್ರೀತಿಗೆ ಪಾತ್ರರಾದವರನ್ನು ಪ್ರೀತಿ, ಸ್ನೇಹ, ಸಲುಗೆಯಿಂದ ಬೈಯುವುದನ್ನು ನೋಡಬಹುದು. ಈ ಬೈಗುಳಗಳಲ್ಲಿ ಆಯಾ ಸಂಧರ್ಭಕ್ಕೆ, ಸನ್ನಿವೇಶಕ್ಕೆ ಅರ್ಥ ಬದಲಾಗುತ್ತದೆ, ಅವುಗಳೆಂದರೆ,

ಉದಾಹರಣೆ: ನಿನ್ನವ್ವನ, ಮಳ್ಳ, ಹುಚ್ಚ, ಸೂಳೆಮಗ, ನಿನ್ನಜ್ಜಿ, ಇತ್ಯಾದಿ

**ಹಗೆತನ, ದ್ವೇಷದ ಬೈಗುಳಗಳು**

ಇಲ್ಲಿ ಹಗೆತನ, ದ್ವೇಷ, ಅಸೂಯೆಗಳಿಗೆ ಸಂಬಂಧಿಸಿದಂತೆ ಬೈಗುಳನ್ನು ಬೈಯುತ್ತಾರೆ. ಮರ್ಮಾಂಗಗಳನ್ನು ಅವುಗಳ ಮೇಲಿನ ಕೂದಲನ್ನು ಬಳಸಿಕೊಂಡು ಅವುಗಳ ಹೆಸರೇಳಿ ಬೈಯುವುದು ಮತ್ತು ಅವುಗಳನ್ನು ಉಪಯೋಗಿಸಿ ಅವುಗಳ ಹಿಂದೆ ನಿನ್ನ, ನನ್ನ ಎಂಬ ಪದವನ್ನು ಸೇರಿಸಿಕೊಂಡು ಬೈಯುತ್ತಾರೆ. ನಮ್ಮ ಸಮಾಜದಲ್ಲಿ ಜನರು ತಮ್ಮ ಮರ್ಮಾಂಗಗಳನ್ನು ಇತರರಿಗೆ ಕಾಣಬಾರದೆಂಬ ಅಥವಾ ತೋರಿಸಬಾರದೆಂಬ ಕಾರಣದಿಂದ ಉಡುಪು ಧರಿಸಿಕೊಂಡು ತಮ್ಮ ಮಾನ ಸಂಸ್ಕೃತಿ ಕಾಪಾಡಿಕೊಳ್ಳುತ್ತಾ ಬಂದಿರುವುದು ನಮ್ಮ ಸಂಸ್ಕೃತಿಯ ಕುರುಹು. ಹಾಗಾಗಿ ಅವುಗಳ ಒರಟಾದ ಹೆಸರುಗಳನ್ನು ಹೇಳಲು ಅಥವಾ ಕೇಳಲು ಯಾರೂ ಇಷ್ಟಪಡುವುದಿಲ್ಲ. ಆದರೆ ಅಂಥಾ ಕಟ್ಟುಪಾಡುಗಳನ್ನು ನಾವು ಮೀರಬಲ್ಲೆವು ಎಂಬ ಉದ್ಧಟತನವನ್ನು ಪ್ರದರ್ಶಿಸಿ ಎದುರಾಳಿಯನ್ನು ಮಾನಸಿಕವಾಗಿ ಘಾಸಿಗೊಳಿಸುವ ಉದ್ದೇಶ ಈ ಬೈಗುಳಗಲ್ಲಡಗಿದೆ.

ಉದಾಹರಣೆ: ನನ್ನವು ಒಂದು ಎರಡು ಅಂತ ಕಿತ್ಕೋತೀಯ, ಊರೆಲ್ಲಾ ಹರ್ಕೊಂಡ್ರು ನಾನು ಹೆದರಲ್ಲ, ನೀನು ನನ್ನ ... ಗೆ ಸಮಾನ, ನಿನ್ನ ನಾಲಿಗೆ ಕಿತ್ತು ಕೈಯಾಗೆ ಕೊಡ್ತಿನಿ, ನಿನ್ನ ಬಾಯಾಗೆ ಮಣ್ಣಾಕ, ನಿನ್ನ ಬಾಯಾಗ ನನ್ನ ಹಾಟಾಕ(ಉಚ್ಚೆ ಉಯ್ಯಾ) ಇತ್ಯಾದಿ.

**ಶಾಪರೂಪದ ಬೈಗುಳಗಳು**

ತಮಗೆ ಆಗದವರನ್ನು ಶಪಿಸಿ ಅವರು ಹಾಳಾಗಿ ಹೊಗಲಿ, ದೇವರು ಅವರನ್ನು ನೋಡಿಕೊಳ್ಳಲಿ ಮುಂತಾದ ಮಾತುಗಳು ಅಥವಾ ಬೈಗುಳನ್ನು ಶಾಪರೂಪದ ಬೈಗಳು ಎಂದು ಕರೆಯುತ್ತಾರೆ.

ಉದಾ: ನಿನ್ನ ನಾಲಗೆ ಸೇದಿ ಹೋಗಲಿ, ನಿನ್ನ ಕಣ್ಣು ಹಿಂಗಿ ಹೋಗಲಿ, ಬಾಯಾಗೆ ಹುಳ ಬೀಳಲಿ, ಹಾಳಾಗಿ ಹೋಗು, ನಿನ್ನ ಹೆಂಡತಿ ಮುಂಡೆಯಾಗಲಿ, ಮನೆಗೆ ಮುಳ್ಳು ಬಡಿಯಲಿ, ನಿನ್ನ ಸೆರಗ ಹರಿಯಲಿ ಇತ್ಯಾದಿ ಬೈಗಳು ಶಾಪರೂಪದ ಬೈಗಳಾಗಿವೆ.

**ಲೈಂಗಿಕ ಕ್ರಿಯಾ ಸಂಬಂಧಿ ಬೈಗುಳಗಳು**

ನಮ್ಮ ಸಮಾಜ ವಿವಾಹದ ಚೌಕಟ್ಟಿನಲ್ಲಿ ಗಂಡ-ಹೆಂಡತಿಯರಿಗೆ ಮಾತ್ರ ಲೈಂಗಿಕ ಸಂಬಂಧವನ್ನಿಟ್ಟುಕೊಳ್ಳಲು ಸಮ್ಮತಿಸುತ್ತದೆ. ಆದರೆ ಲೈಂಗಿಕವಾಗಿ ಇನ್ನಿತರ ವ್ಯಕ್ತಿಗಳೊಂದಿಗಿನ ಸಂಬಂಧವನ್ನು ಆರೋಪಿಸಿ ಆಡುವ ಮಾತುಗಳು ಬೈಗುಳ ಎನಿಸಿಕೊಂಡಿವೆ. ಕೌಟುಂಬಿಕ ಸಂಬಂಧಗಳಲ್ಲಿ ನಿಷೇಧಿತ ಸಂಬಂಧಗಳನ್ನು ಶಾಬ್ದಿಕವಾಗಿ ಸಾದ್ಯಪಡಿಸುವ ಬೈಗುಳ ಎದುರಾಳಿಯ ಮಾನಸಿಕ ಉದ್ವಿಗ್ನತೆಗೆ ಕಾರಣವಾಗುತ್ತದೆ. ಅಲ್ಲದೆ ಎದುರಾಳಿಯನ್ನು ಮಾನಸಿಕವಾಗಿ ಜರ್ಝರಿತರಾಗುವಂತೆ ಮಾಡುತ್ತದೆ. ಈ ಬೈಗುಳಗಳನ್ನು ಹಿರಿಯರಿಂದ ಕಿಶೋರರವರೆಗೆ ಹೆಚ್ಚಾಗಿ ಬಳಸುತ್ತಾರೆ. ಇವರು ಪ್ರೌಢಾವಸ್ಥೆಗೆ ತಲುಪುತ್ತಿರುವ ಹಾಗೆಯೇ ಇವರ ಮನಸ್ಸಿನಲ್ಲಿ ಸುಪ್ತವಾಗಿರುವ ಲೈಂಗಿಕ ಬಯಕೆಗಳು ಬೈಗುಳ ರೂಪದಲ್ಲಿ ಹೊರ ಬರುತ್ತವೆ. ಆದರೆ ಸಾಮಾನ್ಯವಾಗಿ ಸಮಾನ ವಯಸ್ಸಿನ ಮಕ್ಕಳು ಈ ರೀತಿ ಬೈಯುವುದನ್ನು ಗಮನಿಸಬಹುದು.

ಉದಾ: ಒಬ್ಬ ಅಪ್ಪನಿಗೆ ಹುಟ್ಟಿದವನಲ್ಲ ನೀನು, ಮಿಂಡ್ರಿಗೆ ಹುಟ್ಟಿದವನೆ, ಸೂಳೇಮಗನೇ, ಹಾದರಗಿತ್ತಿ ಮಗನೆ, ಇತ್ಯಾದಿ,

**ಮಕ್ಕಳ ಬೈಗುಳಗಳು**

ಹಿರಿಯರು ಮಕ್ಕಳಿಗೆ ಬುದ್ದಿ ಹೇಳುವ ಸಂದರ್ಭದಲ್ಲಿ ಅಥವಾ ಹೆದರಿಸುವ ಸಂದರ್ಭದಲ್ಲಿ ಕೆಲವೊಂದು ಬೈಗುಳಗಳನ್ನು ಬೈಯುವುದುಂಟು, ಅದರಲ್ಲೂ ಅತ್ತೆಯಂದಿರು ತಮ್ಮ ಅಳಿಯಂದಿರಿಗೆ ನಿನ್ನ ಬಾಯಾಗ ಮಣ್ಣಾಕ, ಪೋಲಿ ನನ್ನ ಹಾಟಗಳ್ಳ, ನಿನ್ನ ಬಾಯಾಗ ನನ್ನ ಹಾಟೊಯ್ಯ (ಹಾಟು=ಉಚ್ಚೆ) ಎಂಬ ಬೈಗುಳಗಳನ್ನು ಬೈಯುತ್ತಾರೆ.

**ಹೆಂಗಸರ ಬೈಗುಳಗಳು**

ನನ್ನ ಸವತಿ (ಅಂದರೆ ತನ್ನ ಗಂಡನ ಸೂಳೆ ಎಂದರ್ಥ) ಬೋಸುಡಿ, ಮೊಂಡ ರಂಡೆ, ಹಾದರಗಿತ್ತಿ, ಗಂಡಬಿಟ್ಟ ರಂಡೆ, ಊರಾದರಗಿತ್ತಿ, ಗೊಡ್ಡಿ (ಬಂಜೆ), ಊರ ಬೋಳಿ ಇತ್ಯಾದಿ.

**ಹೆಂಗಸರು ಗಂಡಸರಿಗೆ ಬೈಯುವ ಬೈಗುಳಗಳು**

ನಿನ್ನ ಹೆಂಡ್ತಿ ರಂಡ್ಯಾಗ, ನಿನ್ನ ಮನೆ ಮುರ್ದೋಗ, ಹೆಂಗಸರಂತವನೆ, ದೊಡ್ಡ ಗಂಡ್ಸು ನೀನು, ನಿನ್ನ ಹೆಜ್ಯಾಗ ಸಜ್ಜೆ ಬಿತ್ಲಿ, ನಿನ್ನ ಹೆಣ ಹೋರ್ಲಿ,

**ಗಂಡಸರು ಹೆಂಗಸರಿಗೆ ಬೈಯುವ ಬೈಗುಳಗಳು**

ಹಾದರಗಿತ್ತಿ, ಮಹಾ ಪತೀವ್ರತೆ ಇವ್ಳು, ನೀನೇನ್ ಕಿಸ್ಯಾಕೆ ಬಂದಿಯಾ, ತುಡುಗಿ, ಲೇ ರಂಡಿ, ಬೊಸುಡಿ, ಊರ ಸೂಳೆ, ಹಲ್ಕಟ್ ಹೆಣ್ಣೆ ಮುಂತಾದವು.

**ಸಾವು ಸಂಬಂಧಿ ಬೈಗುಳಗಳು**

ಸಾಮಾನ್ಯವಾಗಿ ಸಾವಿನ ಶಬ್ದ ಕೇಳಿದರೆ ಮನುಷ್ಯ ಹೆದರುತ್ತಾನೆ ಆದ್ದರಿಂದ ಗ್ರಾಮೀಣ ಜನರು ತಮ್ಮ ವಿರೋಧಿಗಳಿಗೆ ಬೈಯುವಾಗ ಸಾವನ್ನ ಪರ್ಯಾಯವಾಗಿ ಸೂಚಿಸಿ ಬೈಯುತ್ತಾರೆ.

ಉದಾಹರಣೆ: ನಿನ್ನ ಬಾಯಾಗೆ ಮಣ್ಣಾಕ್ಲಿ, ನೀ ಸೆಟದು ಹೋಗು, ನಿನ್ನ ಹೆಜ್ಯಾಗ ನವಣೆ ಬಿತ್ಲಿ, ನಿನ್ನ ಎದಿ ಮ್ಯಾಲೆ ಕಲ್ಲಿಡ್ಲಿ, ನಿನ್ನ ಮಾರಿ ಮಣ್ಣಾಗ್ಲಿ, ನಿನ್ನ ಹೆಂಡ್ತಿ ರಂಡ್ಯಾಗ್ಲಿ, ನಿನ್ನ ಹೆಣ ಸಿಂಗಾರ ಮಾಡ್ಲಿ, ಇತ್ಯಾದಿ. ಇಲ್ಲಿ ಎದುರಾಳಿ ಗಂಡಸಾಗಿದ್ದಾಗ ಆತನ ಸಾವನ್ನ ಹೆಂಡತಿಯ ವೈಧವ್ಯದ ಮೂಲಕ ಹೇಳಲಾಗುತ್ತದೆ. ಹಾಗೆಯೇ ಅವನ ಸಾವಿನ ನಂತರ ಹೆಣ ಹೂಳಿ ಸಮಾಧಿ ಮಾಡಿದ ಮೇಲೆ ಆ ಹೆಣವನ್ನು ನಾಯಿ ನರಿಗಳು ಹೊರ ಎಳೆಯಬಾರದೆಂದು ಹೆಣದ ಎದೆಭಾಗದಲ್ಲಿ ಮುಳ್ಳು ಅಥವಾ ಬಂಡೆಯನ್ನು ಹಾಕುತ್ತಾರೆ ಆದ್ದರಿಂದ ಇದನ್ನೇ ಸಾಂಕೇತಿಕವಾಗಿ ನಿನ್ನ ಎದೆಮ್ಯಾಲೆ ಕಲ್ಲಿಡ್ಲಿ ಎಂದು ಬೈಯುತ್ತಾರೆ.

**ಜಾತಿ ಸೂಚಕ ಬೈಗುಳಗಳು**

ಸಮಾಜವೇ ಸೃಷ್ಟಿಸಿಕೊಂಡಿರುವ ಜಾತಿಗಳನ್ನು ಮೇಲು, ಕೀಳು ಎಂದು ಗುರುತಿಸಿಕೊಂಡಿದ್ದು ಆ ಜಾತಿಗಳಲ್ಲಿ ಕೆಳಸ್ಥರದಲ್ಲಿರುವ ಜಾತಿಗಳನ್ನು ಬೈಗುಳಗಳನ್ನಾಗಿ ಬಳಸುವುದನ್ನು ನೋಡಬವುದು.

ಉದಾಹರಣೆ: ದನಾ ತಿನ್ನುವವನೇ, ಚಾಂಡಾಲ, ಹೊಲೆಯಾ, "ಸಾಮಾನ್ಯವಾಗಿ ವರ್ಣಾಶ್ರಮ ಧರ್ಮದ ವ್ಯವಸ್ಥೆಯನ್ನನುಸರಿಸಿ ಈ ಬೈಗುಳಗಳು ರೂಢಿಗೆ ಬಂದಿವೆ. ಮೇಲು ವರ್ಗದವರು ತಮ್ಮ ಜಾತಿಯ ವ್ಯಕ್ತಿಯನ್ನು ಬೈಯುವಾಗ ಇಂಥ ಪದಗಳನ್ನು ಬಳಸುವುದುಂಟು"[೬]. ಮೇಲು ವರ್ಗದವರಲ್ಲಿ ಇವು ನಿಸಿದ್ದವಾದುವು ಆದರೂ ಅವರೇ ಈ ಬೈಗುಳನ್ನು ಬಳಸುವುದನ್ನು ಗಮನಿಸಬಹುದು. ಈ ಬೈಗುಳಗಳಿಂದ ಸಮಾಜದಲ್ಲಿನ ಜಾತೀಯತೆಯ ಕ್ರೂರತೆಯನ್ನು ತಿಳಿಯಬಹುದಾಗಿದೆ.

**ಕ್ರಿಯಾತ್ಮಕ ಬೈಗುಳಗಳು**

ಪರಸ್ಪರರು ಜಗಳವಾಡುವಾಗ ಎದುರಾಳಿಯ ಮನೆಯ ಮುಂದೆ ನಿಂತು ಬೊಗಸೆಯಲ್ಲಿ ಮಣ್ಣು ತೂರುವುದು (ನಿನ್ನ ಮನೆ ಹಾಳಾಗಲಿ ಎಂದು ಅದರ ಅರ್ಥ), ಹಾಗೆಯೇ ಸಂಭೋಗ ಕ್ರಿಯೆಯನ್ನು ಕೈಗಳಲ್ಲಿ ಅನುಕರಿಸಿ ತೋರಿಸುವುದು. ಅಲ್ಲದೆ ಕಾಲು ತೋರಿಸುವುದು, ಕೈಯಲ್ಲಿ ಚಿಟಕಿ ಮುರಿಯುವುದು, ಮರ್ಮಾಂಗದ ಮೇಲಿನ ಕೂದಲನ್ನು ಕಿತ್ತಂತೆ, ಗಾಳಿಗೆ ತೂರಿದಂತೆ ಅಭಿನಯಿಸುವುದು. ಇಲ್ಲಿ ಮಾತು ಇಲ್ಲವಾದರೂ ಕೆಲವೊಮ್ಮೆ ಇವು ಕೂಡಾ ಪರಿಣಾಮಕಾರಿ ಬೈಗುಳಾಗಿ ಕಾರ್ಯ ನಿರ್ವಹಿಸುತ್ತವೆ. ಒಟ್ಟಾರೆ ಬೈಗುಳಗಳು ಇಂದು ಕೇವಲ ಗ್ರಾಮೀಣ ಪ್ರದೇಶದ ಜನರಲ್ಲಿ ಮಾತ್ರ ಬಳಕೆಗೊಳ್ಳದೆ ನಗರಗಳಲ್ಲೂ ಬಳಕೆಯಾಗುತ್ತಿವೆ. ಇವು ಮನುಕುಲದ ಜೊತೆಗೆ ಮುಂದೆಯೂ ಉಳಿಯುತ್ತವೆ.

**ಜನಪದ ಕಥೆಗಳು**

ಜನಪದ ಸಾಹಿತ್ಯದಲ್ಲಿ ಮೌಖಿಕ ಪರಂಪರೆಯನ್ನು ಹೆಚ್ಚಾಗಿ ಹೊಂದಿರುವುದು ಜನಪದ ಕಥೆಗಳು. ಇವು ತುಂಬಾ ಸರಳವಾಗಿ ಬಾಯಿಂದ ಬಾಯಿಗೆ ಬರುವಂಥವುಗಳಾಗಿವೆ. ಕಥೆ ಹೇಳುವುದು

ಒಂದು ಕಲೆ. "ಕಥೆಗಳು ಎಲ್ಲಾ ಕಾಲಗಳಲ್ಲಿಯೂ ಪ್ರಚಲಿತದಲ್ಲಿವೆ. ಕಥೆಗಳು ಪ್ರಾಚೀನ ಕಾಲದ ಜ್ಞಾನಸಂಗ್ರಹಾಲಯವೂ ಹೌದು"[೭]. ಕಥೆಗಳು ಮನುಷ್ಯನಿಗೆ ಮನೋರಂಜನೆಯನ್ನು ನೀಡುವುದರ ಜೊತೆಗೆ ಸಾಹಸದ ಗುಣಗಳನ್ನು, ಸಾಮಾಜಿಕ ಜ್ಞಾನವನ್ನು, ನೀಡುತ್ತವೆ. ತಲೆಮಾರಿನಿಂದ ತಲೆಮಾರಿಗೆ, ಬಾಯಿಂದ ಬಾಯಿಗೆ ಸಾಗಿಬರುವ ಕಥೆಯನ್ನು ಜನಪದ ಕಥೆ ಎನ್ನುತ್ತಾರೆ. ಜನಪದ ಕಥೆಗಳು ಮೂಲತಃ ಮಾನವನ ವೈಯಕ್ತಿಕ ಹಾಗೂ ಸಾಮಾಜಿಕ ಅವಶ್ಯಕತೆಯ ಫಲಗಳು ಮುಖ್ಯವಾಗಿ ಪುರಾತನ ಸಂಸ್ಕೃತಿ ಮತ್ತು ಪರಂಪರೆಯ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತವೆ. ಹೊಸ ಸಂಸ್ಕೃತಿಯ ನಿರ್ಮಾಣಕ್ಕೆ ಯುಕ್ತ ಹಿನ್ನೆಲೆಯನ್ನು ಒದಗಿಸುತ್ತವೆ. "ಕಥಾನಿರೂಪಕನ ಕಲ್ಪನೆ ಶ್ರೋತೃಗಳ ಕುತೂಹಲವನ್ನು ಒಂದೇ ಸಮಾನವಾಗಿ ಒಟ್ಟೊಟ್ಟಾಗಿ ಸಾಗಿ ಬರುವಂತೆ ಮಾಡುವ ವಿಶಿಷ್ಟ ಮೌಖಿಕ ಪ್ರಕಾರವೇ ಜನಪದ ಕಥೆ"[೮]. ಕಥೆಗಳನ್ನು ಹೇಳುವ ಮತ್ತು ಕೇಳುವ ಪ್ರವೃತ್ತಿ ಮಾನವ ಸಮಾಜದಷ್ಟೇ ಪುರಾತನವಾದದ್ದು. ನಿತ್ಯದ ದುಡಿಮೆಯ ಶ್ರಮವನ್ನು ಮರೆಯಲು ಬಿಡುವಿನ ವೇಳೆಯನ್ನು ನಿರಾಳವಾಗಿ ಕಳೆಯಲು ಏಕತಾನದ ಬದುಕಿಗೆ ರಂಜನೆಯನ್ನು ದೊರಕಿಸಿಕೊಡಲು ಹೀಗೆ ಉದ್ದೇಶಗಳ ಹಿನ್ನೆಲೆಯಲ್ಲಿ ಮನುಷ್ಯನು ಕಥೆ ಹೇಳುವ ಕಲೆಯನ್ನು ರೂಢಿಸಿಕೊಂಡ. ಸಾಮಾನ್ಯವಾಗಿ ಜನಪದ ಕಥೆಗಳನ್ನು 'ಅಜ್ಜಿ ಕಥೆ' ಎಂದೇ ಕರೆಯುತ್ತಾರೆ. ಏಕೆಂದರೆ ಕಥೆ ಹೇಳುವ ವಿಷಯದಲ್ಲಿ ಅಜ್ಜಿಯರನ್ನು ಮೀರಿಸುವವರಿಲ್ಲ. ಆದರೂ ಕಥೆ ಹೇಳಲು, ಕೇಳಲು ಪುರುಷರು, ಮಹಿಳೆಯರು, ವೃದ್ಧರು, ಬಾಲಕರು ಎಂಬ ಭೇದವೇನಿಲ್ಲ ಜಗತ್ತಿನಲ್ಲಿ ಮನುಷ್ಯರಿರುವ ಕಡೆಯಲ್ಲೆಲ್ಲಾ ಈ ಕ್ರಿಯೆ ಏಕಪ್ರಕಾರವಾಗಿ ಕಂಡುಬಂದಿದೆ.

"ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಪ್ರಚಲಿತವಿರುವ ಜನಪದ ಕಥೆಗಳಲ್ಲಿ ಏಕರೂಪತೆ ಇರುವಂತೆ ಭಿನ್ನತೆಗಳೂ ಇವೆ, ಮೌಖಿಕವಾಗಿ ಸಾಗಿ ಬರುವುದರಿಂದ ಅವು ನಿರಂತರವಾಗಿ ಬದಲಾವಣೆಗೊಳ್ಳುತ್ತಲೇ ಇರುತ್ತವೆ. ಅವು ಬೇರೆ ಬೇರೆ ಕಾಲ ಮತ್ತು ಪ್ರದೇಶಗಳಲ್ಲಿ ಬದುಕಬೇಕಾದ್ದರಿಂದ ಭೌಗೋಳಿಕವಾಗಿ ವ್ಯತ್ಯಾಸಕ್ಕೊಳಗಾಗುವುದು ಸರ್ವೇಸಾಮಾನ್ಯ"[೯]. ಮೌಖಿಕ ಸಾಹಿತ್ಯದಲ್ಲಿ ಜನಪದ ಕಥೆಗಳೇ ಹೆಚ್ಚು ಜನಪ್ರಿಯವಾದ ಪ್ರಕಾರ. ಕಥೆಗಳ ವಿಶಿಷ್ಟ ಲಕ್ಷಣವೆಂದರೆ ಕಥೆ ಬಲ್ಲವರಿಂದ ಕಥೆಯನ್ನು ಕೇಳಿಯಾದ ಮೇಲೆ ಅದನ್ನು ಹೇಳುವ ಸಂದರ್ಭ ಪ್ರಾಪ್ತವಾದಾಗ ಅದನ್ನು ಹೇಗೆ ನೆನಪಿನಲ್ಲುಳಿಸಿಕೊಳ್ಳಲಾಗುತ್ತದೋ ಅಂತೆಯೇ ಅದನ್ನು ಪುನರುಚ್ಚರಿಸಲಾಗುತ್ತದೆ. ಆ ಪುನರುಚ್ಚಾರಕ್ಕೆ ಆಯಾ ಕಥೆಗಾರನ ನೆನಪಿನ ಶಕ್ತಿ, ಕಲ್ಪನಾ ಸಾಮರ್ಥ್ಯ, ಅನುಭವಗಳಿಗನುಗುಣವಾಗಿ ಬೆಳೆಯುತ್ತಾ ಸಾಗುತ್ತದೆ ಈ ಸಂದರ್ಭದಲ್ಲಿ ಮೂಲ ಕಥೆಯಲ್ಲಿರಬಹುದಾದ ಕೆಲವು ಅಂಶಗಳು ಕೈಬಿಟ್ಟು ಹೋಗಬಹುದು, ಹೊಸ ಅಂಶಗಳು ಸೇರಿಕೊಳ್ಳಬಹುದು.

ಕಂಪಳದೇವರ ಹಟ್ಟಿಯ ಮ್ಯಾಸಬೇಡರಲ್ಲಿ ಅನೇಕ ಜನಪದ ಕಥೆಗಳು ರೂಢಿಯಲ್ಲಿವೆ. ಜನಪದ ಸಾಹಿತ್ಯದಲ್ಲಿ ಕಥೆಗಳಿಗೆ ವಿಶಿಷ್ಟವಾದ ಸ್ಥಾನವಿದೆ. ಇವರಲ್ಲಿನ ಕಥೆಗಳೇ ಅವರ ಸಾಮಾಜಿಕ ಜೀವನ ಪದ್ಧತಿ, ಸಮುದಾಯದ ಮೂಲ ಪುರುಷ ಹುಟ್ಟಿದ್ದುದರ ಬಗ್ಗೆ, ಕುಲಬಳಿಗಳ ಬಗ್ಗೆ ಮುಂತಾದುವುಗಳ ಕುರಿತು ತಿಳಿಸುವಂತಹವುಗಳಾಗಿವೆ. ಇವರಲ್ಲಿ ಲಭ್ಯವಿರುವ ಕಥೆಗಳಲ್ಲಿ ಸಮುದಾಯದ ಮೂಲ

ಪುರುಷ ಹುಟ್ಟಿದ್ದು, ಚೆಂಚುಲಕ್ಷ್ಮಿ ನರಸಿಂಹನನ್ನು ಮದುವೆಯಾಗಿದ್ದು ಕುಲ ಬೆಡಗುಗಳು ಹುಟ್ಟಿಕೊಂಡಿದ್ದು, ಎಳೆ ಕರುವಿನ ಕಾಲು ಮುರಿದು ತಿಂದು ಬ್ಯಾಡನಾಗಿದ್ದು, ಹನ್ನೆರಡು ಪೆಟ್ಟಿಗೆ ದೇವರುಗಳು ಬಂದಿದ್ದು, ಕಟ್ಟೆಮನೆಗಳ ಕಾರ್ಯ, ಆಹಾರ ಪದ್ಧತಿಯಲ್ಲಿನ ವಿಧಿನಿಷೇಧ, ಬೇಟೆ ಮತ್ತು ಬೇಡರು, ಕೊಳಗಲಿ ಬೊಮ್ಮ, ಯರಮಂಚನಾಯಕ ಮುಂತಾದವರ ಕುರಿತು ಸಾಕಷ್ಟು ಕಥೆಗಳು ದೊರೆಯುತ್ತವೆ.

**ಅಡಿಟಿಪ್ಪಣಿ**

೧. ದೇವರ ಕುರಿ ಓಬಯ್ಯ, ೨೦೦೮, ಮ್ಯಾಸಬೇಡರ ಸಾಂಸ್ಕೃತಿಕ ಆತ್ಮಕಥನ, ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೧೬.

೨. ನಾಗೇಗೌಡ ಎಚ್ ಎಲ್(ಸಂ), ೧೯೮೬, ಜಾನಪದ ಗಂಗೋತ್ರಿ, ಕೃಷ್ಣಕುಮಾರ್(ಲೇ), ಗಾದೆ, ಒಗಟು ಮತ್ತು ಒಡಪು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೨.

೩. ಭಾಸ್ಕರ್ ಟಿ ಎಂ, ೨೦೦೦, ಸುಡುಗಾಡು ಸಿದ್ದರು:ಒಂದು ಸಾಂಸ್ಕೃತಿಕ ಅಧ್ಯಯನ, ಪುಟ-೨೨೭

೪. ಶಿವರಾಮು ವಿ ಎಸ್, ೧೯೯೩, ಕರ್ನಾಟಕದ ಒಡಪುಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-ಪ್ರಸ್ತಾವನೆ.

೫. ರಂಗಾರೆಡ್ಡಿ ಕೋಡಿರಾಂಪುರ(ಸಂ), ೧೯೯೫, ಜಾನಪದ, ಡಾ ಬಸವರಾಜ ಮಲಶೆಟ್ಟಿ(ಲೇ), ಜನಪದ ಕಲೆಗಳ ಪರಿಷ್ಕರಣ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೧೦೭.

೬. ರಾಮಣ್ಣ ಸಿದ್ದರಾಯಪ್ಪ ದೊಡ್ಡನಿಂಗಪ್ಪಗೋಳ, ೨೦೧೨, ಕೊಟ್ಟಲಗಿ ಗ್ರಾಮ: ಸಾಂಸ್ಕೃತಿಕ ಸಂಕಥನ, ಅಪ್ರಕಟಿತ ಪಿ ಎಚ್ ಡಿ. ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೩೩೫.

೭. ಜವರೇಗೌಡ ದೇ, ೧೯೭೬, ಜಾನಪದ ಅಧ್ಯಯನ, ಕೃಷ್ಣಮೂರ್ತಿ ಪುರರಿ, ಮೈಸೂರು, ಪುಟ-೬೮.

೮. ರಾಮಣ್ಣ ಸಿದ್ದರಾಯಪ್ಪ ದೊಡ್ಡನಿಂಗಪ್ಪಗೋಳ, ೨೦೧೨, ಕೊಟ್ಟಲಗಿ ಗ್ರಾಮ: ಸಾಂಸ್ಕೃತಿಕ ಸಂಕಥನ, ಅಪ್ರಕಟಿತ ಪಿ ಎಚ್ ಡಿ. ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೩೦೫.

೯. ಅದೇ, ಪುಟ-೩೦೬.

# ಅಧ್ಯಾಯ: ಆರು
# ಪ್ರಸ್ತುತ ಸಂದರ್ಭದಲ್ಲಿ ಹಟ್ಟಿಯ ಸ್ಥಿತ್ಯಂತರ

೬.೧ ಸಾಮಾಜಿಕ ಸ್ಥಿತ್ಯಂತರ

೬.೨ ಶೈಕ್ಷಣಿಕ ಸ್ಥಿತ್ಯಂತರ

೬.೩ ರಾಜಕೀಯ ಸ್ಥಿತ್ಯಂತರ

೬.೪ ಸಾಂಸ್ಕೃತಿಕ ಸ್ಥಿತ್ಯಂತರ

೬.೫ ಆರ್ಥಿಕ ಸ್ಥಿತ್ಯಂತರ

# ಅಧ್ಯಾಯ: ಆರು

# ಪ್ರಸ್ತುತ ಸಂದರ್ಭದಲ್ಲಿ ಹಟ್ಟಿಯ ಸ್ಥಿತ್ಯಂತರ

## ಪ್ರಸ್ತಾವನೆ

ಮಾನವ ಸಮಾಜ ನಿತ್ಯ ಪರಿವರ್ತನಾಶೀಲವಾದುದು ಚಲನಶೀಲವಾದುದು, ಅದು ನಿರಂತರ ಬದಲಾವಣೆಗೆ ಒಳಗಾಗುತ್ತಿರುತ್ತದೆ. ಬದಲಾವಣೆಯು ಆಯಾ ಸಮುದಾಯಗಳ, ಸಮಾಜದ ಜೀವಂತಿಕೆಯ ಲಕ್ಷಣವಾಗಿದೆ ಮಾನವ ಸಮಾಜ ಆದಿಮ ಸ್ಥಿತಿಯಿಂದ ಇವತ್ತಿನ ತಾಂತ್ರಿಕತೆಯ ಯುಗದವರೆಗೆ ಹಲವು ಸ್ಥಿತ್ಯಂತರಗಳಿಗೆ ಒಳಗಾಗುತ್ತಾ ಬಂದಿದೆ. ಆದಿಮ ಸ್ಥಿತಿಯಲ್ಲಿದ್ದ ಮಾನವ ಬೆಂಕಿಯನ್ನು ಕಂಡು ಹಿಡಿದದ್ದು ಮನುಷ್ಯಕುಲದ ಇತಿಹಾಸದಲ್ಲಿ ಒಂದು ಹೊಸಯುಗಕ್ಕೆ ನಾಂದಿಯಾದಂತೆ, ವಿದ್ಯುತ್ ಉತ್ಪಾದನೆ ವಿಜ್ಞಾನಯುಗದ ಇನ್ನೊಂದು ಪ್ರಮುಖ ಘಟ್ಟ, ಬೆಂಕಿ ಮತ್ತು ವಿದ್ಯುತ್ ನಡುವಿನ ಎರಡು ಸ್ಥಿತಿಗಳನ್ನು ಉಳಿಸಿಕೊಂಡಿರುವ ಭಾರತದ ಜನಜೀವನವನ್ನು ಕುರಿತು ನಮ್ಮ ಗಿರಿಜನರು ಇನ್ನೂ ಬೆಂಕಿಯ ಸ್ಥಿತಿಯಲ್ಲೇ ಮುಂದುವರಿದಿದ್ದಾರೆ, ಅಲ್ಲದೆ ಆಧುನಿಕತೆಯ ವಿದ್ಯುತ್ ಸ್ಥಿತಿಯಲ್ಲೂ ಇದ್ದಾರೆ ಎಂದು ಪ್ರಸ್ತುತ ಸಮಾಜದ ಅರಣ್ಯವಾಸಿ, ಹಟ್ಟಿ ಸಂಸ್ಕೃತಿಯ ಸಮಾಜವನ್ನು, ಪಟ್ಟಣ, ನಗರ, ಆಧುನಿಕತೆಯ ಸಮಾಜವನ್ನು ಕುರಿತು ಸಾಂಸ್ಕೃತಿಕವಾಗಿ ಹೇಳಿರುವ ಹಿ ಚಿ ಬೋರಲಿಂಗಯ್ಯನವರ ಮಾತು ತುಂಬಾ ಮಹತ್ವಪೂರ್ಣವಾದದ್ದು. ಪ್ರಸ್ತುತ ಭಾರತೀಯ ಸಮಾಜ ಇಂಥ ಅತಂತ್ರ ಸ್ಥಿತಿಯಲ್ಲಿ ಬದುಕುತ್ತಿದೆ. ಆಧುನಿಕ ಮಾನವ ಇಂದು ಎಷ್ಟೋ ವಿಷಯಗಳಲ್ಲಿ ವೇಗವಾಗಿ ಸಾಗುತ್ತಿದ್ದಾನೆ. ಮಂಗಳ ಗ್ರಹ, ಚಂದ್ರ ಗ್ರಹಗಳಲ್ಲಿ ವಾಸ ಮಾಡಲು ಹೊಸ ಅನ್ವೇಷಣೆಗಳನ್ನು ಮಾಡುತ್ತಿದ್ದಾನೆ ಆದರೆ ನಮ್ಮ ಬುಡಕಟ್ಟು ಸಮುದಾಯಗಳ ವಾಸ್ತವದ ಬದುಕಿನ ಕಡೆ ಗಮನಹರಿಸಿದರೆ ಭಾರತೀಯ ಸಮಾಜ ಅಷ್ಟೇ ಹಿಂದೆ ಹೆಜ್ಜೆಗಳನ್ನು ಹಾಕುತ್ತಿದೆ ಎಂದೆನಿಸುತ್ತದೆ.

ಎಷ್ಟೋ ಬುಡಕಟ್ಟುಗಳು ಇನ್ನೂ ಕೂಡ ಆದಿಮ ಸ್ಥಿತಿಯಲ್ಲೇ ಜೀವನ ನಡೆಸುತ್ತಿದ್ದಾರೆ. ಕೆಲವೊಂದು ಬುಡಕಟ್ಟುಗಳು ಆಧುನಿಕ ವಿದ್ಯಮಾನಗಳೊಂದಿಗೆ ಮುಖಾಮುಖಿಯಾಗುತ್ತಾ ತಮ್ಮ ಬದುಕನ್ನು

ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿವೆ. ಈ ಸಾಲಿನಲ್ಲಿ ಮ್ಯಾಸಬೇಡ ಬುಡಕಟ್ಟು ಸಮುದಾಯವೂ ಸಹ ತನ್ನಲ್ಲಿನ ಹಳೆಯದನ್ನು ಬಿಡುವ, ಹೊಸದನ್ನು ತನ್ನದಾಗಿಸಿಕೊಳ್ಳುವಲ್ಲಿ ತುದಿಗಾಲ ಮೇಲೆ ನಿಂತಿದೆ. ಆದರೆ ಅದು ಸುಲಭ ಸಾಧ್ಯವಲ್ಲ, ಗತದ ಜೀವನದ ಚರಿತ್ರೆಯ ಹೆಜ್ಜೆಗಳ ಅರಿವನ್ನು ವರ್ತಮಾನದಲ್ಲಿ ನೆನಪಿಸಿಕೊಳ್ಳುತ್ತಾ ಭವಿಷ್ಯತ್ತಿನ ಕನಸಿನ ದಿನಗಳ ಬದುಕಿಗಾಗಿ ಬಹು ಎಚ್ಚರಿಕೆಯಿಂದ ಎಲ್ಲಾ ಸಮುದಾಯಗಳು ಹೆಜ್ಜೆ ಹಾಕುತ್ತಿವೆ.

ಹತ್ತೊಂಬತ್ತನೆಯ ಶತಮಾನ ಭಾರತೀಯ ಸಮಾಜವನ್ನು ಸತ್ವಪರೀಕ್ಷೆಗೆ ಒಡ್ಡಿದ ಕಾಲಮಾನ ವಸಾಹತು ಆಡಳಿತದ ಜೊತೆಗೆ ಬಂದ ಶಿಕ್ಷಣ ಆಧುನಿಕ ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಾಕಷ್ಟು ಪ್ರಭಾವ ಬೀರಿದೆ. ಕೈಗಾರೀಕರಣ ಪ್ರಭಾವವೂ ಕೂಡ ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಹಕಾರಿಯಾಗಿದೆ. ಇಂಥ ಬದಲಾವಣೆಗಳಿಗೆ ಒಳಗಾದ ಭಾರತದ ಅದರಲ್ಲೂ ಕರ್ನಾಟಕದಲ್ಲಿ ನೆಲೆ ನಿಂತಿರುವ ಬುಡಕಟ್ಟುಗಳಿಗೆ ಆಧುನೀಕರಣದ ಪ್ರಭಾವ ನುಂಗಲಾರದ ಬಿಸಿ ತುಪ್ಪದಂತಾಗಿದೆ ಪರಂಪರೆಯಿಂದ ನಂಬಿಕೊಂಡು ಬಂದ ವೃತ್ತಿಗಳಿಗೆ ಹಾಗೂ ಜೀವನ ಮೌಲ್ಯಗಳಿಗೆ ಆಧುನಿಕತೆಯ ಬಿರುಗಾಳಿ ಗೊಂದಲಕ್ಕೀಡು ಮಾಡಿದೆ. ಸುಮಾರು ವರ್ಷಗಳ ಹಿಂದೆ ಆಂಧ್ರದಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿರುವ ಇವರು ಇಂದು ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು ಸ್ವಾವಲಂಬನೆಯಿಂದ ತಮ್ಮದೇ ಆದ ಸ್ವತಂತ್ರ ಬದುಕನ್ನು ಕಟ್ಟಿಕೊಂಡಿದ್ದಾರೆ. ತಮ್ಮ ಸ್ವಂತ ದುಡಿಮೆಯ ಫಲದಿಂದ ಹಟ್ಟಿಗಳಲ್ಲಿ ಅಥವಾ ಗ್ರಾಮಗಳಲ್ಲಿ ಗುಡಿಸಲು ಮನೆ, ಮಾಳಿಗೆ ಮನೆ, ಹೆಂಚಿನ ಮನೆ, ಜೆಂಕ್‌ಶೀಟ್ ಮನೆ, ಹಾಗೂ ಆರ್ ಸಿ ಸಿ ಮನೆಗಳನ್ನು ಕಟ್ಟಿಕೊಂಡು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ತಮ್ಮ ಜೀವನದ ನಿರ್ವಹಣೆಗಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡು ಬದುಕನ್ನು ಕಟ್ಟಿಕೊಂಡಿದ್ದಾರೆ. ಅಂದು ಇವರು ಬಳಸುತ್ತಿದ್ದ ದಿನಬಳಕೆ ವಸ್ತುಗಳಾದ ಮಣ್ಣಿನ ಪಾತ್ರೆಗಳ ಸ್ಥಾನವನ್ನು ಹಿತ್ತಾಳೆ, ಅಲ್ಯೂಮಿನಿಯಂ, ಪಿಂಗಾಣಿ, ಸ್ಟೀಲ್ ಪಾತ್ರೆಗಳು ಆಕ್ರಮಿಸಿಕೊಂಡಿವೆ. ಸೀಮೇಎಣ್ಣೆ(ಚಿಮಣಿ) ದೀಪಗಳಿಂದ ಬೆಳಕನ್ನು ಪಡೆಯುತ್ತಿದ್ದ ಇವರು ಇಂದು ಭಾಗ್ಯಜ್ಯೋತಿಯಡಿಯಲ್ಲಿ ವಿದ್ಯುತ್ ದೀಪದ ಬೆಳಕನ್ನು ಕಾಣುತ್ತಿದ್ದಾರೆ. ಕೆಲವರು ಇನ್ನೂ ಸೀಮೆ ಎಣ್ಣೆ ಬೆಳಕಿನಲ್ಲೇ ಇದ್ದಾರೆ.

ನಗರ ಪ್ರದೇಶದ ಪ್ರಭಾವಕ್ಕೊಳಗಾದ ಇಂದಿನ ಯುವಕ ಯುವತಿಯರ ಉಡುಗೆ ತೊಡುಗೆಗಳಲ್ಲಿ ಸಂಪೂರ್ಣ ಬದಲಾವಣೆಯಾಗಿದೆ ಆದರೆ ಹಿರಿಯ ತಲೆಮಾರಿನ ಸ್ತ್ರೀಯರು ಮತ್ತು ಪುರುಷರು ತಮ್ಮ ಮೂಲ ಉಡುಗೆ ತೊಡುಗೆಯ ಹಂತದಲ್ಲಿರುವುದು ಗೋಚರಿಸುತ್ತದೆ. ಹೀಗೆ ಮ್ಯಾಸನಾಯಕರು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಭೌತಿಕವಾಗಿ ಅಲ್ಪಸ್ವಲ್ಪ ಬದಲಾವಣೆಯನ್ನು ಕಂಡುಕೊಂಡಿದ್ದರೂ ಆಂತರ್ಯದಲ್ಲಿ ಪರಂಪರೆಯನ್ನು ಉಳಿಸಿಕೊಂಡಿದ್ದಾರೆ.

ಪ್ರಸ್ತುತ ಸಂದರ್ಭದಲ್ಲಿ ಕಂಪಳದೇವರ ಹಟ್ಟಿಯು ಆಧುನಿಕತೆಗೆ ಮುಖಾಮುಖಿಯಾಗುತ್ತಿದ್ದು ಹಟ್ಟಿಯ ಮ್ಯಾಸಬೇಡರ ಸಮಕಾಲೀನ ಸ್ಥಿತಿಗತಿ ಭಿನ್ನವಾಗಿದೆ. ಮೂಲತಃ ಅರಣ್ಯವಾಸಿಗಳಾಗಿದ್ದ ಬೇಡರ ಸದ್ಯದ ಸ್ಥಿತಿಗತಿಯನ್ನು ಹೇಳುವುದಾದರೆ ಇಂದಿಗೂ ಸಹ ಇವರಲ್ಲಿ ಹಟ್ಟಿಸಂಸ್ಕೃತಿಯು

ಉಳಿದುಕೊಂಡಿದ್ದು, ಇವರ ಆರ್ಥಿಕ ಸ್ಥಿತಿಗತಿ ತುಂಬಾ ಕಷ್ಟದಾಯಕವಾಗಿದೆ. ಬೇಡರು ತಮ್ಮ ಉಪಜೀವನಕ್ಕಾಗಿ ಪರಂಪರೆಯಿಂದ ನಂಬಿಕೊಂಡು ಬಂದಿರುವ ಬೇಟೆ ಪದ್ಧತಿಯು ವರ್ತಮಾನದಲ್ಲಿ ಕಾನೂನುಗಳ ತೊಡಕಿನಿಂದ ಕಣ್ಮರೆಯಾಗಿದ್ದು ಜೀವನಾಧಾರಕ್ಕೆ ಅನಿವಾರ್ಯವಾಗಿ ಬೇರೆ ಕಸುಬುಗಳನ್ನು ಆಶ್ರಯಿಸಬೇಕಾಗಿ ಬಂದಿದೆ. ಒಂದು ಕಾಲಕ್ಕೆ ಅಕ್ಷರ ಜಗತ್ತಿಗೆ ದೂರ ಉಳಿದಿದ್ದ ಈ ಸಮುದಾಯ ತನ್ನ ಜೀವನ ನಿರ್ವಹಣೆಗೆ ಬೇಕಾದ ಪಾರಂಪರಿಕ ಜ್ಞಾನವನ್ನು ಕೊರತೆಯಿಲ್ಲದೆ ಸಂಪಾದಿಸಿಕೊಂಡಿದ್ದಿತು. ಇಂದು ಆಧುನಿಕತೆಯ ಸಂದರ್ಭದಲ್ಲಿ ಹಟ್ಟಿಯ ಜನಪದರು ನಾಡಿನೊಂದಿಗೆ ಸಂಪರ್ಕ ಬೆಳಸಿಕೊಂಡು ನಗರ ಪ್ರದೇಶಗಳಿಗೆ ಇಂದಿನ ಯುವಕರು ವಲಸೆ ಹೋಗುತ್ತಿದ್ದಾರೆ ಹಾಗೆ ಪಟ್ಟಣಗಳಲ್ಲೂ ಸಹ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಉಳಿದಂತೆ ಬಹುತೇಕರು ಹಟ್ಟಿಯಲ್ಲೇ ಕೃಷಿ, ಕೃಷಿಕೂಲಿ, ಪಶುಪಾಲನೆ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ.

### ೬.೧ ಸಾಮಾಜಿಕ ಸ್ಥಿತ್ಯಂತರ

ಈಗಾಗಲೇ ಹೇಳಿದಂತೆ ವ್ಯಕ್ತಿ ಹುಟ್ಟಿನಿಂದ ಸಾವಿನವರೆಗೆ ಅನೇಕ ಆಚರಣೆಗಳಿಗೆ ಒಳಪಡುತ್ತಾನೆ. ಹುಟ್ಟು, ಋತುಮತಿ, ಸೀಮಂತ, ನಾಮಕರಣ, ಮದುವೆ, ಶವಸಂಸ್ಕಾರ ಮುಂತಾದ ಹತ್ತು ಹಲವು ಆಚರಣೆಗಳಿದ್ದು ಅವುಗಳಲ್ಲಿ ಹಲವಾರು ಆಚರಣೆಗಳು ಇಂದು ಕಾಣದಾಗುತ್ತಿವೆ. ಹಿಂದೆ ಹಟ್ಟಿಯಲ್ಲಿ ಗರ್ಭಿಣಿ ಮಹಿಳೆಯರಿಗೆ ಮನೆಯಲ್ಲೇ ಅಥವಾ ಮನೆಯ ಹೊರಗೆ ಪ್ರತ್ಯೇಕ ಗುಡಿಸಲಿನಲ್ಲಿ ಸೂಲಗಿತ್ತಿಯರಿಂದ ಹೆರಿಗೆ ಮಾಡಿಸಲಾಗುತ್ತಿತ್ತು. ಹೆರಿಗೆಯಾದ ನಂತರ ಮಾಸನ್ನು ಮನೆಯ ಮುಂಬಾಗಿಲ ಬಲಭಾಗದಲ್ಲಿ ಹುಗಿಯುತ್ತಿದ್ದರು. ಆದರೆ ಈಗ ಬಹುತೇಕ ಹೆರಿಗೆಗಳು ಆಸ್ಪತ್ರೆಗಳಲ್ಲಿ ಆಗುತ್ತಿರುವುದರಿಂದ ಅಂತಹ ಆಚರಣೆಗಳು ಇಂದು ಕಡಿಮೆಯಾಗಿವೆ. ಅಷ್ಟೇ ಅಲ್ಲದೆ ಋತುಮತಿಯಾದ ಸಮಯದಲ್ಲಿ ೨೧ ದಿನಗಳವರೆಗೆ ಮನೆಯಿಂದ ಹೊರಗಿಡುವ, ಆರತಿ ಮಾಡುವ ಮೂಲಕ ಸೋಬಾನೆ ಪದ ಹಾಡುವ ಆಚರಣೆಯು ರೂಢಿಯಲ್ಲಿತ್ತು ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಇಂದು ಐದು ದಿನ ಕೂಡಿಸಿ ಆರತಿ ಮಾಡುವ ಪರಿಪಾಠವಿದೆ. ಇನ್ನೂ ಕೆಲವರು ಒಂದೇ ದಿನದಲ್ಲಿ ನೀರು ಹಾಕಿ ಋತುಮತಿ ಹುಡುಗಿಯನ್ನು ಮನೆಯ ಒಳಗೆ ಕರೆದುಕೊಳ್ಳುತ್ತಾರೆ. ಹಾಗೆಯೇ ಮದುವೆಯ ವಿಷಯದಲ್ಲೂ ಸಹ ವಧು-ವರರ ಆಯ್ಕೆಯ ಸಂದರ್ಭದಲ್ಲಿ ಹಿಂದೆ ಹಿರಿಯರು ಒಪ್ಪಿದಲ್ಲಿ ಮದುವೆ ಆಗಬೇಕಿತ್ತು ಆದರೆ ಇಂದು ಹುಡುಗ-ಹುಡುಗಿ ಒಪ್ಪಿದಲ್ಲೇ ಮದುವೆ ಮಾಡಬೇಕು ಇಲ್ಲವಾದರೆ ಪ್ರೇಮ ವಿವಾಹಗಳು ನಡೆಯುತ್ತವೆ.

ಒಂದು ವಾರಗಳ ಕಾಲ ನಡೆಯುತ್ತಿದ್ದ ಮದುವೆಯ ಕಾರ್ಯಗಳು ಇಂದು ಒಂದೇ ದಿನಕ್ಕೆ ಮುಗಿಯುವ ಹಂತಕ್ಕೆ ಬಂದಿವೆ ಕೆಲವೊಂದು ಪ್ರೇಮ ವಿವಾಹಗಳು, ಅಂತರ್ಜಾತೀಯ ವಿವಾಹಗಳೂ ಸಹ ನಡೆಯುತ್ತಿವೆ. ಆದರೂ ಸಹ ಹಟ್ಟಿಯಲ್ಲಿ ಈ ವಿಚಾರದಲ್ಲಿ ಇನ್ನೂ ಸಂದಿಗ್ಧತೆ ಕಂಡು ಬರುತ್ತಿದೆ. "ಗರ್ಭಿಣಿ ಮಹಿಳೆಗೆ ಮಾಡುತ್ತಿದ್ದ ಬಸುರೂಟ ಆಚರಣೆಯು ಇಂದು ಸೀಮಂತ ಎಂಬ ಹೆಸರು ಪಡೆದು ಕೇವಲ ಸ್ನೇಹಿತರ ಔತಣಕೂಟದಂತೆ ಆಗಿದೆ. ಹಿಂದಿನವರು ತಮ್ಮ ಮಕ್ಕಳಿಗೆ ತಮ್ಮ ಹಿರಿಯರ ಹೆಸರನ್ನು ಇಡುತ್ತಿದ್ದರು ಆದರೆ ಇಂದು ಸಿನಿಮಾ ನಟ ನಟಿಯರ ಹೆಸರುಗಳನ್ನು ಮಕ್ಕಳಿಗೆ ಇಡುತ್ತಿದ್ದಾರೆ"[೧]. ಶವ ಸಂಸ್ಕಾರ ಸಂದರ್ಭದಲ್ಲಿ ನಡೆಯುತ್ತಿದ್ದ ಪೂಜೆ, ಹಲಗೆ ವಾದ್ಯ,

ಭಜನೆ ಸೇವೆ ಸಾಮಾನ್ಯವಾಗಿದ್ದವು, ಹಿಂದೆ ೨೦-೩೦ ಜನರ ತಂಡ ಭಜನೆ ಮಾಡುತ್ತಿತ್ತು ಇಂದು ಈ ಪದ್ಧತಿ ಕಡಿಮೆಯಾಗಿದೆ ಹಟ್ಟಿಯಲ್ಲಿ ಭಜನೆ ಮಾಡುವವರೇ ಇಲ್ಲದಾಗಿದೆ ಕೆಲವರು ಮಾತ್ರ ದೇವಸ್ಥಾನಗಳಲ್ಲಿ ಹಬ್ಬ ಜಾತ್ರೆಗಳಲ್ಲಿ ಭಜನೆ ಮಾಡುತ್ತಾರೆ.

ಹಟ್ಟಿಯಲ್ಲಿ ಪ್ರಮುಖವಾಗಿ ಆಚರಣೆಗೊಳ್ಳುವ ಹಬ್ಬ ಆಚರಣೆಗಳಲ್ಲಿ ಯಾವುದೇ ಬದಲಾವಣೆಯಾಗದೇ ಕೆಲವೊಂದು ಹೊಸ ಆಚರಣೆಗಳು ಸೇರ್ಪಡೆಯಾಗಿವೆ. ಹಿಂದೆ ಬರೀ ಹಟ್ಟಿಯವರು ಮಾತ್ರ ಸೇರಿ ಆಚರಿಸುತ್ತಿದ್ದ ಹಬ್ಬಗಳು ಇಂದು ಸುತ್ತಮುತ್ತಲ ಎಲ್ಲಾ ಹಟ್ಟಿಗಳ, ಎಲ್ಲಾ ಜಾತಿಯ ಜನರು ಭಾಗವಹಿಸಿ ಹಬ್ಬ ಆಚರಣೆ ಮಾಡುವುದು ಕಂಡು ಬರುತ್ತಿದೆ. ಆದರೆ ಎಲ್ಲಾ ಆಚರಣೆಗಳಲ್ಲಿ ಬೇಡರೇ ಪ್ರಮುಖವಾಗಿರುತ್ತಾರೆ. ಒಟ್ಟಾರೆಯಾಗಿ ಕಂಪಳದೇವರ ಹಟ್ಟಿಯ ಜನಪದರು ಆಚರಿಸುವ "ವಿವಿಧ ಹಬ್ಬ ಹರಿದಿನಗಳ ಆಚರಣೆ ಸಂಪ್ರದಾಯಗಳಲ್ಲಿ ಹಲವಾರು ಬದಲಾವಣೆಗಳನ್ನು ಕಂಡಿದ್ದರೂ ಸಹ ಸಂಸ್ಕೃತಿಯ ಮೂಲಬೇರುಗಳು ಇನ್ನೂ ಗಟ್ಟಿಯಾಗಿ ಉಳಿದುಕೊಂಡಿವೆ ಆದರೆ ಅವುಗಳು ವಿವಿಧ ರೂಪಗಳನ್ನು ಪಡೆದುಕೊಂಡು ಕವಲುಗಳಾಗಿ ಬೆಳೆಯುತ್ತಿವೆ, ಇದು ನಮ್ಮ ಜನಪದದ ಪುನರ್ ಸೃಷ್ಟಿಯ ನಿಯಮಕ್ಕೆ ಅನುಗುಣವಾಗಿಯೇ ನಡೆದಿದೆ ಎಂದು ಹೇಳಬಹುದು"[೨]. ಬದಲಾವಣೆ ಎಂಬುದು ಕೇವಲ ಹಟ್ಟಿಯಲ್ಲಿನ ಆಚರಣೆ ಸಂಪ್ರದಾಯಗಳಲ್ಲಿ ಮಾತ್ರವಲ್ಲದೆ ಅವರು ಸೇವಿಸುವ ಆಹಾರ, ಬೆಳೆಯುವ ಬೆಳೆಗಳಲ್ಲೂ ಉಂಟಾಗಿದೆ. ಹಟ್ಟಿಯ ರೈತರು ಜೋಳ, ರಾಗಿ, ನವಣೆ, ತೊಗರಿ, ಮಡಿಕೆಕಾಳು ಮುಂತಾದ ಆಹಾರ ಪದಾರ್ಥಗಳನ್ನು ಬೆಳೆಯುತ್ತಿದ್ದರು. ವಾಣಿಜ್ಯ ಬೆಳೆಯಾಗಿ ಶೇಂಗ ಬೆಳೆಯುತ್ತಿದ್ದರು ಇದು ರೈತನ ಮಿತ್ರನಾದ ಎತ್ತು ಮತ್ತು ಇತರ ರಾಸುಗಳಿಗೆ ಪೌಷ್ಟಿಕ ಆಹಾರವಾಗಿತ್ತು, ಹುರುಳಿಯನ್ನು ಸಹ ದನಕರುಗಳಿಗಾಗಿಯೇ ಬೆಳೆಯುತ್ತಿದ್ದರು ಆದರೆ ಇವುಗಳಿಗೆ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಇರದೆ ಇರುವುದರಿಂದ ಹಾಗೂ ಸರ್ಕಾರ ಪಡಿತರ ವ್ಯವಸ್ಥೆಯ ಮೂಲಕ ಅಕ್ಕಿ ಗೋಧಿಗಳನ್ನು ಕೊಡಲು ಪ್ರಾರಂಭಿಸಿದ ಮೇಲೆ ಶೇಂಗಾವನ್ನು ಹೊರತುಪಡಿಸಿ ಜೋಳ, ರಾಗಿ, ಸಜ್ಜೆ, ನವಣೆ ಮುಂತಾದ ಆಹಾರ ಧಾನ್ಯಗಳನ್ನು ಬೆಳೆಯುವುದನ್ನೇ ಕಡಿಮೆಮಾಡಿದ್ದಾರೆ. ಒಂದು ಕಾಲಕ್ಕೆ ದನಕರುಗಳಿಗೆಂದೇ ಬೆಳೆಯುತ್ತಿದ್ದ ಹುರುಳಿ ಇಂದು ಕೇವಲ ತಮ್ಮ ಮನೆಬಳಕೆಗೆ ಮಾತ್ರ ಬೆಳೆಯುತ್ತಿದ್ದಾರೆ. ಹಟ್ಟಿಯಲ್ಲಿ ಪ್ರತಿ ಮನೆಯಲ್ಲಿ ಒಂದು ಎಮ್ಮೆ ಅಥವಾ ಆಕಳು ಇರುತ್ತಿದ್ದವು ಆದರೆ ಇಂದು ಅವುಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಇದರ ಪರಿಣಾಮ ಹಾಲು, ಮೊಸರು, ಬೆಣ್ಣೆ, ತುಪ್ಪದ ಊಟ ಮಾಡುತ್ತಿದ್ದ ಹಾಗೂ ಪಚನ ಕ್ರಿಯೆಗೆ ಎಲೆ, ಅಡಿಕೆ ಜಗಿಯುವ ಅಜ್ಜ, ಅಜ್ಜಿ, ಅಮ್ಮನ ಕಾಲ ಇಂದು ಕಾಣಲು ಸಿಗುತ್ತಿಲ್ಲ "ಅದಕ್ಕೆ ಬದಲಾಗಿ ಹಸಿವೆಯಾಗದಂತೆ ತಡೆಯುವ ಬೆಳಗಿನ ಬೆಡ್ ಕಾಫಿ, ಹೊಟ್ಟೆ ತುಂಬಿದಂತೆ ಕಂಡರೂ ಶಕ್ತಿಬಾರದ ರೇಶನ್ ಅಕ್ಕಿ ಅನ್ನ, ಅದಕ್ಕೂ ಮಿಗಿಲಾಗಿ ಗುಟುಖಾ ಹಾಗೂ ಮದ್ಯಪಾನಗಳತ್ತ ಇಂದಿನ ಜನ ಹೆಚ್ಚು ಒಲವು ತೋರುತ್ತಿರುವುದು ಕಂಡು ಬರುತ್ತಿದೆ"[೩]. ಸಾಲಮಾಡಿಯಾದರೂ ತುಪ್ಪ ತಿನ್ನು ಎನ್ನುವಂತೆ ಆಧುನಿಕತೆಯ ಜಗತ್ತಿನ ಮೋಹಕತೆಗೆ ಹಟ್ಟಿಯ ಜನರು ಮರುಳಾಗುತ್ತಿದ್ದಾರೆ. ಆದರೂ ಇದು ಹಟ್ಟಿಯನ್ನು ಇನ್ನೂ ಸಂಪೂರ್ಣವಾಗಿ ಆವರಿಸಿಲ್ಲ ಇದಕ್ಕೆ ಹಲವಾರು ಕಾರಣಗಳಿದ್ದರೂ ಅದರ ಪರಿಹಾರ ಮಾತ್ರ ವೈಯಕ್ತಿಕವಾಗಿದೆ. ಈ ಹಿನ್ನೆಲೆಯಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರು ಸಂಪೂರ್ಣವಾಗಿ

ಬದಲಾವಣೆಯಾಗಿಲ್ಲ ಕೆಲವು ರೈತಾಪಿ ವರ್ಗದ ಕುಟುಂಬಗಳಲ್ಲಿ ಪಾರಂಪರಿಕ ಆಹಾರ ಪದ್ಧತಿ, ಪಾರಂಪರಿಕ ಉಡುಗೆ, ಪಾರಂಪರಿಕ ಜೀವನ ವಿಧಾನ ಹಾಗೇಯೇ ಮುಂದುವರಿದಿದೆ. ಒಟ್ಟಾರೆ ಹೇಳುವುದಾದರೆ ಹಟ್ಟಿಯ ಬೇಡರ ಸಾಮಾಜಿಕ ಜೀವನವು ಬದಲಾವಣೆಯತ್ತ ಸಾಗುತ್ತಿದೆ.

**೬.೨ ಶೈಕ್ಷಣಿಕ ಸ್ಥಿತ್ಯಂತರ**

ಶಿಕ್ಷಣವು ವ್ಯಕ್ತಿಯ ಸಾಮಾಜಿಕ ಅಂತಸ್ಥಿನ ನಿರ್ಧಾರಕ ಅಂಶವಾಗಿದೆ. ಯಾವುದೇ ಒಂದು ದೇಶದ ಅಥವಾ ಸಮುದಾಯದ ಸರ್ವತೋಮುಖ ಅಭಿವೃದ್ಧಿಯು ಶಿಕ್ಷಣವನ್ನು ಅವಲಂಬಿಸಿದೆ ಈ ಮಾತು ಕಂಪಳದೇವರ ಹಟ್ಟಿಗೆ ಹೊರತಾದುದಲ್ಲ. "ವ್ಯಕ್ತಿಯ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತಿ ಸಮಾಜದ ಮುಖ್ಯವಾಹಿನಿಯಲ್ಲಿ ಮಿಳಿತವಾಗಬೇಕಾದರೆ ಶಿಕ್ಷಣ ಅತ್ಯಂತ ಅಗತ್ಯವಾಗಿದೆ"[೪]. ಆಧುನಿಕತೆಗೆ ಒಳಪಟ್ಟ ಸಮಾಜದಿಂದ ಪ್ರತ್ಯೇಕವಾಗಿ ಹಟ್ಟಿ ಕಟ್ಟಿಕೊಂಡು ವಾಸಿಸುತ್ತಿರುವ ಕಂಪಳದೇವರ ಹಟ್ಟಿಯ ಬೇಡರಿಗೆ ಒಂದು ಕಾಲದಲ್ಲಿ ಶಿಕ್ಷಣ ಸಿಗುವುದು ಕನಸಿನ ಮಾತಾಗಿತ್ತು ಒಂದು ವೇಳೆ ಸಿಕ್ಕರೂ ಅದು ನುಂಗಲಾರದ ತುತ್ತಾಗಿತ್ತು. ಇಂದಿಗೂ ಸಹ ಇಲ್ಲಿನ ಪೋಷಕರು ತಮ್ಮ ಮಕ್ಕಳನ್ನು ಪ್ರಾಥಮಿಕ ಶಾಲೆ ಪೂರೈಸುವವರೆಗೆ ಮಾತ್ರ ಓದಿಸಿ ನಂತರ ಶಾಲೆ ಬಿಡಿಸಿ ಕೂಲಿ ಕೆಲಸಕ್ಕೆ ಕಳುಹಿಸುತ್ತಿದ್ದಾರೆ. ಅದರಲ್ಲೂ ಹೆಣ್ಣುಮಕ್ಕಳನ್ನು ಶಾಲೆ ಬಿಡಿಸಿ ಮನೆಕೆಲಸ, ಚಿಕ್ಕಮಕ್ಕಳನ್ನು ನೋಡಿಕೊಳ್ಳುವ ಕೆಲಸಕ್ಕೆ ಹಚ್ಚುವುದು ಕಂಡುಬರುತ್ತಿದೆ. ಅಲ್ಲದೆ ಹುಡುಗಿಯರಿಗೆ ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡುತ್ತಿರುವುದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದಿದೆ. ಪಶುಪಾಲನೆ ಮತ್ತು ಕೃಷಿ ಎರಡನ್ನೇ ನಂಬಿ ಜೀವಿಸುತ್ತಿರುವ ಮ್ಯಾಸಬೇಡರಲ್ಲಿ ಬಾಲಕಾರ್ಮಿಕ ಪದ್ಧತಿ ಅಧಿಕವಾಗಿದೆ ಏಳೆಂಟು ವರ್ಷದ ಮಕ್ಕಳು ಶಾಲೆ ಬಿಟ್ಟು ದನ, ಕುರಿ, ಮೇಕೆಗಳನ್ನು ಕಾಯಲು ಹೋಗುತ್ತಿರುವುದು ಕಂಡುಬರುತ್ತದೆ. ಒಂದು ವೇಳೆ ಮಕ್ಕಳು ಶಾಲೆಗೆ ಹೋಗುತ್ತಿದ್ದರೂ ಸುಗ್ಗಿಯ ಕಾಲದಲ್ಲಿ ಮಕ್ಕಳನ್ನು ಶಾಲೆಗೆ ಕಳಿಸದೆ ಮನೆಕೆಲಸಕ್ಕೆ ಹಚ್ಚುತ್ತಾರೆ. ಈ ಸಂದರ್ಭದಲ್ಲಿ ಮಕ್ಕಳ ಸಹಾಯ ಕೃಷಿಕ ಜನರಿಗೆ ತುಂಬಾ ಅಗತ್ಯವಾಗಿರುತ್ತದೆ. ಸುಗ್ಗಿಯ ಕಾಲದಲ್ಲಿ ಮಕ್ಕಳನ್ನು ಶಾಲೆ ಬಿಡಿಸಿ ಮನೆಗಳಲ್ಲಿದ್ದ ಚಿಕ್ಕಮಕ್ಕಳನ್ನು ನೋಡಿಕೊಳ್ಳಲು ಬಿಡುವುದು, ಕುಡಿಯಲು ನೀರು ತರಲು ಹಚ್ಚುವುದು, ಹೊಲಗದ್ದೆಗಳಲ್ಲಿ ಕೆಲಸ ಮಾಡುವವರಿಗೆ ಬುತ್ತಿ ಕೊಟ್ಟುಬರಲು ಕಳಿಸುವುದು ಮುಂತಾದ ಸಣ್ಣ ಪುಟ್ಟ ಕಾರ್ಯಗಳಿಗೆ ಮಕ್ಕಳನ್ನು ಬಳಸಿಕೊಳ್ಳುತ್ತಾರೆ. ಆದರೆ ಇತ್ತೀಚಿಗೆ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡುತ್ತಿದ್ದಾರೆ. ಈಗ ಶಿಕ್ಷಣ ಕಲಿಯುವ ಎಲ್ಲಾ ಅನುಕೂಲತೆಗಳು ಇವೆ, ಹಟ್ಟಿಯಲ್ಲಿ ೧೯೫೮ ರಲ್ಲಿ ಶಾಲೆ ಆರಂಭವಾಗಿ ಅಂದಿನಿಂದ ಹಟ್ಟಿಯ ಮಕ್ಕಳು ಸ್ವಲ್ಪಮಟ್ಟಿನ ಶಿಕ್ಷಣ ಪಡೆಯುವಂತಾದರು. ಪ್ರಸ್ತುತ ಹಟ್ಟಿಯಲ್ಲಿ ೮ನೇ ತರಗತಿಯವರೆಗೆ ಶಾಲೆ ಕಾರ್ಯನಿರ್ವಹಿಸುತ್ತಿದೆ.

ಹಟ್ಟಿಯ ಮಕ್ಕಳು ಪ್ರೌಢಶಾಲೆಗೆ ಪಕ್ಕದ ೧೦–೨೦ ಕಿ ಮೀ ದೂರದಲ್ಲಿರುವ ತುಮಕೂರ್ಲಹಳ್ಳಿ, ಮೊಳಕಾಲ್ಮೂರುಗಳಿಗೆ ಹೋಗಬೇಕಾದ ಅನಿವಾರ್ಯತೆ ಇದೆ. ಹಟ್ಟಿಯ ಯುವಕರು ಇಂದು ಶಾಲಾ ಕಾಲೇಜು ಹಂತಕ್ಕೆ ತಲುಪಿದ್ದಾರೆ. ಪದವಿ, ಸ್ನಾತಕೊತ್ತರ ಪದವಿ, ಬಿಇ.ಡಿ, ಡಿಇ.ಡಿ, ಪದವಿಗಳನ್ನು ಕೆಲವರು ಪಡೆದಿದ್ದಾರೆ. ಇಷ್ಟೆಲ್ಲಾ ಶಿಕ್ಷಣ ಪಡೆಯಲು ಅವರಿಗೆ ಸಾಧ್ಯವಾಗಲು ಸರ್ಕಾರದ

ವಿದ್ಯಾರ್ಥಿವೇತನ, ವಸತಿ ನಿಲಯಗಳ ಸೌಲಭ್ಯ, ಪ್ರೋತ್ಸಾಹ ಧನ, ಗಿರಿಜನ ಉಪಯೋಜನೆ ಅಡಿಯಲ್ಲಿನ ಹಲವು ಯೋಜನೆಗಳು ಕಾರಣವಾಗಿವೆ. ಆದರೂ ಸಹ ಹಟ್ಟಿಯ ಬಹುತೇಕ ಬೇಡ ಮಕ್ಕಳು ಈ ಸರ್ಕಾರಿ ಸೌಲಭ್ಯಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳುವಲ್ಲಿ ಸಫಲರಾಗಿಲ್ಲ. ಬೆರಳೆಣಿಕೆಯಷ್ಟು ಜನರು ಹೇಗೋ ಕಷ್ಟಪಟ್ಟು ಸರಕಾರಿ ಸೌಲಭ್ಯಗಳನ್ನು ಪಡೆದು ಪದವಿ, ಸ್ನಾತಕೋತ್ತರ ಪದವಿ, ಡಿ.ಇಡಿ, ಬಿ.ಇಡಿ, ಪದವಿಗಳನ್ನು ಪಡೆದಿದ್ದರೂ ಸಹ ಇಲ್ಲಿ ಕಾಡುವ ಮತ್ತೊಂದು ಸಮಸ್ಯೆ ಎಂದರೆ ಉದ್ಯೋಗದ ಸಮಸ್ಯೆ. ಇವರು ಉದ್ಯೋಗ ಪಡೆಯುವಲ್ಲಿ ವಿಫಲರಾಗಲು ಕಾರಣವೆಂದರೆ ಇಂದು ಪರಿಶಿಷ್ಟ ಪಂಗಡಕ್ಕೆ ಅನೇಕ ಮುಂದುವರಿದ ಸಮುದಾಯಗಳನ್ನು ಸೇರಿಸುತ್ತಿರುವುದು, ಹಾಗೆ ಮೀಸಲಾತಿ ಪ್ರಮಾಣ ೧೦೦ ಕ್ಕೆ ಶೇಕಡ ೩ ರಷ್ಟು ಮಾತ್ರ ಇರುವುದು, ಹಾಗಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಹಟ್ಟಿಯ ಈ ಪದವೀಧರರು ಸರ್ಕಾರಿ ನೌಕರಿ ಪಡೆಯುವಲ್ಲಿ ವಿಫಲರಾಗಿದ್ದಾರೆ. ಮೀಸಲಾತಿ ಪ್ರಮಾಣವನ್ನು ಕೇಂದ್ರದಲ್ಲಿರುವುದನ್ನು ರಾಜ್ಯದಲ್ಲಿ ಜಾರಿಗೆ ತರುವುದು ಅಗತ್ಯವಾಗಿದೆ. ಆಗಮಾತ್ರ ಇಂತಹ ಹಟ್ಟಿಗಳಿಂದ ಬಡತನದಲ್ಲಿ ಶಿಕ್ಷಣ ಕಲಿತ ಈ ಸಮುದಾಯದ ವಿದ್ಯಾವಂತರಿಗೆ ನೌಕರಿ ದೊರೆತು ಮುಂದಿನ ಪೀಳಿಗೆಯ ಮಕ್ಕಳಿಗೆ ಶಿಕ್ಷಣ ಕಲಿಯಲು ಸ್ಫೂರ್ತಿದಾಯಕವಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಹಟ್ಟಿಯ ಜನರಲ್ಲಿ ಶಿಕ್ಷಣ ಪಡೆದವರ ಮತ್ತು ಪಡೆಯುತ್ತಿರುವವರ ಹಾಗೂ ನಿರಕ್ಷರಿಗಳ ಒಟ್ಟು ಸಂಖ್ಯೆ, ಸರಾಸರಿಯನ್ನು ಈ ಕೆಳಗಿನಂತೆ ಕೋಷ್ಟಕದ ಮೂಲಕ ವಿವರಿಸಬಹುದಾಗಿದೆ.

**ಕೋಷ್ಟಕ ೬.೧–ಸಮುದಾಯವಾರು ಶಿಕ್ಷಣ ಪಡೆದವರ(ಅಕ್ಷರಸ್ಥರ) ವಿವರ**

| ಶೈಕ್ಷಣಿಕ ಹಂತ | ಸಮುದಾಯಗಳು | | | | | | | | |
|---|---|---|---|---|---|---|---|---|---|
| | ಆದಿ ಕರ್ನಾಟಕ | | | ಲಿಂಗಾಯತರು | | | ನಾಯಕ | | |
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಪ್ರಾಥಮಿಕ | ೯ | ೯ | ೧೮ | ೫ | ೫ | ೧೦ | ೮೮ | ೮೦ | ೧೬೮ |
| ಮಾಧ್ಯಮಿಕ | ೪ | ೩ | ೭ | ೫ | ೨ | ೭ | ೨೯ | ೪೦ | ೬೯ |
| ಪ್ರೌಢಶಾಲೆ | ೨೨ | ೯ | ೩೧ | ೪ | ೩ | ೭ | ೪೬ | ೭೨ | ೧೧೬ |
| ಡಿಪ್ಲೋಮಾ | | | | | | | ೨ | | ೨ |
| ಪದವಿಪೂರ್ವ | ೮ | ೭ | ೧೫ | ೨ | ೧ | ೩ | ೩೩ | ೧೫ | ೪೮ |
| ಪದವಿ | ೫ | ೨ | ೭ | | ೧ | ೧ | ೨೨ | ೪ | ೨೬ |
| ಸ್ನಾತಕೋತ್ತರ | | | | | | | ೬ | ೨ | ೮ |
| ಇತರೆ | | | | | | | ೧ | ೧ | ೨ |
| ಒಟ್ಟು | ೪೮ | ೩೦ | ೭೮ | ೧೬ | ೧೨ | ೨೮ | ೨೨೭ | ೨೧೪ | ೪೩೯ |

ಕಂಪಳದೇವರ ಹಟ್ಟಿಯ ಜನರ ಶೈಕ್ಷಣಿಕ ಪ್ರಮಾಣವನ್ನು ಕೋಷ್ಟಕ ೬.೧ ರಲ್ಲಿ ಗುರುತಿಸಿರುವಂತೆ ಹಟ್ಟಿಯಲ್ಲಿನ ಸಮುದಾಯವಾರು ಶಿಕ್ಷಣ ಪಡೆದವರಲ್ಲಿ ಮಾದಿಗ ಸಮುದಾಯದವರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ೧೮ ಜನ, ಅದರಲ್ಲಿ ೯ ಗಂಡು, ೯ ಹೆಣ್ಣು, ಮಾಧ್ಯಮಿಕ ಶಿಕ್ಷಣ ಪಡೆದವರು ೭ ಜನ ಅದರಲ್ಲಿ ೪ ಗಂಡು, ೩ ಹೆಣ್ಣು, ಪ್ರೌಢಶಾಲೆ ಶಿಕ್ಷಣ ಪಡೆದವರು ೩೧ ಜನ ಅದರಲ್ಲಿ ೨೨ ಗಂಡು, ೯ ಹೆಣ್ಣು, ಪದವಿ ಪೂರ್ವ ಶಿಕ್ಷಣ ಪಡೆದವರು ೧೫ ಜನ ಅದರಲ್ಲಿ ೮ ಗಂಡು, ೭ ಹೆಣ್ಣು, ಪದವಿ ಶಿಕ್ಷಣ ಪಡೆದವರು ೭ ಜನ ಅದರಲ್ಲಿ ೫ ಗಂಡು, ೨ ಹೆಣ್ಣು, ಒಟ್ಟು ಹಟ್ಟಿಯಲ್ಲಿನ ಆದಿ ಕರ್ನಾಟಕ(ಮಾದಿಗ) ಸಮುದಾಯದವರಲ್ಲಿ ೪೮ ಜನ ಗಂಡುಮಕ್ಕಳು, ೩೦ ಜನ ಹೆಣ್ಣುಮಕ್ಕಳು ಒಟ್ಟು ೭೮ ಜನ ಅಕ್ಷರಸ್ಥರಿದ್ದಾರೆ. ಲಿಂಗಾಯತರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ೧೦ ಜನ ಅದರಲ್ಲಿ ೫ ಗಂಡು, ೫ ಹೆಣ್ಣು, ಮಾಧ್ಯಮಿಕ ಶಿಕ್ಷಣ ಪಡೆಯುತ್ತಿರುವವರು ೭ ಜನ ಅದರಲ್ಲಿ ೫ ಗಂಡು, ೨ ಹೆಣ್ಣು, ಪ್ರೌಢಶಾಲೆ ಶಿಕ್ಷಣ ಪಡೆದಿರುವವರು ೭ ಜನ ಅದರಲ್ಲಿ ೪ ಗಂಡು, ೩ ಹೆಣ್ಣು, ಪದವಿ ಪೂರ್ವ ಶಿಕ್ಷಣ ಪಡೆದವರು ೩ ಜನ ಅದರಲ್ಲಿ ೨ ಗಂಡು, ೧ ಹೆಣ್ಣು, ಪದವಿ ಶಿಕ್ಷಣ ಪಡೆದವರು ಒಂದು ಹೆಣ್ಣು ಮಾತ್ರ ಒಟ್ಟು ಲಿಂಗಾಯತರಲ್ಲಿ ಶಿಕ್ಷಣ ಪಡೆಯುತ್ತಿರುವವರು ೧೬ ಗಂಡು, ೧೨ ಹೆಣ್ಣುಮಕ್ಕಳು ಒಟ್ಟು ೨೮ ಜನರಿದ್ದಾರೆ. ನಾಯಕ(ಬೇಡ) ಸಮುದಾಯದವರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ೧೬೮ ಜನ ಅದರಲ್ಲಿ ೮೮ ಗಂಡು, ೮೦ ಹೆಣ್ಣು, ಮಾಧ್ಯಮಿಕ ಶಿಕ್ಷಣ ಪಡೆದವರು ೬೯ ಜನ ಅದರಲ್ಲಿ ೨೯ ಗಂಡು, ೪೦ ಹೆಣ್ಣು, ಪ್ರೌಢಶಾಲೆ ಶಿಕ್ಷಣ ಪಡೆದವರು ೧೧೬ ಜನ ಅದರಲ್ಲಿ ೪೬ ಗಂಡು, ೭೨ ಹೆಣ್ಣು, ಡಿಪ್ಲೊಮಾ ಪದವಿ ಪಡೆದವರು ೨ ಜನ ಗಂಡುಮಕ್ಕಳು, ಪದವಿಪೂರ್ವ ಶಿಕ್ಷಣ ಪಡೆದವರು ೪೮ ಜನ ಅದರಲ್ಲಿ ೩೩ ಗಂಡು, ೧೫ ಹೆಣ್ಣು, ಪದವಿ ಶಿಕ್ಷಣ ಪಡೆದವರು ೨೬ ಜನ ಅದರಲ್ಲಿ ೨೨ ಗಂಡು, ೪ ಹೆಣ್ಣು, ಸ್ನಾತಕೋತ್ತರ ಪದವಿ ಪಡೆದವರು ೮ ಜನ ಅದರಲ್ಲಿ ೬ ಗಂಡು, ೨ ಹೆಣ್ಣು, ಇತರೆ ಶಿಕ್ಷಣ ಪಡೆದವರು ೨ ಜನ ಅದರಲ್ಲಿ ೧ ಗಂಡು, ೧ ಹೆಣ್ಣು ಈ ರೀತಿಯಾಗಿ ಸಮುದಾಯವಾರು ಅಕ್ಷರಸ್ಥರ ಪಟ್ಟಿ ನೊಡ ಬಹುದು.

ಒಟ್ಟಾರೆ ಹಟ್ಟಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ೧೯೬ ಜನ ಅದರಲ್ಲಿ ಶೇಕಡಾ ೩೮% ರಷ್ಟು ನಾಯಕ(ಬೇಡರು) ಶೇಕಡ ೩೬ರಷ್ಟು ಲಿಂಗಾಯತರು , ಶೇಕಡ ೨೩ ರಷ್ಟು ಆದಿ ಕರ್ನಾಟಕ(ಮಾದಿಗ) ಸಮುದಾಯದವರಿದ್ದಾರೆ, ಮಾಧ್ಯಮಿಕ ಶಿಕ್ಷಣ ಪಡೆದ ೮೩ ಜನರಲ್ಲಿ ಶೇಕಡ ೯ ರಷ್ಟು ಆದಿ ಕರ್ನಾಟಕ(ಮಾದಿಗರು), ಶೇಕಡ ೨೫ರಷ್ಟು ಲಿಂಗಾಯತರು, ಶೇಕಡ ೧೬ರಷ್ಟು ನಾಯಕ(ಬೇಡ)ರು ಹಾಗೆಯೇ ಪ್ರೌಢಶಾಲೆ ಶಿಕ್ಷಣ ಪಡೆದ ೧೫೪ಜನರಲ್ಲಿ ಶೇಕಡ ೪೦ ರಷ್ಟು ಜನ ಆದಿ ಕರ್ನಾಟಕ(ಮಾದಿಗರು), ಶೇಕಡ ೨೫ ರಷ್ಟು ಲಿಂಗಾಯತರು, ಶೇಕಡ ೨೬ರಷ್ಟು ನಾಯಕ(ಬೇಡ)ರಿದ್ದಾರೆ. ಡಿಪ್ಲೋಮಾ ಶಿಕ್ಷಣ ಪಡೆದ ಇಬ್ಬರಲ್ಲಿ ಶೇಕಡ ೦.೫ರಷ್ಟು ಬೇಡರಿದ್ದಾರೆ. ಪದವಿಪೂರ್ವ ಶಿಕ್ಷಣ ಪಡೆದ ೬೬ ಜನರಲ್ಲಿ ಶೇಕಡ ೧೯ರಷ್ಟು ಆದಿ ಕರ್ನಾಟಕ(ಮಾದಿಗರು), ಶೇಕಡ ೧೧ರಷ್ಟು ಲಿಂಗಾಯತರು, ಶೇಕಡ ೧೧ರಷ್ಟು ನಾಯಕ(ಬೇಡ)ರು ಪದವಿ ಶಿಕ್ಷಣ ಪಡೆದ ೩೪ ಜನರಲ್ಲಿ ಶೇಕಡಾವಾರು ನೋಡುವುದಾದರೆ ಶೇಕಡ ೯ರಷ್ಟು ಆದಿ ಕರ್ನಾಟಕ(ಮಾದಿಗರು), ಶೇಕಡ ೩.೬ರಷ್ಟು

ಲಿಂಗಾಯತರು, ಶೇಕಡ ೫.೯ರಷ್ಟು ಬೇಡರು ಇದ್ದಾರೆ. ಇನ್ನು ಸ್ನಾತ್ತಕ್ಕೋತ್ತರ ಶಿಕ್ಷಣ ಪಡೆದ ೮ ಜನರಲ್ಲಿ ಲಿಂಗಾಯತ, ಮಾದಿಗ ಸಮುದಾಯದವರಲ್ಲಿ ಯಾರೂ ಇಲ್ಲ ನಯಕ(ಬೇಡ)ರಲ್ಲಿ ೧.೮% ರಷ್ಟು ಜನರಿದ್ದಾರೆ. ಒಟ್ಟಾರೆ ಹಟ್ಟಿಯಲ್ಲಿ ಶಿಕ್ಷಣ ಪಡೆದ ಮತ್ತು ಪಡೆಯುತ್ತಿರುವ ಜನರಲ್ಲಿ ಗಂಡು ಹೆಣ್ಣನ್ನು ಸಮುದಾಯವಾರು ಬೇರ್ಪಡಿಸಿ ಸರಾಸರಿ ನೋಡಿದರೆ ಮಾದಿಗ ಸಮುದಾಯದಲ್ಲಿ ಶೇಕಡ ೬೧.೫೪ರಷ್ಟು ಗಂಡುಮಕ್ಕಳು, ಶೇಕಡ ೩೮.೪೬ರಷ್ಟು ಹೆಣ್ಣು ಮಕ್ಕಳಿದ್ದಾರೆ, ಅದೇ ರೀತಿಯಾಗಿ ಲಿಂಗಾಯತರಲ್ಲಿ ಶೇಕಡ ೫೭.೧೪ ರಷ್ಟು ಗಂಡುಮಕ್ಕಳು, ಶೇಕಡ ೪೨.೮೬ರಷ್ಟು ಹೆಣ್ಣುಮಕ್ಕಳಿದ್ದಾರೆ, ಇನ್ನು ಬೇಡಸಮುದಾಯದವರಲ್ಲಿ ಶೇಕಡ ೫೧.೭೧ರಷ್ಟು ಗಂಡುಮಕ್ಕಳು, ಶೇಕಡ ೪೮.೭೫ರಷ್ಟು ಹೆಣ್ಣುಮಕ್ಕಳಿದ್ದಾರೆ ಒಟ್ಟಾರೆ ಹಟ್ಟಿಯಲ್ಲಿ ಶಿಕ್ಷಣ ಪಡೆದವರ ಮತ್ತು ಪಡೆಯುತ್ತಿರುವವರ ಸರಾಸರಿ ನೋಡಿದರೆ ಪ್ರೌಢಶಾಲೆ, ಪದವಿ ಪೂರ್ವ, ಪದವಿ, ಸ್ನಾತಕೋತ್ತರ ಪದವಿ ಶಿಕ್ಷಣ ಪಡೆದವರ ಸಂಖ್ಯೆ ತೀರಾ ಕಡಿಮೆ ಇದೆ. ಹೆಚ್ಚಿನದಾಗಿ ಉನ್ನತ ವ್ಯಾಸಂಗ ಮಾಡುವ ಅಗತ್ಯತೆ ಹಟ್ಟಿಯ ಯುವಕರಿಗೆ ಇದೆ. ಆದ್ದರಿಂದ ಹಟ್ಟಿಯ ವಿದ್ಯಾವಂತರು, ಪ್ರೌಢಶಾಲೆ, ಪದವಿಪೂರ್ವ ಶಿಕ್ಷಣ ಪೂರೈಸಿದವರು ಉನ್ನತ ವ್ಯಾಸಂಗದ ಕಡೆ ಗಮನಹರಿಸುವ ಅಗತ್ಯತೆ ಇದೆ.

**ವೃತ್ತ ಚಿತ್ರ ೬.೧–ಕಂಪಳದೇವರ ಹಟ್ಟಿಯಲ್ಲಿನ ಸಾಕ್ಷರಸ್ಥ/ಅಕ್ಷರಸ್ಥ ಜನರ ಸರಾಸರಿ**




ವೃತ್ತಚಿತ್ರ ೬.೧ ರಲ್ಲಿ ಪ್ರಸ್ತುತ ಕಂಪಳದೇವರ ಹಟ್ಟಿಯಲ್ಲಿನ ಸಾಕ್ಷರಸ್ಥರ ಸರಾಸರಿ/ಶೇಕಡಾವಾರನ್ನು ವಿವರಿಸುವುದಾದರೆ ಒಟ್ಟಾರೆ ಹಟ್ಟಿಯ ಸಾಕ್ಷರಸ್ಥರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ಶೇಕಡ ೩೬ರಷ್ಟಿದ್ದರೆ, ಮಾಧ್ಯಮಿಕ ಶಿಕ್ಷಣ ಪಡೆದವರು ಶೇಕಡ ೧೫ರಷ್ಟಿದ್ದಾರೆ ಹಾಗೆಯೇ ಪ್ರೌಢಶಾಲಾ ಶಿಕ್ಷಣವನ್ನು ಪಡೆದವರು ಶೇಕಡ ೨೮ರಷ್ಟಿದ್ದರೆ ಪದವಿಪೂರ್ವ ಶಿಕ್ಷಣ ಪಡೆದವರು ಶೇಕಡ ೧೨ರಷ್ಟಿದ್ದಾರೆ,

ಇನ್ನು ಪದವಿ ಶಿಕ್ಷಣ ಪಡೆದವರು ಶೇಕಡ ೬ರಷ್ಟಿದ್ದರೆ ಸ್ನಾತಕೋತ್ತರ ಶಿಕ್ಷಣ ಪಡೆದವರು ಶೇಕಡ ೨ರಷ್ಟಿದ್ದಾರೆ. ಒಟ್ಟಾರೆ ಕಂಪಳದೇವರ ಹಟ್ಟಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಂಕಿ ಅಂಶಗಳನ್ನು ಕಲೆಹಾಕಿದ ಪ್ರಕಾರ ಪದವಿ ಸ್ನಾತಕೋತ್ತರ ಪದವಿ ಪಡೆದವರ ಶೇಕಡಾವಾರು ಕ್ರಮವಾಗಿ ಶೇಕಡ ೬.೨ರಷ್ಟು ಮಾತ್ರ ಇರುವುದು ಕಂಡುಬರುತ್ತದೆ ಅಂದರೆ ಇಲ್ಲಿಯವರೆಗೆ ಹಟ್ಟಿಯಲ್ಲಿ ಉನ್ನತ ವ್ಯಾಸಂಗ ಮಾಡಿದವರ ಪ್ರಮಾಣ ಕೇವಲ ಬೆರಳೆಣಿಕೆಯಷ್ಟುಮಾತ್ರ ಎಂದು ತಿಳಿದು ಬರುತ್ತದೆ. ಇದಕ್ಕೆ ಕಾರಣ ಹಟ್ಟಿಯಲ್ಲಿ ಅಥವಾ ಹಟ್ಟಿಯ ಹತ್ತಿರದಲ್ಲಿ ಯಾವುದೇ ಪದವಿ, ಪದವಿಪೂರ್ವ ಕಾಲೇಜುಗಳು ಇಲ್ಲದಿರುವುದು. ಇತ್ತೀಚೆಗೆ ಕಂಪಳದೇವರ ಹಟ್ಟಿಯ ಪಕ್ಕದ ಊರಾದ ಚಿನ್ನೂಬನ ಹಳ್ಳಿಯಲ್ಲಿ ಒಂದು ಪದವಿ ಮತ್ತು ಪದವಿಪೂರ್ವ ಕಾಲೇಜನ್ನು ತೆರೆದಿರುವುದರಿಂದ ಪ್ರಸ್ತುತ ದಿನಗಳಲ್ಲಿ ಹಟ್ಟಿಯ ಯುವಕ ಯುವತಿಯರು ಕಾಲೇಜಿಗೆ ಹೋಗುತ್ತಿದ್ದಾರೆ. ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಹಟ್ಟಿಯ ಜನರು ಉನ್ನತ ಶಿಕ್ಷಣ ಪಡೆಯುವ ಅಗತ್ಯತೆಯಿದೆ.

ಸದ್ಯದ ದಿನಗಳಲ್ಲಿ ಕಂಪಳದೇವರ ಹಟ್ಟಿಯಲ್ಲಿ ೧ನೇ ತರಗತಿಯಿಂದ ೮ನೇ ತರಗತಿಯವರೆಗೆ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟಾರೆ ೨೫೨ ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ ಅದರಲ್ಲಿ ಆದಿ ಕರ್ನಾಟಕ(ಮಾದಿಗ) ಸಮುದಾಯದ ಮಕ್ಕಳು ಒಂದನೇ ತರಗತಿಯಲ್ಲಿ ೧೬ ಜನ ಹೆಣ್ಣು ಮಕ್ಕಳು, ೧೨ ಜನ ಗಂಡು ಮಕ್ಕಳು, ಹಾಗೆಯೇ ನಾಯಕ ಸಮುದಾಯದವರಲ್ಲಿ ೧೦೭ ಜನ ಹೆಣ್ಣುಮಕ್ಕಳು, ೧೧೬ ಜನ ಗಂಡು ಮಕ್ಕಳು ಮತ್ತು ಲಿಂಗಾಯತರಲ್ಲಿ ಒಬ್ಬ ಹುಡುಗಿ ಶಿಕ್ಷಣ ಪಡೆಯುತ್ತಿದ್ದಾರೆ. ಹಟ್ಟಿಯಲ್ಲಿ ಪ್ರಸ್ತುತ ಶಿಕ್ಷಣ ಪಡೆಯುತ್ತಿರುವವರಲ್ಲಿ ೧೨೩ ಜನ ಗಂಡು ಮಕ್ಕಳು, ೧೨೯ ಜನ ಹೆಣ್ಣುಮಕ್ಕಳು ಒಟ್ಟು ೨೫೨ ಜನ ಶಿಕ್ಷಣ ಪಡೆಯುತ್ತಿದ್ದಾರೆ(೨೦೧೭–೧೮). ಹಟ್ಟಿಯಲ್ಲಿ ಶಿಕ್ಷಣ ಪಡೆದವರ ಮತ್ತು ಪಡೆಯುತ್ತಿರುವವರ ಸರಾಸರಿ ನೋಡಿದರೆ ಪ್ರೌಢಶಾಲೆ, ಪದವಿ ಪೂರ್ವ, ಪದವಿ, ಸ್ನತಕೋತ್ತರ ಪದವಿ ಶಿಕ್ಷಣ ಪಡೆದವರ ಸಂಖ್ಯೆ ತೀರಾ ಕಡಿಮೆ ಇದೆ. ಹೆಚ್ಚಿನದಾಗಿ ಉನ್ನತ ವ್ಯಾಸಂಗ ಮಾಡುವ ಅಗತ್ಯತೆ ಇದೆ.

ಒಟ್ಟಾರೆ ಹಟ್ಟಿಯಲ್ಲಿರುವ ಮ್ಯಾಸಬೇಡರಲ್ಲಿ ಕಂಡುಬರುವ ಶಿಕ್ಷಣ ಮಟ್ಟಗಳಲ್ಲಿನ ಪ್ರಮಾಣಗಳಿಂದ ತಿಳಿದುಬರುವ ಅಂಶವೇನೆಂದರೆ ಇವರಲ್ಲಿ ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳು ಹೆಚ್ಚು ಪ್ರಬಲವಿಲ್ಲದಿರುವುದು, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪ್ರಬಲವಿಲ್ಲದೆ ಮತ್ತು ನಗರಗಳಿಂದ ದೂರ ಇರುವುದರಿಂದ ಸದಾ ಅಲೆಮಾರಿತನದಲ್ಲಿಯೇ ಕಾಲ ಕಳೆಯುತ್ತಿದ್ದುದರಿಂದ ಶಿಕ್ಷಣದ ಬಗ್ಗೆ ಒಲವು ತೋರಿಸಲಿಲ್ಲ ಹೀಗಾಗಿ ಈ ಸಮುದಾಯದ ಸಾಕ್ಷರತೆಯ ಪ್ರಮಾಣ ಹಿಂದುಳಿಯಲು ಕಾರಣವಾಗಿದೆ. ಸಮುದಾಯದ ಶೈಕ್ಷಣಿಕ ಅಭಿವೃದ್ಧಿಯ ಕಡೆಗೆ ಸರ್ಕಾರ ಹೆಚ್ಚಿನ ಗಮನ ಕೊಡಬೇಕಾದುದು ತುಂಬಾ ಅಗತ್ಯವಿದೆ ಹಾಗೂ ಹಟ್ಟಿಯ ವಿದ್ಯಾವಂತರು, ಪ್ರೌಢಶಾಲೆ, ಪದವಿಪೂರ್ವ ಶಿಕ್ಷಣ ಪೂರೈಸಿದವರು ಉನ್ನತ ವ್ಯಾಸಂಗದ ಕಡೆ ಗಮನಹರಿಸುವ ಅಗತ್ಯತೆ ಇದೆ.

### ೬.೩ ರಾಜಕೀಯ ಸ್ಥಿತ್ಯಂತರ

ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಪ್ರಸ್ತುತ ಸಂದರ್ಭದ ರಾಜಕೀಯ ಸ್ಥಿತಿಯನ್ನು ನೋಡುವುದಾದರೆ ಮೊದಲು ಅವರ ಸ್ಥಳೀಯ ನ್ಯಾಯ ವ್ಯವಸ್ಥೆಯನ್ನು ತಿಳಿದುಕೊಂಡು ನಂತರ

ಇಂದಿನ ಆಧುನಿಕತೆಯ ರಾಜಕೀಯ ಅರಿಯುವುದು ಸೂಕ್ತ. ಹಟ್ಟಿಯ "ಮ್ಯಾಸಬೇಡ ಬುಡಕಟ್ಟು ಸಮುದಾಯವು ತನ್ನದೇ ಆದ ಸಾಮಾಜಿಕ ನಿಯಮ ಒಳಾಡಳಿತ ಪದ್ಧತಿಯನ್ನು ಹೊಂದಿದ್ದ ಈ ಸಮುದಾಯ 'ಪ್ರಸ್ತುತ ಸಂದರ್ಭದಲ್ಲಿ ಆಂತರಿಕ ಮತ್ತು ಬಾಹ್ಯವಾಗಿ ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದು ಅವುಗಳನ್ನು ಪರಿಹರಿಸಿಕೊಳ್ಳಬೇಕಾಗಿದೆ'"[೨]. ಹಾಗೆ ತಮ್ಮ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳವುದು ಅನಿವಾರ್ಯವಾಗಿದೆ. ಇವರು ತಮ್ಮಲ್ಲೇ ರಚಿಸಿಕೊಂಡಿದ್ದ ಸರಳ ಸಂಘಟಿತ ರಾಜಕೀಯ ಅಥವಾ ನ್ಯಾಯವ್ಯವಸ್ಥೆಗೆ ಅವರ ಹಿರಿಯ ವ್ಯಕ್ತಿ ಅಥವಾ ಮುಖಂಡನೇ ಯಜಮಾನನಾಗಿರುತ್ತಾನೆ, ಈ ಮುಖಂಡನಿಗೆ ಎಲ್ಲಾ ರೀತಿಯಿಂದಲೂ ಗೌರವ ಕೊಡುತ್ತಾರೆ. ಮುಖಂಡನನ್ನು ಸಾಮಾನ್ಯವಾಗಿ ಅನುವಂಶೀಯವಾಗಿಯೇ ಆಯ್ಕೆ ಮಾಡುತ್ತಾರೆ. ಹಟ್ಟಿಯ ಯಜಮಾನ, ಪೂಜಾರಿ ಮೊದಲಾದ ಅಧಿಕಾರದ ಹುದ್ದೆಗಳು ಅನುವಂಶೀಯವಾಗಿ ಬರುತ್ತಿದ್ದವು. ಹಟ್ಟಿಯಲ್ಲಿ ಯಾವುದೇ ಒಳಜಗಳಗಳಾದರೂ ಕುಲಪಂಚಾಯಿತಿ ಮೂಲಕ ಬಗೆಹರಿಸಿಕೊಳ್ಳುತ್ತಿದ್ದರು. ಗಂಭೀರ ವಿಚಾರಗಳಿದ್ದರೆ ಗುಡಿಕಟ್ಟೆ, ಕಟ್ಟೆಮನೆಗಳಿಗೆ ಹೋಗುತ್ತಿದ್ದರು ಕಟ್ಟೆಮನೆಯ ಬಿಗಿಯಾದ ಕಟ್ಟು ಕಟ್ಟಳೆಗಳು ದಂಡ ಬಹಿಷ್ಕಾರಗಳಿಗೆ ಹೆದರಿ ಹಟ್ಟಿಯ ಜನರು ಸಾಮಾಜಿಕ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು. ಹಟ್ಟಿಯ ಯಾವುದೇ ಹಬ್ಬ ಜಾತ್ರೆ ಮದುವೆ ಮುಂತಾದ ಮಂಗಳ ಕಾರ್ಯಗಳು ಹಟ್ಟಿಯ ಹಿರಿಯ ಅಥವಾ ಯಜಮಾನರ ಮುಖಂಡತ್ವದಲ್ಲೇ ನಡೆಯುತ್ತಿದ್ದವು. ನ್ಯಾಯನಿರ್ಣಯ ಮತ್ತು ಇವರ ಸ್ಥಳೀಯ ರಾಜಕೀಯ ವ್ಯವಸ್ಥೆಯಲ್ಲಿ ತಪ್ಪಿತಸ್ಥರಿಗೆ ದಂಡ, ಶಿಕ್ಷೆ ಹಾಗೂ ಬಹಿಷ್ಕಾರ ವಿಧಿಸುವ ವಿಶೇಷ ಅಧಿಕಾರ ಯಜಮಾನರಿಗೆ ಇತ್ತು, ಯಜಮಾನರು ನಿಷ್ಪಕ್ಷಪಾತವಾಗಿ ನ್ಯಾಯ ತೀರ್ಮಾನ ಮಾಡುತ್ತಿದ್ದರು. ಸ್ವಾತಂತ್ರ್ಯಾ ನಂತರ ಪ್ರಜಾಪ್ರಭುತ್ವ ಸರ್ಕಾರ ಚುನಾವಣೆ ವ್ಯವಸ್ಥೆ ಜಾರಿಗೆ ಬಂದಾಗಲೂ ಸಹ ಹಟ್ಟಿಯ ಯಜಮಾನರು ಸೂಚಿಸುವ ಪಕ್ಷ ಅಥವಾ ವ್ಯಕ್ತಿಗೆ ಮತ ಹಾಕುತ್ತಾ ಬಂದರು ಜೊತೆಯಲ್ಲಿ ತಮ್ಮ ಪಾರಂಪರಿಕ ಆಡಳಿತ ವ್ಯವಸ್ಥೆಯನ್ನೂ ಉಳಿಸಿಕೊಂಡು ಬಂದಿರುವರು. ಕಾಲಕ್ರಮೇಣ ಹಟ್ಟಿಯ ಜನರಲ್ಲಿ ವೈಮನಸ್ಸು ಬೆಳೆದು ಸಾಮುದಾಯಿಕ ವಿಘಟನೆಗಳು ಪ್ರಾರಂಭವಾದವು ಪ್ರಸ್ತುತ ಪ್ರಜಾಪ್ರಭುತ್ವದ ನೀತಿ ಮತ್ತು ಧೋರಣೆಗಳನ್ನು ಹಟ್ಟಿಯ ಎಲ್ಲಾ ಜನರು ಅರ್ಥಮಾಡಿಕೊಂಡು ತಾವೇ ಚುನಾವಣೆಗಳಿಗೆ ನಿಲ್ಲಲು ಪ್ರಾರಂಭಿಸಿದ್ದಾರೆ.

ಈ ಹಟ್ಟಿಯು ಮೊಳಕಾಲ್ಮೂರು ತಾಲ್ಲೂಕು ಕ್ಷೇತ್ರ, ಚಿತ್ರದುರ್ಗ ಜಿಲ್ಲಾ ಕ್ಷೇತ್ರ ಮತ್ತು ತುಮಕೂರ್ಲಹಳ್ಳಿ ಗ್ರಾಮ ಪಂಚಾಯಿತಿಗೆ ಒಳಪಡುತ್ತದೆ. ಇತ್ತೀಚಿನ ದಿನಗಳಲ್ಲಿ ಹಟ್ಟಿಯ ಬೇಡರು ಗ್ರಾಮ ಪಂಚಾಯಿತಿ ಚುನಾವಣೆಗಳಲ್ಲಿ ಸ್ಪರ್ಧಿಸುತ್ತಿದ್ದಾರೆ. ಪ್ರಸ್ತುತ ಹಟ್ಟಿಯಲ್ಲಿ ವೆಂಕಟೇಶ್ ಎಂಬುವರು ಮತ್ತು ತಿಪ್ಪಮ್ಮ, ಸೂರಮ್ಮ, ಸೂರಮ್ಮ, ಎಂಬ ಬೇಡ ಸಮುದಾಯದವರು ಮತ್ತು ಮಾರಕ್ಕ ಎಂಬ ಒಬ್ಬ ಮಾದಿಗ ಸಮುದಾಯದ ಮಹಿಳೆ ಗ್ರಾಮ ಪಂಚಾಯ್ತಿ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ, ಆದರೆ ಈ ಹಟ್ಟಿಯಿಂದ ಯಾರೂ ಸಹ ತಾಲ್ಲೂಕು ಪಂಚಾಯ್ತಿ, ಜಿಲ್ಲಾ ಪಂಚಾಯ್ತಿ ಚುನಾವಣೆಗಳಿಗೆ ಸ್ಪರ್ಧಿಸಿಲ್ಲ ಕಾರಣ ಇವರು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಅಷ್ಟೊಂದು ಪ್ರಭಲರಾಗಿಲ್ಲ. ಕಂಪಳದೇವರ ಹಟ್ಟಿಯು ಪ್ರಸ್ತುತ ಮೊಳಕಾಲ್ಮೂರು ವಿಧಾನಸಭಾ ಹಾಗೂ ಚಿತ್ರದುರ್ಗ ಲೋಕ ಸಭಾಕ್ಷೇತ್ರಕ್ಕೆ ಒಳಪಡುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಒಂದು ಕಾಲದಲ್ಲಿ ಎಲ್ಲೋ ಕಾಡಿನಲ್ಲಿ ವಾಸಿಸುತ್ತಿದ್ದ ಇವರು ಕಾಲಾನಂತರ ಹಟ್ಟಿಗಳಲ್ಲಿ ವಾಸಿಸಲು ಪ್ರಾರಂಭಿಸಿ ತಮ್ಮದೇ ಆದ ಅಲಿಖಿತ ಸಂವಿಧಾನ ರಚಿಸಿಕೊಂಡು ಅದರ ಪ್ರಕಾರ ಆಡಳಿತ ನಡೆಸಿ ಸಮುದಾಯವನ್ನು ನಿಯಂತ್ರಿಸುತ್ತಿದ್ದ ಇವರು ಇಂದು ಸ್ವಾತಂತ್ರ್ಯಾನಂತರದಿಂದ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ ಮತ್ತು ಗ್ರಾಮಪಂಚಾಯ್ತಿ ಇತರ ಚುನಾವಣೆಗಳಿಗೆ ಸ್ಪರ್ಧಿಸುತ್ತಿದ್ದಾರೆ. ಮೊಳಕಾಲ್ಮೂರು ವಿಧಾನಸಭಾ ಕ್ಷೇತ್ರವು ಪರಿಶಿಷ್ಟ ಪಂಗಡ ಮೀಸಲು ಕೇತ್ರವಾಗಿರುವುದರಿಂದ ಈ ವಿಧಾನಸಭಾ ಕ್ಷೇತ್ರದಲ್ಲಿ ಪರಿಶಿಷ್ಟ ಪಂಗಡಗಳಲ್ಲಿ ಬೇಡರೇ ಹೆಚ್ಚಾಗಿರುವುದರಿಂದ ಅವರೇ ಸ್ಪರ್ದಿಸುತ್ತಿದ್ದಾರೆ ಮತ್ತು ಅವರೇ ಆಡಳಿತ ನಡೆಸುತ್ತಿದ್ದಾರೆ.

ಇದುವರಿಗೆ ಈ ಭಾಗದಲ್ಲಿ ಎನ್ ವೈ ಗೋಪಾಲಕೃಷ್ಣ, ಎನ್ ವೈ ಹನುಮಂತಪ್ಪ, ತಿಪ್ಪೇಸ್ವಾಮಿ, ಪಟೇಲ್ ಪಾಪನಾಯಕ, ಬಿ ಶ್ರೀ ರಾಮುಲು(ಇತ್ತೀಚೆಗೆ ಎಂ ಎಲ್ ಎ ಚುನಾವಣೆಗೆ ಸ್ಪರ್ಧಿಸಿದ್ದ ಯೋಗೀಶ್ ಬಾಬು) ಮುಂತಾದವರು ಎಂ ಎಲ್ ಎ ಆಗಿ ಅಧಿಕಾರ ಪಡೆದು ಆಡಳಿತ ನಡೆಸಿದ್ದಾರೆ. ಇನ್ನು ಲೋಕಸಭಾ ಕ್ಷೇತ್ರದಲ್ಲಿ ಬೆರಳೆಣಿಕೆಯಷ್ಟು ಜನರು ಮಾತ್ರ ರಾಜಕೀಯದಲ್ಲಿದ್ದಾರೆ. ಆದರೆ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ರಾಜಕೀಯ ಸ್ಥಿತಿಯನ್ನು ನೋಡುವುದಾದರೆ ಈಗಾಗಲೇ ಹೇಳಿದಂತೆ ಇವರು ಇದುವರೆಗೂ ಗ್ರಾಮ ಪಂಚಾಯಿತಿಯನ್ನು ಹೊರತುಪಡಿಸಿ ಬೇರೆ ಯಾವ ಚುನಾವಣೆಗಳಲ್ಲೂ ಸ್ಪರ್ಧಿಸಿಲ್ಲ ಮತ್ತು ಆಡಳಿತ ನಡೆಸಿಲ್ಲದಿರುವುದು ತಿಳಿದುಬರುತ್ತದೆ.

**೬.೪ ಸಾಂಸ್ಕೃತಿಕ ಸ್ಥಿತ್ಯಂತರ**

ಯಾವುದೇ ಒಂದು ಸಮುದಾಯದಲ್ಲಾದ ಸಾಂಸ್ಕೃತಿಕ ಬದಲಾವಣೆಯನ್ನು ಆ ಸಮುದಾಯ ಎಲ್ಲಾ ಬಗೆಯ ಏರಿಳಿತಗಳನ್ನು ಕೈ ಚೆಲ್ಲಿ ಅಥವಾ ಅಸಹಾಯಕ ದೈನ್ಯ ಸ್ಥಿತಿಯಿಂದಲೇ ಸ್ವೀಕರಿಸುತ್ತದೆ ಎಂದು ಹೇಳಿದರೆ ತಪ್ಪಾಗುತ್ತದೆ ಯಾವುದೇ ಒಂದು ಸಂಸ್ಕೃತಿಯ ಸ್ವೀಕರಣ ಮತ್ತು ಪ್ರತಿರೋಧಗಳು ಏಕಕಾಲದಲ್ಲಿ ಆ ಕೋಶದ ಒಳಗೆ ಸನ್ನದ್ಧವಾಗಿರುತ್ತದೆ. ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಭಾರತದ ಸಮುದಾಯಗಳು ಮಿಶ್ರ ಪ್ರತಿಕ್ರಿಯೆಯ ಮೂಲಕ ಸಂವೇದಿಸಿದ್ದು ಗಮನಾರ್ಹ ಸಂಗತಿ. ಈ ಸ್ವೀಕರಣ ಮತ್ತು ಪ್ರತಿರೋಧಗಳು ಸಮುದಾಯಗಳ ಬದಲಾವಣೆಗೆ ಅರ್ಥಪೂರ್ಣವಾಗಿ ಅನ್ವಯಿಸುವ, ಬೆಸೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ಸ್ವೀಕರಿಸುವಾಗ ಆಳದಲ್ಲಿನ ಚಾರಿತ್ರಿಕ ಹಸಿವು ಪ್ರತಿರೋಧಿಸುವಾಗ ಕಾಡುವ ಅನನ್ಯತೆಯ ಭಾವ ಇವೆರಡೂ ಒಂದು ಸಮುದಾಯದ ಸಂಸ್ಕೃತಿ ಆಳದಲ್ಲಿನ ತುಡಿತವನ್ನು ಒಂದು ಅರ್ಥಪೂರ್ಣ ಲೆಕ್ಕ ಹೊಂದಿಸಿವೆ. ಸಂಸ್ಕೃತಿ ಎನ್ನುವುದು ಒಳಿತು ಕೆಡಕುಗಳು ಸಂಭವಿಸುವ ನಿರಂತರ ಹರಿವು ಆ ಹರಿವು ಹರಿಯುತ್ತಲೇ ಕೆಡುಕುಗಳನ್ನು ಕಳಚಿ ತಿಳಿಯಾಗಿಸುತ್ತದೆ. ಇಂಥ ಚಾರಿತ್ರಿಕ ಹರಿವಿಗೆ ಈ ರೀತಿಯ ಪರಿಷ್ಕರಣೆಯ ಗುಣ ಕಾಲದ ಒತ್ತಡದಿಂದ ಸಹಜವಾಗಿಯೇ ಆಗುತ್ತದೆ, ಹೀಗಾಗಿ ಸಂಸ್ಕೃತಿಯನ್ನು ಕಾಯ್ದುಕೊಳ್ಳಬೇಕೆನ್ನುವ ಮನುಷ್ಯ ಪ್ರಯತ್ನ ಮತೀಯ ಅಹಂಕಾರದಿಂದ ಭೇದಿಸಲ್ಪಟ್ಟಿರುತ್ತದೆ.

ಸಂಸ್ಕೃತಿ ತನ್ನಷ್ಟಕ್ಕೆ ತಾನು ಸ್ವತಂತ್ರ ಘಟಕವಲ್ಲ ಅದು ಸಮುದಾಯದ ಅಂತಃಸತ್ವ, ಕಾಲದ ಒತ್ತಡಗಳು, ಪ್ರಭಾವಗಳು ಹೇಗೆ ಸಮುದಾಯದ ಮೇಲೆ ಬದಲಾವಣೆಗಳ ಅನಿವಾರ್ಯತೆಯನ್ನು

ತರುತ್ತವೋ ಅಲ್ಲೆಲ್ಲಾ ಸಂಸ್ಕೃತಿ ತನ್ನಷ್ಟಕ್ಕೆ ತಾನು ಸ್ಥಿತ್ಯಂತರಗಳಿಗೆ ಒಳಗಾಗುತ್ತದೆ. ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಒಳಗಾಗುತ್ತಿರುವ ಬುಡಕಟ್ಟು ಸಮುದಾಯಗಳಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡ ಬುಡಕಟ್ಟು ಸಮುದಾಯ ಕೂಡಾ ಒಂದಾಗಿದೆ. ಈ ಸಮುದಾಯವು ಇಂದು ಸಂಸ್ಕೃತೀಕರಣ, ಆಧುನೀಕರಣ ಮತ್ತು ಮತಾಂತರಕ್ಕೆ ಒಳಗಾಗಿ ಬದಲಾವಣೆಯ ಲಕ್ಷಣಗಳು ಕಂಡುಬರುತ್ತಿವೆ. ಹಾಗಾಗಿ ಇಲ್ಲಿ ಈ ಮೂರು ಅಂಶಗಳನ್ನು ಸೂಕ್ಷ್ಮವಾಗಿ ಚರ್ಚಿಸೋಣ. ಕೆಳಸ್ತರದ ಬುಡಕಟ್ಟು ಸಮುದಾಯಗಳು ತಮ್ಮ ರೂಢಿ ಸಂಪ್ರದಾಯ ಪದ್ಧತಿ, ಸಂಸ್ಕಾರ, ಕ್ರಿಯಾವಿಧಿ, ಆದರ್ಶಜೀವನ ವಿಧಾನಗಳನ್ನು ಮೇಲ್ಜಾತಿಯವರ ರೀತಿ ನೀತಿಗಳಿಗೆ ಅನುಗುಣವಾಗಿ ಬದಲಾಯಿಸಿಕೊಳ್ಳುವ ಪ್ರಕ್ರಿಯೆಯನ್ನು ಸಂಸ್ಕೃತೀಕರಣ ಎನ್ನುವರು. ಅಂದರೆ ಕೆಳಜಾತಿಗಳು ತಾವು ಕಂಡ ಪ್ರಬಲ ಹಾಗೂ ಪ್ರತಿಷ್ಠಿತ ಮೇಲ್ಜಾತಿಗಳ ಅನುಕರಣೆಯ ಮೂಲಕ ತಮ್ಮ ಅಂತಸ್ಥನ್ನು ಹೆಚ್ಚಿಸಿಕೊಳ್ಳುವುದು ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಚಲನೆಯ ಪ್ರಕ್ರಿಯೆಯಾಗಿದೆ. ಇಂಥಾ ಪ್ರಗತಿಯನ್ನು ಅನುಸರಿಸುವ ಸಮುದಾಯಗಳಲ್ಲಿ ಮ್ಯಾಸಬೇಡ ಸಮುದಾಯವೂ ಒಂದಾಗಿದೆ.

ಹಟ್ಟಿಯಲ್ಲಿನ ಮ್ಯಾಸಬೇಡರು ಇತ್ತೀಚೆಗೆ ಸಂಸ್ಕೃತೀಕರಣಗೊಳ್ಳುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ. ಕಂಪಳದೇವರ ಹಟ್ಟಿಯಲ್ಲಿ ಮ್ಯಾಸಬೇಡರು ಅಯ್ಯಪ್ಪಸ್ವಾಮಿಯನ್ನು ಆರಾಧಿಸುವುದು ಕಂಡುಬರುತ್ತಿದೆ. ಮತ್ತು ಆತನ ಹೆಸರಿನಲ್ಲಿ ಮಾಲೆಹಾಕಿ ಅದರ ನಿಯಮಗಳನ್ನು ಪಾಲಿಸುತ್ತಿದ್ದಾರೆ, ಆ ಸಂದರ್ಭದಲ್ಲಿ ಮಾಂಸ, ಮಧ್ಯ ಸೇವಿಸುವುದಿಲ್ಲ. ಅಲ್ಲದೆ ಕೆಲವರು ಸತ್ಯನಾರಾಯಣ ಪೂಜೆಯನ್ನು ಮಾಡುತ್ತಿದ್ದಾರೆ, ಅಯ್ಯಪ್ಪಸ್ವಾಮಿ ಪೂಜೆ, ಲಕ್ಷ್ಮೀಪೂಜೆ ಮುಂತಾದ ಶಿಷ್ಟ ದೇವತೆಗಳ ಪೂಜೆಯನ್ನು ಮಾಡುತ್ತಾ ಸಾವಿರಾರು ರೂಪಾಯಿಗಳನ್ನು ಪೂಜೆಗಾಗಿ ವ್ಯಯಮಾಡುತ್ತಿದ್ದಾರೆ. ಇದರ ಕುರಿತಾಗಿ ಹಟ್ಟಿಯ ಜನರನ್ನು ವಿಚಾರಿಸಿದಾಗ ಅವರಿಂದ ಬಂದ ಉತ್ತರ ಮಾಲೆ ಹಾಕುವುದರಿಂದ, ಪೂಜೆ ಮಾಡುವುದರಿಂದ ನಮಗೆ ಒಳ್ಳೆಯದಾಗುತ್ತದೆ ಮತ್ತು ಕೆಲವು ಚಟಗಳನ್ನು ಬಿಡಲೂ ಸಹ ಮಾಲೆ ಹಾಕುತ್ತಿದ್ದೇವೆ ಎಂದು ಹೇಳುತ್ತಾರೆ. ಒಂದು ಕುಟುಂಬ ಒಂದು ವರ್ಷಪೂರ್ತಿ ಕೃಷಿ ಕೆಲಸದಲ್ಲಿ ದುಡಿದು ಸಂಪಾದಿಸಿದರೆ ಬರುವ ಹಣ ೧೦-೨೦ ಸಾವಿರ ಅಷ್ಟೆ ಆದರೆ ಅದಕ್ಕಿಂತ ಹೆಚ್ಚಿನದಾಗಿ ಇಲ್ಲಿನ ಜನರು ದೇವರ ಹೆಸರಿನಲ್ಲಿ ಪೂಜೆಗಳಿಗೆ ಖರ್ಚುಮಾಡುತ್ತಿದ್ದಾರೆ. ಕುಡಿತದ ಚಟವನ್ನು ಬಿಡಲು ಅಯ್ಯಪ್ಪ ಸ್ವಾಮಿ ಮಾಲೆ, ಪಾಂಡುರಂಗ ಸ್ವಾಮಿಯ ಮಾಲೆ ಹಾಕುತ್ತಿದ್ದಾರೆ ಆದರೆ ಮಾಲೆ ತೆಗೆದ ತಕ್ಷಣವೇ ಮತ್ತೆ ಕುಡಿಯುತ್ತಿದ್ದಾರೆ, ಕೆಲವೇ ಕೆಲವರು ಮಾತ್ರ ಇವುಗಳಿಂದ ಪರಿವರ್ತನೆಯಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಹಟ್ಟಿಯ ಬೇಡರ ಮದುವೆ ಮುಂತಾದ ಆಚರಣೆಗಳಲ್ಲಿ ಬ್ರಾಹ್ಮಣರು ಪೌರೋಹಿತ್ಯ ವಹಿಸಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಅಲ್ಲದೆ ಹಟ್ಟಿಯಲ್ಲಿ ೮ ಕುಟುಂಬಗಳು ಕ್ರಿಶ್ಚಿಯನ್ ಧರ್ಮವನ್ನು ಅನುಸರಿಸುತ್ತಿದ್ದಾರೆ. ಕೃಷ್ಣಪ್ಪ ಎಂಬುವರನ್ನು ಸಂದರ್ಶಿಸಿ ಕ್ರಿಶ್ಚಿಯನ್ ಮತಾನುಕರಣೆಯ ಬಗ್ಗೆ ವಿಚಾರಿಸಿದಾಗ ಅವರು ಹೇಳಿದ್ದು ಹೀಗೆ, ನಾನು ಮೊದಲು ಯಾವುದೇ ವ್ಯವಹಾರ ಮಾಡಿದರೂ ಲಾಭವಾಗುತ್ತಿರಲಿಲ್ಲ ತುಂಬಾ ತೊಂದರೆಯಾಗುತ್ತಿತ್ತು ಅಲ್ಲದೆ ಮನೆಯಲ್ಲಿ ಯಾರಾದರೂ ಒಬ್ಬರು ಕಾಯಿಲೆಯಿಂದ ಬಳಲುತ್ತಿದ್ದರು ಏಸು ಸ್ವಾಮಿಗೆ ನಡೆದುಕೊಳ್ಳಲು

ಪ್ರಾರಂಭಿಸಿದಾಗಿನಿಂದ ಒಳ್ಳೆಯದಾಗಿದೆ. ಅಲ್ಲದೆ ಈಗ ಕುರಿಗಳ ಮಾರಾಟದ ವ್ಯಾಪಾರ ಮಾಡುತ್ತಿದ್ದೇನೆ ಉತ್ತಮ ಲಾಭ ಪಡೆಯುತ್ತಿದ್ದೇನೆ ಈಗ ಹಟ್ಟಿಯಲ್ಲಿ ಕೃಷ್ಣಪ್ಪ ಎಂದರೆ ಎಲ್ಲರಿಗೂ ಪರಿಚಯವಿರುವ ವ್ಯಕ್ತಿಯಾಗಿದ್ದೇನೆ ಎನ್ನುತ್ತಾರೆ. ಅದರಂತೆಯೇ ಶಾರದಮ್ಮ ಎಂಬ ಮಹಿಳೆಯನ್ನು ವಿಚಾರಿಸಿದಾಗ ಅವರು ಈ ಮೊದಲು ನನಗೆ ಆರೋಗ್ಯ ಸರಿ ಇರಲಿಲ್ಲ ಯಾವ ಆಸ್ಪತ್ರೆಗೆ ತೋರಿಸಿದರೂ ಗುಣವಾಗಲಿಲ್ಲ, ನನ್ನ ಗಂಡ ಎರಡನೆಯ ಮದುವೆಯಾಗಲು ತಯಾರಾಗಿದ್ದ ಆಗ ಬಳ್ಳಾರಿಯಲ್ಲಿನ ನನ್ನ ಚಿಕ್ಕಮ್ಮ ಏಸುಸ್ವಾಮಿಗೆ ನಡೆದುಕೊಳ್ಳಲು ಹೇಳಿದಳು ಮೂರು ಭಾನುವಾರ ಬಳ್ಳಾರಿಯಲ್ಲಿರುವ ಚರ್ಚಿಗೆ ಹೋಗಿಬಂದೆ ನನ್ನ ಆರೋಗ್ಯ ಸುಧಾರಿಸಿತು. ಅಂದಿನಿಂದ ಪ್ರತಿ ಭಾನುವಾರ ಚಿಕ್ಕ ಜೋಗಿಹಳ್ಳಿಯಲ್ಲಿರುವ ಚರ್ಚಿಗೆ ಹೋಗಿಬರುತ್ತಿದ್ದೇನೆ ಈಗ ಗಂಡ ಹೆಂಡತಿ ಚೆನ್ನಾಗಿದ್ದೇವೆ ಎನ್ನುತ್ತಾರೆ. ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಇವರು ಸಂಪೂರ್ಣವಾಗಿ ಆ ಧರ್ಮಕ್ಕೆ ಮತಾಂತರಗೊಂಡಿಲ್ಲ ಪ್ರತಿ ಭಾನುವಾರ ಏಸುಸ್ವಾಮಿಗೆ ನಡೆದುಕೊಳ್ಳುತ್ತಿರುವುದು ಮಾತ್ರ ಕಂಡುಬರುತ್ತದೆ. ಈ ರೀತಿಯಾಗಿ ಹಟ್ಟಿಯ ಮ್ಯಾಸಬೇಡರು ಸಾಂಸ್ಕೃತಿಕವಾಗಿ ಪರಿವರ್ತನೆಯ ಹಾದಿಯಲ್ಲಿರುವುದು ನಿಜವೇ ಆದರೂ ಅಂತರ್ಯದಲ್ಲಿ ತಮ್ಮ ಸಂಸ್ಕೃತಿಯನ್ನು ಬಿಟ್ಟಿಲ್ಲದಿರುವುದು ಕಂಡುಬರುತ್ತದೆ.

**೬.೫ ಆರ್ಥಿಕ ಸ್ಥಿತ್ಯಂತರ**

ಯಾವುದೇ ಒಂದು ಬುಡಕಟ್ಟು ಸಮುದಾಯದ ಸಾಮಾಜಿಕ ಸ್ಥಿತಿಗತಿಯು ಆ ಸಮುದಾಯದ ಆರ್ಥಿಕ ಸ್ಥಿತಿಗತಿಗಳ ವಿವರಣೆಯನ್ನು ಒಳಗೊಳ್ಳುತ್ತದೆ. ಆರ್ಥಿಕತೆಯ ಸ್ಥಾನಮಾನಗಳ ವಿವರಗಳ ಮೂಲಕವೇ ಸಮಾಜ, ಸಮುದಾಯ, ಧರ್ಮ, ಸಂಸ್ಕೃತಿ ಇತರೆಲ್ಲವೂ ನಿರ್ವಚಿಸಲ್ಪಡುತ್ತವೆ. ಹಾಗೆ ನೋಡಿದರೆ ಆರ್ಥಿಕ ಹಿತಾಸಕ್ತಿಯಿಲ್ಲದ ಧರ್ಮಕ್ಕಾಗಲೀ, ಸಮಾಜಕ್ಕಾಗಲೀ ಪ್ರತ್ಯೇಕ ಅಸ್ತಿತ್ವಗಳೇ ಇಲ್ಲ ಎನ್ನಬಹುದು. ಮಾನವನ ಆರ್ಥಿಕ ಜೀವನದ ಹಿನ್ನೆಲೆಯನ್ನು ವಿವೇಚಿಸಿದಂತೆ ಇಂದಿನ ನಾಗರಿಕ ಸಮಾಜ ಅತಿಹೆಚ್ಚು ಕ್ರೂರವೂ, ಸ್ವಾರ್ಥಕೇಂದ್ರಿತವೂ ಆಗಿ ಕಾಣುತ್ತದೆ. ಈ ಆರ್ಥಿಕತೆ ಮನುಷ್ಯ ಜೀವನದ ಮೂಲಭೂತ ಪ್ರವೃತ್ತಿಗಳಿಗೆ ಅಂಟಿಕೊಂಡಿರುವುದು 'ಹಸಿವು' ಆಹಾರಾನ್ವೇಷಣೆಗೆ ಕಾರಣವಾಗಿದೆ. ಆದಿಮಾನವನಿಂದ ಆಹಾರದ ಹುಡುಕಾಟ ಆರಂಭವಾಗಿ ಮನುಷ್ಯನ ಬದುಕಿಗೆ ಒಂದು ಬಗೆಯ ಸ್ಥಿರತೆ ಬರುವವರೆಗೆ ಈ ಹುಡುಕಾಟ ನಿರಂತರವಾಗಿದೆ. ಮನುಷ್ಯ ಮೂಲತಃ ಅರಣ್ಯದಲ್ಲಿದ್ದನೆಂಬ ಬಗ್ಗೆ ಯಾವ ಸಂದೇಹವೂ ಇಲ್ಲ. ಅರಣ್ಯವಾಸಿಯಾಗಿದ್ದ ಆದಿ ಮಾನವನ ಬೆಳವಣಿಗೆಯನ್ನು ವಿದ್ವಾಂಸರು ನಾಲ್ಕು ಹಂತಗಳಲ್ಲಿ ವಿವರಿಸುತ್ತಾರೆ. ಮೊದಲನೆಯದು ಬೇಟೆ ಮತ್ತು ಆಹಾರ ಸಂಗ್ರಹಣೆಯ ಹಂತ ಈ ಹಂತದಲ್ಲಿ ಮಾನವ ಪ್ರಾಣಿಗಳನ್ನು ಬೇಟೆಯಾಡಿ ಮತ್ತು ಕಾಡಿನಲ್ಲಿನ ಗೆಡ್ಡ, ಗೆಣಸುಗಳನ್ನು ಸಂಗ್ರಹಿಸಿಕೊಂಡು ಅವುಗಳನ್ನು ತಿಂದು ಜೀವಿಸುತ್ತಿದ್ದ, ನಂತರ ಕಾಡುಪ್ರಾಣಿಗಳನ್ನು ಹಿಡಿದು ಪಳಗಿಸಿ ಅವುಗಳಿಂದ ಉಪಜೀವನವನ್ನು ಸಾಗಿಸಲು ಪ್ರಾರಂಭಿಸಿದ ಇದು ಎರಡನೇ ಹಂತ, ನಂತರ ಒಂದೇ ಸ್ಥಳದಲ್ಲಿ ನೆಲೆಸಿ ಕೃಷಿಯಿಂದ ಜೀವನ ಸಾಗಿಸಲಾರಂಭಿಸಿದ ಇದು ಕೊನೆಯ ಹಂತ ಇದನ್ನು ನಾಗರೀಕತೆಯ ಹಂತ ಎನ್ನುತ್ತಾರೆ. ಈ ರೀತಿಯಾಗಿ ಮಾನವ ವಿಕಾಸಹೊಂದಿದಂತೆಲ್ಲಾ ಅವನ ಆರ್ಥಿಕತೆಯಲ್ಲೂ ಬದಲಾವಣೆ ಉಂಟಾಯಿತು. ಅವನಲ್ಲಿ ಆಸ್ತಿಯ

ಪರಿಕಲ್ಪನೆ ಬಂದಮೇಲಂತೂ ಹಣಕ್ಕೆ ಹೆಚ್ಚಿನ ಮಹತ್ವ ದೊರೆಯಿತು. ಆರಂಭದಲ್ಲಿ ಮನುಷ್ಯ ಬೇಟೆಯ ಮೂಲಕ ಆಹಾರ ಸಂಗ್ರಹಿಸುತ್ತಿದ್ದ. ಬೇಟೆಯು ಅಂದಿನ ಪ್ರಮುಖ ಆಹಾರೋತ್ಪಾದನೆಯ ಮೂಲವಾಗಿತ್ತು. ಆದರೆ ಇದೇ ಬೇಟೆ ಇಂದು ಏನಾಗಿದೆಯೆಂಬುದನ್ನು ಅವಲೋಕಿಸಿದರೆ ಸಂಸ್ಕೃತಿಯ ಸ್ಥಿತ್ಯಂತರ ಹಾಗೂ ಚಲನಶೀಲತೆಯ ಸ್ವರೂಪದ ಬಗ್ಗೆ ಸ್ಪಷ್ಟವಾಗುತ್ತದೆ. ಅಂದಿನ ಪ್ರಮುಖ ಆಹಾರೋತ್ಪಾದನಾ ವಿಧಾನವಾಗಿದ್ದ ಬೇಟೆ ಬರಬರುತ್ತಾ ಒಂದು ಸಾಂಪ್ರದಾಯಿಕ ಆಚರಣೆಯಾಯಿತು. "ಉತ್ಪಾದನಾ ವಿಧಾನವೊಂದು ಹವ್ಯಾಸವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯಲ್ಲೇ ಊರುಗಳ ಹುಟ್ಟು ಸಂಭವಿಸಿವೆ. ಊರುಗಳು ಜನ್ಮತಳೆದು ಪಾಳೇಪಟ್ಟುಗಳು ರಚನೆಯಾಗುವ ವೇಳೆಗೆ ಕಾಡಿನ ಕೋಟ್ಯಾಂತರ ಮನುಷ್ಯರು ಊರಿನ ಮನುಷ್ಯರಾಗಿದ್ದರು. ಅವರ ಉಡುಪು ಬದಲಾಗಿತ್ತು ವಸತಿ ಬದಲಾಗಿತ್ತು, ಆಹಾರ ವಿಧಾನ ಪರಿವರ್ತನೆಯಾಗಿತ್ತು"[೬]. ಹೀಗೆ ಬದಲಾವಣೆಯ ಗಾಳಿ ಬೀಸಿದಂತೆಲ್ಲಾ ಒಂದು ಕಾಲಕ್ಕೆ ಅರಣ್ಯವಾಸಿಗಳ ಪ್ರಮುಖ ಆಹಾರ, ಆರ್ಥಿಕ ಚಟುವಟಿಕೆಯಾಗಿದ್ದ ಬೇಟೆಯು ಹವ್ಯಾಸವಾಯಿತು. ಕಾಡಿನಲ್ಲಿ ಪ್ರತಿನಿತ್ಯದ ಆಹಾರವಾಗಿದ್ದ ಮಾಂಸವು ಹಟ್ಟಿ, ಊರಿನಲ್ಲಿ ಹಬ್ಬದ ಆಹಾರವಾಯಿತು.

ಊರಿನ ಸಂಸ್ಕೃತಿ ಮತ್ತಷ್ಟು ವಿಸ್ತರಿಸುತ್ತಾ, ವಿಕಾಸವಾಗುತ್ತಾ ಹೋದಂತೆ ಬೇಟೆಯು ಜನರ ಆಚರಣೆಯಾಯಿತು ಈ ಬದಲಾವಣೆಗೆ ಹಟ್ಟಿಯ ಬೇಡಬುಡಕಟ್ಟು ಹೊರತಾದುದಲ್ಲ. ಹಟ್ಟಿಯ ಮ್ಯಾಸಬೇಡರ ಆರ್ಥಿಕ ಬದಲಾವಣೆಯ ಕುರಿತು ಹೇಳುವುದಾದರೆ ಒಂದು ಸಂದರ್ಭದಲ್ಲಿ ಈ ಸಮುದಾಯದಲ್ಲಿದ್ದ ಜೀವನ ಪದ್ಧತಿ ಈಗ ಬದಲಾಗಿದೆ. ಸಂಸ್ಕೃತಿ ಎನ್ನುವುದು ಸದಾ ಬದಲಾವಣೆಗೆ ಒಳಗಾಗುವಂತದ್ದು, ಅದು ಅದರ ಮುಖ್ಯ ಗುಣ. ಹೀಗಿರುವಾಗ ಬೇಡ ಸಮುದಾಯವು ತಮ್ಮ ಪಾರಂಪರಿಕ ಅಸ್ಮಿತೆಗಳನ್ನು ಉಳಿಸಿಕೊಳ್ಳುತ್ತಲೇ ಪರಿವರ್ತನೆಯಾಗುತ್ತಿದೆ. ಈ ಹಟ್ಟಿಯವರಲ್ಲಿ ಕೃಷಿ ಭೂಮಿಯನ್ನು ಹೊಂದಿರುವಂಥ ಕುಟುಂಬಗಳ ಕುರಿತು ನೋಡಿದಾಗ ಕಡಿಮೆ ಪ್ರಮಾಣದ ಜಮೀನು ಹೊಂದಿರುವವರನ್ನೇ ಹೆಚ್ಚಾಗಿ ಕಾಣಬಹುದು. ಒಂದು ವೇಳೆ ಭೂಮಿಯನ್ನು ಹೊಂದಿದ್ದರೂ ಸಹ ಐದು ಎಕರೆಗಿಂತ ಕಡಿಮೆ ಇರುವುದು ಕಂಡುಬರುತ್ತದೆ. ಅದೂ ಸಹ ಮಳೆ ಆಶ್ರಿತ ಒಣ ಬೇಸಾಯದ ಭೂಮಿಗಳು. ಭೂಮಿ ಇದ್ದರೂ ಬಿತ್ತನೆ ಮಾಡಲು ಎತ್ತುಗಳು ಹಾಗೂ ಕೃಷಿ ಸಲಕರಣೆಗಳು ಇರದೆ ಸಮಸ್ಯೆ ಎದುರಿಸುವಂಥ ಕುಟುಂಬಗಳೇ ಹೆಚ್ಚಾಗಿವೆ. ಇನ್ನು ಭೂ ರಹಿತ ಕುಟುಂಬದವರು ತಮ್ಮ ಆಹಾರಕ್ಕಾಗಿ ಅನ್ಯರ ಭೂಮಿಯಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿದ್ದಾರೆ.

ಸುಗ್ಗಿಯ ಕಾಲ ಮುಗಿದ ಮೇಲೆ ಕೆಲಸವಿಲ್ಲದೆ ಅನೇಕ ಕುಟುಂಬದ ಯುವಕರು ನಗರಗಳಿಗೆ ದುಡಿಯಲು ಹೋಗುತ್ತಿದ್ದಾರೆ. ಇಂತಹ ಸಮಸ್ಯೆಗಳು ಇಲ್ಲದವರು, ಸ್ವಲ್ಪ ಅನುಕೂಲವಿರುವವರು ಹಟ್ಟಿಯಲ್ಲಿಯೇ ಉಳಿಯುತ್ತಾರೆ. ಇನ್ನೂ ಕೆಲವರು ಹಟ್ಟಿಯಲ್ಲಿ ಅಥವಾ ತಾಲ್ಲೂಕು ಪ್ರದೇಶದಲ್ಲಿ ಟ್ರ್ಯಾಕ್ಟರ್ ಚಾಲಕರಾಗಿ, ಗುತ್ತಿಗೆದಾರರ ಕೈಯಲ್ಲಿ ಸಹಾಯಕರಾಗಿ ದುಡಿಯುತ್ತಿದ್ದಾರೆ. ಮಹಿಳೆಯರು ಮಾತ್ರ ತಮ್ಮ ಹಟ್ಟಿಯಲ್ಲಿಯೇ ಸ್ವಲ್ಪ ಸ್ಥಿತಿವಂತರ ಅಥವಾ ಭೂಮಿ ಹೊಂದಿರುವವರ ಹೊಲಗಳಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿದ್ದಾರೆ, ಅವರಿಗೆ ದಿನಕ್ಕೆ ೫೦-೧೦೦ ರೂಪಾಯಿ ಕೂಲಿ ಸಿಗುತ್ತದೆ ಆದರೆ ಕೂಲಿ ಕೆಲಸ ದಿನನಿತ್ಯ ಸಿಗುವುದಿಲ್ಲ. ಹಟ್ಟಿಯಲ್ಲಿನ ಬಹುತೇಕ ಜನರು ಕೃಷಿಯನ್ನೇ ಅವಲಂಬಿಸಿ

ಬದುಕುತ್ತಿದ್ದಾರೆ ಆದರೆ ಅದರಿಂದ ಸಂಪೂರ್ಣ ಕುಟುಂಬ ನಿರ್ವಹಣೆ ಕಷ್ಟವಾಗುತ್ತಿದೆ ಕಾರಣ ಒಣಭೂಮಿಯೇ ಹೆಚ್ಚಾಗಿದ್ದು ಮಳೆಯನ್ನೇ ಆಶ್ರಯಿಸಿ ಕೃಷಿಮಾಡುತ್ತಿದ್ದಾರೆ. ಆದ್ದರಿಂದ ಕೃಷಿಯನ್ನು ಮಾತ್ರವೇ ಅವಲಂಬಿಸದೆ ಕೃಷಿಯ ಜೊತೆ ಜೊತೆಯಲ್ಲಿ ಬೇರೆ ಬೇರೆ ವೃತ್ತಿಗಳನ್ನೂ ಸಹ ಅನುಸರಿಸುತ್ತಿದ್ದಾರೆ. ಪ್ರತಿ ಕುಟುಂಬದಲ್ಲಿನ ಸದಸ್ಯರು ಒಂದಲ್ಲಾ ಒಂದು ಬಗೆಯ ಕೆಲಸಗಳನ್ನು ಮಾಡುತ್ತಿದ್ದಾರೆ ಆದರೆ ಅವುಗಳು ಶಾಶ್ವತವಾದ ಉದ್ಯೋಗವನ್ನು ಒದಗಿಸುವಂತಹವುಗಳಲ್ಲ ಅಲ್ಲದೆ ಲಾಭದಾಯಕ ಕೆಲಸಗಳೂ ಸಹ ಅಲ್ಲ. ಹಿರಿಯ ಕಿರಿಯರೆನ್ನದೆ ಮಹಿಳೆಯರೆನ್ನದೆ ದುಡಿಯುತ್ತಿದ್ದಾರೆ ಆದರೆ ಮಹಿಳೆಯರ ದುಡಿಮೆ ಇಲ್ಲಿ ಗೌಣ್ಯವಾಗಿ ಕಾಣಿಸುತ್ತಿದೆ ಕೇವಲ ಕೃಷಿ, ಕೃಷಿಕೂಲಿಗಳಾಗಿ ದುಡಿಯುವ ಮಹಿಳೆಯರ ದುಡಿಮೆಯನ್ನು ಮಾತ್ರ ಗಣನೆಗೆ ತೆಗೆದುಕೊಂಡು ಮನೆಕೆಲಸ ಮಾಡುತ್ತಿರುವವರ ದುಡಿಮೆಯನ್ನು ಕಡಗಣನೆ ಮಾಡಲಾಗುತ್ತಿದೆ. ಹಟ್ಟಿಯ ಜನರಲ್ಲಿ ದುಡಿಯುತ್ತಿರುವವರು, ಮತ್ತು ನಿರುದ್ಯೋಗಿಗಳ ಪ್ರಮಾಣ ನೋಡುವುದಾದರೆ ಕೆಳಗಿನ ಕೋಷ್ಟಕವನ್ನು ಗಮನಿಸುವುದು ಸೂಕ್ತ.

**ಕೋಷ್ಟಕ ೬.೨– ಹಟ್ಟಿಯ ಜನರಲ್ಲಿನ ದುಡಿಮೆಗಾರರು ಮತ್ತು ನಿರುದ್ಯೋಗಿಗಳ ವಿವರ**

| ಸಮುದಾಯಗಳು | ಕುಟುಂಬಗಳು | ಕಾಯಕರ್ತರು | | | ದುಡಿಮೆಗಾರರು | | | ನಿರುದ್ಯೋಗಿಗಳು | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಆದಿ ಕರ್ನಾಟಕ | ೪೩ | ೮೦ | ೭೩ | ೧೫೩ | ೫೧ | ೧೨ | ೬೪ | ೨೯ | ೬೧ | ೮೯ |
| ಲಿಂಗಾಯತರು | ೭ | ೧೬ | ೧೬ | ೩೨ | ೧೭ | ೬ | ೨೩ | -೧ | ೧೫ | ೯ |
| ನಾಯಕ | ೨೬೩ | ೩೮೦ | ೩೮೮ | ೭೬೮ | ೩೨೪ | ೨೦೩ | ೫೨೭ | ೫೬ | ೧೮೫ | ೨೪೧ |
| ಒಟ್ಟು | ೩೧೩ | ೪೭೬ | ೪೭೭ | ೯೫೩ | ೩೯೨ | ೨೧೬ | ೬೧೪ | ೮೪ | ೨೬೧ | ೩೩೯ |

**ಲಂಬಚಿತ್ರ ೬.೧– ದುಡಿಮೆಗಾರರು ಮತ್ತು ನಿರುದ್ಯೋಗಿಗಳ ಶೇಕಡಾವಾರು**



ಕೋಸ್ಟಕ ೬.೨ ರಲ್ಲಿನ ಅಂಕಿ ಅಂಶಗಳನ್ನು ವಿವರಿಸುವುದಾದರೆ ಕಂಪಳದೇವರ ಹಟ್ಟಿಯಲ್ಲಿರುವ ಒಟ್ಟು ೩೧೩ ಕುಟುಬಗಳು ಮತ್ತು ೧೬೪೨ ಜನಸಂಖ್ಯೆಯಲ್ಲಿ ಸಮುದಾಯವಾರು ಗಂಡು ಹೆಣ್ಣುಗಳಲ್ಲಿ ದುಡಿಮೆಗಾರರು, ನಿರುದ್ಯೋಗಿಗಳು ಮತ್ತು ಕಾಯಕಾರ್ಹರು ಎಂದು ವಿಂಗಡಿಸಿಕೊಂಡು ವಿವರಿಸಲಾಗಿದೆ. ಮೊದಲಿಗೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕಾಯಕಾರ್ಹರು ಎಂದರೆ ಹಟ್ಟಿಯಲ್ಲಿನ ಒಟ್ಟು ಜನಸಂಖ್ಯೆಯ ಅನುಗುಣವಾಗಿ ವಯೋಮಾನದ ಪ್ರಕಾರ ಇರಬೇಕಾದ ದುಡಿಮೆಗಾರರು ಎಂದರ್ಥ, ಇನ್ನು ದುಡಿಮೆಗಾರರು ಎಂದರೆ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡಂತೆ ಪ್ರಸ್ತುತ ಹಟ್ಟಿಯಲ್ಲಿನ ಒಟ್ಟು ದುಡಿಮೆಗಾರರು, ಕೊನೆಯದಾಗಿ ನಿರುದ್ಯೋಗಿಗಳು ಎಂದರೆ ಯಾವುದೇ ಕೆಲಸ ಮಾಡದೇ ಇರುವವರು. ಹಟ್ಟಿಯಲ್ಲಿನ ಒಟ್ಟಾರೆ ಜನಸಂಖ್ಯೆಗನುಗುಣವಾಗಿ ವಯೋಮಾನದ ಪ್ರಕಾರ ಇರಬೇಕಾದ ದುಡಿಮೆಗಾರರನ್ನು ಕಾಯಕಾರ್ಹರೆಂದು ಕರೆದು ಪ್ರಸ್ತುತ ಇರುವ ದುಡಿಮೆಗಾರರನ್ನು ಕಾಯಕಾರ್ಹರ ಸಂಖ್ಯೆಯಲ್ಲಿ ಕಳೆದಾಗ ಉಳಿದ ಜನರು ನಿರುದ್ಯೋಗಿಗಳಾಗಿರುತ್ತಾರೆ. ಇದರ ಪ್ರಕಾರ ಹಟ್ಟಿಯಲ್ಲಿನ ದುಡಿಮೆಗಾರರು ಮತ್ತು ನಿರುದ್ಯೋಗಿಗಳನ್ನು ಸಮುದಾಯವಾರು ಗಂಡು ಹೆಣ್ಣುಗಳ ಪ್ರಮಾಣವನ್ನು ಒಂದೊಂದೇ ನೋಡುವುದಾದರೆ, ಹಟ್ಟಿಯಲ್ಲಿನ ಆದಿ ಕರ್ನಾಟಕ(ಮಾದಿಗ) ಸಮುದಾಯದ ೪೩ ಕುಟುಂಬಗಳ ಪೈಕಿ ವಯೋಮಾನದ ಪ್ರಕಾರ ೧೫೩ ಜನ ಕಾಯಕಾರ್ಹರು ಇರಬೇಕಾಗಿತ್ತು ಅದರಲ್ಲಿ ೮೦ ಜನರು ಗಂಡುಮಕ್ಕಳು ಮತ್ತು ೭೩ ಜನ ಹೆಣ್ಣುಮಕ್ಕಳು. ಆದರೆ ಕ್ಷೇತ್ರಕಾರ್ಯದಲ್ಲಿ ಮಾಹಿತಿ ಪಡೆದ ಪ್ರಕಾರ ಈ ಸಮುದಾಯದಲ್ಲಿ ಪ್ರಸ್ತುತ ದುಡಿಯುತ್ತಿರುವವರು ೬೪ ಜನ ಅದರಲ್ಲಿ ೫೧ ಜನ ಗಂಡುಮಕ್ಕಳು, ೧೨ ಜನ ಹೆಣ್ಣುಮಕ್ಕಳು ದುಡಿಮೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಇನ್ನು ನಿರುದ್ಯೋಗಿಗಳ ಪಟ್ಟಿಯಲ್ಲಿ ಈ ಸಮುದಾಯದವರು ೮೯ ಜನರಿದ್ದಾರೆ ಅದರಲ್ಲಿ ೨೯ ಜನ ಗಂಡುಮಕ್ಕಳು, ೬೧ ಜನ ಹೆಣ್ಣು ಮಕ್ಕಳು. ಅದೇ ರೀತಿಯಾಗಿ ಉಳಿದ ಸಮುದಾಯದವರನ್ನು ವಿವರಿಸುದಾದರೆ ಲಿಂಗಾಯತರಲ್ಲಿ ಕಾಯಕಾರ್ಹರು ೩೨ ಜನರಿರಬೇಕಾಗಿತ್ತು ಅದರಲ್ಲಿ ೧೬ ಜನ ಗಂಡುಮಕ್ಕಳು, ೧೬ ಜನ ಹೆಣ್ಣುಮಕ್ಕಳು, ಆದರೆ ೨೩ ಜನ ದುಡಿಮೆಗಾರರಿದ್ದು ಅದರಲ್ಲಿ ೧೭ ಗಂಡುಮಕ್ಕಳು ೬ ಹೆಣ್ಣುಮಕ್ಕಳಿದ್ದಾರೆ, ನಿರುದ್ಯೋಗಿಗಳಾಗಿ -೧ ಜನ ಗಂಡುಮಕ್ಕಳು, ೧೫ ಜನ ಹೆಣ್ಣುಮಕ್ಕಳು ಇದ್ದಾರೆ. ನಾಯಕ(ಬೇಡ)ಸಮುದಾಯದವರಲ್ಲಿನ ದುಡಿಮೆಯ ವಿವರ ನೋಡುವುದಾದರೆ ೭೬೮ ಜನ ಕಾಯಕಾರ್ಹರಿರಬೇಕಾಗಿತ್ತು ಅದರಲ್ಲಿ ೩೮೦ ಜನ ಗಂಡುಮಕ್ಕಳು, ೩೮೮ ಜನ ಹೆಣ್ಣುಮಕ್ಕಳು. ಆದರೆ ಈ ಸಮುದಾಯದಲ್ಲಿ ಪ್ರಸ್ತುತ ದುಡಿಮೆಗಾರರು ೫೨೭ ಜನರಿದ್ದಾರೆ, ಅದರಲ್ಲಿ ೩೨೪ ಜನ ಗಂಡುಮಕ್ಕಳು, ೨೦೩ ಜನ ಹೆಣ್ಣುಮಕ್ಕಳಿದ್ದಾರೆ. ೨೪೧ ಜನ ನಿರುದ್ಯೋಗಿಗಳಲ್ಲಿ ೫೬ ಜನ ಗಂಡುಮಕ್ಕಳು, ೧೮೫ ಜನ ಹೆಣ್ಣುಮಕ್ಕಳಿದ್ದಾರೆ.

ಒಟ್ಟಾರೆ ಹಟ್ಟಿಯಲ್ಲಿನ ಎಲ್ಲಾ ಜನಸಂಖ್ಯೆಯಲ್ಲಿ ಗಂಡು ಹೆಣ್ಣುಗಳ ದುಡಿಮೆಗಾರರ, ಕಾಯಕಾರ್ಹರ, ನಿರುದ್ಯೋಗಿಗಳ ಸರಾಸರಿ ಹೇಳುವುದಾದರೆ ಕಾಯಕಾರ್ಹರಲ್ಲಿ ಶೇಕಡ ೪೯.೯೫ರಷ್ಟು ಗಂಡುಮಕ್ಕಳು, ಶೇಕಡ ೫೦.೦೫ರಷ್ಟು ಹೆಣ್ಣುಮಕ್ಕಳ ಪ್ರಮಾಣವಿರಬೇಕಿತ್ತು ಆದರೆ ಪ್ರಸ್ತುತ ದುಡಿಮೆಗಾರರಲ್ಲಿ ಶೇಕಡ ೬೩.೮೪ರಷ್ಟು ಗಂಡುಮಕ್ಕಳು, ಶೇಕಡ ೩೫.೧೮ರಷ್ಟು ಹೆಣ್ಣುಮಕ್ಕಳಿದ್ದಾರೆ, ನಿರುದ್ಯೋಗಿಗಳಲ್ಲಿ

ಶೇಕಡ ೨೪.೭೮ರಷ್ಟು ಗಂಡುಮಕ್ಕಳು, ಶೇಕಡ ೭೬.೯ರಷ್ಟು ಹೆಣ್ಣುಮಕ್ಕಳಿದ್ದಾರೆ ಒಟ್ಟಾರೆ ಹೆಣ್ಣುಮಕ್ಕಳ ದುಡಿಮೆಯ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತದೆ ಹೆಣ್ಣುಮಕ್ಕಳು ಕೇವಲ ಕೃಷಿಕೂಲಿಗಳಾಗಿ ಹೊಲ ಗದ್ದೆಗಳಲ್ಲಿ ಕಡಿಮೆ ಕೂಲಿಗೆ ದುಡಿಯುತ್ತಿರುವುದು ಅಧ್ಯಯನದಿಂದ ಕಂಡುಬಂದಿದೆ.

ಕಂಪಳದೇವರ ಹಟ್ಟಿಯ ಮ್ಯಾಸಬೇಡರು ಪಶುಪಾಲನೆ ಜೊತೆಗೆ ವ್ಯವಸಾಯವನ್ನು ಹೆಚ್ಚಾಗಿ ಮಾಡುತ್ತಿದ್ದಾರೆ. ಸಾಮಾನ್ಯವಾಗಿ ಇವರ ಕೃಷಿಯು ಒಣ ಬೇಸಾಯಪದ್ಧತಿಯಾಗಿದೆ(ಮಳೆಯಾಶ್ರಿತ ಬೆಳೆಯಾಗಿದೆ). ಇವರು ಬೆಳೆಯುವ ಬೆಳೆಗಳು ಅಷ್ಟೇನೂ ಲಾಭದಾಯಕವಾಗಿರುವುದಿಲ್ಲ. ಒಣ ಭೂಮಿಯಲ್ಲಿ ನೇಗಿಲಿನ ಮೂಲಕ ಭೂಮಿಯನ್ನು ಉಳುಮೆ ಮಾಡಿ ಹದಗೊಳಿಸಿ ಬೀಜ ಬಿತ್ತನೆಮಾಡಿ ಫಲ ಬೆಳೆಯುತ್ತಾರೆ. ಇವರಲ್ಲಿ ಒಣಭೂಮಿ ಹೆಚ್ಚಾಗಿ ಇರುವುದರಿಂದ ಆಹಾರ ಧಾನ್ಯಗಳನ್ನೇ ಹೆಚ್ಚಾಗಿ ಬೆಳೆಯುತ್ತಾರೆ. ವಾಣಿಜ್ಯ ಬೆಳೆಗಳನ್ನು ಬೆಳೆಯದಿರಲು ಮತ್ತು ಆಹಾರ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯಲು ಕಾರಣಗಳೆಂದರೆ, ನೀರಾವರಿ ಸೌಲಭ್ಯವಿಲ್ಲದಿರುವುದು, ಸಾಂಪ್ರದಾಯಿಕ ಕೃಷಿಪದ್ಧತಿಯನ್ನು ಅನುಸರಿಸುತ್ತಿರುವುದು, ಸುಧಾರಿತ ಬಿತ್ತನೆ ಬೀಜಗಳ ಪೂರೈಕೆಯಾಗದಿರುವುದು, ಮಧ್ಯವರ್ತಿಗಳ ಹಾವಳಿ, ಮಾರುಕಟ್ಟೆಯ ಸಮಸ್ಯೆ ಈ ಕಾರಣಗಳು ಮಾತ್ರವಲ್ಲದೆ ಇನ್ನೂ ಹಲವಾರು ಕಾರಣಗಳಿಂದ ವಾಣಿಜ್ಯ ಬೆಳೆಗಳನ್ನು ಅವರಿಗೆ ಬೆಳೆಯುವುದಕ್ಕೆ ಸಾಧ್ಯವಾಗುತ್ತಿಲ್ಲ. ಕೇವಲ ಆಹಾರ ಧಾನ್ಯಗಳನ್ನು ಬೆಳೆಯುತ್ತಿರುವುದರಿಂದ ಆರ್ಥಿಕವಾಗಿ ಉತ್ತಮ ಲಾಭ ಪಡೆಯಲು ಆಗುತ್ತಿಲ್ಲ ಶೇಂಗಾವನ್ನು ವಾಣಿಜ್ಯ ಬೆಳೆಯಾಗಿ ಬೆಳೆಯುತ್ತಿದ್ದಾರೆ. ಒಂದು ವೇಳೆ ಮಳೆ ಚೆನ್ನಾಗಿ ಆಗಿ ಬೆಳೆ ಚೆನ್ನಾಗಿ ಬಂದರೂ ಮಾರುಕಟ್ಟೆಯಲ್ಲಿ ಅದಕ್ಕೆ ತಕ್ಕ ಬೆಲೆ ದೊರೆಯುತ್ತಿಲ್ಲ ಹಾಗಾಗಿ ಹಟ್ಟಿಯವರು ತಮ್ಮ ಕೃಷಿಯಿಂದ ಯಾವುದೇ ಲಾಭ ಪಡೆಯಲಾಗುತ್ತಿಲ್ಲ.

### ೬.೫.೧ ಮಾರುಕಟ್ಟೆ ಮತ್ತು ಮಧ್ಯವರ್ತಿಗಳ ಸಮಸ್ಯೆ

ಹಿಂದೆ ಬುಡಕಟ್ಟುಗಳಲ್ಲಿ ಆರ್ಥಿಕ ಮೌಲ್ಯ ಅಥವಾ ಹಣದ ಪರಿಕಲ್ಪನೆ ಇಲ್ಲದಿರುವಾಗ ಇವರ ಆರ್ಥಿಕ ವ್ಯವಹಾರ ಕೇವಲ ಶ್ರಮ ವಿನಿಮಯ, ಅಥವಾ ವಸ್ತು ವಿನಿಮಯದ ಮೂಲಕ ನಡೆಯುತ್ತಿತ್ತು. ತಾವು ಬೆಳೆದ ಬೆಳೆಗಳನ್ನು ತಮ್ಮ ತಮ್ಮಲ್ಲೇ ವಿನಿಮಯ ಮಾಡಿಕೊಳ್ಳುತ್ತಿದ್ದರು. ಇದಕ್ಕೆ ಕಾರಣ ಅವರಲ್ಲಿನ ಸಹಕಾರ ಜೀವನ. ಆದರೆ ಇಂದು ಕಾಲ ಬದಲಾಗಿದೆ ಎಲ್ಲಾ ಹಟ್ಟಿಗಳಿಗೂ ರಸ್ತೆ, ಸಾರಿಗೆ ವ್ಯವಸ್ಥೆ ಆಗಿದೆ ಕಂಪಳದೇವರ ಹಟ್ಟಿಯಲ್ಲಿಯೂ ಸಹ ಈ ವ್ಯವಸ್ಥೆ ಇದ್ದರೂ ಇಲ್ಲಿನ ಜನರು ಇಂದಿಗೂ ತಾವು ಬೆಳೆದ ಬೆಳೆಗಳನ್ನು ಮಾರುಕಟ್ಟೆಗೆ ಒಯ್ಯದೆ ದಲ್ಲಾಳಿಗಳಿಗೆ(ಮಧ್ಯವರ್ತಿಗಳಿಗೆ) ಕಡಿಮೆ ಬೆಲೆಗೆ ಮಾರಾಟ ಮಾಡುತ್ತಿದ್ದಾರೆ. ಹೀಗೆ ತಮ್ಮ ಬೆಳೆಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಲು ಹಟ್ಟಿಯವರಿಗೆ ಅನೇಕ ಕಾರಣಗಳು, ಸಮಸ್ಯೆಗಳಿವೆ ಅವುಗಳೆಂದರೆ,

* ಹಟ್ಟಿಯಲ್ಲಿ ತಮ್ಮ ಸರಕು ಅಥವಾ ಧಾನ್ಯಗಳನ್ನು ದಾಸ್ತಾನು ಮಾಡಲು ದಾಸ್ತಾನು ಮಳಿಗೆಗಳಿಲ್ಲದಿರುವುದು. ಮತ್ತು ತಮ್ಮ ಮನೆಗಳು ಚಿಕ್ಕವು ಅಥವಾ ಗುಡಿಸಲುಗಳು ಆದ್ದರಿಂದ ತಾವು ಬೆಳೆದ ಧಾನ್ಯಗಳನ್ನು ಮನೆಗಳಲ್ಲಿ ಸಂಗ್ರಹಿಸಿಟ್ಟುಕೊಳ್ಳಲು ಜಾಗವಿಲ್ಲದ ಕಾರಣ ತಾವು ಬೆಳೆದ ಧಾನ್ಯಗಳನ್ನು ಮಧ್ಯವರ್ತಿಗಳು ಕೇಳಿದ ಬೆಲೆಗೆ ಮಾರಿಬಿಡುತ್ತಾರೆ.

* ಇಲ್ಲಿನ ಕೃಷಿಕರು ತಮ್ಮ ಕೃಷಿ ಕೆಲಸಕ್ಕೆ ಬೇಕಾದ ಬೀಜ, ಗೊಬ್ಬರ, ಕೂಲಿಗಳಿಗೆಂದು ಸಾಕಷ್ಟು ಹಣ ಮಧ್ಯವರ್ತಿಗಳಿಂದ ಮುಂಗಡವಾಗಿ ಸಾಲ ಪಡೆದಿರುತ್ತಾರೆ. ಹಾಗಾಗಿ ಬಂದ ಬೆಳೆಯನ್ನು ಮಧ್ಯವರ್ತಿಗಳಿಗೆ ಅವರು ಹೇಳಿದ ಬೆಲೆಗೆ ಮಾರಾಟ ಮಾಡುತ್ತಾರೆ. ತಮಗೆ ಆ ವರ್ಷದ ಬೆಳೆಯಲ್ಲಿ ಏನೂ ಉಳಿಯುವುದಿಲ್ಲ ಮತ್ತು ಮುಂದಿನ ಬೆಳೆಯವರೆಗೆ ಸಾಲಮಾಡಿ ಜೀವನ ಸಾಗಿಸುತ್ತಾರೆ.

* ಮಳೆಯ ತೊಂದರೆಯಿಂದ ಇವರ ಕೃಷಿ ಇಳುವರಿ ತುಂಬಾ ಕಡಿಮೆ ಬಂದಿರುತ್ತದೆ. ಆದ್ದರಿಂದ ಅಲ್ಪಪ್ರಮಾಣದ ಸರಕನ್ನು ನಗರಗಳ ಮಾರುಕಟ್ಟೆಗೆ ಒಯ್ಯಲು ತಗುಲುವ ಖರ್ಚು ಅದರಿಂದ ಬರುವ ಲಾಭಕ್ಕಿಂತಲೂ ಹೆಚ್ಚಾಗುತ್ತದೆ. ಮತ್ತು ಸ್ವಲ್ಪ ಸರಕನ್ನು ಮಾರುಕಟ್ಟೆಗೆ ಒಯ್ಯುವುದು ಅಪಮಾನವೆಂದು ಬಾವಿಸಿ ಸ್ಥಳೀಯ ಮಧ್ಯವರ್ತಿಗಳಿಗೆ ಮಾರಾಟ ಮಾಡುತ್ತಾರೆ.

* ಇವರಿಗೆ ಮಾರುಕಟ್ಟೆಯ ಜ್ಞಾನ ಇಲ್ಲದಿರುವುದೂ ಸಹ ಒಂದು ಕಾರಣವಾಗಿದೆ.

* ಒಂದು ವೇಳೆ ಮಾರುಕಟ್ಟೆಗೆ ಹೋಯ್ದರೂ ಸಹ ಇವರಿಗೆ ಸಾಲಕೊಟ್ಟಿರುವ ದಲ್ಲಾಳಿ ಇಂಥ ಅಂಗಡಿಗೆ ಸರಕನ್ನು ಬಿಡಬೇಕೆಂದು ತಾಕೀತು ಮಾಡಿ ಕಡಿಮೆ ಬೆಲೆಗೆ ಮಾರಾಟ ಮಾಡಿ ಅವನೇ ಪಟ್ಟಿ ತೆಗೆದುಕೊಂಡು ಉಳಿಕೆಯಾದ ಹಣವನ್ನು ರೈತನಿಗೆ ನೀಡುತ್ತಾನೆ, ಇದರಿಂದಾಗಿ ಹಟ್ಟಿಯ ಬೇಡರು ಶೋಷಣೆಗೆ ಒಳಗಾಗುತ್ತಿದ್ದಾರೆ.

**೬.೫.೨ ದಿನಗೂಲಿ ಕಾರ್ಮಿಕರು**

ಹಟ್ಟಿಯ ಬೇಡರು ಕೃಷಿ, ಕೃಷಿ ಕೂಲಿ, ಪಶುಪಾಲನೆ ವೃತ್ತಿಗಳಲ್ಲಿ ಮಾತ್ರ ತೊಡಿಗಿಸಿಕೊಳ್ಳದೆ ಅನೇಕ ಪರ್ಯಾಯ ವೃತ್ತಿಗಳಲ್ಲೂ ತೊಡಗಿದ್ದಾರೆ. ಸಾಮಾನ್ಯವಾಗಿ ಬಹುತೇಕ ಮಹಿಳೆಯರು ಮತ್ತು ಪುರುಷರು ದಿನಗೂಲಿ ಕೆಲಸಕ್ಕೆ ಹೋಗುವುದು ಕಂಡುಬರುತ್ತದೆ. ದಿನಗೂಲಿ ಕೆಲಸವು ದಿನದ ಲೆಕ್ಕದಲ್ಲಿ ಅಂದಿನ ದುಡಿಮೆಯ ಕೂಲಿಯನ್ನು ಅಂದೇ ಪಡೆಯುವುದು, ಅಂದಿನ ಕೆಲಸ ಮುಗಿದ ಮೇಲೆ ಮಾಲೀಕರಿಗೂ ಇವರಿಗೂ ಯಾವುದೇ ರೀತಿಯ ವ್ಯವಹಾರ ಇರುವುದಿಲ್ಲ. ದಿನಗೂಲಿಯಲ್ಲಿ ಇವರು ಪಡೆಯುವ ಕೂಲಿಯು ಕಡಿಮೆ ಪ್ರಮಾಣದ್ದಾಗಿರುತ್ತದೆ. ಹಟ್ಟಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಇಲ್ಲಿನ ಬೇಡ ಮಹಿಳೆಯರು, ಪುರುಷರು ಗಾರೆಕೆಲಸ, ಇಟ್ಟಿಗೆ ಭಟ್ಟಿ ಕೆಲಸ, ಸೇತುವೆ ಕೆಲಸಗಳು ಮುಂತಾದ ಕೆಲಸಗಳಿಗೆ ದಿನಗೂಲಿಗಳಾಗಿ ದುಡಿಯುತ್ತಿರುವುದು ಕಂಡುಬರುತ್ತದೆ. ದಿನಗೂಲಿ ಕೆಲಸಗಳಲ್ಲಿ ಕೂಲಿಗಳಿಗೆ ಹೆಚ್ಚು ಲಾಭ ದೊರೆಯುವುದಿಲ್ಲ ಬೇಸಿಗೆಯ ಅವಧಿಯಲ್ಲಿ ಕೆಲಸಕ್ಕೆ ಕರೆದರೆ ಸಾಕು ಎಂದಿರುತ್ತಾರೆ. ಜನರ ಈ ಸ್ಥಿತಿಯನ್ನು ಮೇಸ್ತ್ರಿಗಳು ಚೆನ್ನಾಗಿ ಬಳಕೆಮಾಡಿಕೊಳ್ಳುತ್ತಾರೆ. ಅವರ ದುಡಿಮೆಯ ಅರ್ದದಷ್ಟು ಹಣವನ್ನು ಮೇಸ್ತ್ರಿಗಳು ಪಡೆದು ಉಳಿದ ಅರ್ದದಷ್ಟು ಹಣವನ್ನು ಕೂಲಿಯಾಗಿ ನಿಡುತ್ತಿದ್ದಾರೆ. ಹಟ್ಟಿಯಲ್ಲಿ ವಿವಿಧ ವೃತ್ತಿಗಳಲ್ಲಿ ದುಡಿಯುತ್ತಿರುವ ಗಂಡು ಹೆಣ್ಣುಗಳ ಪ್ರಮಾಣವನ್ನು ಸಮುದಾಯವಾರು ವಿಮಗಡಿಸಿಗೊಂಡು ತಿಳಿಯುವುದಾದರೆ ಈ ಕೆಳಗಿನ ಕೋಷ್ಟಕವನ್ನು ಗಮನಿಸುವುದು ಸೂಕ್ತ.

ಕೋಷ್ಟಕ ೬.೩– ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಸಮುದಾಯವಾರು ಗಂಡು ಹೆಣ್ಣುಗಳ ವಿವರ

| ಕಸುಬುಗಳು | ಸಮುದಾಯಗಳು | | | | | | | | |
|---|---|---|---|---|---|---|---|---|---|
| | ಆದಿ ಕರ್ನಾಟಕ | | | ಲಿಂಗಾಯತರು | | | ನಾಯಕ | | |
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಕೃಷಿ | ೪೯ | ೧೨ | ೬೧ | ೧೦ | ೫ | ೧೫ | ೨೦೯ | ೧೦೯ | ೩೧೮ |
| ಕೃಷಿಕೂಲಿ | | | | ೧ | | ೧ | ೭೭ | ೭೯ | ೧೫೬ |
| ಸರ್ಕಾರಿ | | | | | | | | ೧ | ೧ |
| ಖಾಸಗಿ | | | | | | | | | |
| ಇತರೆ | ೨ | ೧ | ೩ | ೬ | ೧ | ೭ | ೩೮ | ೧೪ | ೫೨ |
| ಒಟ್ಟು | ೫೧ | ೧೩ | ೬೪ | ೧೭ | ೬ | ೨೩ | ೩೨೪ | ೨೦೩ | ೫೨೭ |

ಲಂಬಚಿತ್ರ ೬.೨– ಹಟ್ಟಿಯ ದುಡಿಮೆಗಾರರ ಶೇಕಡಾವಾರು ಪ್ರಮಾಣ




ಪ್ರಸ್ತುತ ದಿನಗಳಲ್ಲಿ ಕಂಪಳದೇವರ ಹಟ್ಟಿಯಲ್ಲಿ ಮೂರೂ ಸಮುದಾಯದವರ ಒಟ್ಟು ೧೬೪೨ ಜನಸಂಖ್ಯೆಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ದುಡಿಮೆಗಾರರ ಅಂಕಿಅಂಶವನ್ನು ಈ ಮೇಲಿನ ಕೋಷ್ಟಕ ೬.೩ ರಲ್ಲಿ ತಿಳಿಸಲಾಗಿದೆ. ಹಟ್ಟಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಕಂಡುಕೊಂಡ

ಮಾಹಿತಿಯ ಆಧಾರದ ಮೇಲೆ ಈ ಕೋಷ್ಟಕವನ್ನು ವಿವರಿಸುವುದಾದರೆ ಹಟ್ಟಿಯಲ್ಲಿ ಕೃಷಿಯನ್ನೇ ನಂಬಿ ಜೀವಿಸುತ್ತಿರುವವರ ಸಂಖ್ಯೆ ಹೆಚ್ಚಾಗಿರುವುದು ತಿಳಿದು ಬರುತ್ತದೆ. ಸಮುದಾಯವಾರು ಕಸುಬುಗಳನ್ನು ಮತ್ತು ಯಾವ ಯಾವ ವೃತ್ತಿಯಲ್ಲಿ ಎಷ್ಟೆಷ್ಟು ಜನರು ದುಡಿಯುತ್ತಿದ್ದಾರೆ ಎಂಬುದನ್ನು ವಿವರಿಸುವುದಾದರೆ ಮೊದಲಿಗೆ ಆದಿ ಕರ್ನಾಟಕ(ಮಾದಿಗ) ಸಮುದಾಯದವರಲ್ಲಿ ಕೃಷಿಯಲ್ಲಿ ತೊಡಗಿಕೊಂಡಿರುವುದು ೬೧ ಜನರು ಅದರಲ್ಲಿ ೪೯ ಗಂಡುಮಕ್ಕಳು, ೧೨ ಹೆಣ್ಣುಮಕ್ಕಳು. ಲಿಂಗಾಯತರಲ್ಲಿ ೧೫ ಜನರು ಕೃಷಿಯನ್ನು ಮಾಡುತ್ತಿದ್ದು ಅದರಲ್ಲಿ ೧೦ ಜನ ಗಂಡುಮಕ್ಕಳು, ೫ ಜನ ಹೆಣ್ಣುಮಕ್ಕಳಿದ್ದಾರೆ. ನಾಯಕ(ಬೇಡ)ರಲ್ಲಿ ೩೧೮ ಜನರು ಕೃಷಿಕರಾಗಿದ್ದಾರೆ ಅದರಲ್ಲಿ ೨೦೯ ಜನರು ಗಂಡುಮಕ್ಕಳು ಮತ್ತು ೧೦೯ ಮಂದಿ ಹೆಣ್ಣುಮಕ್ಕಳಿದ್ದಾರೆ. ಕೃಷಿಕೂಲಿಯಲ್ಲಿ ತೊಡಗಿರುವವರನ್ನು ನೋಡಿದರೆ ಆದಿ ಕರ್ನಾಟಕ(ಮಾದಿಗ) ದಲ್ಲಿ ಯಾರೂ ಕೃಷಿಕೂಲಿಗಳು ಕಂಡುಬರುವುದಿಲ್ಲ, ಲಿಂಗಾಯತರಲ್ಲಿ ಒಬ್ಬ ವ್ಯಕ್ತಿ ಮಾತ್ರ ಕೃಷಿಕೂಲಿಯನ್ನು ಅವಲಂಬಿಸಿದ್ದಾನೆ, ನಾಯಕ(ಬೇಡ)ರಲ್ಲಿ ಒಟ್ಟು ೧೫೭ ಜನ ಕೃಷಿ ಕೂಲಿಗಳಿದ್ದು ಅದರಲ್ಲಿ ೭೭ ಗಂಡುಮಕ್ಕಳು, ೭೯ ನಜ ಹೆಣ್ಣುಮಕ್ಕಳಿದ್ದಾರೆ ಇಲ್ಲಿ ಬೇಡರಲ್ಲೇ ಹೆಚ್ಚಿನ ಸಂಖ್ಯೆಯ ಕೃಷಿಕೂಲಿಗಳಿರುವುದನ್ನು ಗಮನಿಸಬಹುದು ಅದರಲ್ಲೂ ಮಹಿಳೆಯರ ಸಂಖ್ಯೆ ಹೆಚ್ಚು ಇರುವುದು ಕಂಡುಬರುತ್ತದೆ. ಸರ್ಕಾರಿ ಹುದ್ದೆಯಲ್ಲಿ ದುಡಿಯುತ್ತಿರುವವರು ಇಡಿ ಹಟ್ಟಿಯಲ್ಲಿ ಒಬ್ಬ ವ್ಯಕ್ತಿಮಾತ್ರ ಅದು ಬೆಡರ ಒಬ್ಬ ಹೆಣ್ಣುಮಗಳು ಎಂಬುದು ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡದ್ದಾಗಿದೆ. ಇನ್ನು ಇತರೆ ವೃತ್ತಿಗಳಲ್ಲಿ ದುಡಿಯುತ್ತಿರುವವರನ್ನು ನೋಡುವುದಾದರೆ ಆದಿ ಕರ್ನಾಟಕ(ಮಾದಿಗ) ಸಮುದಾಯದವರಲ್ಲಿ ೨ ಜನ ಗಂಡುಮಕ್ಕಳು, ೧ ಹೆಣ್ಣುಮಗಳು ಒಟ್ಟು ೩ ಜನರು ಇತರೆ ವೃತ್ತಿಗಳಲ್ಲಿ ದುಡಿಯುತ್ತಿದ್ದಾರೆ, ಲಿಂಗಾಯತರಲ್ಲಿ ೭ ಜನ ದುಡಿಯುತ್ತಿದ್ದು ಅದರಲ್ಲಿ ೬ ಜನ ಗಂಡುಮಕ್ಕಳು, ೧ ಹೆಣ್ಣು. ನಾಯಕ(ಬೇಡ)ರಲ್ಲಿ ೫೨ ಜನ ಇತರೆವೃತ್ತಿಗಳಲ್ಲಿ ದುಡಿಯುತ್ತಿದ್ದಾರೆ ಅದರಲ್ಲಿ ೩೮ ಜನ ಗಂಡುಮಕ್ಕಳು, ೧೪ ಜನ ಹೆಣ್ಣುಮಕ್ಕಳು.

ಒಟ್ಟಾರೆ ಹಟ್ಟಿಯಲ್ಲಿನ ದುಡಿಮೆಗಾರರ ಶೇಕಡಾವಾರು ನೋಡಿದರೆ ಆದಿ ಕರ್ನಾಟಕ(ಮಾದಿಗ) ಸಮುದಾಯದಲ್ಲಿ ಶೇಕಡ ೭೯.೭ರಷ್ಟು ಗಂಡುಮಕ್ಕಳು, ಶೇಕಡ ೨೦.೩ರಷ್ಟು ಹೆಣ್ಣುಮಕ್ಕಳು ದುಡಿಮೆಗಾರರಾಗಿದ್ದಾರೆ. ಲಿಂಗಾಯತರಲ್ಲಿ ಶೇಕಡ ೭೩.೯ರಷ್ಟು ಗಂಡುಮಕ್ಕಳು, ಶೇಕಡ ೨೬.೧ ರಷ್ಟು ಹೆಣ್ಣುಮಕ್ಕಳು ದುಡಿಯುತ್ತಿದ್ದಾರೆ. ಇನ್ನು ಬೇಡರಲ್ಲಿ ಶೇಕಡ ೬೧.೫ರಷ್ಟು ಗಂಡುಮಕ್ಕಳು, ಶೇಕಡ ೩೮.೫ ರಷ್ಟು ಹೆಣ್ಣುಮಕ್ಕಳು ದುಡಿಮೆಗಾರರಿದ್ದಾರೆ. ಹಾಗೆಯೇ ಆಯಾ ಸಮುದಾಯದಲ್ಲಿನ ಜನರು ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿರುವವರ ಶೇಕಡವಾರು ನೋಡುವುದಾದರೆ ಆದಿ ಕರ್ನಾಟಕ(ಮಾದಿಗ) ಸಮುದಾಯದಲ್ಲಿ ಶೇಕಡ ೯೫ರಷ್ಟು ಕೃಷಿಕೂಲಿಯಲ್ಲಿ, ಶೇಕಡ ೪.೭ರಷ್ಟು ಇತರೆ ವೃತ್ತಿಯಲ್ಲಿ ತೊಡಗಿಕೊಂಡಿರುವುದು ತಿಳಿದು ಬರುತ್ತದೆ. ಲಿಂಗಾಯತರಲ್ಲಿ ಶೇಕಡ ೬೫ರಷ್ಟು ಕೃಷಿಯಲ್ಲಿ, ಶೇಕಡ ೪.೩ರಷ್ಟು ಕೃಷಿಕೂಲಿಯಲ್ಲಿ, ಶೇಕಡ ೩೦ರಷ್ಟು ಇತರೆ ವೃತ್ತಿಯಲ್ಲಿ ತೊಡಗಿದ್ದಾರೆ. ಇನ್ನು ನಾಯಕ(ಬೇಡ)ರಲ್ಲಿ ಶೇಕಡ ೬೦ರಷ್ಟು ಕೃಷಿಕರಿದ್ದಾರೆ, ಶೇಕಡ ೩೦ರಷ್ಟು ಕೃಷಿಕೂಲಿಗಳಿದ್ದಾರೆ, ಶೇಕಡ ೦.೨ರಷ್ಟು ಸರ್ಕಾರಿ ನೌಕರಿಯಲ್ಲಿದ್ದಾರೆ, ಶೇಕಡ ೯.೯ರಷ್ಟು ಜನರು ಇತರೆ ವೃತ್ತಿಗಳಲ್ಲಿ

ದುಡಿಯುತ್ತಿರುವುದು ಕಂಡುಬರುತ್ತದೆ. ಈ ಎಲ್ಲಾ ಅಂಕಿ ಅಂಶಗಳು ಮತ್ತು ಶೇಕಡಾವಾರನ್ನು ನೋಡಿದಾಗ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ ಹಟ್ಟಿಯಲ್ಲಿನ ಬಹುತೇಕ ಜನರು ಕೃಷಿ ಮತ್ತು ಕೃಷಿ ಕೂಲಿಯನ್ನೇ ಅವಲಂಬಿಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ, ಅಲ್ಲದೆ ಕೃಷಿಕೂಲಿಗಳಲ್ಲಿ ಬೇಡರೇ ಹೆಚ್ಚಾಗಿರುವುದು ಕಂಡುಬರುತ್ತದೆ. ನಾಯಕ(ಬೇಡ)ರಲ್ಲಿ ಶೇಕಡ ೩೦ರಷ್ಟು ಜನರು ಕೃಷಿ ಕೂಲಿಯನ್ನೇ ಅವಲಂಬಿಸಿ ಬದುಕುತ್ತಿದ್ದಾರೆ ಎಂಬ ಅಂಶ ಗಮನಿಸಬೇಕಾಗಿದೆ.

ಪ್ರಸ್ತುತ ದಿನಮಾನಗಳಲ್ಲಿ ಹಟ್ಟಿಯ ಜನರು ತಮ್ಮ ಮೂಲ ವೃತ್ತಿಗಳಾದ ಕೃಷಿ, ಪಶುಪಾಲನೆ ಎರಡನ್ನೇ ನಂಬಿಕೊಳ್ಳದೆ ವ್ಯಾಪಾರ, ಸ್ವಯಂ ಉದ್ಯೋಗ ಮತ್ತು ಸರ್ಕಾರಿ ನೌಕರಿಗಳಲ್ಲೂ ತೊಡಗಿಕೊಳ್ಳುವಂತಾಗಬೇಕು. ಅಂಬೇಡ್ಕರ್ ಅವರು ಸೂಚಿಸಿರುವ ಶಿಕ್ಷಣ, ಸಂಘಟನೆ, ಹೋರಾಟ ಎಂಬ ತ್ರಿವಳಿ ಸೂತ್ರಗಳನ್ನು, ಸ್ವ-ಸುಧಾರಣೆ, ಸ್ವ-ಏಳ್ಗೆ, ಸ್ವಾವಲಂಬನೆ, ಸ್ವಾಭಿಮಾನ ಹಾಗೂ ಸ್ವ-ನಂಬಿಕೆ ಎಂಬ ಪಂಚಸೂತ್ರಗಳನ್ನು ಈ ಸಮುದಾಯದವರು ಅರ್ಥಮಾಡಿಕೊಳ್ಳಬೇಕಾಗಿದೆ. ಹಳೆಯ ಮಾದರಿಯ ವ್ಯವಸಾಯ ಪದ್ಧತಿಗಳನ್ನು ಕೈಬಿಟ್ಟು ವೈಜ್ಞಾನಿಕ ವ್ಯವಸಾಯ ಪದ್ಧತಿಗಳನ್ನು ಅಳವಡಿಸಿಕೊಂಡು ಆಹಾರ ಮತ್ತು ವಾಣಿಜ್ಯ ಬೆಳೆಗಳನ್ನು ಸಮಾನವಾಗಿ ಬೆಳೆಯಬೇಕು. ಗೊಬ್ಬರ ಮತ್ತು ಹೈನುಗಾರಿಕೆಗಾಗಿ ಉತ್ತಮ ತಳಿಯ ಹಸು ಮತ್ತು ಎಮ್ಮೆಗಳನ್ನು ಸಾಕಬೇಕು. ಪಶುಪಾಲಕ ಬುಡಕಟ್ಟು ಸಮುದಾಯವಾದ ಮ್ಯಾಸಬೇಡರು ಇಂದು ಕೇವಲ ಪಶುಪಾಲನೆ, ಕೃಷಿಯನ್ನೇ ನೆಚ್ಚಿ ಕೂರದೆ ಇತರ ಪರ್ಯಾಯ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತಾಗಬೇಕು. ಒಂದು ಕುಟುಂಬ ಆರ್ಥಿಕವಾಗಿ ಮುಂದೆ ಬಂದರೆ ಸಾಮಾಜಿಕವಾಗಿಯೂ ಅದು ಮುಂದೆ ಬರಲು ಸಾಧ್ಯವಿದೆ. ಸರ್ಕಾರದಿಂದ ಸಿಗುವ ಎಲ್ಲಾ ಸೌಲಭ್ಯಗಳನ್ನು ಈ ಸಮುದಾಯದವರು ಪ್ರಾಮಾಣಿಕವಾಗಿ ಉಪಯೋಗಿಸಿಕೊಂಡು ಆರ್ಥಿಕವಾಗಿ ಮುಂದೆ ಬರಲು ಪ್ರಯತ್ನಿಸಬೇಕು. ಶ್ರೀಮಂತರ ಶೋಷಣೆ, ದಲ್ಲಾಳಿಗಳ ಅವ್ಯವಹಾರ, ಬಾಲಕಾರ್ಮಿಕ ಪದ್ಧತಿ, ಬಾಲ್ಯವಿವಾಹ ಮೊದಲಾದ ಸಾಮಾಜಿಕ ಸಮಸ್ಯೆಗಳತ್ತ ಸರ್ಕಾರ ಗಮನ ಹರಿಸಬೇಕಾಗಿದೆ.

**ಅಡಿಟಿಪ್ಪಣಿ**

೧.ನಿಂಗಪ್ಪ ಎಸ್, ಮಾದಣ್ಣವರ, ೨೦೧೪, ಸೊರಟೂರ ಗ್ರಾಮದ ಜಾನಪದ ಅಧ್ಯಯನ, ಅಪ್ರಕಟಿತ ಪಿಎಚ್. ಡಿ ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೦೫.

೨. ಅದೇ, ಪುಟ-೨೦೬.

೩. ಅದೇ, ಪುಟ-೨೦೪.

೪. ದೇವರ ಕುರಿ ಓಬಯ್ಯ, ೨೦೦೮, ಮ್ಯಾಸಬೇಡರ ಸಾಂಸ್ಕೃತಿಕ ಆತ್ಮಕಥನ, ಪಿಎಚ್ ಡಿ ಮಹಾ ಪ್ರಬಂಧ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೫೭.

೫. ಅದೇ, ಪುಟ-೧೫೫.

೬. ಬರಗೂರು ರಾಮಚಂದ್ರಪ್ಪ, ೨೦೦೫, ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ, ಪುಟ-೧೮೮.

# ಸಮಾರೋಪ

* ಅಧ್ಯಯನದ ಫಲಿತಗಳು
* ಅಧ್ಯಯನದ ಸಲಹೆಗಳು
* ಮುಂದಿನ ಅಧ್ಯಯನದ ಸಾಧ್ಯತೆಗಳು
* ಪರಾಮರ್ಶನ ಗ್ರಂಥಗಳು

# ಸಮಾರೋಪ

ಭಾರತವು ಹಳ್ಳಿಗಳ ದೇಶವಾಗಿದೆ. ಹಳ್ಳಿಗಳು(ಗ್ರಾಮಗಳು) ನಮ್ಮ ನಾಡಿನ ಜೀವನಾಡಿಯಿದ್ದಂತೆ. ಇಂದಿನ ಜಾಗತಿಕ ಸಂದರ್ಭದಲ್ಲಿ ಬಹುತೇಕ ಜನರು ಗ್ರಾಮಗಳನ್ನೇ(ಹಳ್ಳಿಗಳನ್ನೇ/ಹಟ್ಟಿಗಳನ್ನೇ) ಆಶ್ರಯಿಸಿ ಬದುಕುತ್ತಿದ್ದಾರೆ. ಆಯಾ ಗ್ರಾಮದಲ್ಲಿ ವಾಸಿಸುವ ವಿವಿಧ ಸಮುದಾಯದವರ ಆಚಾರ–ವಿಚಾರ, ನಡೆ–ನುಡಿ, ಜೀವನ ವಿಧಾನ, ಹಬ್ಬ–ಆಚರಣೆಗಳಲ್ಲಿ ವೈವಿಧ್ಯತೆ ಇದೆ, ಅಲ್ಲದೆ ಜನನದಿಂದ ಮರಣದವರೆಗೆ ಅವರು ಅನುಸರಿಸುವ ಸಂಸ್ಕಾರಗಳ ವೈಶಿಷ್ಟ್ಯತೆ ಭಿನ್ನವಾಗಿರುತ್ತದೆ. ಒಂದು ಕಾಲದಲ್ಲಿ ಕಾಡಿನಲ್ಲಿ ರಾತ್ರಿ ಕತ್ತಲೆಗೆ ಹೆದರಿ ಮರದ ಪೊಟರೆಯಲ್ಲಿ ಮಲಗಿಕೊಂಡು ಚಳಿಯಲ್ಲಿ ನಡುಗುತ್ತಾ ಬೆಳಗಾಗುವುದನ್ನೇ ತವಕದಿಂದ ನಿರೀಕ್ಷಿಸುತ್ತಿದ್ದ ಅಂದಿನ ಮನುಷ್ಯನೂ ಇಂದು ರಾತ್ರಿಯಲ್ಲಿ ಹವಾನಿಯಂತ್ರಿತ ಕೋಣೆಗಳಲ್ಲಿ ಹಿತಕರವಾದ ಮಂದಪ್ರಕಾಶದಲ್ಲಿ ಬೆಚ್ಚಗೆ ಮಲಗುವ ಮನುಷ್ಯನೂ ಒಂದೇ ಕುಲದವರೇ ಆದರೂ ಅಂದಿಗೂ ಇಂದಿಗೂ ಎಂಥ ಅದ್ಭುತ ವ್ಯತ್ಯಾಸ. ಇಂದಿನ ನಮ್ಮ ನಡೆ–ನುಡಿ, ಆಹಾರ–ವಿಹಾರ, ಆಚಾರ–ವಿಚಾರ ಎಲ್ಲವುಗಳಲ್ಲಿಯೂ ಸಹಸ್ರಾರು, ಲಕ್ಷಾಂತರ ವರ್ಷಗಳ ಕ್ರಮಬದ್ಧ ವಿಕಾಸದಿಂದಾಗಿ ಈ ಅದ್ಭುತ ವ್ಯತ್ಯಾಸ ಕಂಡುಬರುತ್ತದೆ. ಸಮಾಜವು ನಿತ್ಯ ಪರಿವರ್ತನಶೀಲವಾದುದು ಅದು ದಿನದಿಂದ ದಿನಕ್ಕೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ ಹೋಗುತ್ತದೆ. ಆದರೆ ಇದರಿಂದ ಸಮುದಾಯದವರ ಆಧುನಿಕ ಜೀವನ ವಿಧಾನಗಳು ಪರಂಪರಾನುಗತವಾದ ಬದುಕಿನ ಶೈಲಿಯನ್ನು ವಿಘಟಿಸುವುದರಿಂದ ಅನೇಕ ವೈರುದ್ಯಗಳ ನಡುವೆಯೂ ಸೌಹಾರ್ದಯುತವಾದ ಸಹಬಾಳ್ವೆಗೆ ತುಡಿಯುವ ಜೀವನೋತ್ಸಾಹ ಕಡಿಮೆಯಾಗಿಲ್ಲ ಎಂಬುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಏಕೆಂದರೆ ಹಟ್ಟಿಯ(ಗ್ರಾಮೀಣ) ಜನರಲ್ಲಿ ನಗರದ ಕೃತ್ರಿಮತೆ, ತೋರಿಕೆಯ ಜೀವನಕ್ರಮ ತಿಳಿದಿಲ್ಲ ಗ್ರಾಮೀಣ ಜನಸಂಖ್ಯೆ ಕಡಿಮೆಯಿರುವುದರಿಂದ ಎಲ್ಲರೂ ಪರಸ್ಪರ ಪರಿಚಿತರಾಗಿರುವರು. ಯಾರೂ ಅಪರಿಚಿತರಲ್ಲ ಹೊಸಬರೆನಿಸುವುದಿಲ್ಲ. ಜನರ ನಡುವಿನ ಸಂಬಂಧವು ವೈಯಕ್ತಿಕವೂ, ಪ್ರತ್ಯಕ್ಷ ಸ್ವರೂಪದ್ದೂ, ಸಮಗ್ರವಾಗಿರುತ್ತದೆ. ಪರಸ್ಪರ ಪ್ರೀತಿ ವಿಶ್ವಾಸದಿಂದ ಬದುಕುತ್ತಾರೆ. ಜನರು ತಮ್ಮ ಮಾತುಕತೆ, ವ್ಯವಹಾರಗಳಲ್ಲಿ ಪ್ರಮಾಣಿಕರು ಹಾಗೂ ಮುಚ್ಚುಮರೆಯಿಲ್ಲದೆ ತಮ್ಮ

ಸಮುದಾಯದೊಂದಿಗೆ ಅನ್ಯೋನ್ಯತೆಯಿಂದ ಬಾಳುತ್ತಾರೆ. ಗ್ರಾಮೀಣ ಜನರ ಜೀವನದಲ್ಲಿ ಏಕತೆಯನ್ನು ಕಾಣಬಹುದು. ಜನರ ಜೀವನಕ್ರಮಗಳಲ್ಲಿ ಚಿಂತನೆ-ಭಾವನೆಗಳಲ್ಲಿ, ಊಟ- ಉಪವಾಸಾದಿಗಳಲ್ಲಿ, ಉಡುಗೆ-ತೊಡುಗೆಗಳಲ್ಲಿ, ಆಲೋಚನೆ-ಅಭಿಪ್ರಾಯಗಳಲ್ಲಿ ಏಕರೂಪತೆ ಕಂಡುಬರುತ್ತದೆ. ಒಂದೇಬಗೆಯ ಧಾರ್ಮಿಕ ನಂಬಿಕೆಗಳು, ರೂಢಿ ಸಂಪ್ರದಾಯಗಳಲ್ಲಿ ಸಮುದಾಯದ ಜನರು ಕೂಡಿ ಬಾಳುವ ಸಾಮರಸ್ಯದ ಬದುಕನ್ನು ಸಾಗಿಸುತ್ತಿರುತ್ತಾರೆ.

ಇಂದಿಗೂ ಸಹ ತನ್ನ ಪರಂಪರೆಯನ್ನು, ಪಾರಂಪರಿಕ ಜ್ಞಾನವನ್ನು ಉಳಿಸಿಕೊಂಡು ಬಳಸಿಕೊಂಡು ಬರುತ್ತಿರುವ ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರ ಹಟ್ಟಿ(ಚಿಕ್ಕುಂತಿ) ಯಲ್ಲಿನ ವ್ಯಾಸಬೇಡ ಬುಡಕಟ್ಟಿನವರು ಆಧುನೀಕರಣ ಮತ್ತು ಸಂಸ್ಕೃತಿಕರಣ ಪ್ರಭಾವದಿಂದ ಬದಲಾವಣೆಗೊಳ್ಳುತ್ತಿರುವ ಸಮುದಾಯವಾಗಿದೆ. ಮ್ಯಾಸಬೇಡರ ಗುರುಸ್ಥಾನವಾದ ಕಂಪಳದೇವರ ಹಟ್ಟಿಯಲ್ಲಿನ ಈ ಸಮುದಾಯವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡು ಇವರ ವಸತಿ, ಹಟ್ಟಿಯ ಪರಿಕಲ್ಪನೆ, ಸ್ಥಳೀಯ ನ್ಯಾಯ ವ್ಯವಸ್ಥೆ, ಕೌಟುಂಬಿಕ ಜೀವನ, ಜನಪದ ಸಾಹಿತ್ಯ, ಜನಪದ ವೈದ್ಯ ಅಲ್ಲದೆ ಇವರ ಪಾರಂಪರಿಕ ಜ್ಞಾನವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಯಿತು. ಸಾಮಾನ್ಯವಾಗಿ ಬೇಡರ ನೆಲೆಗಳು ಕಂಡುಬರುವುದು ಕಾಡು, ಕಾಡಿನ ಅಂಚು ಇಲ್ಲವೆ ಗುಡ್ಡಗಾಡು ಪ್ರದೇಶದಲ್ಲಿ ಅಥವಾ ಗ್ರಾಮಗಳ ಹತ್ತಿರದಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ಆ ಹಟ್ಟಿಗಳಲ್ಲಿ ವಾಸಿಸುತ್ತಿರುತ್ತಾರೆ. ಇಂತಹ ಲಕ್ಷಣಗಳುಳ್ಳ ಕಂಪಳದೇವರ ಹಟ್ಟಿಯಲ್ಲಿ ವಾಸಿಸುತ್ತಿರುವ ಮ್ಯಾಸಬೇಡರ ಹಟ್ಟಿ ಸಂಸ್ಕೃತಿ, ಪಾರಂಪರಿಕ ಜ್ಞಾನವನ್ನು ತಿಳಿಯ ಹೊರಟಾಗ ಮೊದಲಿಗೆ ಚಿತ್ರದುರ್ಗ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯ ಭೌಗೋಳಿಕ ಚಹರೆಯನ್ನು ಮತ್ತು ಅಲ್ಲಿನ ಭಾಷಿಕ ಸ್ವರೂಪ, ಸಾಂಸ್ಕೃತಿಕ ಸ್ವರೂಪ ಮತ್ತು ಹಟ್ಟಿಗಳ ರಚನಾ ಸ್ವರೂಪವನ್ನು ಗುರುತಿಸಲಾಗಿದೆ. ಈ ಭಾಗದಲ್ಲಿ ಜಲವಾಚಿ, ಶಿಲಾವಾಚಿ, ಸಸ್ಯವಾಚಿ, ಲೋಹವಾಚಿ ಮುಂತಾದ ಪ್ರಾಕೃತಿಕ ಮೂಲ ಸ್ಥಳನಾಮಗಳೊಂದಿಗೆ ಜಾತಿ, ವರ್ಗ, ವೃತ್ತಿ, ದೈವ, ವ್ಯಕ್ತಿ, ಪ್ರಾಣಿ-ಪಕ್ಷಿ ಮುಂತಾದ ಸಾಂಸ್ಕೃತಿಕ ಅಂಶಗಳನ್ನು ಪ್ರತಿನಿಧಿಸುವ ಸ್ಥಳನಾಮಗಳಿರುವುದನ್ನು ಗುರುತಿಸಲಾಗಿದೆ. ಈ ಭಾಗದ ಬೇಡ ಬುಡಕಟ್ಟಿನವರು ಇನ್ನೂ ಗ್ರಾಮಗಳಿಗೆ ಬಾರದೆ ಹಟ್ಟಿ, ಕಪಿಲೆ, ತೋಟ, ಅಡವಿಯ ಅಂಚಿನಲ್ಲಿ ಜೀವಿಸುತ್ತಿರುವುದನ್ನು ಕಾಣಬಹುದು. ಪ್ರಸ್ತುತ ಪ್ರಬಂಧದಲ್ಲಿ ಕಂಪಳದೇವರ ಹಟ್ಟಿಯ ಮ್ಯಾಸಬೇಡರ ಜೀವನ ಕ್ರಮ, ಸಂಪ್ರದಾಯ, ನಂಬಿಕೆ, ನಡವಳಿಕೆ, ಕುಲಪದ್ಧತಿ, ಕುಲಬಳಿಗಳು, ಪಾರಂಪರಿಕ ವೈದ್ಯ ಪದ್ಧತಿ, ಪಾರಂಪರಿಕ ಜ್ಞಾನ, ಆಧುನಿಕ ಜೀವನದ ಸ್ಥಿತಿಗತಿಗಳನ್ನು ಕುರಿತು ವಿವರವಾಗಿ ಇಲ್ಲಿ ಪ್ರಸ್ತಾಪಿಸಲಾಗಿದೆ.

ಹಟ್ಟಿಯ ಬೇಡರು ತಮ್ಮ ಪೂರ್ವಿಕರಿಂದ ರೂಢಿಗತವಾಗಿ ಬಂದ ಹಬ್ಬ ಹರಿದಿನ, ಜಾತ್ರೆ, ಉತ್ಸವ, ಆಚರಣೆಯನ್ನು ಬಿಡದೆ ಭಯ, ಭಕ್ತಿ, ನಿಷ್ಠೆ, ನಂಬಿಕೆಯಿಂದ ಆಚರಿಸಿಕೊಂಡು ಬರುತ್ತಿದ್ದಾರೆ. ಒಂದು ವೇಳೆ ಆಚರಣೆ ಮಾಡದಿದ್ದರೆ ನಮಗೆ ನಮ್ಮ ಸಮುದಾಯಕ್ಕೆ ಕೇಡು ಸಂಭವಿಸುತ್ತದೆ ಎಂಬ ಭಯ ಸಹ ಇವರಲ್ಲಿದೆ. ಇವರು ಪ್ರಸ್ತುತ ರೂಢಿ ಸಂಪ್ರದಾಯಗಳಿಗೆ ಜೋತು ಬಿದ್ದು ಜೀವಿಸುತ್ತಿರುವುದು

ಕಂಡುಬರುತ್ತದೆ. ಇವರಲ್ಲಿನ ಪಾರಂಪರಿಕ ಬೇಟೆಯ ಆಚರಣೆ ಇಂದು ಸ್ಥಿತ್ಯಂತರ ಪಡೆದಿದೆ. ಒಂದು ಕಾಲದಲ್ಲಿ ನಿತ್ಯದ ಆಹಾರ ಪದ್ಧತಿಯಾಗಿದ್ದ ಬೇಟೆಯು ಇಂದು ವಾರ್ಷಿಕಾವರ್ತನದ ಆಚರಣೆಯ ರೂಪದಲ್ಲಿ ಯುಗಾದಿಯಂದು ಮಾತ್ರ ನಡೆಯುವ ಒಂದು ಸಾಂಪ್ರದಾಯಿಕ ಆಚರಣೆಯಾಗಿದೆ, ಮಾತ್ರವಲ್ಲದೆ ಕೆಲವರು ಮಾಂಸಾಹಾರವನ್ನೇ ತ್ಯಜಿಸುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

ಕಂಪಳದೇವರ ಹಟ್ಟಿಯಲ್ಲಿನ ಮಾದಿಗ ಸಮುದಾಯ, ಲಿಂಗಾಯಿತ ಸಮುದಾಯ ಮತ್ತು ಬೇಡ ಬುಡಕಟ್ಟು ಈ ಮೂರು ಸಮುದಾಯದಿಂದ ಒಟ್ಟು ೧೬೪೨ ಜನಸಂಖ್ಯೆ ಇದ್ದು ಅದರಲ್ಲಿ ಮಾದಿಗ ಸಮುದಾಯದವರು ೨೪೭ ಜನಸಂಖ್ಯೆ ಇದ್ದು, ಲಿಂಗಾಯಿತರು ೬೧ ಜನ, ಬೇಡರು ೧೩೩೪ ಜನಸಂಖ್ಯೆಯನ್ನು ಹೊಂದಿದ್ದಾರೆ. ಕಂಪಳದೇವರ ಹಟ್ಟಿಯನ್ನೂ ಒಳಗೊಂಡಂತೆ ಕರ್ನಾಟಕದಲ್ಲಿ ಬೇಡರ ಸಂಖ್ಯೆ ೬೫ ಲಕ್ಷವಿದೆ ಎಂದು ಜನಗಣತಿಯಿಂದ ತಿಳಿದು ಬರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಬೇಡ ಸಮುದಾಯದ ಪರಿಸ್ಥಿತಿ, ಬದುಕಿನ ನಿರ್ವಹಣೆ, ಸ್ಥಾನಮಾನ ಮುಂತಾದ ಮಾನದಂಡಗಳ ಮೂಲಕ ಹೇಳುವುದಾದರೆ ಈ ಸಮುದಾಯದ ಜೀವನ ನಿರ್ವಹಣೆ ದುಸ್ಥಿತಿಯಲ್ಲಿದೆ. ಮೂಲಭೂತ ಸೌಲಭ್ಯಗಳಿಂದ ವಂಚಿತವಾದ ಬೇಡ ಸಮುದಾಯ ಆರ್ಥಿಕವಾಗಿ, ಶೈಕ್ಷಣಿಕವಾಗಿ, ತೀರಾ ಹಿಂದುಳಿದ ಜೀವನ ನಡೆಸುತ್ತಿದೆ. ಪ್ರಸ್ತುತ ದಿನಗಳಲ್ಲಿ ಇಂಥಹ ಸಮಸ್ಯೆಯಲ್ಲಿ ಬದುಕುತ್ತಿರುವ ಈ ಸಮುದಾಯದ ಕುರಿತು ಚರ್ಚೆಗೊಳಪಡಿಸಿ ಪರಿಹಾರಗಳನ್ನು ಕೈಗೊಳ್ಳದೆ ಬಹುತೇಕ ಈ ಸಮುದಾಯದ ಬಗೆಗಿರುವ ಶೌರ್ಯ, ಸಾಹಸಗಳ ಪರಂಪರೆಗಳನ್ನು ಹೊಗಳುವುದರಲ್ಲಿಯೇ ಕಾಲಹರಣ ಮಾಡುತ್ತಿದ್ದಾರೆ. ಕಳೆದ ೬೦ ವರ್ಷಗಳಲ್ಲಿ ಮೀಸಲಾತಿ ಸೌಲಭ್ಯ ಪಡೆದದ್ದನ್ನು ಬಿಟ್ಟರೆ ಬೇರೆ ಯಾವುದೇ ಪರಿಣಾಮಕಾರಿ ಬದಲಾವಣೆಗಳು ಈ ಸಮುದಾಯದ ಅಭಿವೃದ್ಧಿಯ ಹಿನ್ನೆಲೆಯಲ್ಲಿ ನಡೆದಿಲ್ಲ. ಹಟ್ಟಿಯ ಬಹುತೇಕ ಬೇಡರು ದಿನವಿಡೀ ಕೂಲಿ ಕೆಲಸಮಾಡಿ ಅದರಿಂದ ಬಂದ ಹಣದಲ್ಲಿಯೇ ಸಂಸಾರ ನಡೆಸುತ್ತಿದ್ದಾರೆ. ಇಂದಿಗೂ ಸಹ ತಮ್ಮಲ್ಲಿನ ವ್ಯಾಜ್ಯಗಳನ್ನು ತಮ್ಮ ಸ್ಥಳೀಯ ನ್ಯಾಯವ್ಯವಸ್ಥೆಯ ಕಟ್ಟೆಮನೆಗಳ ಮೂಲಕ ಪರಿಹರಿಸಿಕೊಳ್ಳುತ್ತಿದ್ದಾರೆಯೇ ವಿನಃ ಯಾವುದೇ ಸರ್ಕಾರಿ ಅಧಿಕಾರಿಗಳಿಂದಲ್ಲ.

ಹಟ್ಟಿಯ ಬೇಡ ಬುಡಕಟ್ಟು ಸಮುದಾಯದವರು ಪರಿವರ್ತನೆಯ ಹಾದಿಯಲ್ಲಿದ್ದಾರೆ ಎನಿಸಿದರೂ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಹಟ್ಟಿಯಲ್ಲಿ ಉನ್ನತ ಶಿಕ್ಷಣವನ್ನು ಪಡೆದವರು ಬೆರಳೆಣಿಕೆಯಷ್ಟು(ಪದವಿ ಪಡೆದವರು ೩೪ ಜನ, ಸ್ನಾತಕೋತ್ತರ ಪದವಿ ಪಡೆದವರು ೮ ಜನ ಮಾತ್ರ) ಮಂದಿ ಮಾತ್ರ ಸಿಗುತ್ತಾರೆ. ಕೆಲವರು ಉನ್ನತ ಶಿಕ್ಷಣ ಪಡೆದಿದ್ದರೂ ಸರ್ಕಾರಿ ನೌಕರಿ ಪಡೆಯುವಲ್ಲಿ ವಿಫಲರಾಗಿದ್ದಾರೆ. 'ಮೀಸಲಾತಿ ಇದೆ ನಿಮಗೆ ಸರ್ಕಾರಿ ಉದ್ಯೋಗ ಸಿಗುತ್ತದೆ' ಎಂದು ಇತರೆ ಸಮುದಾಯದವರು ಮಾತು ಮಾತಿಗೂ ಹೇಳುತ್ತಿರುತ್ತಾರೆ, ಆದರೆ ಶೇಕಡ ೩ರಷ್ಟು ಮೀಸಲಾತಿಯಿಂದ ಇಂದು ಬೇಡರಿಗೆ ಯಾವುದೇ ಸಹಾಯ ಆಗುತ್ತಿಲ್ಲ ಎಂಬುದು ಸತ್ಯ. ಕೂಲಿಕಾರರು, ಸಣ್ಣ ಗಾತ್ರದ ಮತ್ತು ಮಧ್ಯಮ ವರ್ಗದ ಕೃಷಿಕರಾಗಿರುವ ಇವರಿಗೆ ವೃತ್ತಿ ಶಿಕ್ಷಣವಂತೂ ಗಗನ

ಕುಸುಮವಾಗಿದೆ. ಲಕ್ಷಾಂತರ ರೂಪಾಯಿಗಳನ್ನು ಸುರಿದು ಮಕ್ಕಳನ್ನು ಮೆಡಿಕಲ್, ಇಂಜಿನಿಯರಿಂಗ್ ಮುಂತಾದ ಶಿಕ್ಷಣವನ್ನು ಓದಿಸಲು ಅಸಹಾಯಕರಾಗಿದ್ದಾರೆ. ಕೃಷಿಯನ್ನೇ ನಂಬಿರುವ ಇವರು ಪ್ರತಿವರ್ಷ ಬೆಳೆ ಬೆಳೆದು ಅದರಿಂದ ಯಾವುದೇ ಲಾಭ ಪಡೆಯದೇ ಹಳೆ ಸಾಲವನ್ನು ಹೊಸತು ಸಾಲವನ್ನಾಗಿ ಮಾಡುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳುವ ಕುಟುಂಬಗಳೇ ಸಾಕಷ್ಟಿವೆ.

ಬದಲಾವಣೆಯ ಗಾಳಿ ಬೀಸುತ್ತಿದ್ದರೂ ಇನ್ನೂ ತನ್ನ ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡಿರುವ ಹಟ್ಟಿಯ ಮ್ಯಾಸಬೇಡರ ಸರ್ವತೋಮುಖ ಅಧ್ಯಯನ ಆಗಬೇಕಾಗಿದೆ. ಇವರಲ್ಲಿ ಸಾಕಷ್ಟು ಜನಪದ ಮಹಾಕಾವ್ಯಗಳಿದ್ದು, ಮೌಖಿಕ ಪರಂಪರೆ ಕುರಿತು ಅಧ್ಯಯನ ಮಾಡುವ ಸಾಧ್ಯತೆಯಿದೆ. ಇವರಲ್ಲಿರುವ ಹನ್ನೆರಡು ಪೆಟ್ಟಿಗೆ ದೇವರುಗಳ ಬಗ್ಗೆ ಚರ್ಚಿಸುವ ಅಗತ್ಯವಿದೆ. ಆಂಧ್ರ ಕರ್ನಾಟಕ ಗಡಿಭಾಗದ ಬೇಡರ ಬಗ್ಗೆ ಅಧ್ಯಯನ ಮಾಡಬೇಕಾಗಿದೆ. ಕರ್ನಾಟಕದ ಎಲ್ಲಾ ಮ್ಯಾಸಬೇಡರ ಗುರುಸ್ಥಾನವಾದ ಕಂಪಳದೇವರ ಹಟ್ಟಿಯೊಂದನ್ನೇ ಕೇಂದ್ರವಾಗಿಟ್ಟುಕೊಂಡು ಅಧ್ಯಯನ ನಡೆಸಿರುವುದರಿಂದ ಅಖಂಡವಾಗಿ, ಇಡಿಯಾಗಿ ಅಧ್ಯಯನ ಮಾಡುವ ಅವಶ್ಯಕತೆಯಿದೆ. ಇವರಲ್ಲಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಪಾರಂಪರಿಕ ಜ್ಞಾನ, ಪಾರಂಪರಿಕ ವೈದ್ಯದ ಕುರಿತಾದ ಅಧ್ಯಯನಗಳು ಅದರ ಎಲ್ಲಾ ಸೂಕ್ಷ್ಮತೆಗಳೊಡನೆ ಆಗಬೇಕಾದ ಜರೂರು ಇದೆ. ಹೀಗಾಗಿ ಸರ್ಕಾರ ಇಂಥ ಅಧ್ಯಯನಕ್ಕೆ ಸೂಕ್ತ ಆರ್ಥಿಕ ನೆರವನ್ನು ಒದಗಿಸಬೇಕಾಗಿದೆ.

ಕಂಪಳದೇವರ ಹಟ್ಟಿಯನ್ನೂ ಒಳಗೊಂಡಂತೆ ಇತರ ಹಟ್ಟಿಗಳಲ್ಲಿ ದ್ವೀಪದಂತೆ ಬದುಕುತ್ತಿರುವ ಈ ಜನರನ್ನು ಮುಖ್ಯವಾಹಿನಿಗೆ ತರುವ ಬಗ್ಗೆ ಸರ್ಕಾರ ಗಂಭೀರ ಚಿಂತನೆ ನಡೆಸಿ ಕಾರ್ಯಪ್ರವೃತ್ತವಾಗಬೇಕಿದೆ. ಇದೀಗ ನಾಗರೀಕ ಸಂಪರ್ಕಕ್ಕೆ ಬರುತ್ತಿರುವ ಈ ಜನ ಬಹಳ ಹಿಂದುಳಿದಿದ್ದು ಅವರನ್ನು ಈಗಿರುವ ಮೀಸಲಾತಿ ಶೇಕಡ ೩ರಿಂದ(ಮೂರರಿಂದ) ಕೇಂದ್ರದಲ್ಲಿರುವಂತೆ ರಾಜ್ಯದಲ್ಲಿಯೂ ಶೇಕಡ ೭ಕ್ಕೆ(ಏಳಕ್ಕೆ) ಹೆಚ್ಚಿಸುವುದರೊಂದಿಗೆ ಸಾಮಾಜಿಕ ನ್ಯಾಯದ ಲಾಭಗಳು ದೊರೆಯುವಂತೆ ನೋಡಿಕೊಳ್ಳಬೇಕಾದುದು ಸರ್ಕಾರದ ಜವಾಬ್ದಾರಿಯಾಗಿದೆ.

**ಅಧ್ಯಯನದ ಫಲಿತಗಳು**

ಪ್ರಸ್ತುತ ಅಧ್ಯಯನ ವಿಷಯ ಕಂಪಳದೇವರ ಹಟ್ಟಿಯ ಜ್ಞಾನ ಪರಂಪರೆ ಎಂಬ ವಿಷಯದ ಕುರಿತಾದ ಈ ಮಹಾಪ್ರಬಂಧದಿಂದ ವ್ಯಕ್ತವಾದ ಕೆಲವು ಅಂಶಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

೧. ಮೂಲತಃ ಅಲೆಮಾರಿ ಪಶುಪಾಲಕರಾದ ಬೇಡರು ಮೊದ ಮೊದಲು ನೆಲೆನಿಂತ ಸ್ಥಳಕ್ಕೆ ಹಟ್ಟಿ ಎಂದು ಕರೆದುಕೊಂಡಿರುವುದು ತಿಳಿದುಬರುತ್ತದೆ, ಅಲ್ಲದೆ ಅವರ ಬಹುತೇಕ ಆಚರಣೆಗಳಲ್ಲಿ, ಅವರ ಸಾಮಾಜಿಕ ಜೀವನದಲ್ಲಿ ಇಂದಿಗೂ ಸಹ ಹಟ್ಟಿ ಸಂಸ್ಕೃತಿಯ ಎಲ್ಲಾ ಲಕ್ಷಣಗಳು ಕಂಡುಬರುತ್ತವೆ.

೨. ಹಟ್ಟಿಯ ಮ್ಯಾಸಬೇಡರ ಕೌಟುಂಬಿಕ ವ್ಯವಸ್ಥೆಯನ್ನು ನೋಡಿದಾಗ ಹಿಂದಿನಿಂದಲೂ ಅವಿಭಕ್ತ ಕುಟುಂಬಗಳಲ್ಲಿ ವಾಸಿಸುತ್ತಾ ಬಂದಿರುವ ಇವರು ಇಂದು ವಿಭಕ್ತ ಕುಟುಂಬಗಳ ಕಡೆ ಆಕರ್ಷಿತರಾಗುತ್ತಿರುವುದು ತಿಳಿದು ಬರುತ್ತದೆ.

೩. ಕಂಪಳದೇವರ ಹಟ್ಟಿಯ ಜನರಿಗೆ ಸಾರಿಗೆ ಸಂಪರ್ಕದ ವ್ಯವಸ್ಥೆಯ ಕೊರತೆ ಎದ್ದು ಕಾಣುತ್ತದೆ ಜೊತೆಗೆ ಆಧುನಿಕ ಸೌಲಭ್ಯಗಳ ಕೊರತೆಯಿಂದ ಅವರು ಹಿಂದುಳಿದಿರುವುದು ಕಂಡು ಬರುತ್ತದೆ.

೪. ಹಟ್ಟಿಯ ಜನಪದರ ಸಾಂಪ್ರದಾಯಿಕ ಕುಲಕಸುಬಿನಲ್ಲಿ ಸಾಕಷ್ಟು ಬದಲಾವಣೆಗಳಾಗುತ್ತಿದ್ದರೂ, ಇಂದಿಗೂ ೭೦% ಕ್ಕಿಂತ ಹೆಚ್ಚಿನ ಜನರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಮುಂದುವರಿಸಿಕೊಂಡು ಬರುತ್ತಿರುವುದು ಅವರ ಆರ್ಥಿಕ ಹಿನ್ನೆಡೆಗೆ ಕಾರಣವಾಗಿದೆ. ಇದರಿಂದ ಇವರಲ್ಲಿನ ಸಾಮಾಜಿಕ ಚಲನೆ ನಿಧಾನಗತಿಯಲ್ಲಿರುವುದು ಕಂಡುಬರುತ್ತದೆ.

೫. ಹಟ್ಟಿಯ ಬೇಡರು ಪ್ರಕೃತಿಯಲ್ಲಿನ ಗಿಡ–ಮರ, ಪ್ರಾಣಿ–ಪಕ್ಷಿಗಳ ಚಲನ–ವಲನ ನೋಡಿ ಮಳೆಬರುವ ಅಥವಾ ಮಳೆ ಬಾರದಿರುವ ಸೂಚನೆಯನ್ನು ಅರಿಯುವ ಪಾರಂಪರಿಕ ಜ್ಞಾನವನ್ನು ಹೊಂದಿದ್ದಾರೆ. ಅಲ್ಲದೆ ಯಾವ ಯಾವ ಮಳೆಗಳಿಗೆ ಯಾವ ಯಾವ ದಾನ್ಯಗಳನ್ನು ಬಿತ್ತನೆಮಾಡಬೇಕೆಂದು ಅನುಭವದಿಂದ ಅರಿತವರಾಗಿದ್ದಾರೆ.

೬. ಹಟ್ಟಿಯ ಜನರು ಇಂದು ಕೃಷಿ ಹಾಗೂ ಕೃಷಿ ಪೂರಕವಾದ ಕಸುಬುಗಳನ್ನು ಅವಲಂಬಿಸಿರುವುದು ಹೆಚ್ಚಾಗಿ ಕಂಡುಬರುತ್ತದೆ. ಹಟ್ಟಿಯಲ್ಲಿನ ಮೂರೂ ಸಮುದಾಯದ ೩೧೩ ಕುಟುಂಬಗಳಿಂದ ೧೧೯೫.೫ ಎಕರೆ ಭೂ ಹಿಡುವಳಿಯಿದ್ದು ಅದರಲ್ಲಿ ನೀರಾವರಿ ಭೂಮಿ ಕೇವಲ ೨೧೨.೫ ಎಕರೆ, ಒಣ ಭೂಮಿ ೯೮೩ ಎಕರೆ ಅಂದರೆ ಒಣ ಭೂಮಿಯೇ ಹೆಚ್ಚಾಗಿ ಇರುವುದು ತಿಳಿದು ಬರುತ್ತದೆ.

೭. ಹಟ್ಟಿಯ ಜನರು ಇಂದಿಗೂ ಸಹ ಬಿತ್ತನೆ ಬೀಜದ ಸಂರಕ್ಷಣೆಮಾಡುವ ಸಂದರ್ಭದಲ್ಲಿ ಬೀಜ/ಕಾಳು ಕೆಡದಂತೆ ಇಡಲು, ಮತ್ತು ತಮಗೆ, ತಮ್ಮ ದನಕರುಗಳಿಗೆ ಒದಗುವ ಸಣ್ಣ ಪುಟ್ಟ ಕಾಯಿಲೆಗಳ ನಿವಾರಣೆಗೆ ಹಿಂದಿನಿಂದಲೂ ರೂಢಿಸಿಕೊಂಡು ಬಂದಿರುವ ಪಾರಂಪರಿಕ ಗಿಡಮೂಲಿಕೆಗಳನ್ನು ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

೮. ಪಾರಂಪರಿಕ ವೃತ್ತಿಗಳಾದ ಬೇಟೆ ಮತ್ತು ಪಶುಪಾಲನೆ ಇವರಲ್ಲಿ ಕಣ್ಮರೆಯಾಗುತ್ತಿರುವುದು ನಿಜವಾದರೂ ಆಚರಣೆಗಳಲ್ಲಿ ಬೇಟೆಪದ್ಧತಿಯನ್ನು, ದೇವರ ಹೆಸರಲ್ಲಿ ದನಕರುಗಳನ್ನು ಸಾಕುವ ನೆಪದಲ್ಲಿ ಪಶುಪಾಲನೆಯನ್ನು ಉಳಿಸಿಕೊಂಡು ಬರುತ್ತಿರುವುದು ಈ ಬುಡಕಟ್ಟಿನ ವಿಶೇಷತೆಯಾಗಿದೆ.

೯. ಸಮುದಾಯದ ಸಾಂಸ್ಕೃತಿಕ ನಾಯಕರ ಕುರಿತು ಹಾಗೂ ಸಮುದಾಯದ ಚರಿತ್ರೆಯ ಕುರಿತು ಸಾಕಷ್ಟು ಮೌಖಿಕ ಕಾವ್ಯಗಳು ಹಟ್ಟಿಯ ಹಿರಿಯರ ಸ್ಮೃತಿಪಟಲದಲ್ಲಿವೆ. ಜನಪದ ಸಾಹಿತ್ಯದ ಒಗಟು, ಗಾದೆ, ಒಡಪು, ಸೊಬಾನೆ ಪದಗಳು ಸಾವಿರಾರು ಸಂಖ್ಯೆಯಲ್ಲಿ ದೊರೆಯುತ್ತವೆ.

೧೦. ಹಟ್ಟಿಯಲ್ಲಿನ ಮೂರೂ ಸಮುದಾಯದವರ ಒಟ್ಟು ಜನಸಂಖ್ಯೆಯಲ್ಲಿ ಸಾಕ್ಷರಸ್ಥರು ೧೩೩೯ ಜನರಿದ್ದಾರೆ ಅದರಲ್ಲಿ ೬೭೨ ಜನ ಗಂಡುಮಕ್ಕಳು, ೬೬೭ ಜನ ಹೆಣ್ಣುಮಕ್ಕಳಿದ್ದಾರೆ, ಇನ್ನು ೭೯೪ ಜನ ನಿರಕ್ಷರಿಗಳಿದ್ದಾರೆ ಅದರಲ್ಲಿ ೩೧೮ ಜನ ಗಂಡುಮಕ್ಕಳು, ೪೧೩ ಜನ ಹೆಣ್ಣುಮಕ್ಕಳು ಕಂಡುಬರುತ್ತಾರೆ ಈ ಅಂಕಿ ಅಂಶದಿಂದ ತಿಳಿದುಬರುವುದೇನೆಂದರೆ ಮಹಿಳೆಯರ ಸಾಕ್ಷರತಾ

ಪ್ರಮಾಣ ಕಡಿಮೆ ಇರುವುದು ತಿಳಿದುಬರುತ್ತದೆ. ಒಟ್ಟಾರೆ ಹಟ್ಟಿಯಲ್ಲಿ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣ ಹೆಚ್ಚೆಂದರೆ ಪದವಿಪೂರ್ವ ಶಿಕ್ಷಣದವರೆಗೆ ಕಲಿತ ಜನರು ಸಿಗುತ್ತಾರೆ. ಬೆರಳೆಣಿಕೆಯಷ್ಟು ಜನರು ಮಾತ್ರ ಉನ್ನತ ಶಿಕ್ಷಣ(ಪದವಿ ಪಡೆದವರು ೩೪ಜನ, ಸ್ನಾತಕ್ಕೋತ್ತರ ಪದವಿ ಪಡೆದವರು ೮ ಜನ) ಪಡೆದವರು ಕಂಡು ಬರುತ್ತಾರೆ. ಸರ್ಕಾರಿ ಉದ್ಯೋಗಸ್ಥರು ಇಲ್ಲವೇ ಇಲ್ಲ ಎನ್ನುವಷ್ಟು(ಒಬ್ಬ ಮಹಿಳೆಮಾತ್ರ) ಕಡಿಮೆ ಇದ್ದಾರೆ. ಇವರ ಆರ್ಥಿಕ ಮತ್ತು ಸಾಮಾಜಿಕ ದುಸ್ಥಿತಿಯೇ ಇವರ ಶೈಕ್ಷಣಿಕ ಹಿಂದುಳಿದಿರುವಿಕೆಗೆ ಕಾರಣ ಎಂಬುದು ಸಂಶೋಧನೆಯಿಂದ ತಿಳಿದುಬಂದಿದೆ.

೧೧. ಕಂಪಳದೇವರ ಹಟ್ಟಿಯು ಮೊಳಕಾಲ್ಮೂರು ವಿಧಾನಸಭಾ ಕ್ಷೇತ್ರಕ್ಕೆ ಸೇರಿದೆ, ಈ ಭಾಗದಲ್ಲಿ ಬೇಡ ಸಮುದಾಯದ ತಿಪ್ಪೇಸ್ವಾಮಿ, ಎನ್. ವೈ. ಗೋಪಾಲಕೃಷ್ಣ, ಶ್ರೀರಾಮುಲು, ಮುಂತಾದ ಕೆಲ ನಾಯಕರು ರಾಜಕೀಯವಾಗಿ ಗುರುತಿಸಿಕೊಂಡಿದ್ದಾರೆ ಆದರೂ ಸಹ ಹೇಳಿಕೊಳ್ಳುವಂತಹಾ ರಾಜಕೀಯ ಬೆಳವಣಿಗೆ ಇವರಲ್ಲಿಲ್ಲ ಅದರಲ್ಲೂ ಈ ಹಟ್ಟಿಯಿಂದ ಯಾರೂ ಸಹಾ ಗ್ರಾಮ ಪಂಚಾಯಿತಿಯನ್ನು ಹೊರತು ಪಡಿಸಿ ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಮುಂತಾದ ಕ್ಷೇತ್ರಗಳಲ್ಲಿ ರಾಜಕೀಯವಾಗಿ ಸ್ಪರ್ದಿಸಿಲ್ಲ.

೧೨. ಸಮಕಾಲೀನ ಸಂದರ್ಭದಲ್ಲಿ ಹಟ್ಟಿಯ ಬೇಡರನ್ನು ನೋಡಿದರೆ ಬದಲಾವಣೆಗೆ ಹೊದಿಕೊಳ್ಳುತ್ತಿರುವುದು ಕಂಡು ಬರುತ್ತಿದೆ. ಹಿಂದಿನವರ ಜೀವನ ವಿಧಾನಗಳನ್ನು ಕೇಳಿ ತಿಳಿದು ಇಂದಿನವರ ಜೀವನ ವಿಧಾಗಳಿಗೆ ಹೋಲಿಸಿದರೆ ಸಾಕಷ್ಟು ಬದಲಾವಣೆ ಆಗಿರುವುದು ಕಂಡುಬರುತ್ತದೆ, ಆದರೆ ಆಚರಣೆಗಳಲ್ಲಿ ಮಾತ್ರ ಯಾವುದೇ ಬದಲಾವಣೆಗಳಿಲ್ಲದೆ ತಮ್ಮ ಪಾರಂಪರಿಕ ಹಟ್ಟಿ ಸಂಸ್ಕೃತಿಯನ್ನು ಎಲ್ಲರೂ ತಪ್ಪದೇ ಪಾಲಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಹಟ್ಟಿಯ ಬೇಡರು ಆಧುನಿಕತೆಗೆ ಹೊಂದಿಕೊಳ್ಳುತ್ತಾ ಮತ್ತು ತಮ್ಮ ಪರಂಪರೆಯನ್ನು ಉಳಿಸಿಕೊಳ್ಳುತ್ತಾ ವಿಶಿಷ್ಟ ಜೀವನ ವಿಧಾನವನ್ನು ಅನುಸರಿಸುತ್ತಾ ಬರುತ್ತಿದ್ದಾರೆ.

**ಸಲಹೆಗಳು**

೧. ಇವರ ಪಾರಂಪರಿಕ ಜ್ಞಾನ, ನಂಬಿಕೆಗಳು, ಕಲೆ ಸಾಹಿತ್ಯ ಜೀವನ ಕೌಶಲ್ಯಗಳನ್ನು ಜೀವಂತಗೊಳಿಸಲು ವೈಚಾರಿಕ ಕಾರ್ಯತಂತ್ರಗಳನ್ನು ಬಳಸುವುದು.

೨. ಸಂಪರ್ಕ ಮತ್ತು ಸಾರಿಗೆ ವ್ಯವಸ್ಥೆಯ ಮೂಲಕ ಸಮಗ್ರ ಪ್ರಮಾಣದಲ್ಲಿ ಅಭಿವೃದ್ಧಿಯನ್ನು ತರುವುದು.

೩. ಹಟ್ಟಿಯ ಮಕ್ಕಳಿಗೆ ಶೈಕ್ಷಣಿಕ ಪ್ರಗತಿಯನ್ನುಂಟುಮಾಡಲು ಜಿಲ್ಲೆ, ತಾಲೂಕು, ಹೋಬಳಿ ಮಟ್ಟದಲ್ಲಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸುವುದು.

೪. ಹಟ್ಟಿಯ ಜನಪದರಲ್ಲಿನ ಪಾರಂಪರಿಕ ಜ್ಞಾನ, ತಿಳುವಳಿಕೆ ಹಾಡು, ಕಲೆ, ಕೋಲಾಟದ ಪದಗಳು ಮುಂತಾದುವುಗಳು ಅಪಾಯದ ಅಂಚಿನಲ್ಲಿ ಸಿಲುಕಿವೆ. ಆದ್ದರಿಂದ ಅವರಲ್ಲಿನ ಪಾರಂಪರಿಕ

ವೈದ್ಯಪದ್ಧತಿ, ಇತರ ಪಾರಂಪರಿಕ ಜ್ಞಾನವನ್ನು ಸಂಶೋಧಕರು ಮತ್ತು ಸರ್ಕಾರದವರು ಹಿರಿಯ ಪೀಳಿಗೆಯವರಿಂದ ಸಂಗ್ರಹಿಸಿ ಸಂರಕ್ಷಿಸುವ ಅಗತ್ಯತೆ ಇದೆ.

೫. ಮ್ಯಾಸಬೇಡ ಸಮುದಾಯವು ತಮ್ಮ ಪಾರಂಪರಿಕ ವೃತ್ತಿಯಿಂದ ಕೃಷಿಗೆ ಬಂದು ನಲೆನಿಂತಿರುವುದರಿಂದ ಇವರಿಗೆ ಸರ್ಕಾರದಿಂದ ಬಡ್ಡಿರಹಿತ ಕೃಷಿ ಸಾಲ, ಸಬ್ಸಿಡಿ, ಕೃಷಿಗೆ ಪೂರಕವಾದ ಸಲಕರಣೆಗಳನ್ನು ಒದಗಿಸುವ ವ್ಯವಸ್ಥೆಯಾಗಬೇಕು. ಅಲ್ಲದೆ ಯುವಕರಿಗೆ ವಿವಿಧ ವೃತ್ತಿ ಕೌಶಲ್ಯಗಳ ತರಬೇತಿ ನೀಡಿ ಸ್ವಾವಲಂಬಿಗಳಾಗುವಂತೆ ಮಾಡಬೇಕು.

೬. ಸರ್ಕಾರ ಕಂಪಳದೇವರ ಹಟ್ಟಿಯನ್ನೂ ಒಳಗೊಂಡಂತೆ ಹಟ್ಟಿಗಳಲ್ಲಿ ವಾಸಿಸುತ್ತಿರುವ ಬೇಡಬುಡಕಟ್ಟಿನವರ ಸಮಸ್ಯೆಗಳನ್ನು ಅರಿತು ವಸತಿ ವ್ಯವಸ್ಥೆ, ನೀರಿನ ವ್ಯವಸ್ಥೆ, ಶಾಲೆ, ಆಸ್ಪತ್ರೆಗಳನ್ನು ಸ್ಥಾಪಿಸಬೇಕಾಗಿದೆ.

೭. ಹಟ್ಟಿಯ ಬಹುತೇಕ ಕೃಷಿಕರು ಒಣಭೂಮಿಯನ್ನು ಹೊಂದಿದ್ದು ಮಳೆಯನ್ನೇ ಆಶ್ರಯಿಸಿ ಕೃಷಿಮಾಡುತ್ತಿದ್ದಾರೆ. ಆದ್ದರಿಂದ ಸರ್ಕಾರದ ಗಂಗಾ ಕಲ್ಯಾಣ ಯೋಜನೆಯನ್ನು ಇವರು ಇನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಅಗತ್ಯತೆ ಇದೆ.

೮. ಸರ್ಕಾರ ಹಟ್ಟಿಗಳಲ್ಲಿ ವಾಸಿಸುತ್ತಿರುವ ಮಹಿಳೆಯರು ಎದುರಿಸುತ್ತಿರುವ ಸವಾಲುಗಳು, ಬಿಕ್ಕಟ್ಟುಗಳನ್ನು ಗಮನಿಸಿ ಬುಡಕಟ್ಟು ಮಹಿಳೆಯರ ಸಬಲೀಕರಣಕ್ಕೆ ಆದ್ಯತೆ ನೀಡಿ ಅವರ ಸುಧಾರಣೆಗೆ ಸೂಕ್ತ ಕಾನೂನುಗಳನ್ನು ಜಾರಿಗೊಳಿಸಬೇಕು.

**ಮುಂದಿನ ಅಧ್ಯಯನದ ಸಾಧ್ಯತೆಗಳು**

೧. ಜಗತ್ತಿನೆಲ್ಲಡೆಯಲ್ಲೂ ಬದಲಾವಣೆಯ ಬಿರುಗಾಳಿ ಬೀಸುತ್ತಿದ್ದರೂ ಇನ್ನೂ ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡಿರುವ ಹಟ್ಟಿಗಳಲ್ಲಿನ ಬೇಡರ ಪಾರಂಪರಿಕ ಜ್ಞಾನದ ಬಗ್ಗೆ ಅಖಂಡವಾಗಿ ಅಧ್ಯಯನ ಮಾಡುವ ಅಗತ್ಯತೆ ಇದೆ.

೨. ಹಟ್ಟಿಗಳಲ್ಲಿನ ಹಿರಿಯ ಪುರುಷ, ಮಹಿಳೆಯರ ಸ್ಮೃತಿಪಟಲದಲ್ಲಿ ಸಾಕಷ್ಟು ಜನಪದ ಮಹಾಕಾವ್ಯಗಳಿದ್ದು ಅವರ ಮೌಖಿಕ ಪರಂಪರೆಯ ಕುರಿತು ಅಧ್ಯಯನ ಮಾಡುವ ಸಾಧ್ಯತೆ ಇದೆ.

## ಪರಾಮರ್ಶನ ಗ್ರಂಥಗಳು

ಅಂಕನಹಳ್ಳಿ ಪಾರ್ಥ, ೨೦೦೮, ರಾಮನಗರ ಒಂದು ಸಾಂಸ್ಕೃತಿಕ ಅಧ್ಯಯನ, ಅಂಕನಹಳ್ಳಿ ಪ್ರಕಾಶನ, ರಾಮನಗರ.

ಅರವಿಂದ ಮಾಲಗತ್ತಿ(ಸಂ), ೨೦೦೬, ಕನ್ನಡ ವಿಷಯ ವಿಶ್ವಕೋಶ ಜಾನಪದ, ಕುವೆಂಪು ಕನ್ನಡ ಅಧ್ಯಯನಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಅಂಬಳಿಕೆ ಹಿರಿಯಣ್ಣ, ಬೈರಮಂಗಲ ರಾಮೇಗೌಡ(ಸಂ), ೨೦೧೩, ಜಾನಪದ ಜಗಲಿ, ಸಂಪಟ-೨, ಸಂಚಿಕೆ-೪. ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ.

ಅಂಬಳಿಕೆ ಹಿರಿಯಣ್ಣ, ಬೈರಮಂಗಲ ರಾಮೇಗೌಡ(ಸಂ), ೨೦೧೪, ಜಾನಪದ ಜಗಲಿ, ಸಂಪುಟ-೩, ಸಂಚಿಕೆ-೨, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ.

ಅಕ್ಕ ಮಹಾದೇವಿ, ೧೯೮೪, ಬುಡಕಟ್ಟು ನ್ಯಾಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಅರ್ಜುನ ಯು ಗೊಳಸಂಗಿ, ೧೯೯೫, ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ.

ಈಶ್ವರಪ್ಪ ಎಂ ಜಿ, ೧೯೮೨, ಮ್ಯಾಸಬೇಡರು, ಐ ಬಿ ಎಚ್ ಪ್ರಾಕಾಶನ, ಬೆಂಗಳೂರು.

ಈಶ್ವರಪ್ಪ ಎಂ ಜಿ, ೧೯೯೫, ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಈಶ್ವರಪ್ಪ ಎಂ ಜಿ, ೧೯೯೯, ಜಾನಪದ ಇಬ್ಬನಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಈರಯ್ಯ ಕಿಲ್ಲೇದಾರ, ೨೦೦೮, ಸಾಂಪ್ರದಾಯಿಕ ಒಕ್ಕಲುತನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಕರಿಗೌಡ ಬೀಚನಹಳ್ಳಿ(ಸಂ), ೨೦೦೦, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೨, ಕರಕುಶಲ ಕಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕರಿಶೆಟ್ಟಿ ರುದ್ರಪ್ಪ, ೧೯೯೫, ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕಾಳಿಂಗ ಡಿ ಗೊಳಸಂಗಿ, ೨೦೦೩, ಗ್ರಾಮ ಸಂಪದ, ಬನಶಂಕರಿ ಪ್ರಕಾಶನ, ಬಾದಾಮಿ.

ಕಿಕ್ಕೇರಿ ನಾರಾಯಣ(ಸಂ), ೨೦೧೧, ಬುಡಕಟ್ಟು ಸಂಸ್ಕೃತಿ, ಅರಹು ಕುರುಹು ಪ್ರಕಾಶನ, ಮೈಸೂರು.

ಕುಮಾರ ಸ್ವಾಮಿ ಎ ಎಸ್, ಒಣಬೇಸಾಯ, ೧೯೯೪, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು.

ಕೆರೂರು ವಾಸುದೇವಾಚಾರ್ಯರು, ೧೯೪೭, ವಾಲ್ಮೀಕಿ ವಿಜಯ(ಪೌರಾಣಿಕ ಕಾದಂಬರಿ), ವಾಸುದೇವ ಸಾಹಿತ್ಯ ರತ್ನಮಾಲೆ,

ಕೈಂತಜೆ ವಿಷ್ಣುಭಟ್ಟ, ೧೯೯೨, ಕೃಷಿಲೋಕ ಪ್ರವೇಶ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ದಕ್ಷಿಣ ಕನ್ನಡ.

ಕೊಸಂಬಿ ಡಿ ಡಿ, ೨೦೧೧, ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ, ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು.

ಕೃಷ್ಣಮೂರ್ತಿ ಹನೂರು, ೧೯೯೮, ಜನಪದ ಮತ್ತು ಬುಡಕಟ್ಟು ಗೀತೆಗಳು, ಕನ್ನಡ ಸಾಹಿತ್ಯ ಅಕಾಡೆಮಿ, ನವದೆಹಲಿ.

ಕೃಷ್ಣಮೂರ್ತಿ ಹನೂರು, ೧೯೮೭, ಜನಪದ ವೀರಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

ಕೃಷ್ಣಮೂರ್ತಿ ಹನೂರು, ೧೯೯೩ ಮ್ಯಾಸಬೇಡರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಕೃಷ್ಣಮೂರ್ತಿ ಹನೂರು, ೨೦೦೫, ಸಾವಿರದ ಸಿರಿಬೆಳಗು, ಪಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೃಷ್ಣಪ್ಪ ರೆಡ್ಡಿ ಬಿ, ೨೦೧೨, ಗ್ರಾಮೀಣ ಗಾದೆಗಳು, ಪ್ರೇಮ ಪ್ರಕಾಶನ, ದಾವಣಗೆರೆ.

ಗಂಗಾಧರ ದೈವಜ್ಞ, ೨೦೦೦, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗಾಣದಾಳು ಶ್ರೀಕಂಠ, ೨೦೦೮, ಕೃಷಿ ಉಪಕರಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಗಿರಿಜ ಟಿ, ೧೯೯೧, ಚಿತ್ರದುರ್ಗ ಜಿಲ್ಲಾ ದರ್ಶಿನಿ, ರೇಖಾ ಪ್ರಕಾಶನ, ದಾವಣಗೆರೆ.

ಗುರುಮೂರ್ತಿ ಕೆ ಜಿ, ೨೦೧೧, ಕರ್ನಾಟಕದ ಜಾನಪದ ಹಬ್ಬಗಳು ಮತ್ತು ಅವುಗಳ ಸಂಸ್ಕೃತಿಕರಣ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

ಗುರುಲಿಂಗಯ್ಯ ಎಂ, ೨೦೦೮, ನಾಗಪ್ಪ ವಿ(ಸಂ), ಕಾಡುಗೊಲ್ಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ಗೋವಿಂದರಾಜು ಟಿ, ೨೦೦೬, ಹಳ್ಳಿಮನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಗೋವಿಂದರಾಜು ಟಿ, ೨೦೦೩, ಜನಪದ ವೈದ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಗೋವಿಂದರಾಜು ಟಿ, ೨೦೦೦, ಕಣ, ಸಂವಹನ ಪ್ರಕಾಶನ, ಮೈಸೂರು.

ಗೋವಿಂದರಾಜು ಟಿ, ೧೯೯೩, ಚೆನ್ನಾದೇವಿ ಅಗ್ರಹಾರ: ಜಾನಪದೀಯ ಅಧ್ಯಯನ, ಪುಸ್ತಕ ಜೇನು ಪ್ರಕಾಶನ, ಚೆನ್ನಾದೇವಿ ಅಗ್ರಹಾರ.

ಗೋವಿಂದರಾಜು ಟಿ, ೨೦೦೪, ನಮ್ಮೋರು, ವಸಂತ ಪ್ರಕಾಶನ, ಬೆಂಗಳೂರು.

ಘನಮಠದ ಶಿವಯೋಗಿಗಳು, ೧೯೯೮, ಕೃಷಿಜ್ಞಾನ ಪ್ರದೀಪಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಕ್ಕೆರೆ ಶಿವಶಂಕರ್(ಸಂ), ೨೦೦೩, ಜನಪದ ತಂತ್ರಜ್ಞಾನ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಚಲುವರಾಜು(ಸಂ), ೧೯೯೭, ಜುಂಜಪ್ಪನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಲುವರಾಜು, ೧೯೯೬, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ ಕುಣಜಿ, ೧೯೯೮, ಅಮೃತಮಹಲ್ ತಳಿ, ಪ್ರಕೃತಿ ಪ್ರಕಾಶನ, ಕುಣಜಿ.

ಚಿನ್ನಸ್ವಾಮಿ ಸೋಸಲೆ, ೨೦೦೪, ನಮ್ಮ ಗ್ರಾಮಗಳು ಅಂದು ಇಂದು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿನ್ನಸ್ವಾಮಿ ಸೋಸಲೆ, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿನ್ನಸ್ವಾಮಿ ಸೋಸಲೆ, ೨೦೧೨, ಅಂಬೇಡ್ಕರ್ ದೃಷ್ಟಿಯಲ್ಲಿ ದಲಿತರು ಮತ್ತು ಮತಾಂತರ, ಯಾಜಿ ಪ್ರಕಾಶನ, ಹೊಸಪೇಟೆ.

ಛಾಯಾಸುಂದರ್, ೨೦೦೦, ಉತ್ತರಭಾರತದ ಅಡಿಗೆಗಳು, ವಿನಯ ಪ್ರಕಾಶನ,

ಜಯಪ್ರಕಾಶ ಶಟ್ಟಿ, ೨೦೧೪, ನೆಲದ ನೆನಪು, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ.

ಜಗನ್ನಾಥ ಹೆಬ್ಬಾಳೆ, ೨೦೦೮, ಹೈದರಾಬಾದ ಕರ್ನಾಟಕದ ಜಾತ್ರೆಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಜಯಲಕ್ಷ್ಮೀ ಸೀತಾಪುರ, ೧೯೯೪, ನಮ್ಮ ಸುತ್ತಿನ ಜನಪದ ಕಥನಗೀತೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ತಪಸ್ವೀಕುಮಾರ್ ನಂ, ೧೯೭೯, ಕನ್ನಡ ಒಗಟುಗಳ ಸಮೀಕ್ಷೆ, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ತಲ್ವಾಡಿ ಬಿ ಎಸ್, ೧೯೮೫, ಹೆಂಗಸರ ಹಾಡ್ಗತೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ತಾರಿಹಳ್ಳಿ ಹನುಮಂತಪ್ಪ(ಸಂ), ೨೦೦೨, ಕಮಲಾಪುರದ ಬೇಡನಾಯಕರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಿಪ್ಪೇರುದ್ರಸ್ವಾಮಿ ಮರಿಕುಂಟೆ, ೨೦೧೨, ಮೊಳಕಾಲ್ಮೂರು ದರ್ಶನ, ಪ್ರಗತಿ ಪ್ರಕಾಶನ, ಮೊಳಕಾಲ್ಮೂರು.

ತಾರಿಹಳ್ಳಿ ಹನುಮಂತಪ್ಪ(ಸಂ), ೨೦೧೦, ಕರ್ನಾಟಕದ ಬುಡಕಟ್ಟು ಸಮುದಾಯಗಳು, ಪ್ರಸಾರಾಂಗ ಕನ್ನಡ ವಿಶ್ವವಿಧ್ಯಾಲಯ, ಹಂಪಿ.

ತ್ರೀವೇಣಿ, ೨೦೦೮, ಕನ್ನಡ ಗಾದೆಗಳಲ್ಲಿ ಸ್ತ್ರೀ, ಲೇಖಕಿ ಪ್ರಕಾಶಕಿ, ಮೈಸೂರು.

ದೇವರ ಕುರಿ ಓಬಯ್ಯ, ೨೦೦೯, ಮ್ಯಾಸಬೇಡರ ಸಾಂಸ್ಕೃತಿಕ ಆತ್ಮಕಥನ, ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವೇಂದ್ರಕುಮಾರ ಹಕಾರಿ, ಡಾ ಕೆ ಆರ್ ಸಂಧ್ಯಾರೆಡ್ಡಿ(ಸಂ), ೨೦೦೦, ಗ್ರಾಮೀಣ ಉಡುಗೆ ತೊಡುಗೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ದೇವೇಂದ್ರಕುಮಾರ ಹಕಾರಿ, ಡಾ ಕೆ ಆರ್ ಸಂಧ್ಯಾರೆಡ್ಡಿ(ಸಂ), ೨೦೦೦, ಗ್ರಾಮೀಣ ಪಶುಸಾಕಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ದೇವಿ ಈ ಎನ್(ಮೂಲ), ಬಿ ಎ ಶಾರದ(ಅನು), ೨೦೧೫, ವಿಸ್ಮೃತಿಯ ಸುತ್ತ, ಭಾರತೀಯ ಸಾಹಿತ್ಯ ವಿಮರ್ಶೆಯಲ್ಲಿ ಸಂಪ್ರದಾಯ ಮತ್ತು ಬದಲಾವಣೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

ದಾಸೇಗೌಡ ಎ ಜೆ, ೨೦೦೦, ಮಂಡ್ಯ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಧಿಕಾರ, ಬೆಂಗಳೂರು.

ನರಸಿಂಹ ಮೂರ್ತಿ ಎನ್, ೨೦೦೫, ಹಬ್ಬ ಹರಿದಿನಗಳು, ಅಕ್ಷಯ ಪ್ರಕಾಶನ, ಬೆಂಗಳೂರು.

ನರಸಿಂಹ ಮೂರ್ತಿ ಎಚ್ ವಿ, ೨೦೦೨, ನಮ್ಮ ಹಬ್ಬಗಳು, ವಿಕಾಸ ಪ್ರಕಾಶನ, ಉಡುಪಿ.

ನರೇಂದ್ರ ರೈ ದೇರ್ಲ, ೨೦೦೭, ನೆಲದವರು: ಕೃಷಿ ಕಥೆ ವ್ಯಥೆ, ಕನಸು ಪ್ರಕಾಶನ, ಮಾಡಾವು, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ.

ನರೇಂದ್ರ ರೈ ದೇರ್ಲ, ೨೦೦೭, ಬೇಟೆ ಪ್ರಭುತ್ವದಿಂದ ಪ್ರಜಾಪ್ರಭುತ್ವದೆಡೆಗೆ, ಕನಸು ಪ್ರಕಾಶನ, ಮಾಡಾವು, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ.

ನಾಗೇಗೌಡ ಎಚ್ ಎಲ್, ೧೯೮೬, ಜಾನಪದ ಗಂಗೋತ್ರಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ನಾರಾಯಣ ರೆಡ್ಡಿ ಎಂ ಎ, ದೇವೇಂದ್ರಪ್ಪ ಕೆ ಜಿ, ಜಗದೀಶ್ವರ ಕೆ, ಶಿವರಾಮ ಹೆಚ್ ಎನ್(ಸಂ), ೨೦೦೭, ಜನಪ್ರೀಯ ಕೃಷಿ ಗಾದೆಗಳು, ಕೃಷಿ ವಿಕಾಸ್ ಪಬ್ಲಿಕೇಶನ್, ಬೆಂಗಳೂರು.

ನಾಗೇಶ್ ಎಚ್ ವಿ, ೧೯೮೮, ಗ್ರಾಮಾಂತರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ನಾರಾಯಣಸ್ವಾಮಿ, ೨೦೦೮, ಜಾನುವಾರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ನಾಯಕ ಡಿ ಬಿ, ೨೦೦೨, ದೇಸೀ ಸಂಸ್ಕೃತಿ, ಬಂಜಾರ ಪ್ರಕಾಶನ, ಗುಲಬರ್ಗ.

ನೇಗಿನಾಳ ಎಂ ಬಿ, ಪಾಟೀಲ ಬಿ ಪಿ, ೧೯೯೯, ಜಾನಪದ ಸಾಹಿತ್ಯ ದರ್ಶನ–೨೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಭಾಕರ ಎ ಎಸ್, ೨೦೦೬, ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

ಪ್ರಭಾಕರ ಎ ಎಸ್, ೧೯೯೧, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಶಾಂತ್ ಹೆಚ್ ಡಿ(ಸಂ), ೨೦೦೦, ಕರ್ನಾಟಕ ರಾಜ್ಯಕೋಶ–೪, ಜನಸಮುದಾಯಗಳ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪಾಟೀಲ ಎನ್ ಎ, ೧೯೯೧, ಹೈನು ದನಗಳ ರೋಗ–ಔಷಧಿ–ಚಿಕಿತ್ಸೆ, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

ಫಲ್ಗುಣ, ೧೯೮೬, ಗಾದೆಗಳ ಸಂಗ್ರಹ, ಸೂರ್ಯ ಮುದ್ರಣಾಲಯ, ಮೇದೇಹಳ್ಳಿ ರಸ್ತೆ, ಚಿತ್ರದುರ್ಗ.

ಪುರುಷೋತ್ತಮ ಬಿಳಿಮಲೆ, ಚಲುವರಾಜು, ೧೯೯೬, ಹಂಪಿ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಸವರಾಜ ಅಕಳವಾಡಿ, ೨೦೦೪, ಉತ್ತರ ಕರ್ನಾಟಕದ ಜನಪದ ಹಬ್ಬಗಳು, ಸಿದ್ದರಾಮೇಶ್ವರ ಅಕ್ಷರ ಪ್ರಕಾಶನ, ಕೊಪ್ಪಳ.

ಬಸವರಾಜ ಮಲಶೆಟ್ಟಿ, ೨೦೦೭, ಕೋಲಾಟದ ಪದಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಬೋರಲಿಂಗಯ್ಯ ಹಿ ಚಿ, ೨೦೦೦, ಬುಡಕಟ್ಟು ದೈವಾರಾದನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬೋರಲಿಂಗಯ್ಯ ಹಿ ಚಿ, ೧೯೯೬, ಕರ್ನಾಟಕ ಜನಪದ ಕಲೆಗಳ ಕೋಶ, ಪಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬೋರಲಿಂಗಯ್ಯ ಹಿ ಚಿ, ೨೦೦೧, ವಿಸ್ಮೃತಿ ಮತ್ತು ಸಂಸ್ಕೃತಿ, ಸಿ ವಿ ಜಿ ಪಬ್ಲಿಕೇಷನ್ಸ್, ಬೆಂಗಳೂರು.

ಮಲ್ಲೇಪುರಂ ಜಿ ವೆಂಕಟೇಶ್, ೧೯೯೯, ಶಂಬಾ ಕೃತಿ ಸಂಪುಟ–೨, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಮಲ್ಲೇಪುರಂ ಜಿ ವೆಂಕಟೇಶ್, ೨೦೦೭, ಗಾದೆಯ ಮಾತು, ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು.

ಮಂಜುನಾಥ ಬೇವಿನ ಕಟ್ಟಿ, ೧೯೯೬, ವ್ಯಾಧ ಚರಿತೆ: ಬೇಡ ಕುಲಮೂಲದ ಕಥೆಗಳು, ಪಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಬಿ ಪಿ,೨೦೦೭, ಪಶುಪಾಲನೆ, ನವಕರ್ನಾಟಕ ಪ್ರಕಾಶನ,

ಮಲ್ಲಿಕಾರ್ಜುನ ಹೊಸಪಾಳ್ಯ, ೨೦೦೮, ಕೃಷಿ ಆಚರಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಮೀರಾಸಾಬಿಹಳ್ಳಿ ಶಿವಣ್ಣ, ೨೦೦೧, ಕಣಜ, ಪಟೇಲ್ ಪಬ್ಲಿಕೇಶನ್ಸ್, ಬೆಂಗಳೂರು.

ಮೀರಾಸಾಬಿಹಳ್ಳಿ ಶಿವಣ್ಣ, ೨೦೦೩, ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಮೀರಾಸಾಬಿಹಳ್ಳಿ ಶಿವಣ್ಣ, ೨೦೦೮, ಕಾಡುಗೊಲ್ಲ ಬುಡಕಟ್ಟು ವೀರರು, ಸಿ ವಿ ಜಿ ಪಬ್ಲಿಕೇಶನ್ಸ್, ಬೆಂಗಳೂರು.

ಮುತ್ತಯ್ಯ ಎಸ್ ಎಂ, ೨೦೦೮, ಕಿಲಾರಿ, ಸೃಷ್ಟಿ ಪಬ್ಲಿಕೇಶನ್, ಬೆಂಗಳೂರು.

ಮುತ್ತಯ್ಯ ಎಸ್ ಎಂ, ೨೦೦೭, ಜಾನಪದ ಸಂಕಥನ, ಅಕ್ಷಯ ಪ್ರಕಾಶನ ಚಿತ್ರದುರ್ಗ.

ಮುತ್ತಯ್ಯ ಎಸ್ ಎಂ, ೧೯೯೯, ಜಾನಪದ ಇಬ್ಬನಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳುರು.

ಮೇತ್ರಿ ಕೆ ಎಂ, ೨೦೦೨, ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೈಲಹಳ್ಳಿ ರೇವಣ್ಣ, ೨೦೧೨, ಜನಪದ ಗಾದೆ ಮತ್ತು ಒಗಟುಗಳು, ಪ್ರೇಮ ಪ್ರಕಾಶನ, ದಾವಣಗೆರೆ.

ರಮೇಶ ಬಿ ಜಿ, ೨೦೦೭, ನಮ್ಮ ಹಬ್ಬಗಳು, ಚಂದನ ಪ್ರಕಾಶನ, ಬೆಂಗಳೂರು.

ರಮೇಶ್ ಸ ಚಿ(ಸಂ), ೨೦೧೧, ಕೃಷಿ ಜ್ಞಾನ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಮೇಶ್ ಸ ಚಿ, ೨೦೦೪, ಬೇಟೆ ಸಾಂಸ್ಕೃತಿಕ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಮೇಶ್ ಸ ಚಿ, ೨೦೦೩, ಶಿಕಾರಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಂಗಾರೆಡ್ಡಿ ಕೊಡಿರಾಂಪುರ, ೧೯೯೫, ಜಾನಪದ–೧೯೯೩, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ರಾಮಚಂದ್ರೇಗೌಡ ಹಿ ಶಿ, ೨೦೦೩, ಜನಪದ ತಂತ್ರಜ್ಞಾನ, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ರಾಮಚಂದ್ರೇಗೌಡ ಹಿ ಶಿ, ೨೦೦೩, ಜನಪದ ವೈದ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ರಾಮರಾಮ ಜ್ಯೋತಿ, ೨೦೦೮, ದನಗಳ ರೋಗಗಳು, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ ಧಾರವಾಡ.

ರಾಗೌ, ೧೯೯೬, ಜಾನಪದ ಸಾಹಿತ್ಯ ರೂಪಗಳು, ಸಂವಹನ ಪ್ರಕಾಶನ, ಮೈಸೂರು.

ರಾಗೌ, ೨೦೧೨, ಜಾನಪದ ಸಂಕೀರ್ಣ, ರಾಮೇಗೌಡ(ರಾಗೌ) ಡಾ. ರಾಮೇಗೌಡ ಪ್ರಕಾಶನ, ಮೈಸೂರು.

ರಾಗೌ, ೨೦೧೩, ನಮ್ಮ ಗಾದೆಗಳು ಮತ್ತು ನಮ್ಮ ಒಗಟುಗಳು, ಡಾ. ರಾಮೇಗೌಡ ಪ್ರಕಾಶನ, ಮೈಸೂರು.

ರೇಣುಕಾ ಕೊಡಗುಂಟಿ, ೨೦೦೯, ಕರ್ನಾಟಕದಲ್ಲಿ ಶವ ಸಂಸ್ಕಾರ, ಭಂಡಾರ ಪ್ರಕಾಶನ, ಮಸ್ಕಿ.

ಲಕ್ಕಪ್ಪ ಗೌಡ ಎಚ್ ಜೆ, ೧೯೯೮, ಕರ್ನಾಟಕ ಬುಡಕಟ್ಟುಗಳು–೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳುರು.

ವಸುಂಧರಾ ಭೂಪತಿ(ಸಂ), ೨೦೦೮, ಆಹಾರದಿಂದ ಆರೋಗ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೮, ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರ ಹಳ್ಳಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೧೯೯೯, ಗಾದರಿಪಾಲನಾಯಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೨೦೦೮, ವಿಜಯನಗರ ಕಾಲದ ಸಂಸ್ಕೃತಿ(ಬೇಟೆ, ಪಶುಪಾಲನೆ ಮತ್ತು ಕೃಷಿ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೨೦೦೯, ಕರ್ನಾಟಕದಲ್ಲಿ ತಳವಾರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೨೦೦೬, ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

ವಿರೂಪಾಕ್ಷಿ ಪೂಜಾರ ಹಳ್ಳಿ, ೨೦೦೬, ಬೇಟೆ ಮತ್ತು ಬೇಡರು, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

ವೀಣಾ ಎಂ.ಪಿ, ಮನೆ–ಸಮಾಜ ಮತ್ತು ಸಂಸ್ಕೃತಿ, ನೆಲಮನೆ ಪ್ರಕಾಶನ, ಹೊಸಪೇಟೆ.

ವೀರಣ್ಣ ದಂಡೆ, ೨೦೦೧, ದೇಶೀದೃಷ್ಟಿ, ಕವಿಮಾರ್ಗ ಪ್ರಕಾಶನ, ಕಲಬುರ್ಗಿ.

ವೀರಣ್ಣ ದಂಡೆ, ೨೦೦೭, ಆಯ್ದ ಗಾದೆಗಳು ಹಾಗೂ ಒಗಟುಗಳು, ಕವಿಮಾರ್ಗ ಪ್ರಕಾಶನ, ಕಲಬುರ್ಗಿ.

ವೀರೇಂದ್ರ ಶೀಲವಂತ, ೨೦೧೦, ಕೃಷಿ ಆಚರಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೀರಭದ್ರಪ್ಪ ಬಸ್ಲಳ್ಳಿ, ೨೦೦೮, ಕೃಷಿ ಕ್ಷೇತ್ರದ ಹೊಸ ಸಂಕಟಗಳು, ಅಭಿರುಚಿ ಪ್ರಕಾಶನ,

ವಿರೇಶ ಬಡಿಗೇರ, ೨೦೦೯, ಸಂಸ್ಕೃತಿ ಸಂಕಥನ, ಮಾಯ ಪ್ರಕಾಶನ, ಕಮಲಾಪುರ.

ಸಣ್ಣರಾಮ, ೨೦೦೧, ಬುಡಕಟ್ಟು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಿದ್ದಲಿಂಗಯ್ಯ, ೧೯೯೭, ಗ್ರಾಮದೇವತೆಗಳು, ಅಂಕಿತ ಪ್ರಕಾಶನ, ಬೆಂಗಳೂರು.

ಸಿಂಪಿ ಲಿಂಗಣ್ಣ, ೧೯೮೧, ಹೆಡಿಗೆ ಜಾತ್ರೆ, ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ವಿಜಾಪುರ.

ಸ್ವಾಮಿ ವಿವೇಕಾನಂದ ಯೂತ್ ಮೂಮೆಂಟ್, ೧೯೯೯, ಸ್ವಾಮಿ ವಿವೇಕಾನಂದ ಯೂತ್ ಮೂಮೆಂಟ್, ಮೈಸೂರು.

ಸೋಮಶೇಖರ ಬಿ ಎಸ್, ೨೦೦೮, ಆಹಾರ ಮತ್ತು ಆರೋಗ್ಯ, ಕನ್ನಡ ಮುಸ್ತಕ ಪ್ರಾಧಿಕಾರ, ಬೆಂಗಳೂರು.

ಸುರೇಶ ಹೆಗ್ಡೆ ಬಿ, ೨೦೦೫, ಆಹಾರದಿಂದ ಆರೋಗ್ಯ, ವಾಸನ್ಸ್ ಪಬ್ಲಿಕೇಶನ್ಸ್.

ಶಂಕರ ನಾರಾಯಣರಾವ್ ಎನ್ ಪಿ, ೨೦೦೦, ಪರಿವರ್ತನೆಯ ಸುಳಿಯಲ್ಲಿ ಕಿರುಸಮುದಾಯಗಳು, ಪಂಪ ಮಹಾಕವಿ ಸಾಹಿತ್ಯ ಪರಿಷತ್ತು.

ಶಂಕರನಾರಾಯಣ ತೀ ನಂ, ೨೦೦೪, ಜನಪದ ಸಾಹಿತ್ಯ ಪ್ರಕಾರಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಶಂಕರನಾರಾಯಣ ತೀ ನಂ, ೧೯೮೨, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ. ಬೆಂಗಳೂರು.

ಶಿವರಾಮು ವಿ ಎನ್, ೧೯೯೩, ದಕ್ಷಿಣ ಕರ್ನಾಟಕದ ಒಡಪುಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಶಿವನಂಜಯ್ಯ ಜಿ, ೧೯೯೪, ಸಹಜ ಕೃಷಿ, ಓರಿಯಂಟಲಾಂಗ್‌ಮನ್,

ಶ್ಯಾಮಭಟ್ಟ ಟಿ ಆರ್, ೨೦೧೫, ನೆನಪಿನ ಹಳ್ಳಿ, ಐ ಬಿ ಎಚ್ ಪ್ರಕಾಶನ, ಬೆಂಗಳೂರು.

ಶಾಲಿನಿ ರಘುನಾಥ, ೨೦೦೧, ಜನಪದ ಸಾಹಿತ್ಯ ದರ್ಶನ ಭಾಗ-೨೪, ಕನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಾಂತವೀರಭದ್ರಯ್ಯ ಎಸ್ ಎಂ, ೨೦೦೩, ಎಣ್ಣೆ ಕಾಳು ಬೆಳೆಗಳು, ಕೃಷಿ ವಿಜ್ಞಾನ ವಾಹಿನಿ, ಸಂಜಯನಗರ. ಬೆಂಗಳೂರು.

ಹರ್ತಿಕೋಟೆ ವಿರೇಂದ್ರ ಸಿಂಹ, ಅಮರೇಶ ಯತಗಲ್(ಸಂ), ೨೦೦೮, ವಾಲ್ಮೀಕಿ ಮಂದಾರ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

ಹಿರೇಮಠ ಎಸ್ ಎಸ್, ೨೦೦೦, ಕೊಪ್ಪಳ ಜಿಲ್ಲೆಯ ಜಾತ್ರೆಗಳು, ಕನ್ನಡ ಮುಸ್ತಕ ಪ್ರಧಿಕಾರ, ಬೆಂಗಳೂರು.

ಹಿರೇಮಠ ಎಸ್ ಎಸ್, ೧೯೯೨, ಕರ್ನಾಟಕ ಸಂಸ್ಕೃತಿ ಪರಂಪರೆ-೧, ಹಬ್ಬಗಳು, ಸಮತಾ ಪ್ರಕಾಶನ, ಹರಪನಹಳ್ಳಿ.

ಹಿರೇಮಠ ಎಸ್ ಎಸ್, ೧೯೯೬, ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ-೨, ಜಾತ್ರೆಗಳು, ಸಮತಾ ಪ್ರಕಾಶನ, ಹರಪನಹಳ್ಳಿ.

**ಎಂ.ಫಿಲ್ ಮತ್ತು ಪಿಎಚ್.ಡಿ ಮಹಾಪ್ರಬಂಧಗಳು**

ಅನ್ನಪೂರ್ಣಮ್ಮ ಸಿ ಬಿ, ೨೦೦೭, ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು: ಒಂದು ಅಧ್ಯಯನ, ಅಪ್ರಕಟಿತ ಪಿಎಚ್ ಡಿ, ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅಮೃತ ಟಿ, ೨೦೧೩, ಬೇಡರ ವೃತ್ತಿಪಲ್ಲಟಗಳು: ಒಂದು ಸಾಮಾಜಿಕ ವಿಶ್ಲೇಷಣಾತ್ಮಕ ಅಧ್ಯಯನ(ದಾವಣಗೆರೆ ಜಿಲ್ಲೆಯನ್ನು ಅನುಲಕ್ಷಿಸಿ), ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಆಂಜನೇಯ, ೨೦೦೪, ಮೊಳಕಾಲ್ಮೂರು ತಾಲ್ಲೂಕಿನ ಮ್ಯಾಸನಾಯಕರ ಭಾಷಿಕ ಅಧ್ಯಯನ, ಅಪ್ರಕಟಿತ ಎಂ ಫಿಲ್ ನಿಬಂಧ, ಕನ್ನಡ ಭಾಷಾಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಉಮೇಶ ಎಂ ಓ, ೨೦೦೮, ಮ್ಯಾಸಬೇಡ ಸಮುದಾಯ ಮತ್ತು ಜಗಳೂರು ಪಾಪನಾಯಕ: ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ ಫಿಲ್ ನಿಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲ್ಲಪ್ಪ ಎನ್, ೨೦೦೪, ಅಡ್ಲಟ್ಟಿ ಮ್ಯಾಸನಾಯಕರು: ಒಂದು ಸಮುದಾಯ ಅಧ್ಯಯನ, ಬುಡಕಟ್ಟು ಅಧ್ಯಯನ ವಿಬಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಂತಮ್ ಸತೀಶ, ೨೦೦೮, ಬೇಡಗಂಪಣರ ಸಾಮಾಜಿಕ ಹಾಗೂ ಆರ್ಥಿಕ ಅಧ್ಯಯನ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರೇಶ ಕೆ, ೨೦೦೮, ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು(ಕೂಡ್ಲಿಗಿ ಪಟ್ಟಣವನ್ನು ಅನುಲಕ್ಷಿಸಿ), ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗಂಗಾಧರ ಟಿ, ೨೦೦೫, ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನ ಕ್ರೀಡೆಗಳು, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಲುವರಾಜು, ೨೦೦೩, ಕನ್ನಡ ಜನಪದ ಪದ್ಯಸಾಹಿತ್ಯದ ಸೊಲ್ಲುಗಳು, ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಸಂಗೀತ ಮತ್ತು ನೃತ್ಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಜಯಣ್ಣ ಯು, ೨೦೦೩, ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜಪ್ಪ ಎಚ್ ಬಿ, ೨೦೧೭, ಕರಕರಮುಂಡರ ಸಾಮಾಜಿಕ ಅಧ್ಯಯನ, ಪಿಎಚ್ ಡಿ ಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಲ್ಲಿಕಾರ್ಜುನ ಕಿಚಡಿ, ೨೦೦೪, ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ: ಒಂದು ಅಧ್ಯಯನ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದುರುಗಪ್ಪ ಎಂ ಕೆ, ೨೦೦೩, ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ, ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕುರಿ ಓಬಯ್ಯ, ೨೦೦೯, ಮ್ಯಾಸಬೇಡರ ಸಾಂಸ್ಕೃತಿಕ ಆತ್ಮಕಥನ, ಜಾನಪದ ಅಧ್ಯಯನ ವಿಬಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

ನಾಗರಾಜ ಜಿ ಎಸ್, ೨೦೧೨, ಕಾಡುಕುರುಬ ಮತ್ತು ಜೇನುಕುರುಬರ ಪಾರಂಪರಿಕ ಜ್ಞಾನ ಮತ್ತು ಜೀವನಾವರ್ತಕ ಆಚರಣೆಗಳು, ಅಪ್ರಕಟಿತ ಎಂ ಫಿಲ್ ನಿಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

ನಿಂಗಣ್ಣ ಮಾದಣ್ಣವರ್, ೨೦೦೮, ಸೊರಟೂರು ಗ್ರಾಮ ಒಂದು ಅಧ್ಯಯನ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಮಣ್ಣ ಸಿದ್ದರಾಯಪ್ಪ ದೊಡ್ಡನಿಂಗಪ್ಪಗೋಳ್, ೨೦೧೨, ಕೊಟ್ಬಲಗಿ ಗ್ರಾಮ: ಸಾಂಸ್ಕೃತಿಕ ಸಂಕಥನ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲೋಕೇಶ ಜಿ ಎಂ, ೨೦೧೩, ಕರ್ನಾಟಕದ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು: ಒಂದು ಚಾರಿತ್ರಿಕ ಅಧ್ಯಯನ, ಪಿಎಚ್ ಡಿ ಮಹಾಪ್ರಬಂಧ, ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಣ್ಣ ಓಬಯ್ಯ ಎಸ್ ಕೆ, ೨೦೦೨, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜ ಶಾಸ್ತ್ರೀಯ ಅಧ್ಯಯನ, ಪಿಎಚ್ ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಾವಿತ್ರಿ ಎಸ್ ಎಂ, ೧೯೯೭, ಕಂಪ್ಲಿ ಕುಮ್ಮಟದುರ್ಗದ ಪರಿಸರದಲ್ಲಿ ಕುಮಾರರಾಮನ ಸಂಪ್ರದಾಯ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸರ್ವಮಂಗಳ ಆರ್, ೨೦೦೯, ಹೊಂಗನೂರು ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್ ಡಿ ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶರಣಪ್ಪ ಕೆ ಸಿ, ೨೦೧೮, ಹಟ್ಟಿ ಸಂಸ್ಕೃತಿ ಮತ್ತು ಪರಂಪರೆ: ಸಾಮಾಜಿಕ ಅಧ್ಯಯನ(ಚಿತ್ರದುರ್ಗ ಜಿಲ್ಲೆಯನ್ನು ಅನಿಲಕ್ಷಿಸಿ), ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, ೨೦೧೩, ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಇಂಗ್ಲೀಷ್ ಗ್ರಂಥಗಳು


Buchanan Francis, 1908, journey through Mysore, Canare, Government press, Bangalore,

Channa S M, 2004, Encyclopaedia of Indian Tribes and Castes v-2, Cosmo Publications.

Edger Thurston and Rangachari, 1987, Cast and Tribes of Southern India, Vol-1 to 5, Asian Educational Services, New Delhi.

Enthaven R R, 1992, The Tribes and Castes of Bombay, vol-3, Bombay government of Bombay Presidence.

Eliwin Veerier, 1992, Leaves from the jungle, Delhi Oxford University, Press, Bombay, Culcutta, Madras.

A.R. Radclitte Brown and D. Forle (ed) Atricum Systems of Kinship and Marriage, Oxford University, Press.

Ghuriry G S, 1959, the Sheduleds Tribes, Bombay Popular Prakashon.

Herkovits M J, 1974, Cultural Anthropology, Indian Book House, New Delhi.

Kapadiya K M, 1968, Marriage and Family in India: Oxford University Press, Culcutta.

Malinowski B A, 1994, Scientific Theory of Culture Chapel Hill, North Carolin University Press.

Mann R.S, 1980, Hakkipikki Trapper and Seller (Calcutta) Anthropological Survey of India.

Mann R.S, Mann k, 1989, Tribal Cultures and Change, Mithal Publications, Delhi.

Nanjundayya H .V. and Ananthakrishna Iyer, 1986, The Mysore Tribes and Castes: Vol-2 Mysore Govt Press.

Nanjundayya H .V, 1908, The Ethnographic Survey of Mysore, Government Press, Bengalore.

Ramachandra Guha, 2001, Savaging the Civilized, Oxford University, press.

Srinivas M. N, 1965, Religion and Society among the Coorgs of South India; Aia Publishing House, Bombay.

Srinivas M. N, 1966, Social Chang in Modern India; Allied Publication, Bombay,

Srinivas M.N, 1992, Caste in Modern India, Media Promters and Publishers Pvt. Ltd, Bombay.

Stephen Fuchs, 1981, At the Bottom of Indian Society, Munshiram Manoharlal Publisher Pvt, Ltd.

Singh K S (Ed), 1998, Lama Kathu in Tribal and Folk Terdition of India Birendranth Datta, Anthropological Surver of India.

Weber Max, 1947, The Theory of Economic and Social Organization, (Tr) by A.M. Henderson and Talcutt Persons, Glenive Frce press.

**Gezetters**

Bellary District Gazetter

Chitra durga District Gazetter

India Gazetter

Karnatka State Gazetter

Kannada-English Dictionary

**ನಿಘಂಟುಗಳು**

ಇಂಗ್ಲೀಷ್ ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾಲಯ-೧೯೮೫

ಕನ್ನಡ ಇಂಗ್ಲೀಷ್ ನಿಘಂಟು, ರೇವರೆಂಡ್ ಎಫ್ ಕಿಟಲ್, ಏಷಿಯನ್ ಎಜುಕೇಷನ್ ಸರ್ವಿಸಸ್, ನ್ಯೂಡೆಲ್ಲಿ, ಮದ್ರಾಸ್-೧೯೯೩

ಕನ್ನಡ ರತ್ನಕೋಶ

ಸಂಕ್ಷಿಪ್ತ ಕನ್ನಡ ನಿಘಂಟು

ವರದಿಗಳು

ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳು– ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೦೯–೧೦

ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳು– ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೧೨–೧೩

ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳು– ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೧೪–೧೫

Havanur L G, Karnataka backward class Commission Report Govt of Karnataka, Bangalore, 1975

Studies of Seheduled Tribes in Karnataka, Karnataka Human Development Report-2005

National Family Health Survey, 2005-06

# ಅನುಬಂಧಗಳು

೧. ಪ್ರಾದೇಶಿಕ ಪದಗಳ ಅರ್ಥಸೂಚಿ
೨. ಬಸವಣ್ಣನ ಪದ
೩. ತಿಳುವಳಿಕೆದಾರರ ವಿವರ
೪. ಜನಪದ ಕಲಾವಿದರ ವಿವರ
೫. ಪ್ರಶ್ನಾವಳಿ
೬. ನಕ್ಷೆಗಳು
೭. ಛಾಯಾಚಿತ್ರಗಳು

# ಪ್ರಾದೇಶಿಕ ಪದಗಳ ಅರ್ಥಸೂಚಿ

೧. ಅಟ್ಟ – ಮನೆಯ ಒಳಗೆಡೆ ಭಾವಣಿಗೆ ಹೊಂದಿಕೊಂಡಂತೆ ಮಾಡಿರುವ ಅಂತಸ್ತು.

೨. ಅಚ್ಚೇರು – ಅರ್ಧಸೇರು(ಆಫ್ ಲೀಟರು).

೩. ಅಡ್ಡಬೆಲಗು – ಚಪ್ಪರ ಅಥವಾ ಗುಡಿಸಲ ನಿರ್ಮಾಣದಲ್ಲಿ ಭಾರವನ್ನು ತಡೆದುಕೊಳ್ಳಲು ಮರದಿಂದ ಮಾಡಿರುವ ಸಣ್ಣ ತೊಲೆ.

೪. ಅರುಣೆ – ಮಣ್ಣಿನ ಮಡಿಕೆ.

೫. ಅಲಗು – ಬಾಕು ಕತ್ತಿ,(ಕಂಪಳದೇವರ ಹಟ್ಟಿಯಲ್ಲಿ ಬೇಡರು ಆಚರಣೆಗಳಲ್ಲಿ ಅಲಗು ಸೇವೆ ಮಾಡುತ್ತಾರೆ).

೬. ಅಸೆಹೊಡೆಯುವುದು – ಮುಳ್ಳು ರಂಬೆಯನ್ನು ಕಡಿದು ಅದಕ್ಕೆ ಅಗ್ಗ ಕಟ್ಟಿಕೊಂಡು ಎತ್ತುಗಳಿಂದ ಎಳೆಸುವುದು, ಕಳ್ಳೆ ಮಾತ್ರವಲ್ಲದೆ ಎತ್ತುಗಳ ಹೆಗಲ ಮೇಲೆ ಹಾಕಿಕೊಂಡು ಹೋಗುವ ಬೇಸಾಯಗ ಗಳೆಗಳನ್ನು ಅಸೆ ಎನ್ನುತ್ತಾರೆ.

೭. ಆಯ – ನೆಲೆಕಟ್ಟಿನ ಪ್ರಕಾರ, ಸರಿಯಾದ ಜಾಗ.

೮. ಆಯಗಾರ – ಕಸುಬುದಾರ, ಮಡಿವಾಳ, ಕುಂಬಾರ ಮುಂತಾದವರು.

೯. ಆಳು – ಕೂಲಿ ಕೆಲಸಕ್ಕೆ ಬಂದವರು.

೧೦. ಇಳ್ಳೇವು – ವೀಳ್ಯ, ಎಲೆ ಅಡಿಕೆ, ಮದುವೆ ಕಾರ್ಯದಲ್ಲಿ ಎಲೆ ಅಡಿಕೆ ಕೊಡುವುದನ್ನು ಇಳ್ಳೇವು ಎನ್ನುತ್ತಾರೆ.

೧೧. ಈಟಿ – ಶೂಲ, ಬೇಟೆ ಆಯುಧ.

೧೨. ಉಡಿ – ಮಡಿಲು.

೧೩. ಉದಿ ಪದಿ – ಹಸಿರು ಸೊಪ್ಪಿನಿಂದ ನಿರ್ಮಿಸಿದ ತಾತ್ಕಾಲಿಕ ಪೌಳಿ, (ದೇವರ ಆಚರಣೆಯಲ್ಲಿ ಮಾತ್ರ ಈ ಉದಿ ಪದಿಯನ್ನು ಹಾಕುತ್ತಾರೆ).

೧೪. ಋತು ಮತಿ – ರಜಸ್ವಾಲೆ, ಮೈನೆರೆಯುವುದು, ಮುಟ್ಟಾದವಳು.

೧೫. ಎಳೆ – ದಾರ.

೧೬. ಐತಿಹ್ಯ– ಇತಿಹಾಸ, ಪರಂಪರೆಯಿಂದ ಬಂದಿರುವುದು.

೧೭. ಎಡೆ – ದೇವರನೈವೇದ್ಯಕ್ಕೆಂದು ಉಪ್ಪು ಹಾಕದೆ ಮಾಡಿದ ಅನ್ನ, ಮೊಸರು, ಹಾಲು ಇತ್ಯಾದಿಗಳ ನೈವೇದ್ಯ.

೧೮. ಐವೋದಿ ಮಠ – ಗೌರಸಮುದ್ರದ ಮಾರಮ್ಮನ ಗುಡಿ.

೧೯. ಒಸಗೆ – ಉಡುಗೊರೆ, ತವರು ಮನೆಯವರು ತರವುದು ಅಥವಾ ಸೋದರ ಮಾವ ತರುವುದು.

೨೦. ಕಂಕಣ – ಮದುವೆಯ ಸಂದರ್ಭದಲ್ಲಿ ವಧು ವರರ ಮುಂಗೈಗೆ ಕಟ್ಟುವ ರಕ್ಷಾಸೂತ್ರ, ದಾರ.

೨೧. ಕಂಪಳ – ಸಾಮೂಹಿಕವಾಗಿ ವಾಸಿಸುವ ಜನರ ಗುಂಪು.

೨೨. ಕಂಠಿ – ಪೊದೆ.

೨೩. ಕಗ್ಗಂಟು – ಬಿಡಿಸಲಾಗದ, ಗಟ್ಟಿಯಾದ ಗಂಟು.

೨೪. ಕಟ್ಟೆಮನೆ – ಪಾರಂಪರಿಕ ನ್ಯಾಯಕೇಂದ್ರ.

೨೫. ಕಠಾರಿ – ಕತ್ತಿ, ಖಡ್ಗ.

೨೬. ಕಡಗ – ಕೈಗೆ ಹಾಕಿಕೊಳ್ಳುವ ಇತ್ತಾಳೆ ಬಳೆ.

೨೭. ಕಣ – ಧಾನ್ಯಗಳನ್ನು ಒಕ್ಕುವ ಸ್ಥಳ.

೨೮. ಕಣಿವೆ – ಇಕ್ಕಟ್ಟಾದ ಪ್ರದೇಶ, ಬೆಟ್ಟಗಳ ನಡುವಿನ ಜಾಗ.

೨೯. ಕಣ್ಣೆಸರು – ದೃಷ್ಟಿ ತಾಗುವುದು.

೩೦. ಕತ್ತಾಳೆ ನಾರು – ಕತ್ತಾಳೆ ಸಸ್ಯದಿಂದ ತೆಗೆದ ದಾರದಂತ ನೂಲು.

೩೧. ಕದ – ಬಾಗಿಲು, ಬಾಗಿಲಿಗೆ ಜೋಡಿಸಿದ ಹಲಗೆ.

೩೨. ಕರಿ – ಮಾಂಸದ ಅಡುಗೆ, ಸತ್ತವರ ಮೂರು ದಿನದ ಕರ್ಮ, ಸಿಹಿ ಹಬ್ಬದ ನಂತರ ಮರುದಿನ ಮಾಂಸ ಮಾಡುವುದು.

೩೩. ಕರಿಮಲೆ – ಶ್ರೀಶೈಲ ಬೆಟ್ಟ ಪ್ರದೇಶ.

೩೪. ಕಲ್ಲು ಮರಗೆ – ಋತುಮತಿಯಾದ ಹೆಣ್ಣಿಗೆ ೬ ಅಥವಾ ೯ ದಿನ ಊಟಮಾಡಲು ತಟ್ಟೆಯಾಗಿ ಬಳಸಲು ಕೊಡುವ ಅಗಲವಾದ ತೆಳುವಾದ ಕಲ್ಲು.

೩೫. ಕವಣೆ – ಹೊಲಕಾಯುವಾಗ ಪಕ್ಷಿಗಳು ಬೆಳೆ(ತೆನೆ)ಯನ್ನು ತಿನ್ನದಂತೆ ಅವುಗಳಿಗೆ ಕಲ್ಲು ಎಸೆಯಲು ಬಳಸುವ ನಾರಿನ ಸಾಧನ.

೩೬. ಕಳ್ಳಿ – ಹಾಲನ್ನು ಒಸರಿಸುವ ಒಂದು ಬಗೆಯ ಸಸ್ಯ, ಮರ.

೩೭. ಕಳ್ಳು ಬಳ್ಳಿ – ರಕ್ತಸಂಬಂದಿಗಳು, ಕರುಳು ಬಳ್ಳಿಯವರು.

೩೮. ಕಳ್ಳೆ – ಮುಳ್ಳು ಕಂಟಿ.

೩೯. ಕಾಂಸಿ ಹುಲ್ಲು – ಅಘು ತಳಿಯ ಹುಲ್ಲು.

೪೦. ಕಾಡಾಡಿ – ಕಾಡು, ಕಾಡು ತಿರುಗುವವರು.

೪೧. ಕಾಡಿಗೆ – ಕಣ್ಣು ಹುಬ್ಬಿಗೆ ದೃಷ್ಟಿಗೆ ಹಚ್ಚುವ ಮಸಿ, ಕಪ್ಪು.

೪೨. ಕಾರ – ಮಕ್ಕಳಿಗೆ ಹಾಕುವ ಗಿಡಮೂಲಿಕೆಯ ಔಷಧ.

೪೩. ಕಾರೆ ಹಣ್ಣು – ಒಂದು ಬಗೆಯ ಹಣ್ಣು ಬಿಡುವ ಮುಳ್ಳು ಗಿಡ.

೪೪. ಕಾಲಂದಿಗೆ – ಕಾಲಿಗೆ ಹಾಕಿಕೊಳ್ಳುವ ಬೆಳ್ಳಿ ಕಡಗ.

೪೫. ಕಾಸು ಮೀಸಲು – ದೇವರಿಗೆ ತೆಗೆದಿಟ್ಟ ಚಿಲ್ಲರೆ, ಗುಗ್ಗರಿ ಕಾಳು, ಹಾಲು ಮೊಸರು.

೪೬. ಕಿರಾತ – ಬೇಡ.

೪೭. ಕಿಲಾರಿ – ದೇವರ ಹೆಸರಲ್ಲಿ ಬಿಟ್ಟ ಎತ್ತುಗಳನ್ನು ಕಾಯುವವನು, ಪಶುಪಾಲಕ.

೪೮. ಕುಂದ್ಲಿ – ಮೊಲ.

೪೯. ಕುಗಟೆ ಮರ – ಸೋಪಿನ ಕಾಯಿ ಬಿಡುವ ಮರ.

೫೦. ಕುಡಿಕೆ – ಮಣ್ಣಿನಿಂದ ಮಾಡಿದ ಚಿಕ್ಕ ಪಾತ್ರೆ.

೫೧. ಕುಪ್ಪೆ – ರಾಶಿ, ಗುಂಪೆ, ದಿಣ್ಣೆ.

೫೨. ಕುರುಹು – ಗುರುತು.

೫೩. ಕುಲ – ಬೆಡಗು.

೫೪. ಕುಲ ಪದ್ಧತಿ – ಬುಡಕಟ್ಟು ಪದ್ಧತಿ, ಕುಲದ ನಿಯಮ.

೫೫. ಕುಲಸ್ಥ – ಒಂದೇ ವಂಶಸ್ಥ.

೫೬. ಕೂಳು – ಅನ್ನ, ಊಟ.

೫೭. ಕೇಕೆ – ಸಂತೋಷದ ಕೂಗು.

೫೮. ಕೃಷ್ಣಮೃಗ – ಜಿಂಕೆ.

೫೯. ಕೊಟ್ಟಿಗೆ – ದನಗಳನ್ನು ಕಟ್ಟಿ ಹಾಕುವ ಜಾಗ.

೬೦. ಕೊಪ್ಪಳಿಗೆ – ಮಳೆಯಿಂದ ರಕ್ಷಿಸಿಕೊಳ್ಳಲು ತಲೆಗೆ ಹಾಕಿಕೊಳ್ಳುವ ಕಂಬಳಿ ಅಥವಾ ಗೋಣಿಚೀಲದ ಕುಂಚಿಗೆ.

೬೧. ಕೊಳ್ಳಿ ಬೆಳಕು – ಉರಿಯುವ ಕಟ್ಟಿಗೆಯ ಬೆಳಕು.

೬೨. ಕೋಮುದಾರರು – ದೇವರ ಆಚರಣೆಯಲ್ಲಿ ಪಾಲ್ಗೊಳ್ಳುವ ವಿವಿಧ ಬೆಡಗಿನವರು(ಒಂದು ಬಗೆಯಲ್ಲಿ ಆಯಗಾರರು ಎನ್ನಬಹುದು).

೬೩. ಗಂಗಳ – ಊಟಗ ತಟ್ಟೆ.

೬೪. ಗಗ್ಗರ – ದನಗಳಿಗೆ ಹಾಕುವ ಒಂದು ಬಗೆಯ ಗೆಜ್ಜೆ.

೬೫. ಗಂಡುಗೊಡಲಿ – ಒಂದು ಬಗೆಯ ಚಂಧ್ರಾಯುಧ, ಬೇಟೆ ಆಯುಧ.

೬೬. ಗದ್ದಿಗೆ – ಸಮಾಧಿ, ಪೀಠ, ಆಚರಣೆಯಲ್ಲಿ ಕರಿ ಕಂಬಳಿಯನ್ನು ಹಾಸಿ ಅದರ ಮೇಲೆ ಕಾರ್ಯಮಾಡುವುದು.

೬೭. ಗಣೆ – ಬಿದುರಿನ ವಾದ್ಯ.

೬೮. ಗಾಡಿ – ಎತ್ತಿನ ಬಂಡಿ.

೬೯. ಗಾವು – ದೇವತೆಗಳಿಗೆ ಬಲಿ ಕೊಡುವ ಒಂದು ವಿದಾನ, ಬಾಯಿಂದಲೇ ಮೇಕೆ ಮರಿಯನ್ನು ಜಿಗಿಯುವುದು.

೭೦. ಗಾಳ – ಮಿನು ಹಿಡಿಯುವ ಕೊಕ್ಕೆ.

೭೧. ಗಿಡದ ದೇವರು – ಹೊರಬೀಡು ಹೋಗಿ ಬರುವುದು.

೭೨. ಗಿಣ್ಣ – ಗೀಬದ ಹಾಲಿನ ಸಿಹಿ, ಗೀಬದ ಹಾಲು, ಎಳಗಂಜಿ ಹಾಲು.

೭೩. ಗಿದ್ನ – ನಾಲ್ಕು ಸೇರಿನ ಅಳತೆ.

೭೪. ಗುಗ್ಗರಿ ಹಬ್ಬ – ಸಾಮೂಹಿಕವಾಗಿ ದೇವರ ಗುಡಿಯ ಮುಂದೆ ಹುರುಳಿ ಬೇಯಿಸುವ ಹಬ್ಬ.

೭೫. ಗುಡಾಣ – ನೀರು ತುಂಬಿಡುವ ದೊಡ್ಡ ಮಣ್ಣಿನ ಕುಡಿಕೆ.

೭೬. ಗುಡಿಕಟ್ಟೆ – ದೇವರ ಸನ್ನಿಧಿಯ ನ್ಯಾಯ ಪೀಠ, ದೇವರ ಮನೆ.

೭೭. ಗುಬ್ಬ – ದೇವರ ಹುಲ್ಲಿನ ಗುಡಿಸಲು, ಹುಲ್ಲಿನ ಪೌಳಿ.

೭೮. ಗುಡ್ಡೆ – ಸಮಾದಿ.

೭೯. ಗೂಡು – ದನಗಳು ವಾಸಿಸುವ ಜಾಗ, ದನಗಳನ್ನು ರಾತ್ರಿ ತರುಬುವ ಜಾಗ.

೮೦. ಗೊಡ್ಡು – ಬಂಜೆತನ.

೮೧. ಗೊಪ್ಪದ್ಯೆಯಿಂದಿ – ಋತುಮತಿ ಆಗಿರುವುದು.

೮೨. ಗೋಗಂಜು – ಗೋವಿನ ಮೂತ್ರ.

೮೩. ಗೋಣಿಚೀಲ – ಸೆಣಬಿನ ಚೀಲ.

೮೪. ಗ್ವಾದ್ಲೆ – ದನಗಳಿಗೆ ಮೇವು ಹಾಕುವ ಜಾಗ.

೮೫. ಚಕ್ಕೆ – ಕಲ್ಲಿನ ಅಥವಾ ಮರದ ತೆಳ್ಳನೆಯ ಚೂರು.

೮೬. ಚಟ್ಟ – ಹೆಣ ಹೊರುವ ಸಿದಿಗೆ.

೮೭. ಚರಗ ಚಲ್ಲುವುದು – ಊರಿನ ಸುತ್ತ ಅಥವಾ ಹೊಲದ ಸುತ್ತಾ ಮುಸುರೆ ಚಲ್ಲುವುದು.

೮೮. ಚಿಂತಾಕು – ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ.

೮೯. ಚಿಪ್ಪು ಕೊಡಲಿ – ತೆಳುವಾದ ಕೈಗೊಡಲಿ.

೯೦. ಚುಟಿಕೆ – ಚಿಕ್ಕ ಮಕ್ಕಳಿಗೆ ಬಳೆಯಿಂದ ಹಾಕುವ ಬರೆ.

೯೧. ಚೌಲ ತೆಗೆಸುವುದು – ಹುಟ್ಟು ಕುದಲನ್ನು ತೆಗೆಸುವುದು.

೯೨. ಜಂತೆ – ಮೇಲ್ಹಾವಣಿಗೆ ಆಧಾರವಾಗಿ ತೊಲೆಗಳ ಮೇಲೆ ಹಾಕುವ ಸಣ್ಣ ಅಡ್ಡ ಪಟ್ಟಿ.

೯೩. ಜಗಲಿ – ಮನೆ ಮುಂದಿನ ಕಟ್ಟೆ, ವೇದಿಕೆ.

೯೪. ಜಡೆ – ಉದ್ದ ಕುದಲನ್ನು ಹೆಣೆದುಕೊಂಡು ಗಂಟು ಹಾಕಿರುವುದು.

೯೫. ಜವುಳ ತೆಗೆಸುವುದು – ಕೂದಲು ತೆಗೆಸುವುದು.

೯೬. ಜಾನುವಾರು – ದನಕರುಗಳು.

೯೭ ಜಾವ – ಏಳುವರೆಗಳಿಗೆ, ದಿನದ ಎಂಟನೆಯ ಒಂದು ಭಾಗದಷ್ಟು ಕಾಲ.

೯೮. ಜೆನ್ನಿಗೆ – ಪವಿತ್ರ ತೀರ್ಥ, ದೇವರಿಗೆ ಮೀಸಲಿಟ್ಟ ಕುರಿ ಅಥವಾ ಆಕಳು.

೯೯. ಜೆನ್ನಿಗೆ ಹಾಲು – ಜೆನ್ನಿಗೆ ಹಸು ಅಥವಾ ಜೆನ್ನಿಗೆ ಕುರಿಯ ಹಾಲು.

೧೦೦. ಜೆನ್ನಿಗೆ ಹಸು – ಹೋರಿ ಹಾಯದ ಹಸು.

೧೦೧. ಜೋಲಿ – ಹಗ್ಗ ಕಟ್ಟಿದ ಜೋಕಾಲಿ.

೧೦೨. ಡಕ್ಕಿ – ಭಜನೆ ಮಾಡುವ ಚಿಕ್ಕ ಚರ್ಮ ವಾದ್ಯ

೧೦೩. ತಂಗಟೆ ಗಿಡ – ಒಂದು ಜಾತಿಯ ಸಸ್ಯ, ಹಳದಿ ಹೂ ಬಿಡುವ ಗಿಡ,

೧೦೪. ತಂಬಿಟ್ಟು – ಅಕ್ಕಿ ಹಿಟ್ಟು ಮತ್ತು ಬೆಲ್ಲ ಸೇರಿಸಿ ಮಿಶ್ರಣ ಮಾಡಿದ ಉಂಡೆ.

೧೦೫. ತಲೆ ಗೊವಿತಿವಿಯುವುದು – ಸತ್ತ ವ್ಯಕ್ತಿಯ ಮಗ ಅಥವಾ ಮೊಮ್ಮಗನು ಕರ್ಮ ತೀರಿಸುವ ಪದ್ದತಿ.

೧೦೬.ತಳಿಗೆ – ದೇವರಿಗಾಗಿ ಮಾಡಿದ ಪ್ರತ್ಯೇಕ ಎಡೆ.

೧೦೭.ತಳಿ ಹಿಡಿಯುವುದು – ಮದುಮಗನ ಮುಂದೆ ಬಟ್ಟೆ ಹಿಡಿದುಕೊಂಡು ಹೋಗುವುದು.

೧೦೮. ತಿಪ್ಪೆ – ಸಗಣಿ, ಕಸ ಹಾಕುವ ಗುಂಡಿ.

೧೦೯.ತುಗ್ಲಿ ಮರ – ಗ್ಟಟ್ಟಿ ಮುಟ್ಟಾದ ಮರ.

೧೧೦. ತೆರ – ಗಂಡಿನವರು ಹೆಣ್ಣಿನವರಿಗೆ ಕೊಡುವ ಹಣ, ಕನ್ಯಾಶುಲ್ಕ.

೧೧೧. ತೊಗಟೆ – ಸಿಪ್ಪೆ.

೧೧೨. ತೊರೆ – ನದಿ.

೧೧೩. ದಂಡ – ಜುಲ್ಮಾನೆ, ಶಿಕ್ಷೆ.

೧೧೪. ದಗಮ್ – ಚರ್ಮವಾದ್ಯ.

೧೧೫. ದಟ್ಟಿ ಸೀರೆ – ೧೨ ಮೊಳದ ಬಿಳಿಯ ಕೆಂಪಂಚಿನ ನೂಲಿನ ಸೀರೆ.

೧೧೬. ದಾಸಯ್ಯ – ದೇವರ ಸೇವಕ.

೧೧೭. ದಿನಕರ್ಮ – ಸತ್ತವರ ಪುಣ್ಯತಿಥಿ.

೧೧೮. ದಿಬ್ಬಣ – ಮದುವೆಯ ಜನ, ಮೆರವಣಿಗೆ.

೧೧೯. ದುಡ್ಡು – ಹಣ, ಕಾಸು.

೧೨೦. ದೇವರ ಎತ್ತು – ದೇವರಿಗೆ ಬಿಟ್ಟ ದನಕರುಗಳು.

೧೨೧. ದೇವಗಂಪಳ – ಪೆಟ್ಟಿಗೆ ದೇವರು.

೧೨೨. ದೊಣ್ಣೆ – ಕೋಲು, ಬಡಿಗೆ, ಕಟ್ಟಿಗೆ.

೧೨೩. ಧೂಪ – ಸಾಮ್ರಾಣಿ ಮೊದಲಾದ ವಸ್ತುಗಳನ್ನು ಕೆಂಡದ ಮೇಲೆ ಕಾಕಿದಾಗ ಬರುವ ಹೊಗೆ.

೧೨೪. ಧೂಳ್ತ – ಅಂಗಾರ, ಭಸ್ಮ.

೧೨೫. ನತ್ತು – ಮೂಗುತಿ.

೧೨೬.ನಾಟಿ ಪದ್ಧತಿ – ಗಿಡಮೂಲಿಕೆ ಔಷಧಿ.

೧೨೭.ನಾಯಕ – ಮುಖಂಡ.

೧೨೮. ನಿಧಿ – ದವಸ ಧಾನ್ಯ, ಹುದಿಗಿಟ್ಟ ಹಣ.

೧೨೯.ನೆಡೆಹಾಲು – ಕತ್ತೆ ಹಾಲು.

೧೩೦. ನೆರಕೆ – ಗರಿಯಿಂದ ನಿರ್ಮಿಸಿದ ತಡಿಕೆ.

೧೩೧. ನೆಲವು – ಪಾತ್ರೆಗಳನ್ನು ಇಡಲು ತೂಗುಹಾಕಿದ ಹಾಸಿನ ನಾರಿನ ಚಿಕ್ಕ ಜೋಳಿಗೆ.

೧೩೨. ನೋಮು – ಹರಕೆ, ಪೂಜೆ.

೧೩೩. ಪಂಕ್ತಿ – ಒಟ್ಟಿಗೆ ಕುಳಿತು ಊಟಮಾಡುವವರ ಸಾಲು.

೧೩೪. ಪಂಜು – ಮಡಿವಾಳರ ದೀವಟಿಗೆ.

೧೩೫. ಪಗಡ – ರುಮಾಲು.

೧೩೬.ಪಚ್ಚೆ – ಹಸಿರು ರತ್ನ.

೧೩೭.ಪಥ್ಯ – ರೋಗಿಗೆ ಹಿತವಾದ ಆಹಾರ.

೧೩೮. ಪದಿ – ಕಳ್ಳೆ.

೧೩೯.ಪರಿಕರ – ಸಾಮಗ್ರಿ.

೧೪೦. ಪಾಯಸ – ಅಕ್ಕಿ ಬೆಲ್ಲದಿಂದ ತಯಾರಿಸಿದ ಸಿಹಿ ಅಡುಗೆ.

೧೪೧. ಪಿಂಡ – ಪಿತೃಗಳಿಗೆ ಶ್ರದ್ಧದಲ್ಲಿ ಕೊಡುವ ಅನ್ನದ ಮುದ್ದೆ.

೧೪೨. ಪುಟಗೋಸಿ – ಲಂಗೋಟಿ.

೧೪೩. ಪುಳಿಂದ – ಬೇಟೆಗಾರ.

೧೪೪. ಪೂತರಾಜ – ಗಾವು ಜಗಿಯುವವನು.

೧೪೫. ಪೌಳಿ – ದೇವರ ಗುಡು, ಸುತ್ತು ಗೋಡೆ, ಮುಳ್ಳುಬೇಲಿ.

೧೪೬. ಬತ – ವ್ರತ, ನಿಯಮ.

೧೪೭. ಬದ್ದು – ಹಿತ್ತಾಳೆ ಕಡಗ.

೧೪೮. ಬಳುವಳಿ – ಉಡುಗೊರೆ.

೧೪೯. ಬಾಗಿನ – ವ್ರತದ ಕೊನೆಯಲ್ಲಿ ಮುತ್ತೈದೆಯರಿಗೆ ಕೊಡುವ ಕಾಣಿಕೆ.

೧೫೦. ಬಾದಾಳ – ಗವಾಕ್ಷಿ, ಬೆಳಕಿಂಡಿ.

೧೫೧. ಬಾದೆ, ಬಾದೆಹುಲ್ಲು – ಒಂದು ಜಾತಿಯ ಹುಲ್ಲು, ಗುಡಿಸಲು ನಿರ್ಮಿಸಲು ಬಳಸುವ ಹುಲ್ಲು.

೧೫೨. ಬಾನ – ಅನ್ನ.

೧೫೩. ಬಾನಿ – ಅಗಲ ಬಾಯಿಯ ಕಲ್ಲಿನ ಪಾತ್ರೆ.

೧೫೪. ಬ್ಯಾಟೆ – ಕುರಿ, ಮೇಕೆ.

೧೫೫. ಬಿಲ್ಲುಗೂಡು – ಭೂತ ನಾಲಿಗೆಗಳ ಸುತ್ತ ದಾಸಯ್ಯಗಳು ಮಣೇವು ತಿರುಗುವುದು.

೧೫೬. ಬೂವ್ವ – ಅನ್ನ.

೧೫೭. ಬೆಡಗು – ಕುಲ ಬಳಿ.

೧೫೮. ಬೊಟ್ಟು – ಹಣೆಗೆ ಇಟ್ಟುಕೊಳ್ಳುವ ತಿಲಕ.

೧೫೯. ಭತ್ಯ – ದವಸ ದಾನ್ಯ.

೧೬೦. ಭೂತನಾಲಿಗೆ – ಭೂತನ ಆಕಾರದ ಹಲಗೆ.

೧೬೧. ಮಂಡೆ – ತಲೆಬುರುಡೆ.

೧೬೨. ಮಂದಾಸನ – ದೇವರ ಪೆಟ್ಟಿಗೆ ಕೆಳಗೆ ಇಟ್ಟಿರುವ ಮಣೆ, ಪೀಠ.

೧೬೩. ಮಂದೆ – ಕುರಿ, ದನ ಮೊದಲಾದವುಗಳ ಹಿಂಡು.

೧೬೪. ಮಗಿ – ಮಣ್ಣಿನ ಚಿಕ್ಕ ಕುಂಬ.

೧೬೫. ಮಡುವು – ಆಳವಾದ ನೀರಿರುವ ಪ್ರದೇಶ.

೧೬೬. ಮಡ್ಲು – ಮಡಿಲು.

೧೬೭. ಮಡಿಕೆ – ಮಣ್ಣಿನ ಪಾತ್ರೆ.

೧೬೮. ಮಣೆಗಾರ – ಮಾದಿಗ ಸಮುದಾಯದವನು

೧೬೯. ಮಾಸು – ಹೆರಿಗೆಯಾದಾಗ ತಾಯಿಯ ಹೊಟ್ಟೆಯಿಂದ ಹೊರ ಬರುವ ಮಾಂಸ

೧೭೦. ಮಿಣಿ – ದಪ್ಪದ ಹಗ್ಗ

೧೭೧. ಮೀಸಲು – ಎಂಜಲು ಮಾಡದ ಪದಾರ್ಥ.

೧೭೨. ಮುಂಡೆ – ವಿಧವೆ.

೧೭೩. ಮುದ್ರೆ – ಚಿಹ್ನೆಗಳನ್ನು ಒತ್ತುವುದಕ್ಕಾಗಿ ಲೋಹ ಮೊದಲಾದವುಗಳಿಂದ ಮಾಡಿದ ಸಾಧನ.

೧೭೪. ಮುಡುಪು – ಮೀಸಲು.

೧೭೫. ಮುಟ್ಟು – ಗರ್ಭಕೋಶದ ಮಾಸಿಕ ಸ್ರಾವ.

೧೭೬. ಮುತ್ತುಗ – ಒಂದು ಜಾತಿಯ ಮರ, ಊಟಕ್ಕೆ ಬಳಸುವ ಎಲೆ.

೧೭೭. ಮುಯ್ಯಿ – ಮರುಕಾಣಿಕೆ.

೧೭೮. ಮುರ – ಕಿವಿಯ ಒಂದು ಆಭರಣ.

೧೭೯. ಮೆಟ್ಟು – ಪಾದರಕ್ಷೆ.

೧೮೦. ಮೆದೆ – ಹುಲ್ಲು.

೧೮೧. ಮೊರ – ಕಾಳನ್ನು ಹಸನು ಮಾಡಲು ಉಪಯೋಗಿಸುವ ಬಿದಿರಿನ ಸಾಧನ.

೧೮೨. ಯರಬೋತು – ಕೆಂಪು ಓತ.

೧೮೩. ರಾಸು – ಜಾನುವಾರುಗಳು.

೧೮೪. ರುಮಾಲು – ಪೇಟ.

೧೮೫. ರೊಪ್ಪ – ದನಗಳ ವಾಸಸ್ಥಾನ, ಹುಲ್ಲು ಬಣಿವೆಗಳ ಸ್ಥಾನ.

೧೮೬. ಲಕ್ಕಿ ಸೊಪ್ಪು – ದೇವರ ಆಚರಣೆಯಲ್ಲಿ ಮುಕ್ಯವಾಗಿ ಬಳಸುವ ಒಂದು ಜಾತಿಯ ಗಿಡ, ಲಕ್ಕಿ ಪತ್ರೆ.

೧೮೭. ವಲ್ಲಿ ಬಟ್ಟೆ – ಟವಲ್, ತಲೆಯಮೇಲಿನ ವಸ್ತ್ರ.

೧೮೮. ವಾಡಿಕೆ – ಸಂಪ್ರದಾಯ.

೧೮೯. ವಾಸೆ – ದೇವರಿಗೆ ಬಲಿ ಅರ್ಪಿಸುವ ಕಪ್ಪು ಬಣ್ಣದ ಓತು/ದೇವರ ಮುಂದೆ ಓತು ಮರಿಯನ್ನು ಕೊಯ್ಯುವುದು.

೧೯೦. ವೀಳ್ಯಶಾಸ್ತ್ರ – ನಿಶ್ಚಿತಾರ್ಥ.

೧೯೧. ಶಮೀವೃಕ್ಷ – ಬನ್ನಿಮರ.

೧೯೨. ಸಂಸ್ಕಾರ – ಧಾರ್ಮಿಕ ಕ್ರಿಯೆ.

೧೯೩. ಸಗೋತ್ರ – ಒಂದೇ ಬೆಡಗಿನವರು.

೧೯೪. ಸತ್ಯದ ಕಟ್ಟೆ – ನ್ಯಾಯವನ್ನು ತೀರ್ಮಾನ ಮಾಡುವ ಸ್ಥಳ.

೧೯೫. ಸಾಟು – ಹಸಿರು ಚಪ್ಪರ, ಗುಡಿಸಲು, ನೆರಿಕೆ.

೧೯೬. ಸಿಡಿ – ಗ್ರಾಮದೇವತೆಗೆ ಮಾಡುವ ಒಂದು ಸೇವೆ.

೧೯೭. ಸಿದಿಗೆ – ಚಟ್ಟ.

೧೯೮. ಸಿಳ್ಳು – ಸೀಟಿ.

೧೯೯. ಸುರಿಗೆ – ಮಕ್ಕಳಿಗೆ, ಮಧುಮಕ್ಕಳಿಗೆ ಮಾಡಿಸುವ ವಿಶಿಷ್ಟ ಸ್ನಾನ.

೨೦೦. ಸೂತಕ – ಮೈಲಿಗೆ.

೨೦೧. ಸೋರೆ – ಮಣ್ಣಿನ ಮಡಿಕೆ.

೨೦೨. ಹಂಚಿಹುಲ್ಲು – ಒಂದು ಜಾತಿಯ ಹುಲ್ಲುಕಡ್ಡಿ.

೨೦೩. ಹಂಡೆ – ಹಗಲವಾದ ಬಾಯುಳ್ಳ ಲೋಹದ ದೊಡ್ಡ ಪಾತ್ರೆ.

೨೦೪. ಹಗೇವು – ಕಣಜ, ಧಾನ್ಯಗಳನ್ನು ಸಂಗ್ರಹಣೆ ಮಾಡುವ ನೆಲಮಾಳಿಗೆ.

೨೦೫. ಹಚ್ಚಡ – ಹೊದಿಕೆ.

೨೦೬. ಹಚ್ಚೆ – ಮೈಮೇಲೆ ಅಲಂಕಾರಕ್ಕಾಗಿ ಚಿತ್ರಬರೆದು ಮುಳ್ಳಿನಿಂದ ಚುಚ್ಚುವುದು.

೨೦೭. ಹಟ್ಟಿ – ಚಿಕ್ಕ ಊರು.

೨೦೮. ಹರಕೆ – ದೇವರಿಗೆ ಮಾಡುವ ಸೇವೆಯ ನಿರ್ಧಾರ.

೨೦೯. ಹರಿಸೇವೆ – ದಾಸೋಹ, ಊಟದ ವ್ಯವಸ್ಥೆ.

೨೧೦. ಹಸಿಟ್ಟು – ತಂಬಿಟ್ಟು.

೨೧೧. ಹಸಿರು ಮದ್ದು – ಮಕ್ಕಳಿಗೆ ಹಾಕುವ ಹಸಿರೆಲೆ ಗಿಡದ ಔಷಧಿ.

೨೧೨. ಹಸಿರು ಗುಡ್ಲು – ಸೂತಕದ ಗುಡಿಸಲು.

೨೧೩. ಹಸೆ – ಶುಭಕಾರ್ಯದಲ್ಲಿ ಅಕ್ಕಿಯಿಂದ ಬರೆಯುವ ಚಿತ್ರಗಳು.

೨೧೪. ಹಾಡಿ – ಹಟ್ಟಿ.

೨೧೫. ಹಾದಿ – ದಾರಿ.

೨೧೬. ಹಾಲಗಂಭ – ಮದುವೆಯಲ್ಲಿ ಹಂದರಕ್ಕೆ ಬಳಸಿದ ಅರಳಿ ಮರದ ಕೊನೆ.

೨೧೭. ಹಿಂಡಿಕೂಳು – ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸುವ ಅನ್ನದ ಮುದ್ದೆ, ಪಿಂಡ.

೨೧೮. ಹುದಿ – ಪೌಳಿ.

೨೧೯. ಹುಲುಸು – ಸಮೃದ್ಧಿ.

೨೨೦. ಹೆಪ್ಪು – ಮೊಸರಾಗಲು ಹಾಲಿಗೆ ಬೆರೆಸುವ ಮಜ್ಜಿಗೆ ಅಥವಾ ಮೊಸರು.

೨೨೧. ಹೇಲಗುಗ್ಗರಿ – ಮಗುವಿನ ನಾಮಕರಣಕ್ಕಾಗಿ ಬಳಸಿದ ಬೇಯಿಸಿದ ಹುರುಳಿ ಗುಗ್ಗರಿ.

೨೨೨. ಹೋತ – ಗಂಡು ಮೇಕೆ.

## ಬಸವಣ್ಣನ ಪದ

ಬಾಲ ಬಸಾವಣ್ಣಾ ಎನ್ನಯಾ ದೇವಾ..
ಮತ್ತೇ ಏಳು ದಿನಕೇ..

ಹೈಕಳಿಗೆ ಎರಡೂಟಾ ಮಕ್ಕಳಿಗೆ ಮೂರೂಟ
ಎದೆಕೊಡೊ ಮಕ್ಕಳಿಗೆ ಎಡೆಯಿಲ್ಲಾ ಎನ್ನಯಾ ದೇವಾ..

ಎದೆಕೊಡೊ ಮಕ್ಕಳಿಗೆ ಎಡೆಯಿಲ್ಲಾ ಮಾದೇವಾ
ಹಿಡಿದಾ ಬಟ್ಟಲೂ ಬಿಡಲಿಲ್ಲಾ ಎನ್ನಯಾ ದೇವಾ..

ಆ ಧರಣೀ ಸಲುವಾಲೂ ನಮಕೈಲಸದಳವು
ನೀನೋಗಿ ಧರಣಿ ಸಲುವಯ್ಯಾ ಎನ್ನಯಾ ದೇವಾ..

ಒಮ್ಮೇ ಒಪ್ಪಿತು ಬಸವಾ ಗೋಣಿ ಹಾಕಿತು ಬಸವಾ
ಗೋಣೀ ಒಡ್ಡಿತು ನೇಗಿಲಿಗೆ ಎನ್ನಯಾ ದೇವಾ..

ಆ ಧರಣೀ ಸಲುವಾಲೂ ನಮಕೈಲಸದಳವು
ಗಾಳೀದೇವರನ ತರಸಯ್ಯಾ ಎನ್ನಯಾ ದೇವಾ..

ಗಾಳೀದೇವರುನಾ ಕರೆಸೀ ಕೇಳಲು ಬಂದೆ
ನೀನೋಗಿ ಧರಣಿ ಸಲುವಯ್ಯಾ ಎನ್ನಯಾ ದೇವಾ..

ಆ ಧರಣಿ ಸಲುವಾಲೂ ನಮಕೈಲಸದಳವು
ನೇಸದಿ ವರುಣ ಕಾಳುಸಯ್ಯಾ ಎನ್ನಯಾ ದೇವಾ..

ನೇಸರನೀ ವರುಣಾನಾ ಕರೆಸೀ ಕೇಳಲು ಬಂದೆ
ನೀನೋಗಿ ಧರಣಿ ಸಲುವಯ್ಯಾ ಎನ್ನಯಾ ದೇವಾ..

ಆ ಧರಣಿ ಸಲುವಾಲೂ ನಮಕೈಲಸದಳವು
ಗುಡುಗು ದೇವರನ ಕಳುಸಯ್ಯಾ ಎನ್ನಯಾ ದೇವಾ..

ಗುಡುಗು ದೇವರನಾ ಕರೆಸಿ ಕೇಳಲು ಬಂದೆ
ನೀನೋಗಿ ಧರಣಿ ಸಲುವಯ್ಯಾ ಎನ್ನಯಾ ದೇವಾ..
ಆ ಧರಣೀ ಸಲುವಾಲೂ ನಮಕೈಲಸದಳವು
ಸಿಡಿಲೂ ದೇವರನ ಕಳುಸಯ್ಯಾ ಎನ್ನಯಾ ದೇವಾ..

ಸಿಡಿಲೂ ದೇವರನಾ ಕರೆಸಿ ಕೇಳಲು ಬಂದೆ
ನೀನೋಗಿ ಧರಣಿ ಸಲುವಯ್ಯಾ ಎನ್ನಾ ದೇವಾ..

ಆ ಧರಣೀ ಸಲುವಾಲೂ ನಮಕೈಲಸದಳವು
ಮಳೆಯಾ ದೇವರನ ಕಳುಸಯ್ಯಾ ಎನ್ನಯಾ ದೇವಾ..

ಮಳೆಯಾ ದೇವರುನಾ ಕರೆಸಿ ಕೇಳಲು ಬಂದೆ
ನೀನೋಗಿ ಧರಣಿ ಸಲುವಯ್ಯಾ ಎನ್ನಯಾ ದೇವಾ..

ಆ ಧರಣೀ ಸಲುವಾಲೂ ನಮಕೈಲಸದಳವು
ಬಾನೂ ಅಂಬರವ ಕೊಡೇ ಎನ್ನಯಾ ದೇವಾ..

ಗದ್ದೇ ಮಡಿಕೇನಾಗೇ ನಿಬ್ಬರದಾಲಿ
ನಿಲ್ಲಿಸಿ ನನ್ನ ಬಡಿದಾರೇ ಎನ್ನಯಾ ದೇವಾ..

ನಿಲ್ಲಿಸೀ ನಿನ್ನಾ ಬಡಿದಂಥಾ ಪೆಟ್ಟುಗಳು
ನನ್ನಾವು ಚನ್ನಬಸಾವಣ್ಣಾ ಎನ್ನಯಾ ದೇವಾ..

ಗೊಬ್ಬರು ಬಂಡಿಯಾಗೆ ನಿಬ್ಬುರು ಬಡಿಗಿಯಾಗೆ
ಅಬ್ಬರಿಸಿ ನನ್ನ ಬಡಿದಾರೇ ಎನ್ನಯಾ ದೇವಾ..

ಅಬ್ಬರಿಸಿ ನಿನ್ನಾ ಬಡಿದಂತಾ ಪೆಟ್ಟುಗಳು
ನನ್ನಾವು ಚನ್ನಾಬಸವಣ್ಣಾ ಎನ್ನಯಾ ದೇವಾ....

ಎಮ್ಮೇಯಾ ಗ್ವಾದಲಿಗೆ ಹಸಿರಾದ ಹುಲ್ಲು
ನನ್ನಾ ಗ್ವದಲಿಗೇ ಮಡಿದಂಟು ಎನ್ನಯಾ ದೇವಾ..

ನನ್ನಾ ಗ್ವದಲಿಗೇ ಮಡಿದಂಟು ಸುರುವಿದರು
ನಾ ಹೆಂಗೆ ಜೀವನ ಕಳಿಯಾಲಿ ಎನ್ನಯಾ ದೇವಾ..

ಆಕೂಳು ಗ್ವಾದಲಿಗೆ ಹಾಕ್ಯಾರೆ ಹೊರೆ ಹುಲ್ಲು
ನನ್ನ ಗ್ವಾದಲಿಗೇ ಮಡಿ ದಂಟು ಎನ್ನಯಾ ದೇವಾ..
ನನ್ನ ಗ್ವಾದಲಿಗೇ ಮಡಿ ದಂಟು ಸುರುವ್ಯಾರೇ
ನಾನೆಂಗೆ ಜೀವನ ಕಳಿಯಾಲಿ ಎನ್ನಯಾ ದೇವಾ..

ಕೊಪ್ಪಿಲಿಗೊಗಿ ಬಂದು ಗ್ವಾದಲಿಗೆ ಕಟ್ಟಿ
ಸಪ್ಪೆಯಾ ದಂಟು ಕಡಿದು ಹಾಕೂ ಎನ್ನಯಾ ದೇವಾ..

ಸಪ್ಪೆಯಾ ದಂಟು ಕಡಿದು ಹಾಕೂ ಎನ ಮಗನೇ
ಪುತ್ರನ ಸಮ ನನ್ನ ಸಲಹಿರೇ ಎನ್ನಯಾ ದೇವಾ..

ಗ್ವಾದಲಿಯಾಗೇ ಕಟ್ಟು ಸಮಸಾಲೆಗೆ ಕಟ್ಟು
ನವಣೆಯಾ ಹುಲ್ಲು ಕೊಡವಿ ಹಾಕೂ ಎನ್ನಯಾ ದೇವಾ..

ನವಾಣೆಯಾ ಹುಲ್ಲು ಕೊಡವಿ ಹಾಕೂ ನೀ ಕುಲ ಮಗನೇ
ಬಾಲನ ಸಮ ನನ್ನ ಸಲವಿರೇ ಎನ್ನಯಾ ದೇವಾ..

ಅಡವೀ ಹುಲ್ಲೂ ಮೇದು ಮಡುವಿನ ನೀರು ಕುಡಿದೂ
ಗಿಡಗುಂಟಾ ನಾನೂ ಬರೂವಾಗಾ ಎನ್ನಯಾ ದೇವಾ..

ಗೀಡಾಗುಂಟಾ ನಾನೂ ಬರುವಾಗಾ ಮಾ ಶಿವನೇ

ಹಿಡಿಗುಂಡಿಲಿ ನನ್ನ ಹೊಡೆದಾರೇ ಎನ್ನಯಾ ದೇವಾ..

ಹಿಡೀಗುಂಡಿಲಿ ನಿನ್ನಾ ಹೊಡೆದಂಥಾ ಪೆಟ್ಟುಗಳು
ನನ್ನಾವೂ ಚನ್ನಬಸಾವಣ್ಣಾ ಎನ್ನಯಾ ದೇವಾ.. (ಹಾಡಿದವರು: ಪಾಲಮ್ಮ ಗಂಡ ಪಾಪಣ್ಣ, ಓಬಮ್ಮ ಗಂಡ ಬಡಬೋರಯ್ಯ, ಓಬಮ್ಮ ಗಂಡ ಕಾಕಯ್ಯ, ಓಬಮ್ಮ ಡಿ. ಗಂಡ ಪಾಪಯ್ಯ ಡಿ, ಪಾಲಮ್ಮ.)

# ತಿಳುವಳಿಕೆದಾರರ ವಿವರ

| ಕ್ರ ಸಂ. | ಹೆಸರು | ಲಿಂಗ | ಜಾತಿ | ಬೆಡಗು | ವಯಸ್ಸು | ಉದ್ಯೋಗ | ಸ್ಥಳ | ಶಿಕ್ಷಣ |
|---|---|---|---|---|---|---|---|---|
| ೧. | ಅಜ್ಜಯ್ಯ | ಗಂಡು | ನಾಯಕ | ಮಂದಲಾರು | | | | |
| | | | | ೮೧೯೭೮೭೪೪೪೫ | ೩೦ | ನಗರಿ ಪೂಜಾರಿ | ಕಂಪಳದೇವರ ಹಟ್ಟಿ | ಬಿ ಎ |
| ೨. | ಅನುಸೂಯ ಗಂಡ ತಿಪ್ಪೇಸ್ವಾಮಿ | ಹೆಣ್ಣು | ನಾಯಕ | ಎನುಮಲಾರು | ೩೦ | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೩. | ಅಜ್ಜಯ್ಯ | ಗಂಡು | ನಾಯಕ | ಎನುಮಲಾರು | ೩೧ | ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |
| ೪. | ಅಜ್ಜಯ್ಯ | ಗಂಡು | ನಾಯಕ | ಎನುಮಲಾರು | ೨೪ | ಪಶುಪಾಲನೆ | ಕಂಪಳದೇವರ ಹಟ್ಟಿ | ಇಲ್ಲ |
| ೫. | ಈಶ್ವರ | ಗಂಡು | ನಾಯಕ | ಎನುಮಲಾರು | ೩೦ | ಶಿಕ್ಷಣ | ಕಂಪಳದೇವರ ಹಟ್ಟಿ | ಎಂ ಎ |
| | | | | ೮೧೯೭೯೫೩೧೭೧ | | | | |
| ೬. | ಓಬಮ್ಮ ಗಂಡ ಕಾಕಯ್ಯ | ಹೆಣ್ಣು | ನಾಯಕ | ಎನುಮಲಾರು | ೫೫, | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೭. | ಓಬಮ್ಮ ಗಂಡ ಬಡಬೋರಯ್ಯ | ಹೆಣ್ಣು | ನಾಯಕ | ಎನುಮಲಾರು | ೬೫, | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೮. | ಓಬಯ್ಯ | ಗಂಡು | ನಾಯಕ | ಮಂದಲಾರು | ೪೦ | ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |

| | | | | | | | | |
|---|---|---|---|---|---|---|---|---|
| ೯. | ಓಬಮ್ಮ ಡಿ. ಗಂಡ ಪಾಪಯ್ಯ ಡಿ. | ಹೆಣ್ಣು | ನಾಯಕ | ಎನುಮಲಾರು | ೫೨ | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೧೦. | ಓಬಣ್ಣ | ಗಂಡು | ನಾಯಕ | ಎನುಮಲಾರು | ೫೦ | ಕೃಷಿ (ಕಲಾವಿದ) | ಕಂಪಳದೇವರ ಹಟ್ಟಿ | ಇಲ್ಲ |
| ೧೧. | ಕಾಮಯ್ಯ | ಗಂಡು | ನಾಯಕ | ದಡ್ಡಿಮಿತ್ತಿನಾರು | ೩೬ | ದೈಹಿಕ ಶಿಕ್ಷಕರು | ಕಂಪಳದೇವರ ಹಟ್ಟಿ | ಸಿಪಿ ಇಡಿ |
| ೧೨. | ಕಾಮಯ್ಯ ಪೂಜಾರಿ | ಗಂಡು | ನಾಯಕ | ದಡ್ಡಿಮಿತ್ತಿನಾರು | ೮೦ | ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |
| ೧೩. | ಕುರಿ ಬೈಯಣ್ಣ | ಗಂಡು | ನಾಯಕ | ಎನುಮಲಾರು | ೬೫ | ಕೃಷಿ | ನನ್ನಿವಾಳ | ಇಲ್ಲ |
| ೧೪. | ಕೃಷ್ಣ | ಗಂಡು | ನಾಯಕ | ಮಂದಲಾರು | ೨೩ | ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |
| ೧೫. | ಗಂಗಪ್ಪ | ಗಂಡು | ನಾಯಕ | ಎನುಮಲಾರು | ೪೮ | ಕೃಷಿ | ಕಮಲಾಪುರ | ಇಲ್ಲ |
| ೧೬. | ಗಂಗಮ್ಮ ಗಂಡ ಗೊಡ್ಲೋಬಯ್ಯ | ಹೆಣ್ಣು | ನಾಯಕ | ಮಂದಲಾರು | ೬೮ | ಮನೆಕೆಲಸ | ಕಂಪಳದೇವರ ಹಟ್ಟಿ | ಇಲ್ಲ |
| ೧೭. | ಗೋಲು ಪಾಪಯ್ಯ | ಗಂಡು | ನಾಯಕ | ಮಂದಲಾರು | ೫೫ | ಕೃಷಿ (ಗಣೆ ಪದ ಹಾಡುಗಾರ) | ಕಂಪಳದೇವರ ಹಟ್ಟಿ | ಇಲ್ಲ |
| ೧೮. | ಗೊಡ್ಲೋಬಯ್ಯ | ಗಂಡು | ನಾಯಕ | ಮಂದಲಾರು | ೭೦ | ಕೃಷಿ & (ಕಲಾವಿದ) | ಕಂಪಳದೇವರ ಹಟ್ಟಿ | ಇಲ್ಲ |
| ೧೯. | ಗೊಂಚಯ್ಯ | ಗಂಡು | ನಾಯಕ | ಬುಟುಕಲಾರು | ೬೨ | ನಿವೃತ್ತ ಅರಣ್ಯ ಕಾವಲುಗಾರ | ಮುತ್ತಿಗಾರ ಹಳ್ಳಿ | ೧೦ನೇ ತರಗತಿ |
| ೨೦. | ಗೊಂಚಿಗಾರ್ ಬೋರಯ್ಯ | ಗಂಡು | ನಾಯಕ | ಎನುಮಲಾರು | ೬೦ | ಯಜಮಾನ | ಕಂಪಳದೇವರ ಹಟ್ಟಿ | ೭ನೇ ತರಗತಿ |

| | | | | | | | | |
|---|---|---|---|---|---|---|---|---|
| ೨೧. | ಚನ್ನಪ್ಪ | ಗಂಡು | ನಾಯಕ | ಮಂದಲಾರು ೯೭೪೦೪೦೪೬೪೮೦ | ೬೦ | ದಡ್ಡ ಮಾರಮ್ಮನ ಪೂಜಾರಿ | ಕಂಪಳದೇವರ ಹಟ್ಟಿ | ಇಲ್ಲ |
| ೨೨. | ಚನ್ನಪ್ಪ | ಗಂಡು | ನಾಯಕ | ಮೂಡೇಲಾರು | ೫೫ | ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |
| ೨೩. | ಚಂದ್ರಮ್ಮ ಗಂಡ ಅಜ್ಜಯ್ಯ | ಹೆಣ್ಣು | ನಾಯಕ | ಮಂದಲಾರು | ೨೬ | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೨೪. | ಚಂದ್ರಣ್ಣ | ಗಂಡು | ನಾಯಕ | ಎನುಮಲಾರು ೪೯೭೦೧೨೪೪೬೭ | ೨೫ | ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |
| ೨೫. | ಚಿನ್ನಯ್ಯ | ಗಂಡು | ನಾಯಕ | ಮಂದಲಾರು | ೬೦ | ಕೃಷಿ (ಗಣೆ ಪದ ಹಾಡುಗಾರ) | ಕಂಪಳದೇವರ ಹಟ್ಟಿ | ಇಲ್ಲ |
| ೨೬. | ಚಿನ್ನಮ್ಮ ಗಂಡ ಗೋಲು ಪಾಪಯ್ಯ | ಹೆಣ್ಣು | ನಾಯಕ | ಎನುಮಲಾರು | ೪೮ | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೨೭. | ಜಂಗ್ಲಿ ಪಾಪಯ್ಯ | ಗಂಡು | ನಾಯಕ | ಮಂದಲಾರು | ೫೫ | ಕಲಾವಿದ, ಕೃಷಿ | ಕಂಪಳದೇವರ ಹಟ್ಟಿ | ಇಲ್ಲ |
| ೨೮. | ಜಗಲೂರಯ್ಯ | ಗಂಡು | ನಾಯಕ | ಎನುಮಲಾರು ೮೫೪೯೯೨೪೯೩೩ | ೩೦ | ಅಥಿತಿ ಉಪನ್ಯಾಸಕ | ಕಂಪಳದೇವರ ಹಟ್ಟಿ | ಎಂ ಎ |
| ೨೯. | ಜಯಮ್ಮ ಗಂಡ ಸೂರಯ್ಯ | ಹೆಣ್ಣು | ನಾಯಕ | ಮಂದಲಾರು | ೨೬ | ಕೃಷಿಕೂಲಿ | ಕಂಪಳದೇವರ ಹಟ್ಟಿ | ಇಲ್ಲ |
| ೩೦. | ಜಗಲೂರಯ್ಯ | ಗಂಡು | ನಾಯಕ | ಮಂದಲಾರು | ೫೬ | ಶಿಕ್ಷಕರು | ಕಂಪಳದೇವರ ಹಟ್ಟಿ | ಬಿ ಎ |

